# ಶ್ರೀ ಶಂಕರಾನಂದಗಿರಿ
# ಗುರುವರ ಚರಿತೆ





ಶ್ರೀ ಉಮಾಮಹೇಶ್ವರ ಗುರುಪೀಠ

ಬತ್ತ್ವರ.

ಓಂ ನಮೋ ಭಗವತೇ ಶ್ರೀಮದುಮಾಮಹೇಶ್ವರಾಯ
ಶಿವಾಯ ಗುರವೇ ನಮಃ

ಶ್ರೀಮದುಮಾಮಹೇಶ್ವರ ಗುರುಪೀಠ ಗ್ರಂಥಮಾಲೆಯ
ಇಪ್ಪತ್ತೊಂದನೆಯ ಪುಷ್ಪ



# ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರೆ

ಅನುವಾದಕರು :
ಶಿ. ವ. ಶ್ರೀ ಬಳ್ಳಾರಿ

ಪ್ರಕಾಶಕರು :
ಶ್ರೀ ಉಮಾಮಹೇಶ್ವರ ಗುರುಪೀಠ
ಶ್ರೀಗಳವರ 43ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಭಕ್ತಮಂಡಲಿ
ಆ ದ ವಾ ನಿ.

# ವಿಷಯಸೂಚಿ



## ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರೆ

## ಪ್ರಬೋಧ ಘಟ್ಟ

# ಅಭಿಪ್ರಾಯಗಳು

ನಂ. 2540/20-5-55

## ಶ್ರೀ ಜಗದ್ಗುರು ವಿಶ್ವಾರಾಧ್ಯಃ ಪ್ರಸೀದತು

ಶ್ರೀಮದ್ವೇದಾಗಮೋಪನಿಷತ್ಪುರಾಣೇತಿಹಾಸ ಪ್ರಸಿದ್ಧ ವಿಮಲ
ವೀರಶೈವ ಮಹಾಮತ ಸ್ಥಾಪನಾಚಾರ್ಯವರ್ಯ ಸಮಸ್ತ ಪವಿತ್ರ
ಕ್ಷೇತ್ರ ಮಸ್ತಕಮಣೀಭೂತ ಶ್ರೀಮದ್ವಾರಣಾಸೀ ಮಹಾಕ್ಷೇತ್ರ
ಮಧ್ಯ ವಿದ್ಯೋತಮಾನ ಶ್ರೀಮದ್ವಿಶ್ವೇಶ್ವರಲಿಂಗ ಗರ್ಭಾವಿರ್ಭೂತ
ಶ್ರೀಮಜ್ಜಗದ್ಗುರು ವಿಶ್ವಾರಾಧ್ಯ ಗುರುಪರಂಪರಾಗತ ಹರಿಕೇಶ
ನಂದನವನ ವಿರಾಜಮಾನ ಜಂಗಮ ವಾಟಿಕಾ ಮಹಾ
ಮಠಾಧಿಷ್ಠಿತ ಜ್ಞಾನ ಸಿಂಹಾಸನಾಧೀಶ್ವರ

## ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿನಾಂ ದಿವ್ಯ ಸನ್ನಿಧಾನೇನ

ಶ್ರೀಗುರುವರ ಚರಣ ನಖ ಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯ ಮಾನರಾದ ಕುಂದನಗುರ್ತಿ ಶ್ರೀ ಶಿವಲಿಂಗಾಶ್ರಮ ಭಕ್ತರಿಗೆ ಅನೇಕ ಶುಭಾಶೀರ್ವಾದಪೂರ್ವಕ ಅಪ್ಪಣೆ ಕೊಡಿಸುವುದೇನೆಂದರೆ :

ನೀವೆಲ್ಲರು ಆತ್ಮೋದ್ಧಾರಕ್ಕಾಗಿ ಪರಶಿವ ತತ್ವಚಿಂತನೆಯನ್ನು ಮಾಡುತ್ತಾ ಶ್ರೀ ಶಂಕರಾನಂದಗಿರಿ ಸ್ವಾಮಿಯವರ ಸದಾಚಾರ ಸತ್ಯನಿಷ್ಠೆ ಚರಿತ್ರೆಯನ್ನು ಪ್ರಕಟಿಸುವ ವಿಷಯ ವಿದಿತವಾಗಿ ಮುಪದಾನಂದವಾಯಿತು. ಶ್ರೀ ಶಂಕರಾನಂದಗಿರಿ ಸ್ವಾಮಿಯವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಬಾಲ್ಯದಿಂದಲೇ ಶಿವ ಜೀವೈಕ್ಯರೂಪವಾದ ಆಧ್ಯಾತ್ಮಿಕ ಜೀವನವನ್ನು ಅಂಗೀಕರಿಸಿದವರು.

ಅಶಾಂತಿಮಯ ವಾತಾವರಣದಿಂದ ಕೂಡಿದ ಭೌತಿಕ ಮಾರ್ಗದಲ್ಲಿ ಸಿಕ್ಕಿ ಕಿಂಕರ್ತವ್ಯತಾ ಮೂಢರಾದ ಸಾಧಾರಣ ಜನರಿಗೆ "ಧರ್ಮೋ ರಕ್ಷತಿ ರಕ್ಷಿತಃ" "ಸರ್ವಂ ಖಲ್ವಿದಂ ಬ್ರಹ್ಮ" "ತಪಸಾ ಬ್ರಹ್ಮ ವಿಜಿಜ್ಞಾಸಸ್ವ" ಎಂಬಿತ್ಯಾದಿ ಉಪನಿಷದ್ವಾಕ್ಯಗಳಿಂದ ಶಾಂತಿ ಸಂದೇಶವನ್ನು ಕೊಡುತ್ತಾ ಶ್ರೀ ಶಂಕರಾನಂದಗಿರಿ ಸ್ವಾಮಿಯವರು

ಆಧ್ಯಾತ್ಮಿಕ ತತ್ವವನ್ನು ಉಪದೇಶಿಸುತ್ತಿರುವುದು ಸುಪ್ರಸಿದ್ಧವಾಗಿದೆ. ಇಂಥಹ ಸದಸದ್ವಿವೇಕ ಸಂಪನ್ನರ ಜೀವನ ಚರಿತ್ರೆ ಜನಗಳಿಗೆ ಸನ್ಮಾರ್ಗದರ್ಶಕವಾಗಲಿ ! ಶ್ರೀ ಶಂಕರಾನಂದಗಿರಿ ಸ್ವಾಮಿಯವರ ಆಧ್ಯಾತ್ಮಿಕ ಕಾರ್ಯಕ್ಷೇತ್ರವು ವಿಶಾಲಾಂಧ್ರದಲ್ಲಿ ವ್ಯಾಪಿಸಲಿ!! ಸತ್ಯಸನಾತನ ತತ್ವ ಚಿಂತನೆಯಿಂದ ಸ್ವತಂತ್ರ ಭಾರತ ಜನಾಂಗವು ನಿತ್ಯ ಸುಖಿಯಾಗಲಿ!!!

ಇತಿ ಶಿವಂ ಭೂಯಾತ್

ಇತ್ಯಾ ಶಿಷಃ

ಮುಕ್ಕಾಂ: ಜಂಗಮವಾಡಿಮಠ
ಶ್ರೀಕ್ಷೇತ್ರ, ಕಾಶಿ

ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೇ

ಶ್ರೀ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ

## ಶ್ರೀ ೧೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು

ಮುಕ್ಕಾಂ : ಗುಂತಕಲ್ಲು

ನಂ. 7190

ದಿನಾಂಕ: 4-5-55

ಸದಯರು ಸ್ವಾರ್ಥ ತ್ಯಾಗಿಗಳು ತತ್ತ್ವಜ್ಞಾನಿಗಳು ಆದ ಮಾನವ ಕಲ್ಯಾಣವನ್ನು ಬಯಸುವ ಮಹಾತ್ಮರ ಜೀವನ ಚರಿತ್ರೆಗಳು ಪ್ರಕಾಶಿತಗಳಾಗುವದು, ಸತ್ಕಾರ್ಯಗಳಲ್ಲಿ ಮುಖ್ಯವಾದದ್ದು.

ಗುರುಕುಲ ಸಂಜಾತರು, ಆತ್ಮೀಯರು, ವಿಶಾಲಾಂತಃಕರಣರು, ವಯಸ್ಸಿನಿಂದ ಸಣ್ಣವರಾದವರು, ಶುಕಮುನಿಯಂತೆ ಮಾಯಾ ಸಂಸಾರದಿಂದ ಹೊರಗೆ ಹೊರಟು, ಪರಮ ವೈರಾಗ್ಯದಿಂದ ಸರ್ವಮಾನವ ಹಿತವನ್ನು ಬಯಸುವವರಾದ ಶ್ರೀ ಶಂಕರಾನಂದ ಗಿರಿ ಸ್ವಾಮಿಯವರ ಜೀವನ ಚರಿತ್ರೆ ಪ್ರಕಾಶಿತವಾಗುತ್ತಿರುವದು ನಮಗೆ ಅತ್ಯಂತ ಆನಂದವನ್ನುಂಟು ಮಾಡಿತು.

ಶ್ರೀಶೈಲ ಮಲ್ಲಿನಾಥನು, ಜಗದ್ಗುರು ಪಂಡಿತಾರಾಧ್ಯರು ಇವರಿಗೆ ಶಿವೋಪಾಸನಾಸಿದ್ಧಿಯನ್ನು ದೀರ್ಘಾಯುರಾರೋಗ್ಯಗಳನ್ನು ಕೊಟ್ಟು ರಕ್ಷಿಸಲೆಂದು ಬಯಸುತ್ತೇವೆ.

ಇತ್ಯಾಶಿಷಃ

## ಶ್ರೀ ಸ್ವಾಮಿ ಶಂಕರಾನಂದಜೀ

ಅಧ್ಯಕ್ಷರು : ಶ್ರೀ ಶಂಕರಾನಂದಾಶ್ರಮ

ಆಳ್ಳಗಡ್ಡೆ
ಮುಕ್ಕಾಂ : ಸದಮು
ದಿನಾಂಕ: 14-5-55

ಸಾಧಾರಣವಾಗಿ ಮಹಾಪುರುಷರ ಜೀವನ ಚರಿತ್ರೆ ಸಾಧಕರಿಗೆ ಆದರ್ಶಪ್ರಾಯು ವಾಗಿರಬೇಕು. ಹಾಗಿಲ್ಲದೆ ಹೋದರೆ ಇತರರಿಗೆ ಉಪಯೋಗವಾಗಲಾರದು. ಇಂಥಾ ಒರೆಗಲ್ಲಿನಲ್ಲಿ ತಿಕ್ಕಿ ಶ್ರೀ ಶಂಕರಾನಂದಗಿರಿ ಸ್ವಾಮಿಯೆಂಬುವ ಸುವರ್ಣವನ್ನು ಪರೀಕ್ಷಿಸ ಬಹುದು. ಈ ಮಹಾಪುರುಷರು ನಮಗೆ ಚಿರಪರಿಚಿತರು. ನಮಗೆ ಸಂಬಂಧಿಸಿದ ಮೈಸೂರು ಪ್ರಾಂತ ಹೊಗರೇಖಾನ್‌ಗಿರಿ ಶ್ರೀ ಶಿವಾನಂದ ಸೇವಾಶ್ರಮದಲ್ಲಿ ಇವರು ಕೆಲವು ಕಾಲ ನಿವಾಸಿಸಿ ತಪೋನಿಷ್ಠರಾಗಿ ಸಿದ್ಧಿಯನ್ನು ಹೊಂದಿದರು. ಅಲ್ಲಿರುವವರಿಗೆ ಆದರ್ಶಪ್ರಾಯರಾಗಿ ಅವರ ಆದರಣೆಯನ್ನು ಹೊಂದಿದರು ಮತ್ತು ಪವಿತ್ರ ವಾರಣಾಶೀ ಕ್ಷೇತ್ರದಲ್ಲಿ ಕೆಲವು ವರ್ಷಗಳಿದ್ದು ಅಧ್ಯಯನ ಮಾಡಿ ವೇದಾಂತ ಶಾಸ್ತ್ರ ಪಾರಂಗತರಾದರು. ಅಲ್ಲಿ ಸತ್ಸಂಗವನ್ನು ಮಾಡಿ ಅನೇಕ ಆಧ್ಯಾತ್ಮಿಕ ರಹಸ್ಯಗಳನ್ನು ಅರಿತವರಾಗಿದ್ದಾರೆ.

ಪ್ರಪಂಚದಲ್ಲಿ ಮಹಾಪುರುಷರು ಎಷ್ಟೋ ಜನರಿದ್ದಾರೆ. ಆದರೆ ಅವರಲ್ಲಿ ಕೆಲವರು ಭಕ್ತ ಮಾತ್ರರಾಗಿರುವವರು; ಮತ್ತು ಕೆಲವರು ಕೇವಲ ವೈರಾಗ್ಯಸಂಪನ್ನ ರಾಗಿರುತ್ತಾರೆ; ಇನ್ನೂ ಕೆಲವರು ಕೇವಲ ಜ್ಞಾನಿಗಳಾಗಿರುತ್ತಾರೆ; ಮಿಕ್ಕ ಕೆಲವರು ತಪೋನಿಷ್ಠರಾಗಿರುತ್ತಾರೆ. ಆದರೆ ಈ ಮಹಾಪುರುಷರು ಭಕ್ತಿ, ಜ್ಞಾನ, ವೈರಾಗ್ಯ ತಪಸ್ಸಂಪನ್ನತೆ ಈ ಎಲ್ಲವುಗಳಲ್ಲಿಯೂ ಪಾರಂಗತರಾಗಿದ್ದಾರೆ. ಸಾರಾಂಶವಾಗಿ ಹೇಳಿ ದರೆ, ಇವರಿಂದ ಆಶ್ರಯಿಸಿರುವ ಶ್ರೀ ಉಮಾಮಹೇಶ್ವರ ಗುರುಪೀಠಕ್ಕೆ ಒಂದು ಮಹತ್ತರವಾದ ಕಳೆಯುಂಟಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ಇವರಲ್ಲಿರುವ ಮತ್ತೊಂದು ಲಕ್ಷಣವೇನೆಂದರೆ ಇವರ ಬೋಧೆಯ ವಿಧಾನ ವಿಶಿಷ್ಟವಾದದ್ದು. ಇವರು ಅಧಿಕೃತ ಪ್ರಬೋಧಕರಾಗಿದ್ದಾರೆ. ಇವರಿಂದ ಪಂಡಿತರಿಗೆ, ಪಾಮರರಿಗೆ ಕೂಡ ಪ್ರಯೋಜನವಾಗುವದು. ಇವರಿಗೆ ಸರ್ವಾಂತರ್ಯಾಮಿಯಾದ ಭಗವಂತನು ಚಿರಾಯುರಾರೋಗ್ಯಗಳನ್ನು ಕೊಟ್ಟು, ಇವರ ಉಪಾಧಿಯಿಂದ ಅನೇಕ ಜನರಿಗೆ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳುವ ಅವಕಾಶವಾಗಲೆಂದು ಬಯಸುತ್ತೇವೆ.

ಇತಿ
(ಸಂ) ಶಂಕರಾನಂದ

## ಓಂ ತತ್ಸತ್

ಶ್ರೀ ಶ್ರೀ ಶ್ರೀ ಶಂಕರಾನಂದ ಗಿರಿ ಸ್ವಾಮಿಯವರು (ಗುಂತಕಲ್) ಕುಂದನ ಗುರ್ತಿ ಶ್ರೀ ಶಿವಲಿಂಗಾಶ್ರಮವಾಸಿಗಳು. ಈ ಮಹಾಪುರುಷರು ನಮಗೆ ಚಿರಕಾಲ ದಿಂದ ಪರಿಚಿತರು. ಇವರ ವಂಶಪರಂಪರಾಚಾರ್ಯತ್ವವು ಕೂಡಾ ನಮಗೆ ಗುರುತು. ಶ್ರೀ ಸ್ವಾಮಿಯವರು ಚಿಕ್ಕವಯಸ್ಸಿನಲ್ಲೇ ಪೂರ್ಣ ವಿರಕ್ತಿಯಿಂದ ಸ್ವಗ್ರಾಮವನ್ನು ಬಿಟ್ಟು ಅನಂತಪುರ ಜಿಲ್ಲೆ ಗುತ್ತಿ ತಾಲೂಕಾ ಗಂಜಿಗುಂಟೆ ಗ್ರಾಮ ಶ್ರೀ ಪ್ರಣವಾನಂದಾ ಶ್ರಮದಲ್ಲಿ ಬ್ರಹ್ಮನಿಷ್ಠರಾದ ಶ್ರೀ ಸದಾನಂದ ಸದ್ಗುರು ಸ್ವಾಮಿಯವರ ಸನ್ನಿಧಿಯಲ್ಲಿ ಬ್ರಹ್ಮಜಿಜ್ಞಾಸ ಮಾಡುತ್ತಿರಲು ನಾನು ಆ ಆಶ್ರಮಕ್ಕೆ ಹೋದೆನು. ಈ ಮಹಾ ದೇದೀಪ್ಯಮಾನ್ಯವಾದ ವ್ಯಕ್ತಿ ನನ್ನ ದೃಕ್ಪಥದಲ್ಲಿ ಬಿದ್ದನು. ಆಗ ನನ್ನ ಹೃತ್ಫಲಕದಲ್ಲಿ ಈ ವ್ಯಕ್ತಿ ಅವತಾರಪುರುಷನೆಂಬ ಭಾವನೆ ಉಂಟಾಯಿತು. ಕೂಡಲೇ ನಮ್ಮ ವಿಶ್ವಾಸ ಪಾತ್ರರಾದ ಶ್ರೀ ಸದಾನಂದ ಸ್ವಾಮಿಯವರೊಂದಿಗೆ ಈತನಿಗೆ ತಕ್ಕ ಬೋಧೆ ಯನ್ನು ಮಾಡಬೇಕೆಂದು ಅರಿಕೆ ಮಾಡಿಕೊಂಡೆನು ಮತ್ತು ಅಲ್ಲಿದ್ದ ಸದ್ಭಕ್ತ ಶಿಖಾಮಣಿ ಗುರುಸೇವಾನಿರತನಾದ ವೆಲನಾಟ ವೆಂಕಟಪ್ಪನವರಿಗೂ ಕೂಡಾ ಉಕ್ತ ವಿಷಯವನ್ನು ಸೂಚಿಸಿ "ಇವರಿಗೆ ತಕ್ಕ ಸರ್ವ ಸೌಕರ್ಯಗಳನ್ನು ಮಾಡು. ನಿನ್ನ ಜನ್ಮ ಧನ್ಯವಾಗು ವದೆಂದು ಹೇಳಿದೆನು. ಇವರಿಂದ ಲೋಕೋಪಕಾರವಾಗುವದೆಂದು ತಿಳಿಸಿದೆನು."

ನಿಜವಾಗಿಯೂ ಆಜನ್ಮ ಬ್ರಹ್ಮಚರ್ಯವು ವಿರಕ್ತಿ ಮೈತ್ರ್ಯಾದಿ ಸದ್ಗುಣಗಳು ಉಳ್ಳವರಾದ್ದರಿಂದ ಇವರ ಪ್ರಾರಬ್ಧ 'ಶುಕಮಹರ್ಷಿ' ಯಂತಹದೆಂಬ ಭಾವ ನನಗೆ ಉಂಟಾಯಿತು. ಇಂತಹ ಮಹಾಪುರುಷರ ಜೀವನ ಚರಿತ್ರೆ ಪ್ರಕಟವಾಗುವದು ನೋಡಿ ನನಗೆ ಮಹದಾನಂದವಾಯಿತು. ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲದೆ ಇದ್ದ ವಿಷಯವು ಯಥಾರ್ಥವಾಗಿ ಬರೆಯಲ್ಪಟ್ಟಿದೆ. ಇಂಥಾ ಜೀವನ ಚರಿತ್ರೆ ವಿಷಯಗಳು ಸಾಧಕರಿಗೆ ವಿಶೇಷವಾದ ಸಹಾಯವನ್ನುಂಟು ಮಾಡುವದೆಂದು ನನ್ನ ವಿಶ್ವಾಸ.

ಶಿವಂ ಇತಿ

ದಿನಾಂಕ : 2-3-1955

(ಸಂ) ಬ್ರ|| ಶ್ರೀ|| ಶಂಕರಾನಂದಸ್ವಾಮಿ
ಸುರಪುರ

ಮುಕ್ಕಾಂ : ಬ್ರಹ್ಮವಿದ್ಯಾಶ್ರಮ, ಬೆಂಗಳೂರು

## ಶ್ರೀ ಕೇಶವತೀರ್ಥ ಸ್ವಾಮಿಯವರು

ಸಂಪಾದಕರು : "ರಾಮದರ್ಶನ"

ಶ್ರೀ ರಾಮತೀರ್ಥ ಸೇವಾಶ್ರಮ
ಪಿಡುಗುರಾಲ–ಗುಂಟೂರು
ದಿನಾಂಕ : 17–2–55

"ಮಹಾತ್ಮರ ಚರಿತ್ರೆಗಳು ಅವಶ್ಯ ಪಠನೀಯಗಳು........"

ಅನಾದಿ ಕಾಲದಿಂದ ಇಂದಿನವರಿಗೂ ಭಾರತವರ್ಷ ಋಷಿ ಭೂಮಿ ! ಆರ್ಯಾವರ್ತವು ! ಈಗ ಪಠಿಸಹೋಗುತ್ತಿರುವ ಒಬ್ಬಾನೊಬ್ಬ ಆಧುನಿಕ ಋಷಿ ಶ್ರೀ ಶಂಕರಾನಂದಗಿರಿ ಸ್ವಾಮಿ ಜೀವಿತ ಚರಿತ್ರೆ ಮಾನವ ಜೀವನ ಸಂಸ್ಕೃತಿಗೆ, ದಿವ್ಯ ಶಾಂತಿಗೆ ಅವಸರವಾದ ಸಂದೇಶದೊಂದಿಗೆ ಆವಿರ್ಭವಿಸಿದೆ. ಸರ್ವರೂ ಪಠಿಸಲು ಪ್ರಾರ್ಥನೆ.

(ಸಂ) ಕೇಶವತೀರ್ಥ ಸ್ವಾಮಿ



### ಪ್ರೇಮ ಕುಸುಮ

"ಗೀತಾವಾಣಿ" ಸಂಪಾದಕರು

## ಶ್ರೀ ರಾಮಕೃಷ್ಣಾನಂದ ಸ್ವಾಮಿ

ಸತ್ಪುರುಷರು ಜನಾಂಗದಲ್ಲಿ ವಿಟಮಿನ್ ಅಂಥವರು. ಅವರ ಜೀವಿತ ಕಥೆಗಳು ಸಾಧಕ ಲೋಕಕ್ಕೆ ಕೈದೀವಿಗೆಗಳಂತಹವು. ಅವರ ಬೋಧಾಚರಣ ಪ್ರಚಾರಗಳು ಮಾನವ ಸಮಾಜಕ್ಕೆ ಚೈತನ್ಯವನ್ನು ತೋಡಿ ಹಾಕುತ್ತವೆ.

ವೈರಾಗ್ಯ ತ್ಯಾಗದಲ್ಲೇ ಅಲ್ಲ ಪ್ರೇಮದಲ್ಲಿ, ಸೌಜನ್ಯದಲ್ಲಿಯೂ ಕೂಡ ಶ್ರೀ ಶಂಕರಾನಂದಗಿರಿ ಸ್ವಾಮಿಯವರು ದೊಡ್ಡ ಪರ್ವತದಂಥವರು. ಅವರ ಆದರ್ಶ ಜೀವಿತ ಗ್ರಂಥರೂಪವಾಗಿ ಮೂರ್ತೀಭವಿಸುವದು ಅತ್ಯಂತ ಸಂತೋಷಾರ್ಹವಾದ ವಿಷಯ. ಈ ಗ್ರಂಥ ಮುಮುಕ್ಷುಗಳಿಗೆ ಉತ್ತಮ ಪಾಥೇಯವಾಗಿ ವೈರಾಗ್ಯ ಬಲವನ್ನು ಕೊಡುವದಾಗಲಿ ! ಓಂ

ಮುಕ್ಕಾಂ : ಅಗರಂ (ಕೋಲಾರ ಜಿಲ್ಲಾ)

ಶ್ರೀ ರಾಮಕೃಷ್ಣ
ದಿನಾಂಕ: 9–3–55

ಓಮ್ .

## ಶ್ರೀ ಸಾಧು ಲಕ್ಷ್ಮೀ ನರಸಿಂಹ ಶರ್ಮ

ಕೃಷ್ಣಮಾಚಾರಿ ಕಾಂಪೌಂಡು, ಬಳ್ಳಾರಿ

"........ಗ್ರಂಥ ರಚನೆಗೂ ಪ್ರಚುರಣೆಗೂ ಈ ಕಾಲದಲ್ಲಿದ್ದ ಸ್ವಾತಂತ್ರ್ಯ ಸೌಕರ್ಯಗಳು ಹಿಂದೆ ಯಾವಾಗಲೂ ಇರಲಿಲ್ಲ........"

"ನಾವಿರತೊ ದುಶ್ಚರಿತಾತ್, ನಾಶಾಂತೋ ನಾಸಮಾಹಿತಃ ।
ನಾಶಾಂತ ಮನಸೋವಾಪಿ ಪ್ರಜ್ಞಾನೇನೈನಮಾಪ್ನುಯಾತ್॥ "

ಅಂದಹಾಗೆ ಆಚಾರ ಹೀನನಾದವನು ಎಷ್ಟು ಪಂಡಿತನಾದರು ಪರತತ್ತ್ವವನ್ನು ಪಡೆಯಲಾರನು. ಈಗ ಬುದ್ಧಿಯನ್ನು, ಬಲವನ್ನು ನಂಬಿದ ಪಾಶ್ಚಾತ್ಯ ಸಂಸ್ಕೃತಿ, ಮಾನವ ಜಾತಿಯನ್ನೇ ಮುಳುಗಿಸಿ ಹಾಕುತ್ತದೆ. ಇಂಥಾ ಸಮಯದಲ್ಲಿ ರಜಸ್ತಮೋಮಯವಾದ ನಾಗರಿಕತೆಯ ಪ್ರವಾಹದಿಂದ ಹೊರಬಿದ್ದು ತಾವು ಉತ್ತೀರ್ಣರಾಗಿ ತಮ್ಮ ಸೋದರರನ್ನು ಉದ್ಧರಿಸಬೇಕಾದ ಪ್ರಶಾಂತ, ಸೌಂದರ್ಯ, ಗಂಭೀರ, ಪವಿತ್ರ ವಾತಾವರಣ ಉಳ್ಳ ಮಹರ್ಷಿಗಳು, ಸಾಧುಗಳು, ಯೋಗಿಗಳು ಇಂದಿಗೂ ಅಲ್ಲಲ್ಲಿ ಕಾಣಿಸುತ್ತಿದ್ದಾರೆ. ಅಂಥಾ ಮಹನೀಯರ ಶ್ರೇಣಿಗೆ ಸೇರಿದ ಶ್ರೀ ಶ್ರೀ ಶ್ರೀ ಶಂಕರಾನಂದ ಗಿರಿ ಸ್ವಾಮಿಯವರು ಮನೋವಾಕ್ಕಾಯ ಕರ್ಮಗಳಲ್ಲಿ ಚಿರಂತನ ಸತ್ಯ ಸೌಂದರ್ಯವನ್ನು ಅನುಭವಿಸಿ, ಅನುಭವಿಸುವಂತೆ ಮಾಡುತ್ತಿದ್ದಾರೆ. ಇಂಥಾ ಶ್ರೀಗಳವರ ಆದರ್ಶಚರಿತ್ರೆ ಮುಮುಕ್ಷುಗಳಿಗೆ ಮಕುಟಾಯಮಾನವಾದದ್ದು. ಅದಕ್ಕೆ ವಾಗ್ರೂಪವನ್ನು ಕೊಟ್ಟು ಸಾಧಕರ ಮುಂದೆ ಇಡುತ್ತಿರುವ ಈ ಪ್ರಯತ್ನವು ಪರಮ ಶ್ಲಾಘನೀಯವಾದದ್ದು. ಈ ಕಾರ್ಯ ಭಗವತ್ ಕೈಂಕರ್ಯವೇ ಆಗಿದೆ. ಇಂಥಾ ಭಗವದಾರಾಧನೆಗೆ ಪವಿತ್ರ ಸಾಮಗ್ರಿಗಳಾಗಿ ಸಂಸಿದ್ಧರಾದ ಸತ್ಪುರುಷರಿಗೆ ನನ್ನ ಧನ್ಯವಾದಗಳು. ಭಗವದಾಶೀರನುಗ್ರಹಗಳು.

"ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರ
ಶಂಕರಾನಂದಗಿರಿ ನೆಕ್ಕು ಶಕ್ತಿಯುಕ್ತಿ
ನೊಸಗಿ ಶಂಕರ ಭಕ್ತುಲ ಕೂತಯುಗುಚು
ವೆಲಯುಗಾವುತ ಸಜ್ಜನ ವಿನುತ ಮಗುಚು" ॥

ಮನ್ಮಥ ವೈಶಾಖ
ಬ॥ ಏಕಾದಶಿ

(ಸಂ) ಸಾಧು ಲಕ್ಷ್ಮೀ ನರಸಿಂಹಶರ್ಮ

# ಗೀತಾ ವಾಣಿ

15–8–1955

ಸುಪ್ರಸಿದ್ಧವಾದ ಶ್ರೀಮದುಮಾಮಹೇಶ್ವರ ಪೀಠಾಧಿಪತಿಗಳೂ ವಿದ್ಯಾ ತಪಸ್ಸಂಪನ್ನರು ಆದರ್ಶವಂತವಾದ ಆಚಾರ ವಿಚಾರಗಳಿಂದ ಆರ್ಷ ವಿದ್ಯಾಪ್ರಚಾರ ವನ್ನು ಇಂದಿಗೂ ವಿಜಯೋಪೇತವಾಗಿ ಮಾಡುತ್ತಿರುವ ಯುವಕ ಪರಿವ್ರಾಡ್ವ ರ್ಯರು, ಅಸ್ಮದೀಯ ಪವಿತ್ರ ಮಿತ್ರರಾದ ಶ್ರೀ ಶ್ರೀ ಶ್ರೀ ಪೂಜ್ಯಪಾದ ಶ್ರೀ ಶಂಕರಾನಂದಗಿರಿ ಸ್ವಾಮಿಯವರ ಜೀವಿತ ಚರಿತ್ರೆಯನ್ನು ಇದ್ದದ್ದು ಇದ್ದ ಹಾಗೇ ಬರೆದು ಭಕ್ತಲೋಕಕ್ಕೆ ಒದಗಿಸಿ ಕೊಟ್ಟ ಗುರುಭಕ್ತಿಪರಾಯಣರಾದ ಶ್ರೀ ತತ್ತ್ವಾ ನಂದ ಸ್ವಾಮಿಯವರೆಷ್ಟೋ ಧನ್ಯರು. ಅಂಥಾ ಈ ಗ್ರಂಥವು, ತತ್ವವಿದರು, ಪಂಡಿತರು, ಸಜ್ಜನರಾದ ವಿದ್ವಾನ ಶ್ರೀ S. ರಾಜಗುಪ್ತರವರಿಂದ ಚೆನ್ನಾಗಿ ಪರಿಷ್ಕರಿ ಸಲ್ಪಟ್ಟು ಬಾಹ್ಯಾಂತರಗಳಲ್ಲಿ ಸರ್ವಾಂಗ ಸುಂದರವಾಗಿ ಶೋಭಿಸುತ್ತಿದೆ. ಅಲ್ಲದೆ ಶ್ರೀಯವರ ಸತ್ಯಾದರ್ಶ ಜೀವನವನ್ನು ತಿಳುಹುತ್ತಿದೆ. ಪ್ರಶ್ನೋತ್ತರ ರೂಪವಾಗಿ ಇದರಲ್ಲಿ ಅನೇಕಾಧ್ಯಾತ್ಮಿಕ ರಹಸ್ಯ ವಿಷಯಗಳು ಕೂಡಾ ಬೋಧಿಸಲ್ಪಟ್ಟದ್ದರಿಂದ, ಇದು ಕೇವಲ ಜೀವನ ಚರಿತ್ರೆಯಷ್ಟೇ ಅಲ್ಲದೆ ಬೋಧಾಗ್ರಂಥವೆಂದು ಹೇಳಿದರೂ ತಪ್ಪಲ್ಲ. ಅಲ್ಲಲ್ಲಿ ಶ್ರೀಗಳವರು ಮಾಡಿದ ನೈತಿಕಾಧ್ಯಾತ್ಮಿಕೋಪನ್ಯಾಸಗಳು ಉಪದೇಶ ರೂಪಗಳು, ಗುರುಭಕ್ತಿ ಪರಿಪೂರ್ಣವಾದ ಗುರುಮಹಿಮೆಯ ವರ್ಣನೆ ಹರ್ಷ ರೋಮಾಂಚನೆಗಳನ್ನುಂಟು ಮಾಡುವದೇ ಅಲ್ಲದೆ ಸಾಧಕರಿಗೆ ಅಮೃತ ಪ್ರಾಯ ವಾಗಿದೆ. ಒಟ್ಟಿನಲ್ಲಿ "ಗುರು ಶುಶ್ರೂಷಯಾ ವಿದ್ಯಾ" ಎನ್ನುವ ಹಾಗೆ ಸದ್ಗುರು ಸನ್ನಿಧಾನದಿಂದ ಶಾಶ್ವತವಾದ ವಿದ್ಯೆಯನ್ನು ಪಡೆಯಬೇಕೆಂಬ ಪ್ರಾಚೀನ ಭಾರತೀಯ ಸಂಸ್ಕೃತಿಯನ್ನು ಕಾರ್ಯರೂಪದಿಂದ ನೋಡಿಸುತ್ತಲು, ಅದನ್ನು ಲೋಕಕ್ಕೆ ಧಾರೆ ಯೆರೆದು ಸಾರ್ಥಕ ಮಾಡಿಕೊಂಡ ಶ್ರೀಗಳವರ ಪವಿತ್ರವಾದ ಜೀವಿತವು ಲೋಕಕ್ಕೆ ಆದರ್ಶಪ್ರಾಯವಾಗಿ ಬೆಳಗುವದೆಂಬುವುದರಲ್ಲಿ ಸಂದೇಹವಿಲ್ಲ.

# ಮೊದಲನೆಯ ತೆಲುಗು.ಮುದ್ರಣದ ಮಾತು

"ಕಿಂ ದುರ್ಲಭಂ ಸದ್ಗುರುರಸ್ತಿ ಲೋಕೇ ಸತ್ಸಂಗತಿಃ" ಅಂದ ಹಾಗೆ ಸಜ್ಜನರ ಸಹವಾಸವು ಮೂರು ಲೋಕಗಳಲ್ಲಿಯೂ ಅತ್ಯಂತ ದುರ್ಲಭ. ಅನೇಕ ಜನ್ಮಾರ್ಜಿತ ಪುಣ್ಯಧನ ಶ್ರೇಯೋರೂಪಲಾವಣ್ಯ ವಯೋವರ್ಣ ಧನ ವಿದ್ಯ ಯೌವನಾದಿ ಮದ ಗಳಿಂದ ಅಲಭ್ಯ, ಪರಮ ಶ್ರೇಯಃಪ್ರಾಪ್ತಿಗೆ ಏಕೈಕ ಸಾಧನವು ಅಂಥವರ ಸಹವಾಸ. ಅದನ್ನು ಹೊಂದದ ಶ್ರೇಯಸ್ಸು ಮತ್ತೊಂದಿದೆಯೇ!

ಇನ್ನೂ ಇಂಥಾ ಪರಮ ಸಜ್ಜನರ ಜೀವನಗಳು ಲೋಕಕ್ಕೆ ಆದರ್ಶಗಳು. ಅವರ ಪ್ರತಿವಾಕ್ಕು ಅಮೃತ ಪ್ರಾಯವು, ಹೃದಯಾಂತರಾಳ ನಿಗೂಢವು, ಅನಾದ್ಯ ವಿದ್ಯೋ ನ್ಮೂಲನ ಶಕ್ತಿವಂತವಾದವುಗಳು. ಅವರ ಪ್ರತಿಕ್ರಿಯೆಯು ಜಗತ್ಕಲ್ಯಾಣಕಾರಕವು. ಅವರ ಪ್ರತಿಸಂಕಲ್ಪವು ಲೋಕ ಶಿವಂಕರವಾದದ್ದು. ಅವರ ಚರಿತ್ರೆಯೆಂದರೆ ಪರಮ ಪ್ರಮಾಣವಾದ ಶಾಸ್ತ್ರವು. ಸ್ವಸ್ವಹೃದಯವೆಂಬ ಸುವರ್ಣವನ್ನು ಪರೀಕ್ಷಿಸಲು ನಿಕ ಘೋಪಲವು. ನಾನಾವಾಸನಾಯುಕ್ತವಾದ ಮನಸ್ಸನ್ನು ಶುದ್ಧಗೊಳಿಸಲು ಪವಿತ್ರ ಭಾಗೀರಥಿ. ಅಜ್ಞಾನಾಂಧಕಾರದಲ್ಲಿ ಬಿದ್ದು ದಾರಿಯನ್ನು ಕಾಣದೆ ಪರಿತಪಿಸುತ್ತಿರುವ ಜೀವಿಗಳಿಗೆ ಏಕೈಕ ಜ್ಯೋತಿ. ಅಸನ್ಮಾರ್ಗದಲ್ಲಿ ಸಿಕ್ಕು ಶಾಂತಿಯಿಲ್ಲದೆ ವ್ಯಥೆಯನ್ನು ಪಡುತ್ತಿರುವ ಜ್ಞಾನ ಬುಭುಕ್ಷಿತರಿಗೆ ಏಕೈಕ ಪಾಥೇಯವು.

ಅಂಥಾ ಮಹನೀಯ ಗುಣಗಣಸಂಪದ್ವಿಶಿಷ್ಟರು; ಪರಮ ಕರುಣಾ ಸ್ವರೂಪಿ ಗಳು; ವಿವೇಕೋಪೇತಭಾವ ವಿರಕ್ತಿ ಸಂಪನ್ನರು; ವಿದ್ಯಾ ವಿನಯಾದಿ ಸಲ್ಲಕ್ಷಣ ಲಕ್ಷಿ ತರು; ಯತಿವರೇಣ್ಯರು; ಸರ್ವಭೂತ ಮೈತ್ರಿಯುಳ್ಳ ಅಸ್ಮದೀಯ ಚಿರಸನ್ಮಿತ್ರರು, ಶ್ರೀಮದುಮಾಮಹೇಶ್ವರ ಪೀಠಾಧಿಪತಿಗಳೂ, ಪರಮಹಂಸ ಪರಿವ್ರಾಜಕಾಚಾರ್ಯ ವರ್ಯರೂ ಆದ ಪೂಜ್ಯಪಾದ ಶ್ರೀ ಶ್ರೀ ಶ್ರೀ ಶಂಕರಾನಂದಗಿರಿ ಸ್ವಾಮಿಗಳವರ ಈ ಚರಿತ್ರೆಯನ್ನು ಅವಲೋಕಿಸಲು ನಾನೆಷ್ಟು ಧನ್ಯನು.

ಮೊಟ್ಟಮೊದಲು ಈ ಗ್ರಂಥವನ್ನು ಪರಿಷ್ಕರಿಸಲು ನನ್ನನ್ನು ಕೇಳಿದರು. ಪ್ರಸ್ತುತ ಸಾಧ್ಯವಿಲ್ಲೆಂದು ಕೆಲವು ಕಾರಣಗಳನ್ನು ತಿಳುಹುತ್ತಾ ನನ್ನ ಅಶಕ್ತತೆಯನ್ನು ಬಿನ್ನವಿಸಿಕೊಂಡೆನು. ಆದರೇನು ನನ್ನಲ್ಲಿಟ್ಟ ವಾತ್ಸಲ್ಯದಿಂದಲೂ ನನ್ನ ಪುಣ್ಯದಿಂದಲೂ ಪರಿಷ್ಕರಿಸಿಯೇ ತೀರಬೇಕೆಂದು ದೊಡ್ಡವರ ಆದೇಶವಾಯಿತು. ಅದನ್ನು ತಿರಸ್ಕರಿ ಸಲು ಅಶಕ್ತನಾಗಿ ಅಂಗೀಕರಿಸಿದೆನು. ಎಲ್ಲರಿಗೂ ಸುಲಭವಾಗಿರಲು ಶ್ರೀಗಳವರ ಭಾಷಾ ಶೈಲಿಯನ್ನು ಸಾಧ್ಯವಾದಮಟ್ಟಿಗೆ ಸರಳಗೊಳಿಸಲಾಯಿತು. ತಕ್ಕಷ್ಟು ಭಾಗ-ಭಾಗ ಗಳಾಗಿ ವಿಭಜಿಸಲ್ಪಟ್ಟಿತು. ಶ್ರೀಸದ್ಗುರು ಕೃಪಾಜ್ಯೋತಿಯಲ್ಲಿ ಕಂಡ ಅವರಲ್ಲಿನ ಒಪ್ಪುಗಳೆಲ್ಲವು ಅವರವೇ. ಈ ಪರಿಷ್ಕರಣ ವ್ಯಾಜದಿಂದ ನಾನೆಷ್ಟೋ ವಿಷಯಗಳನ್ನು

ಅರಿತೆನು. ಇಂಥಾ ಸದಾವಕಾಶವನ್ನುಂಟುಮಾಡಿದ ಪೂಜ್ಯಪಾದರೂ, ಚರಿತ್ರ ನಾಯಕರೂ ಆದ ಶ್ರೀಗಳವರಿಗೆ ಅನಂತ ನಮೋ ವಾಕ್ಕುಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥಕರ್ತರೂ ಮಿತ್ರರೂ ಆದ ಶ್ರೀ ತತ್ವಾನಂದ ಬ್ರಹ್ಮಚಾರಿಯವರು ಗುರುಭಕ್ತಿ ಪರಾಯಣರು; ಸಾಧುಪುಂಗವರೆಂದು ಬೇರೆಯಾಗಿ ಹೇಳಬೇಕಾದದ್ದಿಲ್ಲ. ಪರಮ ಪವಿತ್ರವಾದ ಶ್ರೀಗುರು ಚರಿತ್ರೆಯನ್ನು ರಚಿಸಿದರು. ಇವರ ಕೃಷಿ ಸಾರ್ಥಕ. ಈ ಪವಿತ್ರ ಚರಿತ್ರೆ ಆಚಂದ್ರಾರ್ಕವಾಗಿ ಬೆಳಗಲಿ. ಎಷ್ಟೋ ಆತಂಕಗಳು ಉಂಟಾ ಗುತ್ತಿದ್ದರೂ ಮುದ್ರಣ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿ ಗ್ರಂಥವನ್ನು ಬೇಗನೆ ಒದಗಿಸಿದ ಅಶೋಕಾ ಪ್ರಿಂಟರ್ಸ್ ಯಜಮಾನರು, ಶ್ರದ್ಧಾವಂತರೂ, ಶಾಂತ ಸ್ವರೂಪಿಗಳೂ, ಆಸ್ತಿಕರೂ ಆದ ಶ್ರೀ M. ನಾರಾಯಣ ಸ್ವಾಮಿ ಮತ್ತು ಅವರ ಸೋದರರನ್ನು ದಯಾಮಯನಾದ ಶ್ರೀಶೈಲೇಶನು ಕರುಣೆಯಿಂದ ಕಾಯಲಿ.

ಕರುಣಾಮಯನಾದ ಉಮಾನಾಥನು ಭಕ್ತ ಜಗತ್ತನ್ನು ತನ್ನ ಕೃಪಾ ವೀಕ್ಷಣ ದಿಂದ ಕಾಣಲಿ !

ಚೈತನ್ಯ ವಿಹಾರ
135, ವೀರ ಪಿಳ್ಳೈ ಬೀದಿ
ಬೆಂಗಳೂರು–1

ಇಂತಿ
ಸುಜನ ಪಾದಧೂಳಿ
S. ರಾಜಗುಪ್ತ
18–5–1955

## ಮೊದಲನೆಯ ತೆಲುಗು ಮುದ್ರಣದ ಪೀಠಿಕೆ

"ತಿತೀರ್ಷುರ್ದುಸ್ತರಂ ಮೋಹಾದುಡುಪೇ ನಾಸ್ಮಿಸಾಗರಂ" ಅಂದಹಾಗೆ ಮಹಾ ಗುಣಗಣಸಂಪನ್ನರಾದ ಪೂಜ್ಯಪಾದ ಶ್ರೀ ಶಂಕರಾನಂದಗಿರಿ ಗುರುವರ ಸ್ವಾಮಿ ಯವರ ಅಪೂರ್ವ ಜೀವಿತ ಚರಿತ್ರೆಯನ್ನು ಬರೆಯಲಾರಂಭಿಸಿದ ನನ್ನ ಪ್ರಯತ್ನ ಅಪಾರವಾದ ಸಮುದ್ರವನ್ನು ಅಲ್ಪವಾದ ತೆಪ್ಪದಿಂದ ದಾಟಲು ಯತ್ನಿಸಿದಂತಿದೆ. ಆದರೇನು ಆ ಗುರುದೇವರೇ ಕರ್ಣಧಾರನಾಗಿ ನನ್ನ ಮುಂದೆ ಇರಲು ಭಯವೇಕೆ ಎಂದು ಭಾವಿಸಿ ಪ್ರಾರಂಭಿಸಿದೆ. ಇದರಲ್ಲಿನ ಭಾವವು ಭಾಷೆಯು ಸರ್ವವು ಶ್ರೀಗಳ ವರದೇ.... ನಾನು ನಿಮಿತ್ತ ಮಾತ್ರನು. ಮಹನೀಯರಾದ ಪುಣ್ಯ ಪುರುಷರ ಜೀವಿತ ಚರಿತ್ರೆಗಳನ್ನು ಅವಲೋಕಿಸುವದರಿಂದ ಮಾನವ ಹೃದಯ ಪರಿವರ್ತನೆಯಾಗುವದು. ವಿವೇಕ ವೈರಾಗ್ಯಗಳಿಂದ ಭಕ್ತಿ ಪ್ರಪತ್ತಿಗಳುಂಟಾಗಿ ಅಹಂವೃತ್ತಿ ದೂರಾಗಿ ಆತ್ಮ ಸಾಕ್ಷಾತ್ಕಾರವನ್ನು ಹೊಂದಲು ಸಾಧನವಾಗುವದು. ಈ ಚರಿತ್ರನಾಯಕರಾದ ಪೂಜ್ಯಪಾದ ಶ್ರೀ ಶ್ರೀ ಶ್ರೀ ಸ್ವಾಮಿಯವರು ದೈವೀ ಸಂಪದ್ವಿಭೂಷಿತರು, ಉತ್ತಮ

ಬಂಗಾರದಂತೆ ನೈಷ್ಠಿಕ ಬ್ರಹ್ಮಚಾರಿಗಳು; ಧೀರರು; ವಿರಕ್ತರು; ಶ್ರೇಷ್ಠವಾದ ಆದರ್ಶ ಆಚಾರವಂತರು; ಸದಾ ಆತ್ಮೈಕ್ಯರತರು; ಸದ್ವಿದ್ಯಾವಂತರು; ಶಮದಮಾದಿ ಗುಣ ನಿಧಿಗಳು ! ಇಂಥಾ ಮಹನೀಯ ಮೂರ್ತಿಯ ಜೀವಿತ ಚರಿತ್ರೆಯನ್ನು ರಚಿಸಿ ಪಾಠ ಕರಿಗೆ ಒದಗಿಸಿಕೊಡುವ ಮಹಾಭಾಗ್ಯವು ನನ್ನದಾದ್ದರಿಂದ ನಾನು ಧನ್ಯನು ! ಶ್ರೀ ಸ್ವಾಮಿಗಳವರ ಸನ್ನಿಧಿಯಲ್ಲಿ ಆಗಾಗ ಅಧಿಕ ಕಾಲವಿದ್ದು ಸೇವಿಸುತ್ತಿರುವುದರಿಂದ ಚರಿತ್ರೆಯನ್ನು ಸಂಗ್ರಹಿಸುವ ಸುಯೋಗ ನನಗೆ ಬಂತು.

ಈ ಚರಿತ್ರೆಯಲ್ಲಿನ ವಿಷಯಗಳೆಲ್ಲವೂ ಪ್ರತ್ಯಕ್ಷವಾಗಿ ಶ್ರೀಗಳವರ ಶ್ರೀಮುಖ ದಿಂದ ಕೇಳಿದವು; ನೋಡಿದವು; ಇದ್ದದ್ದು ಇದ್ದಂತೆ ಸಂಗ್ರಹಿಸಿ ಇಟ್ಟೆನು. ಇದರಲ್ಲಿ ಕೆಲವು ಹಿಂದೀ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ನಡೆದ ಸಂವಾದ ವಿಷಯಗಳನ್ನು ಶ್ರೀಗಳವ ರಿಂದಲೇ ಅನುವಾದಿಸಲ್ಪಟ್ಟು, ತಮ್ಮ ದಿನಚರಿಯಲ್ಲಿ ಬರೆದಿಟ್ಟ ಪ್ರಕಾರವಾಗಿಯೇ ಸೇರಿಸಿದ್ದೇನೆ.

ಈ ಚರಿತ್ರೆಯನ್ನು ಪರಿಷ್ಕರಿಸುವದಕ್ಕೆ ಬೆಂಗಳೂರು ಗವರ್ನಮೆಂಟು ಉನ್ನತ ಪಾಠಶಾಲಾಂಧ್ರ ಪಂಡಿತರಾದ ಕವಿ ಕೋಕಿಲ ವಿದ್ವಾನ್ ಶ್ರೀ S. ರಾಜಗುಪ್ತರವರಿಗೆ ಗ್ರಂಥವನ್ನು ಕಳುಹಿಸಲು, ತಮಗೆಷ್ಟೋ ಅನಿವಾರ್ಯ ಕಾರ್ಯಗಳಿದ್ದರೂ ಸಾದರ ದಿಂದ ಕೈಗೊಂಡು ತುಂಬಿದ ಮನಸ್ಸಿನಿಂದ ಸಂಸ್ಕರಿಸಿದರು. ತೀವ್ರ ಪರಿಶ್ರಮವನ್ನು ವಹಿಸಿ ಶೀಘ್ರಕಾಲದಲ್ಲಿ ಗ್ರಂಥಗಳನ್ನು ಸುಸಂಪನ್ನಗೊಳಿಸಿ ಭಕ್ತರ ಕರಕಮಲಗಳಿಗೆ ಕೊಟ್ಟರು. ಈ ಸುಧೀಮಣಿಗಳು ಚಿರಸ್ಮರಣೀಯರು. ಇವರಿಗೆ ಹೃತ್ಪೂರ್ವಕ ಕೃತಜ್ಞತಾಭಿನಂದನೆಗಳು.

ಉದಾರ ಮನಸ್ಸಿನಿಂದ ಈ ಗ್ರಂಥ ಮುದ್ರಣಕ್ಕೆ ಧನ ಸಹಾಯವನ್ನು ಮಾಡಿದ ದಾನಿಗಳಿಗೆ ವಂದನೆಗಳು.

ಈ ಗ್ರಂಥವನ್ನು ಕುರಿತು ಪೂಜ್ಯ ಶ್ರೀಸ್ವಾಮಿಗಳವರನ್ನು ಕುರಿತು ವಿಶಾಲ ಭಾವದಿಂದಲೂ ಸತ್ಯ ದೃಷ್ಟಿಯಿಂದಲೂ ತಮ್ಮ ಶುಭ ಸಂದೇಶಗಳನ್ನೂ, ಅಭಿಪ್ರಾಯ ಗಳನ್ನೂ ಅನುಗ್ರಹಿಸಿ ಕಳುಹಿದ ಪೂಜ್ಯ ಶ್ರೀ ಜಗದ್ಗುರು ಮಹಾಸ್ವಾಮಿಗಳವರಿಗೂ ಮಹಾತ್ಮರಿಗೂ ಭಕ್ತಿಯುಕ್ತಾನಂತ ಪ್ರಣಾಮಗಳು.

ಶ್ರೀ ಗುರುಚರಣ ರೇಣು
ತತ್ವಾನಂದ ಸ್ವಾಮಿ.

# ದ್ವಿತೀಯ ತೆಲುಗು ಮುದ್ರಣ ಪರಿಚಯ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯರಾದ ಪೂಜ್ಯಪಾದ ಶ್ರೀಶ್ರೀಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರ ಚರಿತ್ರೆ ದ್ವಿತೀಯ ಮುದ್ರಣದಲ್ಲಿ ಪ್ರಬೋಧ ಘಟ್ಟವನ್ನು ರಚಿಸುವ ಸುಯೋಗವು ಉಂಟಾದುದರಿಂದ ನಾನು ಧನ್ಯನು. (ಇಲ್ಲಿ ಶ್ರೀಗಳವರನ್ನು ಪೂಜ್ಯರು ಮತ್ತು ಭಕ್ತಾದಿಗಳು ಪ್ರೇಮದಿಂದ ಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರು ಎಂಬುದಾಗಿ ಕರೆಯುತ್ತಿದ್ದರೆಂದು ಗ್ರಾಹ್ಯ)

ಈ ಭಾಗದಲ್ಲಿನ ವಿಷಯಗಳು ಅಸಂಖ್ಯಾಕವು. ಶ್ರೀಗಳವರು ಅನೇಕ ಸ್ಥಳಗಳಲ್ಲಿ ಪರ್ಯಟಿಸಿ ಬೋಧಿಸಿದ ಆಧ್ಯಾತ್ಮಿಕ ತತ್ತ್ವ ರಹಸ್ಯಗಳು, ಗ್ರಂಥ ರಚನೆ, ಶಿಷ್ಟಜನ ಸಮುದ್ಧರಣಾತ್ಮಕವಾದ ಸತ್ಪ್ರಚಾರ ಪಟಿಮೆ ಮೊದಲಾದ ಲೋಕ ಕಲ್ಯಾಣಕಾರಕ ನಿಯಮ ನಿಷ್ಠೆಗಳಿಂದೊಪ್ಪುವ ಅವಿಶ್ರಾಂತ ಮಹಾ ಕೃಷಿಯನ್ನು ಈ ಎರಡನೆಯ ಮುದ್ರಣ ಭಾಗದಲ್ಲಿ ಕಾಣಬಹುದು. ಗ್ರಂಥ ವಿಸ್ತರಣೆಯಾಗುವದೆಂದು ಸಂಗ್ರಹಿಸಲಾಗಿದೆ.

ಶ್ರೀ ಉಮಾಮಹೇಶ್ವರ ಪಾಠಶಾಲೆ
ಆದವಾನಿ — ತತ್ವಾನಂದ ಸ್ವಾಮಿ.

ಓಂ ನಮೋ ಭಗವತೇ ಶ್ರೀಮದುಮಾಹೇಶ್ವರಾಯ

# ಶ್ರೀಗುರುವರ ಚರಿತ್ರೆ ಮೂರನೆಯ ತೆಲುಗು ಮುದ್ರಣ

ವಿದ್ವಚ್ಛಿರೋಮಣಿ ವೇದ ವಿದ್ಯಾವಿನೀತ
ಯಂ. ಬಾಲವಿಶ್ವನಾಥ ಶರ್ಮ ಬಿ. ಎ. — ಅನಂತಪುರ
ಸಂಸ್ಕೃತ ಲೆಕ್ಚರರ್ — 3–1–77

ಶ್ರೀಮದ್ವೇದಾಗಮೋಪನಿಷತ್ಪ್ರಸಿದ್ಧ, ಅಧೀತಿ, ಬೋಧಾ, ಚರಣ, ಪ್ರಚಾರ ಶೀಲವಾದ ಶ್ರೀಮದುಮಾಮಹೇಶ್ವರ ಗುರುಪೀಠ ಅನಾದಿ. ವೇದ ಶಾಸ್ತ್ರಗಳಿಗೆ ಪರಮತಾತ್ಪರ್ಯಭೂತವಾದ ಪರಮಾದ್ವೈತ ಸಿದ್ಧಾಂತ ಈ ಪೀಠಕ್ಕೆ ಪರಮ ಧ್ಯೇಯ. ಅವಿದ್ಯಾ ತಿಮಿರ ಪತಿತವೂ, ವೈರಾಗ್ಯ ವಿದೂರವೂ ಆದ ಜಗತ್ತಿಗೆ ಒಂದು ವಿದ್ಯಾಮಧುರ ಗಂಧವಿಲಸಿತವಾದ ಮಾರ್ಗವನ್ನು ನೋಡಿಸುವುದನ್ನು ಈ ಪೀಠವು ತನ್ನ ಧರ್ಮವಾಗಿ ಎಣಿಸಿಕೊಂಡಿದೆ. ಇಂಥಾ ಪರಮ ಪೂಜ್ಯವಾದ ಶ್ರೀಮದುಮಾಮಹೇಶ್ವರ ಗುರುಪೀಠಕ್ಕೆ ಈ ದಿನ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾದ ಪೂಜ್ಯಪಾದ ಶ್ರೀಶ್ರೀಶ್ರೀ ಶಂಕರಾನಂದಗಿರಿ ಗುರು ಸ್ವಾಮಿಗಳವರು ಪೀಠಾಧಿಪತಿಗಳಾಗಿದ್ದಾರೆ. ಮಹಾನಂದಿ ಕ್ಷೇತ್ರದ ಸಮೀಪದಲ್ಲಿರುವ ಶ್ರೀ ನಿರ್ವಾಣ ಮಠ,

ಉರವಕೊಂಡೆ ತಾಲೂಕಾ ಲತ್ತವರ ಶ್ರೀಕ್ಷೇತ್ರದ ಶ್ರೀಮದುಮಾಮಹೇಶ್ವರಾಶ್ರಮ ಈ ಪೀಠಕ್ಕೆ ಕೇಂದ್ರ. ಇವರು ಶ್ರೀಶ್ರೀಶ್ರೀ ಸದಾನಂದ ಸದ್ಗುರುಗಳ ಕರಕಮಲ ಸಂಜಾತರು. ಶ್ರೀಗಳವರ ಪರಮ ಗುರುಗಳು ಶ್ರೀಶ್ರೀಶ್ರೀ ಸದ್ಗುರು ಪ್ರಣವಾನಂದ ಯತೀಂದ್ರರು ! ಜೀವನ್ಮುಕ್ತರು ! ಧನ್ಯರು !

1969 ರಿಂದ ನನಗೆ ಶ್ರೀಗಳವರೊಂದಿಗೆ ಪರಿಚಯ. ಕಾರಣವೇನೇ ಆಗಲಿ ಆ ದಿನದಿಂದ ಶ್ರೀಗಳವರಿಗೆ ನನ್ನಲ್ಲಿ ವಾತ್ಸಲ್ಯಭಾವ ಉಂಟಾಯಿತು. ಅದು ಅಂಕುರಿತತ್ವ, ಪಲ್ಲವಿತತ್ವ, ಪುಷ್ಪಿತಾವಸ್ಥೆಗಳನ್ನು ದಾಟಿತು. ಪರಿಪಕ್ವ ದೆಶೆಯನ್ನು ಅಂದಿಕೊಳ್ಳಲು ನನ್ನ ಚಿತ್ತ ಸಂಸ್ಕಾರವು ಕೂಡಾ ಬೆಂಬಲವಾಗಬೇಕೇನೋ! ಅದು ಹೇಗಿದ್ದರೂ ಸತ್ಪುರುಷ ಶಿರೋಮಣಿಗಳಾದ ಶ್ರೀಗಳವರಿಗೆ ಸಮಕಾಲೀನರಾಗಿರುವದೇ ನಮ್ಮ ಭಾಗ್ಯವೆಂದು ಯಾವಾಗಲೂ ಭಾವಿಸುತ್ತಿದ್ದೇನೆ. ಇವರ ಸೌಜನ್ಯ ಸೌಶೀಲ್ಯಗಳು ಸದಾ ಸಂಸ್ಮರಣೀಯಗಳು.ಮರವಿಗೆ ಬಾಯ್ದೆರೆದರು ಒರುವದಿಲ್ಲ; ವೇದಾಂತ ಶಾಸ್ತ್ರದಲ್ಲಿ ತಾವು ಪರಾಕಾಷ್ಠೆಯನ್ನು ಹೊಂದಿದ್ದರೂ, ಪ್ರಬೋಧ ಸಮಯದಲ್ಲಿ ಶಿಷ್ಯರ ಸ್ಥಾಯಿಗೆ ಇಳಿದು ಬಂದು, ಅವರ ಹೃದಯ ಸ್ಥಿತಿಯನ್ನು ಆಕಲನಗೊಂಡು, ತರತಮ ಭಾವಗಳನ್ನರಿತು, ಒಳ್ಳೆಯ ಉಪಮಾನೋಪಮೇಯಗಳಿಂದ ಪ್ರವಚನವನ್ನು ಮಾಡುತ್ತಿರುವರು. ರೇಷ್ಮೆಯ ದಾರದಿಂದ ಜಾರಿದ ಮುತ್ತುಗಳಂತೆ ಇವರ ಕಂಠ ಸೀಮೆಯಿಂದ ಶ್ರುತಿ ಸಮ್ಮತವಾದ, ರುಚಿಕಟ್ಟಾದ, ಆಪ್ಯಾಯಮಾನವಾದ ಮಾತುಗಳು ಪ್ರವಾಹ ರೂಪದಿಂದ ಜಾರಿ ಬರುತ್ತಿರುತ್ತವೆ. ಈ ದೃಶ್ಯವು ರಿಪುಗಳನ್ನು ಕೂಡ ಆಕರ್ಷಿಸುವದು. ಸಹೃದಯಂಗಮವಾದ ವಾಗ್ವ್ಯಾಪಾರವನ್ನು ಲಕ್ಷಿಸಿ ನಿವೇದಿಸುವುದರಲ್ಲಿ ಉತ್ತಮವಾದ ಓರ್ಪು ನೈಪುಣ್ಯವು ಇವರಿಗಿವೆ. ಇವರು ಋಷಿತುಲ್ಯರು.

ಇವರ ಧೋರಣೆ ಒಂದೆಡೆಯಲ್ಲಿ ಸೂತ್ರ ಶೈಲಿ; ಒಂದಾವರ್ತಿ ಭಾಷ್ಯ ಪದ್ಧತಿ; ಮತ್ತೊಂದು ಸಲ ಪೂರ್ವಪಕ್ಷ ಸಿದ್ಧಾಂತ ಮರ್ಯಾದೆ ಅಹಮಹಮಿತೋರೂಪವಾಗಿ ವ್ಯಕ್ತವಾಗುತ್ತಿರುತ್ತೆ. ಅದ್ವೈತ ಸಿದ್ಧಾಂತ ಪ್ರಚಾರಕರಿಗೆ ಇರಬೇಕಾದ ಜ್ಞಾನಿತ್ವವು, ತತ್ವದರ್ಶಿತ್ವವು ಎಂಬ ಎರಡು ಗುಣಗಳು ಇವರಲ್ಲಿ ಒಂದಾಗಿ ಕಲೆತಿರುವದು ಪರಮ ವಿಶೇಷ. ಕಂಠಹಾರಗಳು, ಕರಕಂಕಣಗಳು, ಪಾದಾಭರಣಗಳು ಸಮುಲ್ಲಾಸ ಹೇತುಗಳಾದಂತೆ ವೇದಾಂತ ವಾಕ್ಯಗಳಿಗೂ, ಲಿಂಗ, ಪ್ರಕರಣ, ಸ್ಥಾನ, ಸಮಾಖ್ಯೆಗಳು ಶೋಭಾಸಂದಾಯಕಗಳೆಂಬ ಮರ್ಮವನ್ನು ಅರಿತವರು. ಬ್ರಹ್ಮಾನುಭೂತಿ ಸುಖವನ್ನು ತಿಳಿಯದವರ ಮಾತುಗಳಲ್ಲಿ ಯಾವದೋ ಪ್ರಿಯಪ್ರಾಯವಾದ, ಲಾವಣ್ಯಮಯವಾದ ರೂಪಾಲಂಕಾರ ಸೌಷ್ಠವವನ್ನು, ಸಮುದ್ದೀಪನವನ್ನು ಮಾಡುವುದಾದ ಜೀವಕಳೆ ಕೊರತೆಯಾದಂತೆ ಮಾತ್ರ ತಿಳಿಯುತ್ತಿರುತ್ತೆ. ತತ್ವಾನುಭೂತಿ ಉಳ್ಳವರಾದ್ದರಿಂದ ಆ ಲುಪ್ತತೆ ಇಲ್ಲಿ ಸುತರಾಂ ಕಾಣಿಸುವದಿಲ್ಲ. ಶಬ್ದ ವ್ಯವಸಾಯಾತ್ಮಕವಾದ ಸಾಹಿತ್ಯಕ್ಕಿಂತಲೂ ವಿಲಕ್ಷಣವಾದದ್ದು ರಸಾನಂದ, ಇದೇ ಬ್ರಹ್ಮನಿಷ್ಠೆ. "ರಸೋ

ವ್ಯಸಃ" ಎಂದಿದೆ ಶ್ರುತಿ. ಇದನ್ನು ಅನುಭವಿಸುವದಕ್ಕಾಗಲಿ, ಅಂದಿಸುವುದಕ್ಕಾಗಲಿ ಶೀಲವು ಅತ್ಯಂತ ಅಪೇಕ್ಷಿತವು. ಇದೇ ಪ್ರಧಾನವಾದ ಯೋಗ್ಯತೆ. ಶ್ರೀಗಳವರ ಶೀಲವು ಶ್ರೇಷ್ಠವಾದ ಮೇಲ್ಮೆಯ ಬಂಗಾರದಂಥಾದ್ದು. ಎಂಥಾ ಪರೀಕ್ಷೆಗಾಗಲಿ ನಿಲ್ಲಲು ಸಮರ್ಥವಾದದ್ದು. ಆದ್ದರಿಂದಲೇನೇ ಅವರ ಸೌಶೀಲ್ಯಕ್ಕೆ ಮಾರ್ಕುಗಳು ಹೆಚ್ಚು. ಅಂಥಾ ಸಚ್ಛೀಲವಂತರಾದ್ದರಿಂದ ಇವರಿಗೆ ದೇಶದಲ್ಲಿ ಎಲ್ಲೆಡೆಯಲ್ಲಿಯೂ ಬ್ರಹ್ಮಮಾರ್ಗ ಪ್ರಚಾರವನ್ನು ಮಾಡಲು ಬೇಕಾದ ಸಾಹಸ ಉಂಟಾಗಿದೆ. ಇದು ಸಾಮಾನ್ಯರಿಗೆ ಅಸಾಧ್ಯವಾದ ಕೆಲಸ. ಅನನ್ಯ ಭಕ್ತಿ ವಿಶ್ವಾಸ ಸಾಧ್ಯವಾದ ತತ್ವಬೋಧೆ ಸಚ್ಛೀಲ ಮೂಲವಾದದ್ದು. ಅಸಲು ಸಮ್ಯಕ್ಶೀಲವಿಲ್ಲದ ವೇದಾಂತ ವೇದಿ ವಾದವು, ಭಿನ್ನಖಂಡದ ಮೇಲಿನ ಚಿತ್ರಲೇಖನದಂತೆ, ಕಪಾಲದಲ್ಲಿನ ಕಮ್ಮಗಿರುವ ಜೇನಿನಂತೆ, ಚರ್ಮದ ಚೀಲದಲ್ಲಿಯ ವಿಮಲ ವಿಭೂತಿಯಂತೆ ನೇತ್ರೋತ್ಸವವನ್ನಾಗಲೀ ಜಿಹ್ವಾಪ್ಯಾಯತೆಯನ್ನಾಗಲಿ, ಪೂಜಾಭಾವನೆಯನ್ನಾಗಲಿ ಹೊಂದಿಸುವದಿಲ್ಲ, ದರ್ಶನವು ನೇತ್ರೋತ್ಸವವಾಗಿಯೂ, ಮಾತುಗಳು ಮಂತ್ರಗಳಾಗಿಯೂ, ನಡೆದ ಸ್ಥಳವು ಪ್ರಯಾಗತುಲ್ಯವಾಗಿಯೂ, ಉಪದೇಶ ವಾಕ್ಯಗಳು ಪೂಜಾರ್ಹವಾಗಿಯೂ, ಮೂರ್ತಿ ಆರಾಧ್ಯವಾಗಿಯೂ ಕಾಣಿಸುವ ಪ್ರಕೃತಿಯೇ ಇವರ ಸಚ್ಛೀಲವನ್ನು ಮುಕ್ತ ಕಂಠದಿಂದ ಹೊಗಳುತ್ತಿದೆ. ಶ್ರೀಗಳವರು ಸತ್ಪುರುಷರು. ಇವರ ಚರಿತ್ರೆ ಒಂದು ಮಹಾತ್ಮ್ಯೆ. ಸಾಮಾನ್ಯನು ಮಹಾತ್ಮರ ಚರಿತ್ರೆಯನ್ನು ಪಠಿಸುವುದರಿಂದ ಹೃದಯಸ್ಥ ವಾದ ಸಂಕುಚಿತಾವರಣವನ್ನು ಭೇದಿಸಿಕೊಂಡು ವಿಶ್ವಾತ್ಮನಲ್ಲಿ ಲೀನವಾಗಬಲ್ಲನು.

ಶ್ರೀಗಳವರು ತಮ್ಮ ಚರಿತ್ರೆಯ ಕೈಬರಹದ ಪ್ರತಿಯನ್ನು ನೀವು ಪರಿಷ್ಕರಿಸ ಬೇಕೆಂದು ನನಗೆ ಆದೇಶಿಸಿದರು. ಅವರ ಮಾತಿಗೆ ಬದಲು ಹೇಳಲು ನನಗೆ ಅಭ್ಯಾಸ ವಿಲ್ಲ. ಯೋಗ್ಯತೆ ಸಣ್ಣದಾದರೂ ಅಂಗೀಕರಿಸುವುದು ತಪ್ಪಲಿಲ್ಲ. ದೊಡ್ಡವರು ಹೇಳಿದ್ದನ್ನು ಮಾಡುವದೇ ಪರಿಪಾಠ. ಯಥಾಮತಿ ಪರಿಷ್ಕರಿಸಿದೆನು. ಈ ಗ್ರಂಥ ದಲ್ಲಿ ಶ್ರೀಗಳವರ ಬಾಲ್ಯಲೀಲೆಗಳೆಲ್ಲವೂ ಭಾವೀ ಭಾಗ್ಯೋದಯ ಸ್ಫೋರಣಗಳಾಗಿವೆ. ವಿದ್ಯಾಭ್ಯಾಸ ಸಮಯದಲ್ಲಿ ಕಲಿತ ವಿದ್ಯೆಗಿಂತಲೂ ತಾವು ಕಲಿಯಬೇಕಾದ ವಿದ್ಯೆಯನ್ನು ಪರಮ ಶ್ರದ್ಧೆಯಿಂದೆ ಶ್ರೀಗಳವರು ಪಠಿಸಿದಂತಿದೆ. ಸಹಜ ವೈರಾಗ್ಯ ಸಂಪತ್ತು ಮುಂದಕ್ಕೆ ಬರಲು ತುರೀಯಾಶ್ರಮವನ್ನು ಸ್ವೀಕರಿಸಿ ವಿರಕ್ತರಿಗೆ ಮಾರ್ಗದರ್ಶಕ ರಾದರು. ಇವರಿಗುಳ್ಳ ಸದ್ಗುರು ಪೂಜಾಭಾವವು ಅಮೇಯವು. ಆಯಾ ಕ್ಷೇತ್ರ ಗಳನ್ನು ದರ್ಶಿಸುವಿಕೆ, ಹಿಂದೆ ಇದ್ದ ಶಿಷ್ಯ ಪರಿವಾರಕ್ಕೆ ತತ್ಸಂದರ್ಭೋಚಿತ ವಾಕ್ಯ ಗಳನ್ನು ಬೋಧಿಸುವಿಕೆ ಮುಂತಾದ ವಿಷಯಗಳು ಆಯಾ ದೃಶ್ಯಗಳನ್ನು ಸಾಕ್ಷಾತ್ಕರಿಸು ತ್ತಿವೆ. ವಿಧಿ ವಿಹಿತ ಚಾತುರ್ಮಾಸ್ಯ ಮಹಾವ್ರತ ಸಮಾಚರಣ ಕಾರ್ಯಗಳು ಅಕುಂಠಿತವಾಗಿ ಜರುಗುವಿಕೆ, ಆ ಉತ್ಸವಗಳು ವಿಜಯಾಂತವಾಗಿ ಸಮಾಪ್ತಿಯನ್ನು ಹೊಂದುವದೂ ಒಂದು ಅಪೂರ್ವ ದಿಗ್ವಿಜಯವನ್ನು ಸಾರುತ್ತಿದೆ. ಗುರು ಆರಾಧನೆಯ

ಸಮಯದಲ್ಲಿ ಶಿವಪೂಜಾ ಕಾಲದಲ್ಲಿ ಶ್ರೀಗಳವರು ಹೊಂದುತ್ತಿರುವ ತನ್ಮಯ ಭಾವವೆ ಸಮೀಪಸ್ಥಿತರಾದ ಶಿಷ್ಯರನ್ನೂ ಮತ್ತು ಅನೇಕ ಭಕ್ತರನ್ನೂ ಸಹ ಆ ಸ್ಥಿತಿಗೆ ತೆಗೆದು ಕೊಂಡು ಹೋಗುತ್ತಿತ್ತು. ಸಹಜವಾದ ಇವರ ಅಂತರ್ಮುಖತೆಗೆ ಇದಕ್ಕಿಂತಲು ಬೇರೆಯಾದ ದೃಷ್ಟಾಂತವು ಅನಾವಶ್ಯಕವೆಂದು ಅಂದುಕೊಳ್ಳುವೆನು. ಈ ಗ್ರಂಥ ಪರಿಷ್ಕರಣ ವ್ಯಾಜದಿಂದೆ ನಾನೆಷ್ಟೋ ವೇದಾಂತದ ಮರ್ಮಗಳನ್ನು ತಿಳಿದು ಕೊಂಡೆನು. ಈ ಅವಕಾಶವನ್ನು ಕೊಟ್ಟು ಪರಮ ಪೂಜನೀಯ ಶ್ರೀಗಳವರಿಗೆ ಅನಂತ ಸಾಷ್ಟಾಂಗಪಾತ ಸವಿನಯ ಪ್ರಣಾಮಗಳು.

ಪೂಜ್ಯ ಶ್ರೀಗಳವರ ದಿವ್ಯ ಸನ್ನಿಧಾನದಲ್ಲಿರುತ್ತಾ ವಿದ್ಯಾ ಬುದ್ಧಿಗಳುಳ್ಳ ಬ್ರಹ್ಮ ಚಾರಿ ಶ್ರೀ ಸತ್ಯಾನಂದ ಸ್ವಾಮಿಯವರು ನಿಜವಾಗಿ ಧನ್ಯರು. ಇವರು ಶ್ರೀ ಶಂಕರಾ ನಂದಗಿರಿ ಗುರುವರ ಚರಿತ್ರೆಯನ್ನು ಇದ್ದದ್ದು ಇದ್ದ ಹಾಗೇ ರಚಿಸಿ ಲೋಕಕ್ಕೆ ಮಹೋಪಕಾರ ಮಾಡಿದರು. ಇವರ ಬರಹದಲ್ಲಿ ಅತಿಶಯೋಕ್ತಿಗೆ ಎಳ್ಳಷ್ಟೂ ಅವ ಕಾಶವಿಲ್ಲ. ಸತ್ಯವನ್ನು ಮರೆಮಾಡದೆ ಸತ್ಯಾತ್ಮ ಪ್ರಕಾಶವನ್ನು ಮಾಡಿದರು. ಚರಿತ್ರೆ ಎಲ್ಲವು ಸಹಜತ್ವದಿಂದ ತುಂಬಿದೆಯಾಗಲಿ, ಸಂಭಾವ್ಯತೆ ಸೋಕಲಿಲ್ಲ. ಹೀಗೆ ಬರೆ ಯುವುದು ಎಲ್ಲರಿಗು ಸಾಧ್ಯವಲ್ಲ. ಚಿತ್ತ ಶುದ್ಧಿಯುಳ್ಳವರಿಗೆ ಮಾತ್ರ ಸಾಧ್ಯ. ಈ ಬ್ರಹ್ಮಚಾರಿ ಸತ್ಯಾನಂದ ಸ್ವಾಮಿಯವರ ಸತ್ಕಾರ್ಯವು ಅವರನ್ನು ಚರಿತಾರ್ಥರನ್ನಾಗಿ ಮಾಡಿತು.

ಓಂ ಶಾಂತಿಃ

# ಕಂಬಂಪಾಟಿ ಶ್ರೀ ರಾಮಚಂದ್ರಮೂರ್ತಿ

ಸಂಸ್ಕೃತ ಪಂಡಿತರು
ಯಂ. ಹೆಚ್. ಸ್ಕೂಲು, ಆದೋನಿ.

ಶ್ರೀ ಶ್ರೀ ಶ್ರೀ ಶ್ರೀಮದುಮಾಮಹೇಶ್ವರ ಪೀಠಾಧಿಪತಿಗಳೂ, ಯಮ, ನಿಯಾಮಾಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಸಮಾಧಿನಿಷ್ಠರೂ, ಅಧ್ಯಯನಾಧ್ಯಾಪನ ನಿತ್ಯಕರ್ಮಾನುಷ್ಠಾನಪರರೂ, ಶಿಷ್ಯವತ್ಸಲರೂ ಆದ ಶ್ರೀ ಉಮಾಮಹೇಶ್ವರ ಗುರುಪೀಠಾಚಾರ್ಯರು ಶ್ರೀಶ್ರೀಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರ ಪವಿತ್ರ ಜೀವಿತ ಚರಿತ್ರೆಯನ್ನು ಅವಲೋಕಿಸುವದು ನಮಗೆ ಮಹಾಭಾಗ್ಯ.

ಅನೇಕ ಜನ್ಮಾಂತರ ಪುಣ್ಯಲಬ್ಧವಾದದ್ದೇ ನರಜನ್ಮ. ಅದರಲ್ಲಿಯೂ ಸದ್ಗುರುಗಳ ಅನುಗ್ರಹ ಪಾತ್ರರಾಗುವದು ಆದಕ್ಕಿಂತಲು ವಿಶೇಷ. "ಗುರೋರನುಗ್ರಹೇಣೈವ ಪುಮಾನ್ ಪೂರ್ಣಃ ಪ್ರಶಾಂತಯೇ" ಅಂದರೆ ಮನುಷ್ಯನು ಗುರುಗಳ ಅನುಗ್ರಹದಿಂದಲೇ ಪರಿಪೂರ್ಣ ಶಾಂತಿಯನ್ನು ಪಡೆಯಬಲ್ಲನು. ಇಲ್ಲದಿದ್ದರೆ ಎಷ್ಟು ಪಂಡಿತನಾದರೂ, ಎಷ್ಟೆಷ್ಟೋ ಹೇಳಿದರೂ, ಎಷ್ಟು ನೋಡಿದರೂ ಆತ್ಮತತ್ವವನ್ನು ತಿಳಿಯುವದು ಸಾಧ್ಯವಾಗದು. ಆ ಪಾಂಡಿತ್ಯವು ಕೇವಲ ಅನುಭವರಾಹಿತ್ಯವಾದ ಪಾಂಡಿತ್ಯವಾಗಿ ನಿಂತು ಹೋಗುವದು. ಆದಕ್ಕಾಗಿಯೇ "ಗುರು ಶುಶ್ರೂಣಾಂ ನಾಮ ಸರ್ವ ಧರ್ಮೋತ್ತಮೋತ್ತಮಂ" ಎಂದಿದ್ದಾರೆ.

ಶ್ರೀಗಳವರು ಆದರ್ಶಮೂರ್ತಿ; ಅಪಾರ ಗುರುಭಕ್ತಿ ತತ್ಪರರು. ಶ್ರೀಗಳವರು ಈ ಸಂಸಾರ ಸಾಗರವನ್ನು ದಾಟಿದ ಮಹಾಮನಿಷಿಗಳಾದ್ದರಿಂದ, ಅವರು ಶಿಷ್ಯಕೋಟಿಯನ್ನು ತಾರಣ ಮಾಡಲು ಸಮರ್ಥರು. "ಸ್ವಯಂ ತೀರ್ಣಾಃ ಪರಾನ್ ತಾರಯತಿ" ಎಂಬುದಾಗಿ ಶಾಸ್ತ್ರವು ಹೇಳುತ್ತಿದೆ. ಆದಕ್ಕಾಗಿಯೇ "ಮೋಕ್ಷ ಮೂಲಂ ಗುರೋಃ ಕೃಪಾ" ಎಂದು ದೊಡ್ಡವರು ಹೇಳುವರು. ಅಂಥಾ ಸದ್ಗುರುಗಳನ್ನು ಆಶ್ರಯಿಸಿ ತಾರಣವನ್ನು ಹೊಂದುವದು ಶಿಷ್ಯಧರ್ಮ. ಶ್ರೀಗಳವರ ಚರಿತ್ರೆಯನ್ನು ಪರಿಶೀಲಿಸಿದರೆ ಆ ಧರ್ಮಗಳು ನಮಗೆ ಕಾಣಸುವವು. ಅಂಥಾ ದಿವ್ಯ ಚರಿತ್ರೆಯನ್ನು ಪ್ರಚುರಿಸುವ ಮಹಾತ್ಮರು ಅವರು ಧನ್ಯರಾಗುವದಲ್ಲದೆ ಇತರರಿಗೂ ಮಾರ್ಗದರ್ಶಕರಾಗುತ್ತಾರೆ.

ಶ್ರೀಗಳವರ ದಿವ್ಯ ಚರಿತ್ರೆಯನ್ನು ಪ್ರಚುರಿಸುವ ಶಿಷ್ಯಕೋಟಿಗೆ ನಮ್ಮ ನಮೋವಾಕ್ಕುಗಳು.

ಓಂ ತತ್ ಸತ್

# ಮೂರನೆಯ ತೆಲುಗು ಮುದ್ರಣದ ಪೀಠಿಕೆ

## ಓಂ ನಮೋ ಭಗವತೇ ಶ್ರೀಮದುಮಾಮಹೇಶ್ವರಾಯ

ಅವಿದ್ಯಾಭೇದನೇಶಕ್ತಂ ಅಸಕ್ತಂ ತಂ ನತೋಸ್ಮ್ಯಹಂ ।
ಶಮಾದಿ ಗುಣ ಸಂಯುಕ್ತಂ ಯುಕ್ತಂ ಬ್ರಹ್ಮೋಕ್ತಿಭಿಸ್ಸದಾ ॥
"ಅಭಿಯುಕ್ತಂ ಮಹಾಭಕ್ತಂ ವಿರಕ್ತಂ ಮುಕ್ತಮೇವಚ ।
ವಂದೇ ಶ್ರೀ ಶಂಕರಾನಂದ ಗಿರ್ಯಾಖ್ಯಂ ಸದ್ಗುರುಂ ಮುಹುಃ ॥
"ಜನ್ಮ ಕರ್ಮಚಮೇ ದಿವ್ಯಮೇವಂ ಯೋವೇತ್ತಿ ತತ್ವತಃ ।
ತ್ಯಕ್ತ್ವಾದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥

ಓ ಅರ್ಜುನಾ ! ದಿವ್ಯವಾದ ನನ್ನ ಜನ್ಮ ಕರ್ಮಗಳನ್ನು ಯಾರು ತತ್ವತಃ ತಿಳಿಯುವರೊ ಅವರು ಮತ್ತೂ ಜನ್ಮವನ್ನು ಹೊಂದುವದಿಲ್ಲ; ನನ್ನನ್ನೇ ಹೊಂದುವರು ಎನ್ನುವ ಭಗವದ್ಗೀತೋಕ್ತ ರೀತಿ, ಅಸ್ಮದ್ಗುರುವರೇಣ್ಯರ ಜನ್ಮ ಕರ್ಮಗಳು ದಿವ್ಯವು; ಅಲೌಕಿಕಗಳು; ವಿಶಿಷ್ಟವಾದವುಗಳು; ಲೋಕೋಪಕಾರಕಗಳು; ಮುಮುಕ್ಷುಜನೋತ್ತಾರಕಗಳು "ಬ್ರಹ್ಮೈವಾಚಾರ್ಯ ರೂಪೇಣಾವತಿಷ್ಠತೇ" ಅಂದಹಾಗೆ ಅವ್ಯಕ್ತಾಕ್ಷರ ಶಬ್ದ ವಾಚ್ಯನಾದ ಪರಮಾತ್ಮನೇ ಶ್ರೀಗುರುರೂಪದಿಂದ ಅವತರಿಸಿದನು. ಶ್ರೀಗುರುದೇವರು ಶುದ್ಧ ಸತ್ವಗುಣೋಪೇತರು. ಅವರು ವರಪುಣ್ಯಮಯ ಶರೀರಿಗಳು; ಸಮರು; ಬ್ರಹ್ಮಾನುಭಾವಿಗಳು; ನಿತ್ಯ ಪ್ರಸಾದ ಗುಣ ಸಂಪನ್ನರು.

ಅವಾಜ್ಞ್ಮಾನಸ ಗೋಚರವಾದ ತಾತ್ವಿಕ ವಿಷಯವನ್ನು ಸದ್ಭಕ್ತರಿಗೆ,ಮುಮುಕ್ಷುಗಳಿಗೆ ಕರತಲಾಮಲಕವಾಗಿ ಬೋಧಿಸುವ ಬ್ರಹ್ಮಬೋಧನ ಕಳಾಕೋವಿದರು. ಯಾವ ಇತರ ಸಾಧನದಿಂದಲೂ ನಿವೃತ್ತಿಯಾಗದ ಹೃದಯವನ್ನು ಆಕ್ರಮಿಸಿದ ಅನಾದ್ಯವಿದ್ಯಾಂಧಕಾರವನ್ನು, ಜ್ಞಾನ ಜ್ಯೋತಿಯನ್ನು ಬೆಳಗಿಸಿ ಹೋಗಲಾಡಿಸಿದ ಮಹಾತ್ಮರು ಶ್ರೀಗುರುದೇವರು. ಸುಖಕ್ಕಾಗಿ ಈ ಲೋಕ ಮೊದಲುಗೊಂಡು ಬ್ರಹ್ಮಲೋಕದ ಪರ್ಯಂತವೂ ಪರ್ಯಟಿಸುತ್ತಿರುವ ಮಾನವನಿಗೆ ಕಂಠಗತ ಚಾಮೀಕರ ನ್ಯಾಯೇಣ 'ರಸೋವೈಸಃ' ರಸ ಅಂದರೆ ಆನಂದ ಸ್ವರೂಪವಾದ . ತಮ್ಮ ನಿಜ ಸ್ವರೂಪವನ್ನು ತೋರಿಸಿ, ಆನಂದ ಸ್ವರೂಪಿಗಳನ್ನಾಗಿ ಅನುಭವಿಸುವಂತೆ ಮಾಡಿದವರು ಶ್ರೀಗಳವರು. ಶ್ರೀಶಂಕರರು ಅಂದಹಾಗೆ ಗುರುದೇವರಿಗೆ ಹೋಲಿಕೆ ಇಲ್ಲ "ದೃಷ್ಟಾಂತೋ ನೈವ ದೃಷ್ಟಃ". ಅಂಥಾ ಶ್ರೀಗುರುದೇವರ ಈ ದಿವ್ಯ ಚರಿತ್ರೆ ಸಂಸಾರ ಸಾಗರದಲ್ಲಿ ಮುಳುಗಿ ತೇಲುವ ಮಾನವನಿಗೆ ಕೈವರ್ತಕನಂತಿದೆ. ಶ್ರೀಗುರುದೇವರ ಸನ್ನಿಧಿಯಲ್ಲಿರುತ್ತಾ ಪೂಜಿಸಿ, ಸೇವಿಸಿ, ಭಾವಿಸಿ ಅವರ ವಾಕ್ಯಾಮೃತವನ್ನು ಪಾನಮಾಡಿ ಜೀವನದ ಚರಮಲಕ್ಷ್ಯವಾದ ಪ್ರತ್ಯಗಾತ್ಮ ಪರಮಾತ್ಮನೇ ಎಂಬ ಯಥಾರ್ಥ ಜ್ಞಾನವನ್ನು ಹೊಂದಿ ಕೃತಾರ್ಥರಾದೆವು. ಪಾಠಕರಾದ ಸಜ್ಜನರು ಈ ಪವಿತ್ರ ಗ್ರಂಥರಾಜವಾದ ದಿವ್ಯ ಚರಿತ್ರೆಯನ್ನು ಭಕ್ತಿ ಪ್ರಪತ್ತಿಗಳಿಂದ ಓದಿ

ತಿಳಿದುಕೊಂಡರೆ ತಪ್ಪದೆ ಸಾಕ್ಷಾತ್ ಶ್ರೀಗುರುದೇವರ ಸಾನ್ನಿಧ್ಯಾನುಭೂತಿಯನ್ನು ಹೊಂದಿ, ಪರಮ ಶಾಂತಿ ಆತ್ಮಜ್ಞಾನವೆನ್ನುವ ಮೋಕ್ಷರೂಪ ಪರಮಪುರಷಾರ್ಥ ವನ್ನು ಪಡೆಯಬಲ್ಲನು. ಅಸ್ಮದ್ಗುರುಪರೇಣ್ಯರ ದಿವ್ಯಚರಿತ್ರೆ ದ್ವಿತೀಯ ಮುದ್ರಣ ಪ್ರತಿಗಳು ಪೂರ್ಣವಾದ್ದರಿಂದ 'ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರೆ" ಪೂಜ್ಯ ಶ್ರೀಗುರುದೇವರ 58 ನೆಯ ಜಯಂತ್ಯುತ್ಸವ ಸಂದರ್ಭದಲ್ಲಿ ಪರಮ ಮಂಗಳ ಮಯವು ಭವಭಯಹರವಾದ ಶ್ರೀಗುರು ಚರಿತ್ರೆಯನ್ನು ರಚಿಸುವ ಮಹಾಭಾಗ್ಯವು ನನಗುಂಟಾದ್ದರಿಂದ ನಾನು ಧನ್ಯನು. ಗುರುದೇವರಿಗೆ ನನ್ನ ಅನಂತ ಪ್ರಣಾಮಗಳು.

ಅನಂತಪುರದ ಭಕ್ತಮಂಡಲಿ ಮಾನ್ಯ ಶ್ರೀ ಮೇಡಾ ಸುಬ್ಬಯ್ಯನವರು M L.C., ಶ್ರೀ ಮೇಡಾ ರಾಮಯ್ಯನವರು, ಶ್ರೀ ಮಚ್ಚಾ ನಾರಾಯಣ ಸ್ವಾಮಿ ಯವರು, ಶ್ರೀ N. ರಾಮರಾವವರು, ಶ್ರೀ ರಂಗಸ್ವಾಮಿ ಅಯ್ಯಂಗಾರ್‌ರವರು, ಶ್ರೀ ಕೋವೂರು ರಾಮಯ್ಯನವರು, ಶ್ರೀ B. ನಾಗಯ್ಯನವರು, ಶ್ರೀ ಗುತ್ತಿ D.V. ನಾಗಮಾಣಿಕ್ಯಂ ಅವರು, ಅಡ್ವೊಕೇಟ್ ಶ್ರೀ A. G. ನಾಗಿರೆಡ್ಡಿಯವರು, ಶ್ರೀ N. ಲಕ್ಷ್ಮಿದೇವಮ್ಮನವರು *D.E.O.* B. ಕೊಂಡಯ್ಯ ಇವರೆಲ್ಲರು ಭಕ್ತಿಯಿಂದ ಪವಿತ್ರ ವಾದ ಶ್ರೀಗುರುವರ ಚರಿತ್ರೆಯನ್ನು ಮುದ್ರಣ ಮಾಡಿಸಿ ಭಕ್ತರ ಕರಕಮಲಗಳಿಗೆ ಅಂದಿಸಿದ ಅನಂತಪುರ ಭಕ್ತಮಂಡಲಿಯವರಿಗೆ ಶ್ರೀ ಉಮಾಮಹೇಶ್ವರನು ಅನಂತ ಶುಭಗಳನ್ನೀಯಲಿ.

ಗ್ರಂಥವನ್ನು ಪರಿಶೀಲಿಸಿ ಪರಿಷ್ಕರಿಸಿ ತಮ್ಮ ಅಮೂಲ್ಯವಾದ ಅಭಿಪ್ರಾಯ ವನ್ನು ಕೊಟ್ಟ 'ವಿದ್ವಚ್ಛಿರೋಮಣಿ' ವೇದವಿದ್ಯಾವಿನೀತ, ಬಾಷಾ ಪ್ರವೀಣ ಇತ್ಯಾದಿ ಬಿರುದಾಂಕಿತರಾದ ಬ್ರಹ್ಮಶ್ರೀ M. ಬಾಲವಿಶ್ವನಾಥಶರ್ಮ ಪಂಡಿತ ಮಹೋದಯರಿಗೆ ನಮ್ಮ ಅನಂತ ಪ್ರಣಾಮಗಳು.

ಅಪೂರ್ವವಾದ ತಮ್ಮ ಸಂದೇಶವನ್ನು ಕಳುಹಿಸಿದ ಸಾಹಿತ್ಯ ಶಿರೋಮಣಿ, ವೇದಾಂತಾಚಾರ್ಯ ಬಿರುದಾಂಕಿತರಾದ ಆದವಾನಿ ಬ್ರಹ್ಮಶ್ರೀ K. ರಾಮಚಂದ್ರ ಮೂರ್ತಿ ಪಂಡಿತ ಮಹೋದಯರಿಗೆ ನಮ್ಮ ನಮಸ್ಕಾರಗಳು ಮತ್ತು ಮೊದಲ ನೆಯ ಮುದ್ರಣದ ಭಾಗಕ್ಕೆ ತಮ್ಮ ದಿವ್ಯ ಸಂದೇಶಗಳನ್ನು ಕಳುಹಿದ ಪೂಜ್ಯ ಶ್ರೀ ಜಗದ್ಗುರುಗಳಿಗೂ ಮಹನೀಯರೆಲ್ಲರಿಗೂ ನಮ್ಮ ಅನಂತ ಪ್ರಣಾಮಗಳು.

ಅತ್ಯಂತ ಶ್ರದ್ಧೆಯಿಂದ ಅಚಿರಕಾಲದಲ್ಲಿ ಈ ಗ್ರಂಥ ಮುದ್ರಣ ಕಾರ್ಯವನ್ನು ಸರ್ವಾಂಗ ಸುಂದರವಾಗಿ ಮಾಡಿ ಸಕಾಲಕ್ಕೆ ಕೊಟ್ಟ ಗುಂಟೂರು ಶ್ರೀ ವೆಲ್‌ಕಂ ಪ್ರೆಸ್ಸು ಪ್ರೈವೇಟ್ ಲಿಮಿಟೆಡ್ ಅವರಿಗೆ ನಮ್ಮ ವಂದನೆಗಳು.

ಓಂ ತತ್ಸತ್

ಶ್ರೀ ಗುರು ಪಾದರೇಣು

ಬ್ರಹ್ಮಚಾರಿ ಶ್ರೀ ಸತ್ಯಾನಂದ ಸ್ವಾಮಿ.

॥ ಓಂ ನಮೋ ಭಗವತೇ ಶ್ರೀಮದುಮಾಮಹೇಶ್ವರಾಯ ॥

# ಶ್ರೀಗುರು ಚರಿತ್ರೆಯ ಕನ್ನಡಾನುವಾದಕ್ಕೆ ಮುನ್ನುಡಿ

ಶ್ರೀಮದುಮಾಮಹೇಶ್ವರ ಗುರುಪೀಠಾಚಾರ್ಯರಾದ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀಮಚ್ಛಂಕರಾನಂದಗಿರಿ ಗುರುಸಾರ್ವಭೌಮರ ಮತ್ತು ಅವರ ಗುರುಪರಂಪರೆಯ ಪವಿತ್ರ ಚರಿತ್ರೆಯು ಆಂಧ್ರ ಭಾಷೆಯಲ್ಲಿ ಶ್ರೀ ಮಹಾ ಸ್ವಾಮಿಗಳ ಶಿಷ್ಯಕೋಟಿಯಲ್ಲೊಬ್ಬರಾದ ಬ್ರಹ್ಮಚಾರಿ ಸತ್ಯಾನಂದ ಸ್ವಾಮಿಗಳೆಂಬ ಪುಣ್ಯಾತ್ಮರಿಂದ "ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರ" ಎಂಬ ಪುಣ್ಯಾಭಿಧಾನ ದಿಂದ ಬಹುಕಾಲದ ಹಿಂದೆಯೇ ಪ್ರಕಟವಾಗಿತ್ತು. ಅದನ್ನು ನೋಡಿದಾಗ ಕನ್ನಡ ನಾಡಿನ ಮುಮುಕ್ಷುಗಳಿಗೆ ಮತ್ತು ಜಿಜ್ಞಾಸುಗಳಿಗೆ ಉಪಯುಕ್ತವಾಗುವಂತೆ ಅದರ ಕನ್ನಡಾನುವಾದ ಪ್ರಕಟವಾಗಬೇಕೆಂಬ ಸೂಕ್ಷ್ಮ ಸತ್ಸಂಕಲ್ಪ ನನ್ನ ಹೃದಯದಲ್ಲಿ ಹೊಳೆ ದಿತ್ತು; ತಲೆಯಲ್ಲಿ ಸುಳಿದಿತ್ತು. ಅಲ್ಪನಾದ ನನ್ನ ಅಭೀಪ್ಸೆಯೇ ಶ್ರೀ ಮಹಾ ಸ್ವಾಮಿಗಳ ಚಿದಂತಃಕರಣದ ಶಿವಮಯ ಸಂಕಲ್ಪವಾಗಿ ಈ ಕನ್ನಡಾಕೃತಿ ಮೈದಾಳಿದೆ. ಕನ್ನಡ ಭಾಷಾಯೋಷಾಮಣಿಯ ಆಧ್ಯಾತ್ಮಿಕಶ್ರೀ ಇನ್ನಷ್ಟು ಸಂಪದ್ಭರಿತ ವಾದಂತಾಗಿದೆ.

ನಾನು ನಿಮಿತ್ತಮಾತ್ರ. ಕಾರ್ಯ ಕಾರಣ ಸ್ವರೂಪರೂ ಮಹಾತ್ಮರಾದ ಶ್ರೀ ಮಹಾಸ್ವಾಮಿಗಳೇ ಆಗಿದ್ದಾರೆಂಬ ಮಾತು ಅಲಂಕಾರಿಕ ಅತಿಶಯೋಕ್ತಿಯಲ್ಲ; ಸ್ವಾಭಾವಿಕ ಸಹಜೋಕ್ತಿ; ಸತ್ಯೋಕ್ತಿ.

ಭಗವತ್ಪಾದರಾದ ಶ್ರೀ ಶಂಕರಾನಂದಗಿರಿ ಗುರುವರ್ಯರು ಆಂಧ್ರ ಕರ್ನಾಟಕ ಪ್ರಾಂತಗಳೆರಡರಲ್ಲಿಯೂ ಪರಮ ಪ್ರಸಿದ್ಧರು.

ಶುದ್ಧಿ, ಸಿದ್ಧಿ, ಪ್ರಸಿದ್ಧಿ- ಇವು ಮೂರೂ ಪವಿತ್ರ ಬಿಲ್ವಪತ್ರೆಯ ದಳತ್ರಯ ಗಳಂತೆ ಅವರ ಶ್ರೀಚರಣಾರವಿಂದವನ್ನಲಂಕರಿಸಿವೆ.

ಜನ್ಮತಃ ವೀರಶೈವ ಮಾಹೇಶ್ವರಾಚಾರ್ಯ ಗುರುಕುಲ ಸಂಜಾತರಾದದ್ದರಿಂದ ಸಹಜಸಿದ್ಧವಾದ ಶುದ್ಧಿ !

ಬಾಲ್ಯಾವಸ್ಥೆಯಿಂದಲೇ ಸಹಜ ಸ್ವಭಾವ ಸಂಪ್ರಾಪ್ತವಾದ ತ್ಯಾಗಮಯ, ಯೋಗಮಯ, ವೀರ ವೈರಾಗ್ಯಮಯ, ಸ್ವಾಧ್ಯಾಯ ತಪೋನುಷ್ಠಾನಮಯ, ಜ್ಞಾನನಿಷ್ಠಾ ಗರಿಷ್ಠಮಯ ಜೀವನ ಸಂವಿಧಾನದಿಂದ ಸಿದ್ಧಿ.

ಸೌಶೀಲ್ಯ, ಸೌಜನ್ಯ, ಶಿಷ್ಯವಾತ್ಸಲ್ಯ, ಭಕ್ತಾನುಗ್ರಹ ವಾಂಛೆ ಭಕ್ತೋದ್ಧಾರ ತತ್ಪರತೆ, ಭಕ್ತಿ ಜ್ಞಾನ ವೈರಾಗ್ಯ ನಿರ್ಭರತೆ, ಸೋಹಂ- ದಾಸೋಹಂ ಭಾವ ಸಮನ್ವ

ಯತೆ, ನಿರಂತರ ಜ್ಞಾನಾನ್ನದಾನ ಪರಾಯಣತೆ, ಸತ್ಯಸಂಧತೆ ಸಹಜ ಸಂಪ್ರಾಪ್ತವಾದ ಪ್ರಸಿದ್ಧಿ !

ಇಂಥ ಅನುಪಮ ಅಪೂರ್ವ ಶುದ್ಧಿ–ಸಿದ್ಧಿ–ಪ್ರಸಿದ್ಧಿಗಳ ಸಂಗಮಕ್ಷೇತ್ರ ಅವರ ಪುಣ್ಯಮಯ ಪಾವನ ಜೀವನ ಚರಿತ್ರೆ.

ಶುದ್ಧಿಯಿಲ್ಲದೆ ಸಿದ್ಧಿಯಿಲ್ಲ. ಶುದ್ಧಿ ಸಿದ್ಧಿಗಳಿಲ್ಲದೆ ಪ್ರಸಿದ್ಧಿಯಿಲ್ಲ. ಇದ್ದರೂ ಕ್ಷಣಿಕ; ಕ್ಷಣ ಭಂಗುರ. ಆದರೆ ಈ ಮಹಾಸ್ವಾಮಿಗಳ ಅಂತರಾಂತರದ ಆತ್ಮಸ್ಥಿತ ಶುದ್ಧಿ ಮತ್ತು ಪ್ರಸಿದ್ಧಿಗಳ ಪ್ರದೀಪ್ತ ಪ್ರಭಾಪುಂಜವೇ ಅವರ ಬಹಿರಂಗದ ವ್ಯಕ್ತಿತ್ವ ದಲ್ಲಿ ಅಭಿವ್ಯಕ್ತವಾಗಿ ವ್ಯಾಪಿಸಿಕೊಂಡು ಬೆಳಗುವ ಪ್ರಸಿದ್ಧಿಯ ಪ್ರಭಾವಳಿ !

ಪೂಜ್ಯಪಾದರ ಜೀವನ ವಿಕಾಸ ಪ್ರಕಾಶಗಳು ಪ್ರಭೋದಾತ್ಮಕವೂ ಆಗಿ ಜಿಜ್ಞಾಸುಗಳ ಮತ್ತು ಮುಮುಕ್ಷುಗಳ ಹಿತಸಾಧಕ ಹೇತುವಾಗಿದೆ. ಅವರ ದಿವ್ಯ ದೇದೀಪ್ಯಮಾನ ಜೀವನೇತಿಹಾಸವನ್ನು ಕನ್ನಡದಲ್ಲಿ ಕಥಿಸುವದು ಈ ಗುರುಚರಿತ್ರೆ.

ತಿಳಿಯದಿರುವ ಅನೇಕಾನೇಕ ವಿಷಯ ವಿಶೇಷಗಳನ್ನು ಪ್ರಭುವಾಣಿಯಿಂದ ತಿಳಿಸುವುದರಿಂದ ಈ ಗ್ರಂಥವು ಜಿಜ್ಞಾಸುಗಳ ಜ್ಞಾನಭಂಡಾರ !

ಮುಂದೆ ಗತಿಯೇನು ? ಗಮ್ಯವೇನು? ಗುರಿಯೇನು ? ಗುರುವಾರು ? ಎಂದು ಬಿಡುಗಡೆಗೆ ತೊಳಲಿ ಬಳಲುವ ಮೋಕ್ಷಾಪೇಕ್ಷೆಯ ಮುಮುಕ್ಷುಗಳಿಗಿದು ಮಹಾಯಾನ.

ಸರ್ವ ಜನಾಧರಣೀಯವಾದ ಪುಣ್ಯ ಪುರುಷಾರ್ಥಪ್ರದಾಯಕ ಪರಿಪೂರ್ಣತೆಯ ಪೂರ್ಣ ಗ್ರಂಥ !

ಭಕ್ತರಿಗೆ ಬೇಕಾದ ಭಕ್ತಿ ಇಲ್ಲಿದೆ; ಜ್ಞಾನಿಗಳಿಗೆ ಬೇಕಾದ ಜ್ಞಾನ ಇಲ್ಲಿದೆ; ವೈರಾಗ್ಯಶೀಲರಿಗೆ ಬೇಕಾದ ವೈರಾಗ್ಯ ಇಲ್ಲಿದೆ; ಈ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ತ್ರಿಕೂಟಗಳ ಸಿದ್ಧಿಯ ಶಿಖರದ ಪ್ರಾಗ್ರದಲ್ಲಿ ಜ್ವಲಂತ ಜೀವಂತ ವ್ಯಕ್ತಿಯಾಗಿ ಭಗವತ್ಪಾದಾರವಿಂದರಾದ ಶ್ರೀ ಶಂಕರಾನಂದ ಗಿರಿ ಗುರುಸಾರ್ವಭೌಮರಿದ್ದಾರೆ. ಇಂತಹ ಮಹಾತ್ಮರ ಶ್ರೀ ಸನ್ನಿಧಿಯಲ್ಲಿ ಮಣಿಯದವರಾರಿದ್ದಾರೆ ? ಅವರ ಸೇವಾ ತತ್ಪರರಾಗಿ ದಣಿಯದವರಾರಿದ್ದಾರೆ ? ತಣಿಯದವರಾರಿದ್ದಾರೆ ?

ಮಹಾಸ್ವಾಮಿಗಳ 43 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತದ ಸದ್ಭಕ್ತ ಮಂಡಲಿಯವರಾದ ಆದವಾನಿ ಯಲೆ ಮಲ್ಲೇಶಪ್ಪನವರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರು, ಶ್ರೀಮತಿ K. ಶರಣಮ್ಮನವರು, ಶ್ರೀ ಯಲೆ ಮಲ್ಲಪ್ಪ ಮತ್ತು ಕುಂ॥ ಸೌ॥ ಶಿವಲೀಲಮ್ಮ, ಪಾಟೀಲ ಶ್ರೀ ಗೌರಮ್ಮ ರಾಮಕ್ಕಮ್ಮನವರು, ಶ್ರೀ ವಿರುಪಾಕ್ಷಗೌಡ್ರು ಮತ್ತು ಕುಂ॥ ಸೌ॥ ಪ್ರಮೀಳಮ್ಮ, ಶ್ರೀ ಶಿವಶಂಕರಗೌಡ್ರು ಮತ್ತು ಕುಂ॥ ಸೌ॥ ರಾಜೇಶ್ವರಮ್ಮ, ಶ್ರೀ ವೀರಭದ್ರ ಗೌಡ್ರು ಮತ್ತು ಕುಂ॥ ಸೌ॥ ನಾಗ ದಾಕ್ಷಾಯಣ ರತ್ನಮ್ಮ, ಶ್ರೀ ದೇವಿಶೆಟ್ಟಿ ಮಹದೇವಪ್ಪ ಮತ್ತು ಕುಂ॥ ಸೌ॥ ವಿಶಾಲಾಕ್ಷಮ್ಮ, ಶ್ರೀ ಕಾಮೇಶ ಗೌಡರು ಕುಂ. ಸೌ. ನಾಗರತ್ನಮ್ಮ

ಶ್ರೀ ಯಡವಳ್ಳಿ ಬಸವರಾಜ ಮತ್ತು ಕುಂ॥ ಸೌ॥ ಶರಣಮ್ಮ, ಶ್ರೀ ಯಡವಳ್ಳಿ ಅಮರಪ್ಪ ಮತ್ತು ಕುಂ॥ ಸೌ॥ ಸರ್ವಮಂಗಳಮ್ಮ, ಶ್ರೀ ಮಲ್‌ಖೇಡ್ ಶರಣಮ್ಮ ಮತ್ತು ಕುಂ॥ ಸೌ॥ ಗಂಗಮ್ಮ ಇವರು ಈ ಗುರುಚರಿತ್ರೆಯ ಕನ್ನಡಾನುವಾದದ ಆವೃತ್ತಿಯನ್ನು ಹೊರತರಲು ಮುದ್ರಣಕ್ಕೆ ಬೇಕಾದ ಧನವನ್ನು ಅನನ್ಯ ಭಕ್ತಿಭಾವ ಸಂಪನ್ನತೆಯಿಂದ ಶ್ರೀ ಸನ್ನಿಧಿಗೆ ಸಮರ್ಪಿಸಿದ ಪುಣ್ಯಧನರು. ಅವರಿಗೆ ಶ್ರೀಮದು ಮಾಮಹೇಶ್ವರರು ಮತ್ತು ಆ ಪೀಠಾಚಾರ್ಯ ಪರಂಪರಾನುಗತ ಗುರುವರ್ಯರು ಸಮಸ್ತ ಸನ್ಮಂಗಳಗಳನ್ನಿತ್ತು ಕಾಪಾಡಲಿ !

ಕುಡತಿನಿಯ ಶ್ರೀ ರಾಮಲಿಂಗೇಶ್ವರ ಮಠದ ಸತ್ಸಂಗದ ಅಧ್ಯಕ್ಷರು ಸದ್ಗುಣ ಮಣಿಗಳಾದ "ಶಿವಶರಣ" ಶ್ರೀ ಪಲ್ಲೇದ ಪಂಪಾಪತೆಪ್ಪನವರು ಮತ್ತು ಅವರ ಕುಮಾರಿಯಾದ ಚಿ॥ ಶ್ರೀ ಮಂಗಳಗೌರಮ್ಮ ಇವರು ಕೈಬರಹದ ಪ್ರತಿಯನ್ನು ಮುದ್ರಣಾನುಕೂಲವಾದ ಶುದ್ಧಪ್ರತಿಯನ್ನಾಗಿ ಭಕ್ತಿಯಿಂದ ಎತ್ತಿ ಬರೆದುಕೊಟ್ಟ ಪುಣ್ಯಾತ್ಮರು. ಶ್ರೀ ರಾಮಲಿಂಗೇಶ್ವರ ಮಠದ ಶ್ರೀ ಶರಭಯ್ಯಸ್ವಾಮಿ A.M.,I.I.M. ಇವರು ಗ್ರಂಥ ಮುದ್ರಣಾದಿ ಸರ್ವ ಕಾರ್ಯಗಳನ್ನು ಭಕ್ತಿಯಿಂದ ನೋಡಿಕೊಂಡರು. ಇವರೆಲ್ಲರಿಗೂ ಪೀಠಪರಂಪರೆಯ ಗುರುವರೇಣ್ಯರೂ ಮತ್ತು ಶ್ರೀಮದುಮಾಮಹೇಶ್ವರರೂ ಅನಂತಾನಂತ ಶುಭಗಳನ್ನಿತ್ತು ಕಾಪಾಡಲಿ ! ಸರ್ವಾಂಗ ಸುಂದರವಾಗಿ ಶ್ರದ್ಧೆಯಿಂದ ಸಕಾಲಕ್ಕೆ ಮುದ್ರಿಸಿಕೊಟ್ಟ ಅಲ್ಲಮ ಮುದ್ರಣಾಲಯದ ಮಾಲಕರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಶ್ರೀಗುರು ಪರಮಾತ್ಮನು ಮಂಗಳವನ್ನೀಯಲಿ!

ಓಂ ತತ್ಸತ್

ಶಿವಶ್ರೀ

(ಶಿ. ವ. ಚನ್ನಬಸವೇಶ್ವರ ಸ್ವಾಮಿ)

ದಿನಾಂಕ : 16-5-88 ಬಳ್ಳಾರಿ

ಓಂ ನಮೋಃ ಭಗವತೇ ಶ್ರೀಮದುಮಾಮಹೇಶ್ವರಾಯ

ಶ್ಲೋ ॥ ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ।

# ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರೆಯ ಸಂಗ್ರಹ ಚರಿತ್ರೆ

ಶುದ್ಧ ಸ್ಫಟಕ ಸಂಕಾಶಂ ಶುದ್ಧ ವಿದ್ಯಾ ಪ್ರದಾಯಕಮ್ ।
ಶುದ್ಧಂ ಪೂರ್ಣ ಚಿದಾನಂದಂ ಸದಾಶಿವಮಹಂಭಜೇ ॥
ನಮಶ್ಶಿವಾಯ ಸಾಂಬಾಯ ಸಗಣಾಯ ಸಸೂನವೇ ।
ಪ್ರಧಾನ ಪುರುಷೇಶಾಯ ಸರ್ಗ ಸ್ಥಿತ್ಯಂತ ಹೇತವೇ ॥

(ಕೈಲಾಸ ಸಂಹಿತೆ)

ಇಹಖಲು ಪರಮ ಕಾರುಣಿಕೋ ವಿರಾಡ್ರೂಪಃ ಪರಂಜ್ಯೋತಿ ರ್ನಿರ್ವಿಕಾರೋ ನಿರಾಕಾರಃ ಪರಶಿವಃ ಸ್ವಾಂಶಭೂತಾನ್ ಬ್ರಹ್ಮ ವಿಷ್ಣು ಮಹೇಶ್ವರಾದೀನ್ ಸಮ್ಯಗುತ್ಪಾದ್ಯ ತತ್ರ ಪರಮಾಪ್ತತಮ್ ಸದಾಶಿವ ಮಾಕಾರ್ಯ ತಂ ಪ್ರತೀತ್ಥಂ ಸಕಲ ವೇದಾರ್ಥ ಮುಪಾದಿಶತ್ ।

(ಶಿವಾಗಮ)

ಈ ಲೋಕದಲ್ಲಿ ಪರಮ ಕರುಣಾಮಯನು, ವಿರಾಡ್ರೂಪನು, ಪರಂಜ್ಯೋತಿ ಸ್ವರೂಪನೂ, ನಿರ್ವಿಕಾರನೂ, ನಿರಾಕಾರನೂ ಆದ ಪರಶಿವನು ಸ್ವಾಂಶಸಂಭೂತರಾದ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವನನ್ನು ಸೃಷ್ಟಿಸಿ ಅವರಲ್ಲಿ ಅತ್ಯಂತ ಆಪ್ತನಾದ ಸದಾಶಿವನನ್ನು ಸಮೀಪಕ್ಕೆ ಕರೆದು ಆ ಸದಾಶಿವನಿಗೆ ಸಕಲ ವೇದಾರ್ಥ ಗಳನ್ನು ಉಪದೇಶಿಸಿದನು. ಆ ಸದಾಶಿವನೇ ಕಾರ್ಯ ರುದ್ರನಾದ ಶ್ರೀ ಉಮಾ ಮಹೇಶ್ವರನು. ಆತನು ಜೀವಿಗಳ ಅಭ್ಯುದಯ ನಿಃಶ್ರೇಯಸ ಸಾಧನಭೂತವಾದ ಆ ವೇದಾರ್ಥವನ್ನೇ ಬೋಧಿಸಿದನು. "ನಮಶ್ಶಿವಾಯ ಸೋಮಾಯ ಸಾಕ್ಷಿಣೇ ಪ್ರತ್ಯಗಾತ್ಮನೇ" (ಸೂತ ಸಂಹಿತೆ)

ವೇದದಲ್ಲಿ, ವೇದಾಂತವೆನ್ನಲ್ಪಡುವ ಉಪನಿಷತ್ತುಗಳಲ್ಲಿ ಪರಮ ಪುರುಷಾರ್ಥ ವಾದ ಮೋಕ್ಷಸಾಧನ ಆತ್ಮಜ್ಞಾನವು ಉಪದೇಶಿಸಲ್ಪಟ್ಟಿದೆ. ಅಂಥಾ ಆ ಉಪ ದೇಶಗಳನ್ನು ಗುರುಮುಖದಿಂದ ಚೆನ್ನಾಗಿ ಅರಿತು ಅನುಷ್ಠಿಸಿ ಅನುಭವವನ್ನು ಹೊಂದಿ ಧನ್ಯರಾಗುವವರು ಯಾವಾಗಲೂ ಯಾರೋ ಕೆಲವರು ಮಾತ್ರವೇ ಇರುತ್ತಾರೆ. ಆದ್ದರಿಂದ ಆತ್ಮಜ್ಞಾನ ಗುರುಪರಂಪರೆ, ಕೇವಲ ವೇದಾಧ್ಯಯನ ಗುರುಪರಂಪರೆ ಗಿಂತಲೂ ವಿಲಕ್ಷಣವಾದದ್ದು. ಅಂಥಾ ಆತ್ಮಜ್ಞಾನ ಗುರುಪರಂಪರಾನುಸಂಧಾನ ಮಾಡು ವಾಗ "ಸದಾಶಿವ ಸಮಾರಂಭಾಮ್, "ಉಮಾಮಹೇಶ್ವರಾರಂಭಾಂ" "ನಾರಾಯಣ ಸಮಾರಂಭಾಂ" ಎಂಬುದಾಗಿಯೂ ಹೇಳುತ್ತಾರೆ. ಪರಮಾರ್ಥ ದೃಷ್ಟಿಯಿಂದ ಶಿವ

ಕೇಶವರಲ್ಲಿ ಸ್ವರೂಪಬೇಧವಿಲ್ಲ "ಸದೇವ ಸೋಮ್ಯೇದಮಗ್ರಮಾಶೀದೇಕಮೇವಾದ್ವಿತೀಯಂ" ಎಂಬುದಾಗಿ ಶ್ರುತಿ, ಭಗವಂತನೊಬ್ಬನೆ ಇದ್ದಾನೆಂದು ಹೇಳುವದು. ಆತನು ಜ್ಞಾನಾನಂದ ಸ್ವರೂಪನು"ಶ್ರುತಿ ಸ್ಮೃತಿರ್ಮಮೈವಾಜ್ಞೆ" ಆತನಿಂದ ಉಂಟಾದ ವೇದಗಳು ಅಪೌರುಷೇಯಗಳು.ಆತನಿಗೆ ಮತ್ತೊಬ್ಬ ಗುರುವಿಲ್ಲ. ಸದಾ ಗುರುಸ್ವರೂಪನು.ಸಾಕ್ಷಾತ್ ಪರಮಾತ್ಮನೇ ಸದಾಶಿವನಾದ ಉಮಾಮಹೇಶ್ವರನು. ಜಗದ್ಭರ್ತನಾದ ಆತನಿಂದ ಗುರುಶಿಷ್ಯ ಕ್ರಮವಾಗಿ ಗುರುಪರಂಪರಾಯತವಾಗಿ ಬಂದುದೇ ಶ್ರೀ ಉಮಾ ಮಹೇಶ್ವರ ಗುರುಪೀಠ ಪರಂಪರೆ. ಇದನ್ನೇ ಕೈಲಾಸ ಪೀಠವೆಂತಲೂ ಕರೆಯುವರು.

ಶ್ರೀಮತ್ಕೈಲಾಸ ಶಿಖರೇ ಭಾಸಮಾನಂ ನಿರಾಮಯಂ ।
ರತ್ನ ಸಿಂಹಾಸನೇ ಸಮ್ಯಗಾರೂಢಂ ಚ ಸದಾಶಿವಮ್ ॥
ತ್ರಿಲೋಚನಂ ಚತುರ್ಬಾಹುಂ ಶಟಿತ್ಕೋಟಿ ಸಮಪ್ರಭಮ್ ।
ಅಮಿತಾದಿತ್ಯ ಸಂಕಾಶಂ ಶುದ್ಧಸ್ಫಟಿಕ ಸನ್ನಿಭಮ್ ॥
ನೀಲಗ್ರೀವಂ ಶಶಾಂಕಾಂಕಂ ಖಡ್ಗ ಖಟ್ವಾಂಗ ಧಾರಿಣಮ್ ।
ನಾಗಯಜ್ಞೋಪವೀತಂ ಚ ವ್ಯಾಘ್ರ ಚರ್ಮೋತ್ತರೀಯಕಮ್ ॥
ಕಮಂಡಲು ಧರಂ ದೇವಮಕ್ಷಮಾಲಾ ವಿಭೂಷಿತಮ್ ।
ವರದಾಭಯ ಹಸ್ತಂ ಚ ನಮಜ್ಜನ ಫಲಪ್ರದಮ್ ॥
ವೃಷೋಪಂ ಸಮಾರೂಢಮುಮಾ ದೇಹಾರ್ಧ ಧಾರಿಣಮ್ ।
ದುರ್ತ್ವಾಂತಂ ಕಪಿಲ ಜಟಂ ಶಿಖಾ ಮಧ್ಯೇತು ಧಾರಿಣಮ್ ॥
ಅಮೃತೇ ನಾರ್ಪಿತಂ ಹೃಷ್ಟಂ ದಿವ್ಯಭೋಗ ಸಮನ್ವಿತಮ್ ।
ದಿಗ್ದೇವತಾ ಸಮಾಯುಕ್ತಂ ಸುರಾಸುರ ನಮಸ್ಕೃತಮ್ ।
ನಿತ್ಯಂ ಚ ಶಾಶ್ವತಂ ಶುದ್ಧಂ ಧೃವಮಕ್ಷರ ಮವ್ಯಯಮ್ ।
ಸರ್ವವ್ಯಾಪಿನಮೀಶಾನಂ ರುದ್ರಂ ವೈ ವಿಶ್ವರೂಪಿಣಮ್ ॥
ನಮಸ್ತೋಮಾಯ ರುದ್ರಾಯ ಶಂಕರಾಯ ಮಹಾತ್ಮನೇ ।
ಬ್ರಹ್ಮ ವಿಷ್ಣು ಸುರೇಂದ್ರಾಣಾಂ ಧ್ಯಾನಗಮ್ಯಾಯ ಶೂಲಿನೇ ॥
ಭಕ್ತಿಗಮ್ಯಾಯ ಭಕ್ತಾನಾಂ ವಿದುಷಾಮಾತ್ಮರೂಪಿಣೇ ।
ಸ್ವಾನುಭೂತಿ ಪ್ರಸಿದ್ಧಾಯ ನಮಸ್ತೇ ಸರ್ವ ಸಾಕ್ಷಿಣೇ ॥
ಪಂಚಾಕ್ಷರೀ ವಿದ್ಯಾ ಶತುರುದ್ರೀಯ ಮಧ್ಯಗಾ ।
ಪಂಚಾಕ್ಷರೇ ಮಹಾದೇವಃ ಸರ್ವದಾ ಸುಪ್ರತಿಷ್ಠಿತಃ ॥

(ಸೂತ ಸಂಹಿತೆ)

ಶ್ರೀಮದ್ವೇದಾಗಮೋಪನಿಷತ್ಪುರಾಣೇತಿಹಾಸ ಪ್ರಸಿದ್ಧ ಸತ್ಯಸನಾತನವಾದ ಶ್ರೀಮದುಮಾಮಹೇಶ್ವರ ಗುರುಪೀಠವು ಸೃಷ್ಟ್ಯಾದಿಯಿಂದಲೂ ಶೋಭಿಸುತ್ತಿದೆ. ಶ್ರೀಮತ್ಕೈಲಾಸಾಧಿಪನಾದ ಶ್ರೀ ಉಮಾಮಹೇಶ್ವರನು, ಅವರ ಶಿಷ್ಯರು

ನಂದೀಶ್ವರರು, ಅವರ ಶಿಷ್ಯರು ಸನತ್ಕುಮಾರರು, ಅವರ ಶಿಷ್ಯರು ಸೂತರ್ಷಿಗಳು ಇವರೆಲ್ಲರು ಪುರಾಣ ಪ್ರಸಿದ್ಧರು. ಈ ಕ್ರಮದಿಂದ ಭಗವನ್ನಾಥರು, ಕರೂರ್ ಸಿದ್ಧರು, ಇವರ ಶಿಷ್ಯರು ಅರುಳ್ ಮುನಿವರರು, ಅವರ ಶಿಷ್ಯರು ಕಳೂರ್ ಮುನಿವರರು, ಪರಮುನಿವರರು, ತಿರುಪ್ಪನಂದಾಳರು, ಮಧುರ ಪುಂಜ ಮುನಿವರರು, ತಿರುನಟರಾಜರು, ಶಿವಪ್ರಕಾಶಸ್ವಾಮಿ, ಸ್ವರೂಪಾನಂದಸ್ವಾಮಿ, ತತ್ವರಾಜಸ್ವಾಮಿ, ಶಾಂತಲಿಂಗಸ್ವಾಮಿ, ಕುಮಾರದೇವಸ್ವಾಮಿ, ಚಿದಂಬರಸ್ವಾಮಿ, ನಾರಾಯಣದೇಶಿಕಸ್ವಾಮಿ, ತಾಂಡವರಾಯಸ್ವಾಮಿ, ತಾತಸ್ವಜ್ಞಾನ ಪರದೇಶಿ, ತಿಲ್ಲಿನಾಥಸ್ವಾಮಿ, ವೇಂಕಟರಂಗದೇಶಿಕಸ್ವಾಮಿ, ಪ್ರಣವಾನಂದಸ್ವಾಮಿ, ಸದಾನಂದಸ್ವಾಮಿ, ಶಂಕರಾನಂದಗಿರಿಗುರುಸ್ವಾಮಿ. ಈ ವಿಧವಾಗಿ ಗುರುಶಿಷ್ಯ ಪರಂಪರೆಯಾಗಿ ಬಂದಿದೆ. ಪ್ರಸ್ತುತ ಗುರುಪೀಠಾಚಾರ್ಯರು 1945 ಶ್ರೀ ಜಯ ಸಂ|| ಜ್ಯೇಷ್ಠ ಶುದ್ಧ ಪೂರ್ಣಿಮ ಸುಮುಹೂರ್ತದಲ್ಲಿ ವಿಧ್ಯುಕ್ತವಾಗಿ ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರಾಚಾರ್ಯರಾದರು. ಈ ವಿಷಯ ಶ್ರೀ ಶಂಕರಾನಂದಗಿರಿ ಗುರುವರ ಚರಿತ್ರೆಯಲ್ಲಿ ವಿವರಿಸಲ್ಪಟ್ಟಿದೆ.

ಕೈಲಾಸೇಶಮುಮಾನಾಥಂ ತಥಾ ನಂದೀಶ್ವರಂ ಗುರುಮ್ ।
ಸನತ್ಕುಮಾರಂ ಸೂತರ್ಷಿಂ ಸರ್ವದಾ ತಂ ನಮಾಮ್ಯಹಮ್ ॥ ೧ ॥

ನಮಾಮಿ ಭಗವನ್ನಾಥಂ ಕರೂರ್ ಸಿದ್ಧ ಮರುಳ್ ಮುನಿಮ್ ।
ತಚ್ಛಿಷ್ಯಂ ಚ ಕಳೂರ್ ಮೌನಿಂ ಪರಮೌನಿಂ ಭಜಾಮ್ಯಹಂ ॥ ೨ ॥

ತಿರುಪ್ಪನಂದಾಳ ಗುರುಂ ತಥಾ ಮಧುರ ಪುಂಜಕಮ್ ।
ಯೋಗೀಶ್ವರಂ ತಿರುನಟರಾಜಂ ಭಕ್ತ್ಯಾಸ್ಮರಾಮ್ಯಹಮ್ ॥ ೩ ॥

ಶಿವಪ್ರಕಾಶಂ ಯೋಗೀಶಂ ಸ್ವರೂಪಾನಂದ ಮುತ್ತಮಮ್
ತತ್ವರಾಜ ಸ್ವಾಮಿನಂ ತಂ ಶಾಂತಲಿಂಗಾರ್ಯಕಂ ತಥಾ ॥ ೪ ॥

ಕುಮಾರದೇವಂ ತಚ್ಛಿಷ್ಯಂ ಚಿದಂಬರ ಗುರುಂ ವಿಭುಮ್ ।
ನಾರಾಯಣಾಚಾರ್ಯ ಗುರುಂ ಭೂಮಾತಾಂಡವರಾಯಕಮ್ ॥ ೫ ॥

ತಾತಾರ್ಯಂ ತಿಲ್ಲಿನಾಥಂ ಚ ತಥಾ ವೇಂಕಟರಂಗಕಮ್ ।
ಪ್ರಣವಾನಂದ ಮೌನೀಶಂ ಜ್ಞಾನಿನಂ ತತ್ಸು ಶಿಷ್ಯಕೌ ॥ ೬ ॥

ಆತ್ಮಾನಂದ ಸದಾನಂದ ಯೋಗಿನೌ ಪರಮೌಗುರೂ ।
ತಚ್ಛಿಷ್ಯಂ ಚ ತಪೋನಿಷ್ಠಂ ಶ್ರೋತ್ರಿಯಂ ಶಾಂತರೂಪಿಣಮ್ ॥ ೭ ॥

ಶ್ರೀ ಶಂಕರಾನಂದಗಿರಿಂ ಪ್ರಣಮಾಮಿ ಮುಹುರ್ಮುಹುಃ ।
ಅನ್ಯಾನಸ್ಮದ್ಗುರೂನ್ ವಂದೇ ಸತ್ವ ಶುದ್ಧ್ಯೈನತೋಸ್ಮ್ಯಹಂ ॥ ೮ ॥

ಶ್ರೇಯೋಸ್ತೂಮಾಮಹೇಶಾಖ್ಯ ಪೀಠಸ್ಥೇಭ್ಯಸ್ಸದಾ ಪರಮ್ ।
ತಚ್ಛಿಷ್ಯೇಭ್ಯಃ ಪ್ರಶಿಷ್ಯೇಭ್ಯಃ ಸರ್ವೇಭ್ಯಶ್ಚಾಸ್ತು ಮಂಗಳಮ್ ॥ ೯ ॥

ಮುಮುಕ್ಷುಭ್ಯಃ ಸಾಧಕೇಭ್ಯಃ ಸರ್ವದಾಸ್ತು ಸುಮಂಗಳಮ್ ।
ಸಚ್ಚಿದಾನಂದ ದೇವಸ್ಯ ಪ್ರಸಾದಾತ್ಸರ್ವ ಮಂಗಳಮ್ ॥ ೧೦ ॥

ಹೀಗೆ ಗುರು ಶಿಷ್ಯ ಕ್ರಮದಿಂದ ಬಂದ ಶಾಸ್ತ್ರೀಯವಾದ ಗುರುಪರಂಪರೆ ಇದು. ಈ ಗುರು ಪರಂಪರೆಯಲ್ಲಿ ಪ್ರಣವ ಪಂಚಾಕ್ಷರೀ ಮಹಾಮಂತ್ರವು ಅಜಪಾಗಾಯತ್ರೀ ಮಹಾಮಂತ್ರವನ್ನು ವಿಧ್ಯುಕ್ತವಾಗಿ ಉಪದೇಶಿಸಿ ಮಂತ್ರಾರ್ಥವನ್ನು ತದನುಷ್ಠಾನ ವಿಧಾನವನ್ನು ತಿಳುಹಿ 'ಪ್ರಜ್ಞಾನಂ ಬ್ರಹ್ಮ' 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' 'ಅಯಮಾತ್ಮಾ ಬ್ರಹ್ಮ' ಎಂಬ ವೇದಾಂತ ಮಹಾವಾಕ್ಯಗಳನ್ನು ಬೋಧಿಸಿ, ಪ್ರತ್ಯಗಾತ್ಮ ಪರಮಾತ್ಮನೇ ಎಂದು ಅನುಗ್ರಹಿಸುತ್ತಾ ಬಂದ ಅದ್ವೈತಾತ್ಮ ಜ್ಞಾನ ಗುರು ಪರಂಪರೆ ಇದು. ಹೀಗೆ ಒಬ್ಬರಿಂದ ಒಬ್ಬರಿಗೆ ಗುರು ಶಿಷ್ಯಕ್ರಮವಾಗಿ ಬೋಧಿಸಲ್ಪಡುತ್ತ ಬಂದುದರಿಂದ ಬ್ರಹ್ಮವಿದ್ಯೆ ಪರಾವಿದ್ಯೆಯೆಂತಲೂ ಹೇಳಲ್ಪಡುತ್ತದೆ.

ಈ ಗುರುಪೀಠದಲ್ಲಿ ಉಪಲಬ್ಧವಾದ ಗುರುಪರಂಪರಾಚಾರ್ಯರು ಸ್ಥಾಪಿಸಿದ ಮಠಗಳು, ಆಶ್ರಮಗಳು, ವಿದ್ಯಾಸಂಸ್ಥೆಗಳು ಆಂಧ್ರ, ಕರ್ನಾಟಕ, ತಮಿಳು ದೇಶಗಳಲ್ಲಿ ಅನೇಕಗಳಿವೆ ಮತ್ತು ಉತ್ತರ ಹಿಂದೂಸ್ಥಾನದಲ್ಲಿಯೂ ಇದ್ದಾವೆ. ಈ ವಿಷಯದಲ್ಲಿ ನಮ್ಮ ಗುರುಗಳು, ಪರಮಗುರುಗಳು, ತಿಳುಹುತ್ತಿದ್ದ ವಿಷಯಗಳು ಮತ್ತು ನಾವು ಸ್ವಯವಾಗಿ ಆಯಾ ಸ್ಥಾನಗಳಿಗೆ ಹೋಗಿ ವಿಚಾರಿಸಿ ತಿಳಿದು ನೋಡಿ ಸಂಗ್ರಹಿಸಿದ್ದು.

ಈ ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರೆಯಲ್ಲಿ ಶ್ರೀ ಶಿವಪ್ರಕಾಶಾನಂದ ಗುರುವರೇಣ್ಯರು ಉದ್ದಂಡ ಮಹಾಪಂಡಿತರು. ಬಹುಗ್ರಂಥಕರ್ತರು. ಜ್ಞಾನಸಿದ್ಧರಾದ ಮಹಾನುಭಾವರು. ಈ ಮಹನೀಯರ ಅಳಿಯಂದಿರೇ ಶ್ರೀ ಶಾಂತಲಿಂಗಸ್ವಾಮಿಗಳೆಂಬ ತಪೋಧನರು. ಅನೇಕ ಗ್ರಂಥಗಳನ್ನು ರಚಿಸಿದವರು. ಇವರು ಸದಾ ಶಿವಲಿಂಗವನ್ನು ಧಾರಣೆಮಾಡಿದ ಶಿವಪೂಜಾ ದುರಂಧರರು. ಈ ವಿಷಯಗಳು "ಶರಣ ಚರಿತಾಮೃತ"ವೆಂಬ ಕರ್ನಾಟಕ (ಕನ್ನಡ) ಗ್ರಂಥದಲ್ಲಿ ತಿಳುಹಿಸಲ್ಪಟ್ಟಿದೆ. ಈ ಗುರುಪೀಠದಲ್ಲಿ ಗುರುಪೀಠಾಚಾರ್ಯರಾಗಿ ಬೆಳಗಿದ ಮಹರ್ಷಿ ಪುಂಗವರಿರುವರು. ತಂಜಾವೂರು ಸಮೀಪ ಪೇರೂರು ಪಟ್ಟಣದಲ್ಲಿ ಶ್ರೀ ಶಾಂತಲಿಂಗ ಸ್ವಾಮಿಗಳವರ ಮಹಾಮಠವು, ದೊಡ್ಡ ವಿದ್ಯಾ ಸಂಸ್ಥೆಯು ಇದೆ ಮತ್ತು ಈ ಮಹನೀಯರ ಅಧಿಷ್ಠಾನವು (ಮಹಾಸಮಾಧಿಯು) ಇಲ್ಲಿಯೇ ಇದೆ.

ಈ ಗುರುಪೀಠದಲ್ಲಿ ತಾಂಡವರಾಯಸ್ವಾಮಿ ಎನ್ನುವ ಆಚಾರ್ಯರು ಘನ ವಿದ್ವಾಂಸರು. ಜ್ಞಾನೈಕಸಿದ್ಧರಾದ ಮಹನೀಯರು. ಇವರು ತಮಿಳು ಭಾಷೆಯಲ್ಲಿ "ಕೈವಲ್ಯ ನವನೀತ" ವೆಂಬ ವೇದಾಂತ ಗ್ರಂಥವನ್ನು ರಚಿಸಿದ್ದಾರೆ.

ಶ್ರೀ ಕಾಶೀಕ್ಷೇತ್ರ ಹರಿಶ್ಚಂದ್ರ ಘಾಟ್‌ನಲ್ಲಿ ಕುಮಾರ ದೇವಸ್ವಾಮಿ ಮಠ ಸಂಸ್ಥೆ ಇದೆ. ತಮಿಳು ದೇಶದಲ್ಲಿ ತಿರುಚುನಾಪಲ್ಲಿ ಈರೋಡ್ ಜಂಕ್ಷನ್ ಮಧ್ಯ ಕರೂರ್

ಸಿದ್ಧರ ಮಠವಿದೆ. ತಂಜಾವೂರು ಸಮೀಪದಲ್ಲಿ ಶ್ರೀತಿರುಪ್ಪನಂದಾಳರ ಮಠ ಬೆಳ ಗುತ್ತಿದೆ. ಚಿದಂಬರಕ್ಕೆ ೨5 ಮೈಲು ದೂರದಲ್ಲಿರುವ ಎರಂಬೂರಿನಲ್ಲಿ ತತ್ತ್ವರಾಜ ಸ್ವಾಮಿಗಳವರ ವಿರತಾಶ್ರಮವು ವಿರಾಜಿಸುತ್ತಿದೆ. ಚಿದಂಬರಕ್ಕೆ ಸಮೀಪ ಬಿರುತಾ ಚ್ಛಲದಲ್ಲಿ ಕುಮಾರದೇವಸ್ವಾಮಿ ವಿರತಾಶ್ರಮವು ಉಂಟು. ಮದ್ರಾಸಿಗೆ 40 ಮೈಲು ದೂರ ತಿರುಪೇರೂರು ಕ್ಷೇತ್ರದಲ್ಲಿ ಶ್ರೀ ಚಿದಂಬರ ಗುರುಮಠವಿದೆ.

ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರೆಯಲ್ಲಿ 24 ನೇ ಆಚಾರ್ಯರು ಮಹಾತಪಸ್ಸಂಪನ್ನರೂ ಸಿದ್ಧಪುರುಷರೂ, ಸರ್ವಜ್ಞರೂ ಬ್ರಹ್ಮನಿಷ್ಠಾ ಗರಿಷ್ಠರೂ ಆದ ಶ್ರೀ ಮದ್ವೇಂಕಟರಂಗದೇಶಿಕ ಸ್ವಾಮಿ ಮಹರ್ಷಿಪುಂಗವರು. ಇವರು ಪರಿ ವ್ರಜಿಸುತ್ತಾ ತಿರುನಲ್ವೇಲಿ ಪಟ್ಟಣಕ್ಕೆ ದಯಮಾಡಿಸಿ ಒಂದು ಜೀರ್ಣ ಶಿವಾಲಯದಲ್ಲಿ ಬಿಡದಿಯನ್ನು ಮಾಡಿದ್ದರು. ಅಲ್ಲಿ ಆ ಪಟ್ಟಣದಲ್ಲಿ ವಿದ್ಯಾ ವಿವೇಕ ವೈರಾಗ್ಯ ಸಂಪನ್ನರಾದ ಆಧ್ಯಾತ್ಮಿಕ ಜಿಜ್ಞಾಸಪರರು ಅನೇಕ ಗ್ರಂಥಗಳನ್ನು ಪರಿಶೀಲಿಸಿದ ಚಿಕ್ಕ ಪ್ರಾಯದವರು. ಉದ್ಯೋಗ ಮಾಡುತ್ತಿರುವ ಇಂಗ್ಲೀಷು ಓದಿದ ಶ್ರೀ P. ನಾರಾ ಯಣಸ್ವಾಮಿ ಎಂಬುವವರಿದ್ದರು. ಅವರಲ್ಲುಂಟಾದ ಬ್ರಹ್ಮಜ್ಞಾನ ಪಿಪಾಸೆ, ನನಗೆ ಗುರುವು ಯಾರು ? ಎಲ್ಲಿರುವರು ? ಎಂಬ ಚಿಂತೆ ಅವರನ್ನು ಹಗಲೂ ಇರುಳೂ ಪರಿತಪಿಸುವಂತೆ ಮಾಡುತ್ತಿತ್ತು. ಹೀಗಿರುವ ಸ್ಥಿತಿಯಲ್ಲಿ, ಸಾಕ್ಷಾತ್ ಪರಮೇಶ್ವರನೇ ಈ ಶ್ರೀಮದ್ವೇಂಕಟರಂಗ ದೇಶಿಕ ಸ್ವಾಮಿ ರೂಪದಿಂದ ಆ ಪಟ್ಟಣಕ್ಕೆ ಬಂದು ಶಿವಾಲಯದಲ್ಲಿ ಸನ್ನಿಧಿ ಮಾಡಿದ್ದಾರೆಂಬುವ ವಿಷಯ ಇವರಿಗೆ ಕರ್ಣಾಕರ್ಣಿಯಾಗಿ ತಿಳಿಯಿತು. ಅವರ ಸನ್ನಿಧಿಗೆ 'ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಎನ್ನುವ ಶ್ರುತಿಗನುಸಾರ ಶಿಷ್ಯವೃತ್ತಿ ಯಿಂದ ಶರಣಾಗತರಾಗಿ ಬಂದು ಗುರುಗಳ ಅನುಗ್ರಹಕ್ಕೆ ಪಾತ್ರರಾಗಿ, ಅವರ ಸೇವೆ ಯನ್ನು ಮಾಡುತ್ತಾ ತತ್ತ್ವಮಸೀತ್ಯಾದಿ ಮಹಾ ವಾಕ್ಯಾರ್ಥ ಪರಿಜ್ಞಾನವನ್ನು ನೀತಿ ನಿಯಮಾನುಷ್ಠಾನಗಳಿಂದ ಪಡೆದು ಅಪರೋಕ್ಷ ಬ್ರಹ್ಮಾತ್ಮ ಜ್ಞಾನವನ್ನು ಹೊಂದಿದರು.

ಹೀಗೆ ಗುರು ಸಾನ್ನಿಧ್ಯದಲ್ಲಿ ಅಹರ್ನಿಶಗಳೂ ಗುರುಸೇವಾ ತತ್ಪರರಾಗಿ ಇರು ತ್ತಿರುವದು, ಮನೆಯಲ್ಲಿ ಅವರನ್ನು ಹೆತ್ತ ತಾಯಿಯವರಿಗೆ ಇಷ್ಟವಿಲ್ಲ. ಆದ್ದರಿಂದ ಒಂದು ದಿನ ತಾಯಿ ಆ ಆಲಯಕ್ಕೆ ಬಂದು, ಶ್ರೀ ವೇಂಕಟರಂಗ ದೇಶಿಕ ಸ್ವಾಮಿಗಳವ ರನ್ನು ನೋಡಿ, ಓ ಅಯ್ಯಾ ! ನಮ್ಮ ಹುಡುಗನನ್ನು ಅನ್ಯಾಯವಾಗಿ ಕೆಡಿಸಿ ಬಿಟ್ಟಿರಾ ! ನಾನೇನೋ ದೊಡ್ಡದಾಗಿ ಓದಿಸಿ ನಮ್ಮವನು ಒಳ್ಳೆಯ ಉದ್ಯೋಗವನ್ನು ಮಾಡಿ ಸಂಸಾರಿಯಾಗಿ ಕೀರ್ತಿಯನ್ನು ಪಡೆಯಲೆಂದು ನಾವು ಮಾಡಿದ ಕೆಲಸವನ್ನೆಲ್ಲ ಹಾಳು ಮಾಡಿಬಿಟ್ಟಿಯಲ್ಲಾ, ಅಯ್ಯಾ ಸ್ವಾಮಿ ! ಇತ್ಯಾದಿಯಾಗಿ ನಿಷ್ಠುರದಿಂದ ದಂಡಿಸಿದಳು. ಆ ಮಾತುಗಳನ್ನು ಕೇಳಿದ ದೇಶಿಕರ ಶಿಷ್ಯನು, ಓಹೋ ನನ್ನ ಗುರು ಗಳನ್ನು ಈ ಪ್ರಕಾರವಾಗಿ ತಾಯಿ ದಂಡಿಸಿದಳಲ್ಲಾ ಎಂಬುದಾಗಿ ವ್ಯಥೆಯನ್ನು ಪಟ್ಟು

ಇನ್ನು ನನಗೇನು ಬೇಕಿಲ್ಲವೆಂದು ಮಹಾ ವಿರಕ್ತಿಯಿಂದ ಆ ದಿನವೇ ಅಲ್ಲಿರದಂತೆ ಅದೃಶ್ಯನಾಗಿ ಅಡವಿಗೆ ಹೊರಟು ಹೋದರು. ಹಾಗೆ ಅಡವಿಯಲ್ಲಿ ನಡೆದು ನಡೆದು ಹೋಗುತ್ತಿರಲು ಬೆಟ್ಟದ ಗುಹೆಯೊಂದು ಕಾಣಿಸಿತು. ಅದರಲ್ಲಿ ಪ್ರವೇಶಿಸಿದರು. ಆ ಗುಹೆಯಲ್ಲಿ ಹೋದಂತೆಲ್ಲಾ ಅದು ವಿಶಾಲವಾದ ಬಯಲಿನಿಂದ ಒಪ್ಪುತ್ತಾ ಅತಿ ನಿರ್ಮಲವಾಗಿತ್ತು. ಇನ್ನು ಮುಂದೆ ಕೆಲವು ದೂರ ಹೋಗಲು ಪ್ರಕಾಶವಂತವಾದ ಸುವಿಶಾಲವಾದ ಬಯಲಿತ್ತು. ಅಲ್ಲಿ ಮೂರು ಆಸನಗಳೂ ಮತ್ತು ಯೋಗ ದಂಡ ಗಳೂ ಕಮಂಡಲಗಳೂ ದೊಡ್ಡವಾದ ತಾಳಪತ್ರ ಗ್ರಂಥಗಳೂ ಇದ್ದವು.

ಇವುಗಳನ್ನು ನೋಡಿ ಈ ಸ್ಥಾನವು ಮಹನೀಯರಾದ ಋಷೀಶ್ವರರಿರುವ ಸ್ಥಳ ವಾಗಿದೆ. ನಾನಿಲ್ಲಿಯೇ ಇದ್ದರೆ ಹೇಗಾದರು ಸ್ವಲ್ಪ ಹೊತ್ತಿಗೆ ಆ ಮಹನೀಯರು ಬರುತ್ತಾರಲ್ಲಾ ಅವರನ್ನು ಸಂದರ್ಶಿಸಬೇಕು ಎನ್ನುವ ಸದಿಚ್ಛೆಯಿಂದ ಈ ದೇಶಿಕರ ಶಿಷ್ಯರು ಅಲ್ಲಿಯೇ ಕುಳಿತರು. ಅವರೇನೋ ನಿರಾಹಾರಿಯಾಗಿ ನಿಷ್ಠೆಯಿಂದ 3 ದಿನ ಗಳವರೆಗೂ ಇದ್ದರು. ಯಾರೂ ಬರಲಿಲ್ಲ. ಆಗ ಓಹೋ ನಾನು ಇಲ್ಲಿಗೆ ಬಂದುದ ರಿಂದ ನನಗವರು ಕಾಣಿಸಬಾರದೆಂದು ಆ ಮಹರ್ಷಿಗಳು ಬರಲಿಲ್ಲವೇನೋ ಈ ತಾಳ ಪತ್ರ ಗ್ರಂಥಗಳನ್ನಾದರೂ ತೆಗೆದು ನೋಡೋಣವೆಂದು ನಿಶ್ಯಕ್ತತೆಯಿಂದ ಎದ್ದು ಆ ಸಿಂಹಾಸನಗಳ ಬಳಿ ಹೋಗಿ ತಾಳಪತ್ರ ಗ್ರಂಥಗಳನ್ನು ತೆರೆದು ನೋಡಿದರು. ಅಷ್ಟರಲ್ಲೇ ಆಯೇ ವತ್ಸಾ ! ಎಂಬುವ ಶಬ್ದ ಕೇಳಿ ಬಂತು. ಆ ದಿಕ್ಕಿಗೆ ಅವರು ಭಕ್ತಿಯಿಂದ ಅಂಜಲಿ ಬದ್ಧರಾಗಿ ವೀಕ್ಷಿಸುತ್ತಿರಲು ಮೂವರು ಪರಮ ಋಷಿಗಳು ಜಟಾವಲ್ಕಧಾರಿಗಳಾಗಿ ಭಸ್ಮೋದ್ಧೂಳಿತ ಗಾತ್ರರಾಗಿ ರುದ್ರಾಕ್ಷಿಮಾಲೆಗಳನ್ನು ಧರಿಸಿದವರಾಗಿ ಅಜಾನುಬಾಹುಗಳಿಂದೊಪ್ಪುವ ಮಹಾಪುರುಷರು ದರ್ಶನವನ್ನು ಕೊಟ್ಟರು. ಆಮೇಲೆ ವತ್ಸಾ ! ಮೂರ್ತಿತ್ರಯರಾದ ನಾವೇ ನಮ್ಮ ಅಂಶಭೂತವೇ ನಿಮ್ಮ ಪಟ್ಟಣದಲ್ಲಿ ಇರುತ್ತಿರುವ ಶ್ರೀ ವೇಂಕಟರಂಗ ದೇಶಿಕ ಸ್ವಾಮಿ ಋಷಿವರ್ಯರು. ನೀನು ಅವರ ಸನ್ನಿಧಿಗೆ ಹೋಗಿ ಅವರು ಹೇಳಿದ ಪ್ರಕಾರ ನಡೆದುಕೊಳ್ಳುವನಾಗು ಎಂದು ನುಡಿಯುತ್ತಾ ಅದೃಶ್ಯರಾದರು.

ಅನಂತರ ಅವರು ಪುಲಕಾಂಕಿತ ಗಾತ್ರರಾಗಿ ಆಶ್ಚರ್ಯವನ್ನೂ ಆನಂದವನ್ನೂ ಹೊಂದುತ್ತ ದೇಶಿಕರ ಬಳಿಗೆ ಮರಳಿ ಬಂದು ಸಾಷ್ಟಾಂಗದಂಡಪ್ರಣಾಮಗಳನ್ನಾಚರಿಸಿ ದರು. ಆಗ ಶ್ರೀಗುರುಗಳು "ಅಯ್ಯಾ ! ತ್ರಿಮೂರ್ತಿಗಳನ್ನು ನೋಡಿದೆಯಾ (ಸಂದರ್ಶಿಸಿದೆಯಾ) ಅವರು ನಿನ್ನನ್ನು ಇಲ್ಲಿಗೆ ಹೋಗೆಂದು ಹೇಳಿದರಾ ?" ಎಂದು ನುಡಿದರು. ಆ ಮಾತುಗಳನ್ನು ಕೇಳಿ ಮಹಾಶ್ಚರ್ಯಚಕಿತರಾಗಿ ಇವರು ಸರ್ವಜ್ಞರು ಮಹರ್ಷಿಗಳೆಂದು ಭಾವಿಸಿ ಪ್ರದಕ್ಷಿಣ ನಮಸ್ಕಾರಗಳನ್ನಾಚರಿಸಿದರು. ಅನಂತರ ಶ್ರೀ ವೇಂಕಟರಂಗ ದೇಶಿಕ ಸ್ವಾಮಿಯವರು ಮಗೂ ! ನಮ್ಮ ಆದೇಶಾನುಸಾರ ನಿನ್ನನ್ನು ಹೆತ್ತ ತಾಯಿಯ ಪ್ರೀತ್ಯರ್ಥವಾಗಿ ಕೆಲವು ಕಾಲ ಗಾರ್ಹಸ್ಥ್ಯಾಶ್ರಮದಲ್ಲಿ

ರುತ್ತಾ ಉದ್ಯೋಗವನ್ನು ಮಾಡು. ಅನತಿ ಕಾಲದಲ್ಲಿಯೇ ನೀನು ಅದರಿಂದ ವಿಮುಕ್ತನಾಗುವೆ. ಕಿಂಚಿತ್ಶೇಷ ಪ್ರಾರಬ್ಧವು ಈ ವಿಧವಾಗಿ ನಿನಗೆ ತೀರಿ ಹೋಗಲು, ನೀನು ಮುಂದೆ ಮಹನೀಯನಾಗಿ ಶ್ರೀ ಪ್ರಣವಾನಂದ ಸ್ವಾಮಿ ಎಂಬ ಶುಭ ನಾಮದಿಂದ ತುರೀಯಾಶ್ರಮ ಯೋಗಪಟ್ಟವನ್ನು ಪಡೆದು, ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರಾಚಾರ್ಯನಾಗಿ, ಗುರುಪೀಠದ ಪ್ರಭೆಯನ್ನು ಸುವ್ಯಾಪ್ತಿಗೊಳಿಸುವೆ ಇತ್ಯಾದಿಯಾಗಿ ಆಶೀರ್ವದಿಸಿದರು.

ಹೀಗೆ ತಮ್ಮ ಗುರುವಾಕ್ಯಾನುಸಾರ ಕೆಲವು ಕಾಲ ಪ್ರಭುತ್ವೋದ್ಯೋಗವನ್ನು ಮಾಡಿ ಅನಂತರ ತುರೀಯಾಶ್ರಮವನ್ನು ಸ್ವೀಕರಿಸಿದರು. ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮತ್ಪೂಜ್ಯಪಾದ ಶ್ರೀ ಶ್ರೀ ಶ್ರೀ ಸದ್ಗುರು ಪ್ರಣವಾನಂದ ಸ್ವಾಮಿಗಳು ಶ್ರೀಮದುಮಾಮಹೇಶ್ವರ ಗುರುಪೀಠದಲ್ಲಿ, 25 ನೆಯ ಶ್ರೀಗುರು ಪೀಠಾಚಾರ್ಯ ಸಿಂಹಾಸನಾಧಿಷ್ಠಿತ ಪಟ್ಟಭದ್ರರಾಗಿ ಗುರುಪೀಠ ಸಂಪ್ರದಾಯ ಧರ್ಮವನ್ನು ಸುವ್ಯಾಪ್ತಿಗೊಳಿಸುತ್ತಾ, ಕರ್ನೂಲು ಜಿಲ್ಲಾ, ನಂದಿ ಮಂಡಲ ನಂದ್ಯಾಲ ಮಹಾನಂದಿ ಕ್ಷೇತ್ರ ಮಾರ್ಗ ಮಧ್ಯದಲ್ಲಿ ಬುಕ್ಕಾಪುರ ಸಮೀಪ ನಿರ್ವಾಣ ಮಠವೆಂಬ ಶುಭನಾಮದಿಂದ ಶ್ರೀ ಉಮಾಮಹೇಶ್ವರ ಗುರುಪೀಠ ಮಠವನ್ನು (ಆಶ್ರಮವನ್ನು) ಸ್ಥಾಪಿಸಿದರು. ಆಧ್ಯಾತ್ಮಿಕ ತತ್ತ್ವ ಪ್ರಚಾರವನ್ನು ಮಾಡುತ್ತಾ ಅನೇಕ ಮನೀಷಿಗಳ ಮಹನೀಯರ ಸಮಾಗಮ ಸದಸ್ಸು ಸಭೆಗಳನ್ನು ನಡೆಸಿ ಅಖಂಡ ಭಗವನ್ನಾಮ ಭಜನ ಸಪ್ತಾಹಾದಿ ಕಾರ್ಯಗಳು, ಪೂಜಾ ಪಾರಾಯಣಾದಿ ವೈದಿಕ ಕಾರ್ಯಕ್ರಮಗಳಿಂದ, ಗುರುಪೀಠದ ಸರ್ವ ರಾಜಲಾಂಛನಗಳಿಂದೊಪ್ಪುವ ಮಹೋತ್ಸವಗಳನ್ನು ಶಿಷ್ಯ ಭಕ್ತ ಜನ ಪರಿವೇಷ್ಟಿತರಾಗಿ ಮಾಡಿಸಿದರು. "ತತ್ತ್ವಮಸಿ" ಮಹಾವಾಕ್ಯಾರ್ಥ ಶ್ರವಣ ಮನನಾದಿಗಳಿಂದ ಮುಮುಕ್ಷು ಜನೋದ್ಧರಣೆಯನ್ನು ಮಾಡುತ್ತ ಉತ್ತಮ ರೀತಿಯಿಂದ ಯಮ ನಿಯಮಾದ್ಯಾನುಷ್ಠಾನ ಸರ್ವ ಪ್ರಕ್ರಿಯೆಗಳನ್ನು ಶಿಷ್ಯಭಕ್ತಾದಿಗಳೆಲ್ಲರಿಗೂ ವಿಧ್ಯುಕ್ತವಾಗಿ ತಿಳುಹಿದರು. "ಕೈವಲ್ಯ ನವನೀತ"ವೆಂಬ ತಮಿಳು ಗ್ರಂಥವನ್ನು ವೈರಾಗ್ಯ ಪ್ರಕರಣ, ಮುಮುಕ್ಷು ಪ್ರಕರಣ, ಉತ್ಪತ್ತಿ ಪ್ರಕರಣ, ಸ್ಥಿತಿ ಪ್ರಕರಣ, ಉಪಶಾಂತಿ ಪ್ರಕರಣ, ನಿರ್ವಾಣ ಪ್ರಕರಣವೆಂದು ಆರು ಪ್ರಕರಣಗಳಿಂದ ಕೂಡಿದ "ಕೈವಲ್ಯ ನವನೀತ ಸಾರಸಂಗ್ರಹ"ವೆಂಬ ಗುರುಶಿಷ್ಯ ಸಂವಾದಾತ್ಮಕ ವೇದಾಂತ ಗ್ರಂಥವನ್ನು ರಚಿಸಿ ಮುಮುಕ್ಷುಗಳಿಗೆ ಪ್ರಸಾದಿಸಿದರು.

ಅದು 1908 ಇಸ್ವಿ (ಸಂವತ್ಸರ) ಅನಂತಪುರ B. ಮುನಿಸ್ವಾಮಿ ನಾಯುಡು ಆ್ಯಂಡ್ ಸನ್ಸ್, ಸ್ವಾಮಿ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿದೆ. ಇದರಲ್ಲಿ ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರೆ ತಿಳುಹಿಸಲ್ಪಟ್ಟಿದೆ. ಅದನ್ನೇ ಆ ಮೂಲವನ್ನೇ ನಾವು ಛಂದೋಬದ್ಧವಾದ ಶ್ಲೋಕ ರೂಪವಾಗಿ ಮಾಡಿಸಿದೆವು. ಇನ್ನು ಆಂಧ್ರ ಕರ್ನಾಟಕ ಭಾಷೆಗಳಲ್ಲಿ ಈ ಶ್ರೀ ಉಮಾಮಹೇಶ್ವರ ಗುರುಪೀಠದ ಹಾಡುಗಳೂ ಪದ್ಯಗಳೂ ಹಲವಾರಿದ್ದಾವೆ. ಭಕ್ತಾದಿಗಳು ಅನುದಿನ ಹಾಡುತ್ತಿರುತ್ತಾರೆ.

ಕ್ರಿ. ಶ. 1913 ರಲ್ಲಿ ಶ್ರೀ ಉಮಾಮಹೇಶ್ವರ ಗುರುಪೀಠಾಚಾರ್ಯ ಪಟ್ಟಭದ್ರರಾದ ಶ್ರೀ ಪ್ರಣವಾನಂದ ಸದ್ಗುರುಗಳು ಇತ್ಯಾದಿಯಾದ ರಿಜಿಸ್ಟರ್ಡ್ ಡಾಕ್ಯುಮೆಂಟ್ಸ್ ಇವೆ. ಶ್ರೀ ಪ್ರಣವಾನಂದ ಸದ್ಗುರುದೇವರು ನಮ್ಮ ಗುರುಗಳಾದ ಶ್ರೀ ಸದಾನಂದ ಸ್ವಾಮಿಯವರಿಗೆ ತಮ್ಮ ಗುರು ಶ್ರೀ ವೇಂಕಟರಂಗ ದೇಶಿಕರ ಚರಿತ್ರೆಯನ್ನು ಹೇಳುತ್ತ ಪಾದುಕೆಗಳನ್ನೂ, ಒಂದು ಬಿಲ್ವಮಣಿ ಮಾಲಾಗುಚ್ಛವನ್ನು, ಒಂದು ಪಂಚಲೋಹಾತ್ಮಕವಾದ ಅಂಗುಳಿ (ಉಂಗುರ) ಯನ್ನೂ, ಒಂದು ತಾಳಪತ್ರ ನಾಗರಲಿಪಿ ಮೂಲವನ್ನು ಕೊಟ್ಟಿದ್ದರಂತೆ. ಆ ಪಾದುಕೆಗಳು ಈಗ ಗಂಜಿಗುಂಟೆ ಮಠದಲ್ಲಿ ಯಥಾ ಗುರುಸ್ಥಾನದಲ್ಲಿ ಪೂಜಿಸಲ್ಪಡುತ್ತಿವೆ. ಅಂಗುಳಿ, ಬಿಲ್ವಮಣಿ ಮಾಲೆಯು ಇರುತ್ತವೆ ಮತ್ತು ಹಳೆಯದಾಗಿ ಮೂಲೆಗೆ ಬಿದ್ದು ಶಿಥಿಲವಾದ ಆ ತಾಳಪತ್ರವನ್ನು ನಾವು ಚೆನ್ನಾಗಿ ತೊಳೆದು ಪರಿಶೀಲಿಸಿ ನೋಡಲಾಗಿ ಅದರಲ್ಲಿ ನಾಗರಲಿಪಿಯೊಳಗೆ ಹೀಗಿದೆ :

"ಶ್ರೀಮತ್ಕೈಲಾಸ ಸಂಸ್ಥಾ ಸ್ಥಿರತರ ಪರಮಾನಂದ ಸಾಮ್ರಾಜ್ಯ ಪ್ರೌಢ್ಯನ್ನಂದಿಸ್ಕಂದ ಪ್ರಮುಖ ಪ್ರಮಥಾಚಾರ್ಯ ವಂಶಕ್ರಮಾತ್ ಸದ್ಭಕ್ತಾನೀಕಾವನೇಚ್ಛಾಪ್ರವಿಮಲತರಬೋಧ ಸ್ವಸ್ವವಿಜ್ಞಾನ ಸಂಪದ್ದೀವ್ಯತ್ಪೀಠ ಮುಮಾಮಹೇಶ್ವರಯುತಂ ರಾರಾಜತೇ ಭಾರತೇ ॥

ಹೀಗಿರುವ ಈ ಪದ್ಯವು ಯಾವ ವೃತ್ತದಲ್ಲಿದೆ ಯಾವ ಛಂದಸ್ಸಿನಲ್ಲಿದೆ ಎಂಬಿತ್ಯಾದಿಯಾಗಿ ಅನುಭವಜ್ಞರಾದ ಪಂಡಿತರೊಡನೆ ಕೂಡಿ ವಿಚಾರಿಸಿ ಪರಿಶೀಲಿಸಲು ಕಡೆಗೆ ಉತ್ತಮರಾದ ಪಂಡಿತರು ಇದನ್ನು ನೋಡಿ ಹೀಗೆಂದರು : "ಸ್ವಾಮೀ ! ಉಪಲಬ್ಧವಾದ ಕೆಲವು ತಾಳಪತ್ರ ಗ್ರಂಥಗಳಲ್ಲಿ ಇಂಥಾ ಪ್ರಯೋಗಗಳು ಅಂದರೇ ಅರ್ಥವಂತವಾಗಿಯೂ ಯಾವ ಛಂದಸ್ಸಿಗೂ ಹೊಂದದೇ ಇರುವ ಇಂಥಾ ಪ್ರಯೋಗಗಳು ಕೂಡಾ ಇರುತ್ತವೆ. ಆದ್ದರಿಂದ ಅರ್ಥವಂತವಾದ ಈ ಮೂಲವನ್ನು ಇದ್ದದ್ದು ಇದ್ದ ಹಾಗೇ ಪೂಜ್ಯವಾಗಿ ಇಡುವದು ಬಹಳ ಶುಭ ಒಳ್ಳೆಯದು. ಈ ಮೂಲ ಶಾಸನ ಸ್ತುತಿಯನ್ನು ಕದಲಿಸಬಾರದು, ಮುಟ್ಟಬಾರದೆಂದು ಸಲಹೆಯನ್ನು ಕೊಟ್ಟರು. ಪ್ರಯುಕ್ತ ಇದನ್ನು "ಶಾಸನ ಸ್ತುತಿಃ" ಎಂಬುದಾಗಿ ಶಿಲಾ ಫಲಕದಲ್ಲಿ ಕೆತ್ತಿಸಿ ಎಲ್ಲಾ ಆಶ್ರಮಗಳಲ್ಲಿ ಸ್ಥಾಪಿಸಿದೆವು. ಇದರಲ್ಲಿ ಗುರುಪರಂಪರಾನುಕ್ರಮವಾಗಿ ಮತ್ತು ಕೆಲವು ಶ್ಲೋಕಗಳನ್ನು ಸೇರಿಸಿ ಶಿಲಾಫಲಕದಲ್ಲಿ ಇಡುವದಾಯಿತು.

ಪರಮಪೂಜ್ಯ ಶ್ರೀ ಶ್ರೀ ಶ್ರೀ ಪ್ರಣವಾನಂದ ಸದ್ಗುರು ಮಹಾಸ್ವಾಮಿಯವರು ತಮ್ಮ ಶೇಷ ಪ್ರಾರಬ್ಧವು ಕೇವಲ ನಿವೃತ್ತಿಪರವಾಗಿರುತ್ತಾ ಅಸಂಸಕ್ತಿ, ಪದಾರ್ಥಭಾವನ ಎಂಬ ಐದಾರು ಭೂಮಿಕೆಗಳನ್ನು ಅಧಿರೋಹಿಸಿ ಶ್ರೀ ಶುಭಕೃತುನಾಮ ಸಂ॥ ಜ್ಯೇಷ್ಠ ಬಹುಳ ಏಕಾದಶಿ ತಮ್ಮ ಅವತಾರ ಲೀಲೆಗಳನ್ನು ಮುಗಿಸಿದರು. ಆ ಶ್ರೀಗಳವರ ಅಧಿಷ್ಠಾನ ಮಹಾಸಮಾಧಿ ಇಲ್ಲೇ ಶ್ರೀ ನಿರ್ವಾಣ ಮಠದಲ್ಲೇ ಮೂಲ

ಸ್ಥಾನದಲ್ಲಿದೆ. ಇದರ ಮೇಲೆ ಯಥಾ ಶಾಸ್ತ್ರವಾಗಿ ಶಿವಲಿಂಗ ಪ್ರತಿಷ್ಠೆ, ಶ್ರೀಸ್ವಾಮಿಗಳವರ ಪ್ರತಿಮೆ (ಮೂರ್ತಿ) ಪ್ರತಿಷ್ಠೆ ಮತ್ತು ಶ್ರೀ ಗಣಪತಿ, ಪಾರ್ವತಿ, ನಂದಿ ಧ್ವಜ ಪ್ರತಿಷ್ಠೆಗಳು ವೇದೋಕ್ತವಾಗಿ ನಡೆದು ನಿತ್ಯ ಪೂಜಾದಿಗಳಿಂದ ಸಂಶೋಭಿಸುತ್ತಿದೆ. ಪೂಜ್ಯ ಶ್ರೀ ಪ್ರಣವಾನಂದ ಸದ್ಗುರು ಸ್ವಾಮಿಗಳವರ ಶಿಷ್ಯಪ್ರಮುಖರು ಶ್ರೀ ನಿಜಾನಂದ ಸ್ವಾಮಿ, ಶ್ರೀ ಆತ್ಮಾನಂದ ಸ್ವಾಮಿ, ಶ್ರೀ ಸದಾನಂದ ಸ್ವಾಮಿ, ಶ್ರೀ ಚಿದಾನಂದ ಸ್ವಾಮಿ, ಶ್ರೀ ನಿತ್ಯಾನಂದ ಸ್ವಾಮಿ, ಶ್ರೀ ವಿದ್ಯಾನಂದ ಸ್ವಾಮಿ, ಶ್ರೀ ಭಕ್ತಾನಂದ ಸ್ವಾಮಿ, ಶ್ರೀ ಶಾಂತಾನಂದ ಸ್ವಾಮಿ ಮೊದಲಾದವರು. ಈ ಗುರುಪೀಠಾಶ್ರಮಗಳು ರಾಗುಲವಾಡು, ನಂದ್ಯಾಲ, ಗುಂತಕಲ್ಲು, ಗಂಜಿಗುಂಟೆ, ಬಳ್ಳಾರಿ, ಗುರಿಜಾಲ, ಜೊಹರಾಪುರ, ಕೊತ್ತಪಲ್ಲೆ, ಮುಂಡ್ಲಪಾಡು, ಉರವಕೊಂಡೆ ಮುಂತಾದ ಅನೇಕ ಸ್ಥಳಗಳಲ್ಲಿ ಇವೆ. ಈ ಗುರುಪೀಠದ ವತಿಯಿಂದ 'ಸುಬೋಧಿನಿ' ಯೆಂಬ ಮಾಸಪತ್ರಿಕೆ ಕೆಲವು ಕಾಲ ಶುಭಪ್ರದವಾಗಿ ನಡೆಯಿತು.

## ಶ್ರೀ ಪ್ರಣವಾನಂದ ಸದ್ಗುರು ಸ್ವಾಮಿನಃ

ಪ್ರಣವಾನಂದ ಮೌನೀಂದ್ರಂ ಪ್ರಜ್ಞಾನ ಘನರೂಪಿಣಂ ।
ಬೋಧಯಂತಂ ಪರಾಂ ವಿದ್ಯಾಂ ಅಂತರ್ಮುಖಮಹಂಭಜೇ ॥
ಅನಾದ್ಯವಿದ್ಯಾಮುತ್ಪಾರ್ಯ ಶುದ್ಧ ವಿದ್ಯಾ ಪ್ರದಾಯಿನೇ ।
ನಮಸ್ತೇ ಸ್ವಾತ್ಮರೂಪಾಯ ಪ್ರಣವಾನಂದ ಮೌನಯೇ ॥
ಬ್ರಹ್ಮೀ ಭೂತಂ ಪರಂ ಶಾಂತಂ ಪ್ರಣವಾನಂದ ಸದ್ಗುರುಮ್ ।
ತೇಜೋಮೂರ್ತಿಂ ತೀರ್ಥರೂಪಂ ತಂ ಬೋಧ ಘನಮಾಶ್ರಯೇ ॥
ಸ್ಥಿತಪ್ರಜ್ಞಂ ಸದಾನೌಮಿ ಚರಂತಂ ಬ್ರಹ್ಮಣಿ ಸ್ಥಿತಂ ।
ಪ್ರಣವಾನಂದರೂಪಂ ತಮಾತ್ಮಾನಾತ್ಮ ವಿವೇಕಿನಮ್ ॥

ಇಂಥಾ ಪರಮಪೂಜ್ಯ ಶ್ರೀ ಶ್ರೀ ಶ್ರೀ ಸದ್ಗುರು ಪ್ರಣವಾನಂದ ಸ್ವಾಮಿಯವರ ಕರಕಮಲ ಸಂಜಾತರಾದ ಶ್ರೀ ಶ್ರೀ ಶ್ರೀ ಸದಾನಂದ ಸ್ವಾಮಿಗಳು ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರೆಯಲ್ಲಿ 26 ನೆಯ ಆಚಾರ್ಯರು. ಇವರು ಸದಾಚಾರ ಸಂಪನ್ನರು; ಸಹಜ ಸೌಮ್ಯ ಸ್ವರೂಪಿಗಳು; ಶೈವ ಸಾಹಿತ್ಯಾಕಾಶದಲ್ಲಿ ಚಿದಾಕಾಶ ಸ್ವರೂಪಿಗಳಾಗಿ ಬೆಳಗಿ ಜಗದ್ವಿಖ್ಯಾತರಾದ ಬಸವಾದಿ ಪ್ರಮಥರ ಸದ್ವಂಶಕ್ಕೆ ಸೇರಿದ ಭಕ್ತಸ್ಥಳದ ಸದ್ವಂಶೀಯ ವೀರಶೈವರು; ಶ್ರೀ ವೀರಪ್ಪ ಸ್ವಾಮಿಯೆಂಬ ಪೂರ್ವಾಶ್ರಮಾಭಿದರು; ಅನಂತಪುರ ಜಿಲ್ಲೆ ಗಂಜಿಗುಂಟೆ ಗ್ರಾಮವಾಸಿಗಳು; ಸದ್ಗೃಹಸ್ಥರು; ಶ್ರೀ ಸದ್ಗುರು ಪ್ರಣವಾನಂದಾಶ್ರಮ ಸ್ಥಾಪಕರು. ಇವರ ಚರಿತ್ರೆ ಅಗಾಧವಾದದ್ದು "ಶ್ರೋತ್ರಿಯೋ ಬ್ರಹ್ಮ ನಿಷ್ಠೋಽಯಃ, ಪ್ರಶಾಂತ ಸಮದರ್ಶಿನಃ, ನಿರ್ಮಮೋ ನಿರಹಂಕಾರೋ ನಿರ್ದ್ವಂದ್ವೋ ನಿಷ್ಪರಿಗ್ರಹಃ, ಅನಪೇಕ್ಷಃ, ಶುಚಿಃ, ದಕ್ಷಃ, ಕರುಣಾಮೃತ ಸಾಗರಃ, ಏವಂ ಲಕ್ಷಣ ಸಂಪನ್ನಃ ಸಗುರು ಬ್ರಹ್ಮವಿತ್ತಮಃ" ಎಂಬ ವಾಕ್ಯಾನುಸಾರ

ಶ್ರೀಗಳವರಲ್ಲಿ ಇಂಥಾ ಗುರುಲಕ್ಷಣಗಳು ಇದ್ದವು. ಇವರಲ್ಲಿಯ ಬ್ರಹ್ಮಾನುಭವ ಶಕ್ತಿ ತೆರೆಯ ಮರೆಯಲ್ಲಿರುವ ಸೂತ್ರಧಾರಿಯಂತೆ ಗುಪ್ತವಾಗಿರುತ್ತಾ, ಒಂದೊಂದು ಸಾರಿ ಬಹಿರ್ಗತವಾಗಿ ಬಹಿರ್ಮುಖರಾದ ಶಿಷ್ಯರ ಭಕ್ತರ ಚಿತ್ತವೃತ್ತಿಗಳನ್ನು ಚಿದಾತ್ಮಾಭಿಮುಖರಾಗಿ ಮಾಡುವ ಶಕ್ತಿಪಾತ ದೃಷ್ಟಿಯೋ ಎನ್ನುವಂತಿತ್ತು. ಶ್ರೀಸ್ವಾಮಿಯವರು ಸದಾ ಗುರುಭಕ್ತರಾದ ಜನರಿಗೆ ಭಕ್ತಿ, ಜ್ಞಾನ, ವೈರಾಗ್ಯೋಪೇತವಾದ ಬ್ರಹ್ಮಜ್ಞಾನ ತತ್ತ್ವವನ್ನು ತಿಳಿಸುತ್ತಾ ಮಾಂಡೂಕ್ಯಾದಿ ಉಪನಿಷತ್ತುಗಳು, ಭಗವದ್ಗೀತೆ, ವೇದಾಂತ ಪಂಚದಶಿ, ವಿಚಾರಸಾಗರ, ನೈಷ್ಕರ್ಮ್ಯ ಸಿದ್ಧಿ, ಉಪದೇಶ ಸಾಹಸ್ರಿ, ವಿವೇಕ ಚೂಡಾಮಣಿ, ಶ್ರೀಮನ್ನಿಜಗುಣ ಶಿವಯೋಗಿಗಳ ಷಟ್ಶಾಸ್ತ್ರ ಮುಂತಾದ ವೇದಾಂತ ಪ್ರಕರಣ ಗ್ರಂಥಗಳನ್ನು ಉಪನಿಷದನುಭವ ದೃಷ್ಟಾಂತ್ಯ ವಿವರಿಸಿ ಬೋಧಿಸುತ್ತಾ ಧನ್ಯರನ್ನಾಗಿ ಮಾಡಿದ ನಿಷ್ಠಾಪರರಾದ ಮುನೀಶ್ವರರು.

ಇವರು ಶಿಷ್ಯರಿಗೆ ಬೋಧಿಸುತ್ತಿದ್ದ ಉಕ್ತ ಗ್ರಂಥಗಳ ಸಾರ ಸಂಗ್ರಹವನ್ನು ತಮ್ಮ ಅನುಭವದಲ್ಲಿ ಪಾಕಮಾಡಿ 'ಶ್ರೀ ಪ್ರಣವಾನಂದ ಸದ್ಗುರು ಬೋಧಾಮೃತ'ವೆಂಬ ಗಾನ ಪ್ರಧಾನವಾದ ಗ್ರಂಥವನ್ನು ಸುಲಭ ಭಾಷೆಯಲ್ಲಿ ರಚಿಸಿದರು ಮತ್ತು ಶ್ರೀ ಚಿದಾನಂದಾವಧೂತ ಸ್ವಾಮಿಗಳವರು ಕನ್ನಡ ಭಾಷೆಯಲ್ಲಿ ಬರೆದ "ಜ್ಞಾನ ಸಿಂಧು" ವೆಂಬ ಉತ್ತಮ ವೇದಾಂತ ಪ್ರಕರಣ ಗ್ರಂಥವನ್ನು ಆಂಧ್ರೀಕರಿಸಿದರು. ಈ ಗ್ರಂಥವನ್ನು ಮದ್ರಾಸು ವೆಸ್ಟು ವಾರ್ಡ ಕಂಪೆನಿಯವರು ತಾವು ಮುದ್ರಿಸಿಕೊಳ್ಳಲು ಇಚ್ಛಿಸಲು ಮುದ್ರಣಾಧಿಕಾರವನ್ನು ಅವರಿಗೆ ಕೊಟ್ಟರು.

ಇನ್ನೂ ಅನೇಕ ಮಹಾತ್ಮರ ಶುಭಾಗಮನ ಆಧ್ಯಾತ್ಮಿಕ ತತ್ವ ಪ್ರಬೋಧಗಳು ನಡೆಯಿಸಿದರು. 1934 ಸಂ॥ ಶ್ರೀ ಉಮಾಮಹೇಶ್ವರ ಗುರುಪೀಠ ಶ್ರೀ ಸದ್ಗುರು ಪ್ರಣವಾನಂದಾಶ್ರಮ (ಮಠ)ದ ರಿಜಿಷ್ಟರ್ ಡಾಕ್ಯುಮೆಂಟುಗಳು ಇವೆ. ಪೂಜ್ಯ ಶ್ರೀಗಳವರು ಸಹಜ ನಿಷ್ಠೆಯಿಂದ ನಾಲ್ಕೈದು ಭೂಮಿಕೆಗಳನ್ನು ಅಧಿರೋಹಿಸಿ ತಮ್ಮ ಶಿಷ್ಯರಾದ ಶ್ರೀಶಂಕರಾನಂದಗಿರಿ ಗುರುಸ್ವಾಮಿಗಳವರಿಂದ, ಪ್ರಿಯವಾಗಿ ಕಾಷಾಯಾಂಬರಗಳನ್ನು ಅಂದಿಕೊಂಡು ಶ್ರೀ ವಿಜಯ ಕಾರ್ತಿಕ ಬಹುಳ ಏಕಾದಶಿ ಕ್ರಿ. ಶ. 1–12–1953 ವಿದೇಹ ಕೈವಲ್ಯವನ್ನೊಂದಿದರು. ಪೂಜ್ಯ ಶ್ರೀ ಸದಾನಂದ ಸ್ವಾಮಿಗಳವರ ಅಧಿಷ್ಠಾನವು ಗಂಜಿಗುಂಟೆ ಶ್ರೀ ಮಠದಲ್ಲಿಯೇ ಇದೆ. ಇದರಲ್ಲಿ ಶಾಸ್ತ್ರೋಕ್ತವಾಗಿ ಶಿವಲಿಂಗ ಪ್ರತಿಷ್ಠೆ, ಶ್ರೀಗುರುಮೂರ್ತಿ ಪ್ರತಿಷ್ಠೆ ಮಾಡಲ್ಪಟ್ಟಿದೆ. ಪೂಜಾ ಪಾರಾಯಣ ಶಾಸ್ತ್ರ ಪ್ರವಚನಾದಿಕಾರ್ಯಗಳು ಯಥಾವಿಧಿ ಅನುದಿನ ನಡೆಯುತ್ತಿವೆ.

(ಆಂಧ್ರ ಕೈವಲ್ಯನವನೀತ ಸಾರ ಸಂಗ್ರಹದಿಂದ)

## ಶ್ರೀ ಸದಾನಂದ ಸದ್ಗುರು ಸ್ವಾಮಿನಃ

ಜೀವೇಶ ಭೇದರಹಿತಂ ಚಿದ್ಘನಂ ಶಾಂತ ರೂಪಿಣಂ ।
ಬ್ರಹ್ಮನಿಷ್ಠಂ ಸದಾನಂದಂ ಸದ್ಗುರುಂ ಪ್ರಣಮಾಮ್ಯಹಮ್ ॥
ಅವಿದ್ಯಾ ಯಸ್ಯ ವಾಕ್ಯೈಸ್ಸಾ ವ್ರೀಡಿತಾ ವಿಲಯಂ ಗತಾ ।
ವಿಂದಂತೇ ವಿದ್ಯಯಾ ಪ್ರೀತಿಂ ತಂ ಸದಾನಂದಮಾಶ್ರಯೇ ॥
ಸದಾನಂದಂ ಸದ್ಗುರುಂ ತಂ ಸತ್ಯ ಸಂಧಂಸದಾ ಶುಚಿಮ್ ।
ಶಾಂತಂ ಜಿತೇಂದ್ರಿಯೋದ್ವೇಗಂ ಸ್ವಾತ್ಮರೂಪಂ ನಮಾಮ್ಯಹಮ್ ॥
ಸದಾನಂದ ಗುರುಂ ಶಾಂತಂ ಚಿದಾನಂದ ಘನಂ ಗುರುಮ್ ।
ಬ್ರಹ್ಮವಿದ್ಯಾ ಪಟೀಯಾಂಸಂ ತತ್ತ್ವನಿಷ್ಠಮಹಂಭಜೇ ॥

## ಶ್ರೀ ಶಂಕರಾನಂದಗಿರಿ ಗುರುಸ್ವಾಮಿನಃ

ಶುದ್ಧ ಸ್ಫಟಿಕ ವರ್ಣಾಭಂ ಶಂಕರಾನಂದ ಸದ್ಗುರುಂ ।
ಶ್ರೋತ್ರಿಯಂ ಬ್ರಹ್ಮನಿಷ್ಠಂ ತಂ ಸಚ್ಚಿದಾನಂದಮಾಶ್ರಯೇ ॥
ಶ್ರೀಗುರುಂ ಶಿಷ್ಯಲೋಕಾನಾಂ ಭಿಷಜಂ ರಾಗರೋಗಿಣಾಂ ।
ಶ್ರೀನಿಧಿಂ ಬ್ರಹ್ಮವಿದ್ಯಾಯಾ ಶಂಕರಾನಂದ ಸದ್ಗುರುಂ ॥
ಅಜ್ಞಾನಾಂ ಜ್ಞಾಹ್ನವೀರೂಪಂ ವಿದ್ಯಾವಂತಂ ವಿವೇಕಿನಾಂ ।
ಸರ್ವೇಷಾಂ ಜ್ಞಾನದಾತಾರಂ ಶಂಕರಾನಂದಮಾಶ್ರಯೇ ॥
ಉಮಾಮಹೇಶ ಪೀಠಸ್ಥಂ ಆತ್ಮನಿಷ್ಠಾರತಂ ಸದಾ ।
ಶ್ರೀ ಶಂಕರಾನಂದಗಿರಿಂ ಸದ್ಗುರುಂ ತಮಹಂಭಜೇ ॥
ದುರ್ವಾದಿ ದುಷ್ಟಮಾತಂಗ ವಿದಾರಣ ಪಟೀಯಸೇ ।
ಶಂಕರಾನಂದಗಿರಯೇ ಗುರುವೇ ತೇ ನಮೋ ನಮಃ ॥

ಇತಿ

ಶ್ರೀಗುರುಪಾದ ರೇಣು–ಚಂದ್ರಶೇಖರಾನಂದಗಿರಿ ಸ್ವಾಮಿ.

## ಶಾಸನ ಸ್ತುತಿಃ

ಶ್ರೀಮತ್ಕೈಲಾಸ ಸಂಸ್ಥಾ ಸ್ಥಿರತರ ಪರಮಾನಂದ ಸಾಮ್ರಾಜ್ಯ ಪ್ರೋದ್ಯನ್ನಂದಿಸ್ಕಂದ ಪ್ರಮುಖ ಪ್ರಮಥಾಚಾರ್ಯ ವಂಶಕ್ರಮಾ ತ್ಸದ್ಭಕ್ತಾನೀಕಾವನೇಚ್ಛಾ ಪ್ರವಿಮಲತರ ಬೋಧ ಸ್ವಸ್ವ ವಿಜ್ಞಾನ ಸಂಪದ್ದೀವ್ಯತ್ಪೀಠಮುಮಾಮಹೇಶ್ವರ ಯುತಂ ರಾರಾಜತೇ ಭಾರತೇ॥ ಸದ್ಗುರು ಪರಂಪರಾಯಾಂ ವೇಂಕಟರಂಗಾಭಿಧಾನ ದೇಶಿಕವರಸ್ಯ ಸತ್ಕೃಪಯಾ ಪರಿಪೂರ್ಣಃ ಪ್ರಣವಾನಂದಾಖ್ಯ ಸಂಯಮೀ ತಿಲಕಃ ತತ್ಕರಾಂಭೋಜ ಸಂಜಾತೋ ಯೋಗಿವರ್ಯಃ ಕೃಪಾಮತಿಃ ಸದಾನಂದ ಯತೀಂದ್ರಶ್ಚ ಬ್ರಹ್ಮಣ್ಯಾಸಕ್ತ ಮಾನಸಃ ॥ ಸದಾನಂದ ಕರಾಂಭೋಜ ಸಂಜಾತಸ್ಸರ್ವ ಶಾಸ್ತ್ರವಿತ್ ಬ್ರಹ್ಮನಿಷ್ಠಾಗರಿಷ್ಠಶ್ಚ ವಿದ್ವಜ್ಜನಮುದಾವಹಃ ॥ ಶಂಕರಾನಂದಗಿರ್ಯಾಖ್ಯ ಮೌನೀಂದ್ರಸ್ಸದ್ಗುರೂತ್ತಮಃ ವಿರಾಜತೇಽದ್ಯ ಪೀಠೇಽಸ್ಮಿನ್ಭಕ್ತಾನುಗ್ರಹಕಾಂಕ್ಷಯಾ ॥

ಓಂ ನಮೋ ಭಗವತೆ ಶ್ರೀಮದುಮಾಮಹೇಶ್ವರಾಯ



ಶ್ರೀಮತ್‌ಪರಮಹಂಸ ಪರಿವ್ರಾಜಕಾಚಾರ್ಯ
ಶ್ರೀಮತ್‌ಪೂಜ್ಯಪಾದ

## ಶ್ರೀ ಶ್ರೀ ಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರು

ಚರಿತ್ರ ನಾಯಕರು



ಶ್ರೀ ಕ್ಷೇತ್ರ ಶ್ರೀ ಉಮಾಮಹೇಶ್ವರಾಶ್ರಮ ಗುರುಪೀಠ
ಲತ್ತವಾರಮ್ (ರತ್ನಗಿರಿ)




ಶ್ರೀ ಕ್ಷೇತ್ರ ಶ್ರೀ ಉಮಾಮಹೇಶ್ವರಾಶ್ರಮ ಗುರುಪೀಠ

ಶಾಸನಸ್ತುತಿ



ಪೂಜ್ಯಪಾದ
ಶ್ರೀ ಶ್ರೀ ಶ್ರೀ ಸದ್ಗುರು ಪ್ರಣವಾನಂದಸ್ವಾಮಿಗಳು
ಶ್ರೀಗಳ ಪರಮಃಗುರುಗಳು



ಪೂಜ್ಯಪಾದ
ಶ್ರೀ ಶ್ರೀ ಶ್ರೀ ಸದ್ಗುರು ಸದಾನಂದಸ್ವಾಮಿಗಳು
ಶ್ರೀಗಳ ಗುರುಗಳು



ಬಾಲ್ಯದಲ್ಲಿ ಶ್ರೀಗಳು



ಶ್ರೀಗಳ ಜನ್ಮ ಮಂದಿರ




ಕಾಶೀ ವಿಶ್ವಾರಾಧ್ಯ ಗುರುಕುಲ ಮಂಡಳಿಯ ವಿದ್ವತ್ಸಂಗದವರೊಂದಿಗೆ ಶ್ರೀ ಜಗದ್ಗುರು ಸನ್ನಿಧಿಯಲ್ಲಿ ಶ್ರೀಗಳವರು
(ಕುಳಿತು ಕೊಂಡವರಲ್ಲಿ ಬಲಗಡೆಯಿಂದ ಮೂರನೆಯವರು)



ಕಾಶೀ ಕ್ಷೇತ್ರದಲ್ಲಿ ಗ್ರಂಥಾಧ್ಯಯನ ಮಾಡುತ್ತಿರುವ ಶ್ರೀಗಳು



ಸಮಾಧಿ ನಿಷ್ಠೆಯಲ್ಲಿ ಶ್ರೀಗಳು



ಶ್ರೀ ಗುರು ಮಹಾಸಮಾಧಿಯ (ಅಧಿಷ್ಠಾನ) ಸನ್ನಿಧಿಯಲ್ಲಿ ಶ್ರೀಗಳು



ಶ್ರೀ ಗುರುಪೀಠ ಸಮಾರೋಹಣ ಸುಸಂಧರ್ಭದಲ್ಲಿ ಶ್ರೀಗಳು



ಶ್ರೀ ಗುರು ಪುಣ್ಯಾರಾಧನ ಸುಸಮಯದಲ್ಲಿ ಆಗಮಿಸಿದ ಮಹಾತ್ಮರೊಂದಿಗೆ ಶ್ರೀಗಳವರು ಗಂಜಿಗಂಟೆ ಶ್ರೀ ಮಠ



ಅಗರ ಶ್ರೀನಿವಾಸಾಶ್ರಮದಲ್ಲಿ ಜರುಗಿದ ಸಪ್ತಋಷಿಗಳ ಪೂಜೆಯಲ್ಲಿ ಋಷಿಗಳಾಗಿ ಶ್ರೀಗಳು



ಶ್ರೀಗಳವರು ಆಶ್ರಮ ಬ್ರಹ್ಮಚಾರಿ ವೃಂದದೊಂದಿಗೆ -
18ನೇಯ ಶ್ರೀ ಚಾತುರ್ಮಾಸ ಮಹಾವ್ರತ, ಗಂಜಿಗುಂಟೆ ಶ್ರೀಮಠ.



ಶ್ರೀ ಸದ್ಗುರು ಪ್ರಣವಾನಂದಾಶ್ರಮ,
ಗಂಜಿಗುಂಟೆ. (ಶ್ರೀಮಠ)



ಪೂಜ್ಯ ಶ್ರೀ ಗುರು ದೇವರು
ಶ್ರೀ. ಗುರುದೇವಾಶ್ರಮ, ಗೂಳಪಾಳ್ಯ.



ಶ್ರೀ ಉಮಾಮಹೇಶ್ವರರು ಶ್ರೀ ಉಮಾಮಹೇಶ್ವರ ಗುರುಪೀತ ಶ್ರೀ ಗುರುಗಳು
ಲತ್ತುವರ (ರತ್ನಗಿರಿ)



23ನೇ ಚಾತುರ್ಮಾಸ್ಯ ಮಹಾವ್ರತ ಮಹೋತ್ಸವದಲ್ಲಿ ಶ್ರೀಗಳವರು. ಗುತ್ತಿ ಪಟ್ಟಣ



ಪೂಜ್ಯ ಗುರುದೇವರ ಶ್ರೀ ಚಾತುರ್ಮಾಸ್ಯ ಮಹಾವ್ರತ ಕಾರ್ಯನಿರ್ವಾಹಕ ಭಕ್ತ ಮಂಡಳಿ, ಪಾರ್ವತಿ ನಿಲಯ — ಅನಂತಪುರ.



ರಜತ ಮಹೋತ್ಸವದಲ್ಲಿ ಪೂಜ್ಯ ಶ್ರೀಗಳವರು
25ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ
ಶ್ರೀ ಕ್ಷೇತ್ರ ಉಮಾ ಮಹೇಶ್ವರಾಶ್ರಮ, ಲತ್ತವಾರ (ರತ್ನಗಿರಿ)



ಕೈಲಾಸ ಶಿವ ಶ್ರೀ ಚಂದ್ರಮೌಳೀಶ್ವರ ಸನ್ನಿಧಿ, ಪೂಜ್ಯ ಶ್ರೀಗಳವರು.
ಶ್ರೀ ಉಮಾಮಹೇಶ್ವರಾಶ್ರಮ, ನಂದ್ಯಾಲ.



ಶ್ರೀ ಉಮಾಮಹೇಶ್ವರಾಶ್ರಮಂ, ನಂದ್ಯಾಲ.



ಶ್ರೀ ಕೈಲಾಸಶಿವ ಶ್ರೀ ಚಂದ್ರಮೌಳೀಶ್ವರರಿಗೆ ಲಕ್ಷ ಬಿಲ್ವಾರ್ಚನೆ
ಶ್ರೀ ಉಮಾ ಮಹೇಶ್ವರಾಶ್ರಮ, ಹಾಲರವಿ.



ಶ್ರೀ ಕೈಲಾಸ ಶಿವ ಶ್ರೀ ಚಂದ್ರಮೌಳೀಶ್ವರಾದಿ ಪ್ರತಿಷ್ಠಾ
ಮಹೋತ್ಸವಕ್ಕೆ ದಯಮಾಡಿಸಿದ ಮುಹೂರ್ತರೊಂದಿಗೆ ಶ್ರೀಗಳವರು
ಶ್ರೀ ಉಮಾ ಮಹೇಶ್ವರಾಶ್ರಮ, ಹಾಲರವಿ.



ಶ್ರೀ ಗೀತಾಚಾರ್ಯ ಭಗವನ್ಮೂರ್ತಿ
ಶ್ರೀ ಚಂದ್ರಮೌಳೀಶ್ವರರ ಸನ್ನಿಧಿ ಶ್ರೀಗಳವರು, ಗುಂತಕಲ್ಲು.



ಶ್ರೀ ಉಮಾ ಮಹೇಶ್ವರಾಶ್ರಮ — ಗುಂತಕಲ್ಲು



ಶ್ರೀ ಉಮಾಮಹೇಶ್ವರಾಶ್ರಮ ಪ್ರತಿಷ್ಠಾ ಕಾರ್ಯಕ್ರಮಕ್ಕೆ ಆಗಮಿಸಿದ
ಮಹಾತ್ಮರೊಂದಿಗೆ ಪ್ರಸಾದ ಸ್ವೀಕರಿಸುತ್ತಿರುವ ಶ್ರೀಗಳು — ಗುಂತಕಲ್ಲು.



ಶ್ರೀ ಚಂದ್ರಮೌಳೀಶ್ವರ ಪೂಜೆಯಲ್ಲಿ ಶ್ರೀಗಳವರು, ದಾಚೆಪಲ್ಲಿ ನರಸಿಂಹರಾವ್ ನವರ ಭವನ — ಹೈದ್ರಾಬಾದ್.



ಶ್ರೀ ಸೀತಾರಾಮ ಲಕ್ಷ್ಮಣಾಂಜನೇಯಸ್ವಾಮಿ,
ಶ್ರೀ ಚಂದ್ರಮೌಳೀಶ್ವರರು ಲಕ್ಷ ಬಿಲ್ವಾರ್ಚನೆ
ಶ್ರೀ ಉಮಾ ಮಹೇಶ್ವರಾಶ್ರಮ, ವೇಣಿವೀರಾಪುರ. ಕರ್ನಾಟಕ




ಹೈದ್ರಾಬಾದ್ ಬಹಿರಂಗ ಸಭೆಯಲ್ಲಿ ಶಾಸ್ತ್ರ ಪ್ರವಚನ ಜರುಗಿಸುತ್ತಿರುವ ಶ್ರೀಗಳವರು



ಶ್ರೀ ಜಗದ್ಗುರು ಶಂಕರಾಚಾರ್ಯರು, ಶಾರದ, ಚಂದ್ರಮೌಳೀಶ್ವರ, ರತ್ನಗರ್ಭ ಗಣಪತಿ ಸನ್ನಿಧಿ ಶ್ರೀಗಳವರು. ಶ್ರೀಕ್ಷೇತ್ರ ಉಮಾಮಹೇಶ್ವರಾಶ್ರಮ, ಲತ್ತವರಮು (ರತ್ನಗಿರಿ)



ಶ್ರೀ ಚಂದ್ರಮೌಳೀಶ್ವರ ಪೂಜೆಯಲ್ಲಿ ಶ್ರೀಗಳು



60 ವರ್ಷಗಳು ತುಂಬಿದ ಶ್ರೀಗಳು

ఓం నమో భగవతే శ్రీ మదుమామహేశ్వరాయ
శ్రీ ఉమామహేశ్వర గురుపీఠాచార్యులు
శ్రీమత్పూజ్యపాద శ్రీశ్రీశ్రీ శంకరానందగిరి గురుస్వాములవారు



శంఖ, పద్మ, అంకుశ, చిహ్నములచే నొప్పారు
శ్రీవారి దివ్యపాద పద్మములు.

ಶ್ರೀ ಗುರುದೇವರ ಪಾದಪದ್ಮಗಳು

ಓಂ ನಮೋ ಭಗವತೇ ಶ್ರೀಮದುಮಾಮಹೇಶ್ವರಾಯ
ಶಿವಾಯ ಗುರವೇ ನಮಃ

# ಶ್ರೀ ಶಂಕರಾನಂದ ಗಿರಿ ಗುರುವರ ಚರಿತ್ರೆ

## ಜನನ

ಅವತಾರ ಮಹಾಪುರುಷರು ಅವತರಿಸಿದ ಪವಿತ್ರ ಕ್ಷೇತ್ರವು ನಮ್ಮ ಭಾರತ ಭೂಮಿ. ಅಷ್ಟೇಕೆ ಭಗವಾನ್ ಶ್ರೀ ಕೃಷ್ಣ ಪರಮಾತ್ಮನು ತನ್ನ ಬಾಲಲೀಲೆಗಳಲ್ಲಿ ಭಾರತ ಭೂಮಿಯ ಮಣ್ಣನ್ನು ಮಹಾಪ್ರಸಾದವೆಂಬಂತೆ ಭುಜಿಸಿದ ಪವಿತ್ರವಾದ ಭೂಮಿ! ಆದ್ದರಿಂದ ಇಂಥಹ ಪಾವನ ಭಾರತಾವನಿಯಲ್ಲಿ ಎಷ್ಟೋ ಜನ ಮಹಾ ಪುರುಷರು ಅವತರಿಸಿದರು. ಅಂಥವರಲ್ಲಿ ನಮ್ಮ ಕಥಾನಾಯಕರಾದ ಮಹನೀಯರು ಪೂಜ್ಯ **ಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರು** ಒಬ್ಬರು.

ಇವರು ಆಂಧ್ರ ರಾಜ್ಯದಲ್ಲಿ ಅನಂತಪುರ ಜಿಲ್ಲೆಯ ಲತ್ತವರ (ರತ್ನಗಿರಿ) ಎಂಬ ಗ್ರಾಮದಲ್ಲಿ ಪಂಚ ಮಹಾಪೀಠಗಳಲ್ಲಿ ಒಂದಾದ ಕಾಶೀ ಜ್ಞಾನಸಿಂಹಾಸನ ಪೀಠದ ಶ್ರೀಮಜ್ಜಗದ್ಗುರು ವಿಶ್ವಾರಾಧ್ಯ ಗುರು ಪರಂಪರೆಗೆ ಸೇರಿದ ಸ್ಕಂದ ಗೋತ್ರ ಪಂಚ ವಣ್ಣಿಗೆ (ಪಂಚವರ್ಣ) ಸೂತ್ರಾನುವರ್ತಿಗಳಾದ ವೀರಶೈವ ಮಾಹೇಶ್ವರ ಸದಾಚಾರ ಸಂಪದ್ವಿಶಿಷ್ಟರಾದ ವೇದಮೂರ್ತಿಗಳು **ಶ್ರೀ ಶಿವಯ್ಯಸ್ವಾಮಿ** ಮತ್ತು **ಶ್ರೀಮತಿ ಗಂಗಮಾಂಜಿ** ಎಂಬ ದಂಪತಿಗಳಿಗೆ ಸ್ವಸ್ತಿಶ್ರೀ ರೌದ್ರಿನಾಮ ಸಂವತ್ಸರ, ಉತ್ತರಾಯಣ ಗ್ರೀಷ್ಮ ಋತು ಜ್ಯೇಷ್ಠ ಬಹುಳ ತ್ರಯೋದಶಿ ಸೋಮವಾರ ಸೂರ್ಯೋದಯಾತ್ಪೂರ್ವ 52–30 ಘಳಿಗೆಗಳು ಅಥವಾ ಬೆಳಗಿನ ಜಾವ ಬ್ರಹ್ಮಮುಹೂರ್ತ 3–37 ಘಂಟೆಗಳಿಗೆ ಶುಭ ಮೇಷ ಲಗ್ನದಲ್ಲಿ

(ತ 46–0, ಘ 3–28, ಕೃ 5-6-28, ಸುಕರ್ಮ 29-48, ಗರಜಿ 18-43 ಅಹಸ್ಸು 31–21) ಚಂದ್ರಹೋರದಲ್ಲಿ ಗುರು ಸೂಕ್ಷ್ಮ ಹೋರ ದುನುರ್ಗುರು ನವಾಂಶದಲ್ಲಿ 14–6–1920ನೇ ದಿನಾಂಕ ಪುತ್ರರಾಗಿ ಇವರು ಜನಿಸಿದರು. ತಂದೆ–ತಾಯಿಗಳು ಈತನಿಗೆ **"ಚನ್ನಬಸವಸ್ವಾಮಿ"** ಯೆಂಬ ಶುಭನಾಮಕರಣವನ್ನು ಮಾಡಿದರು.

## ಜನನ ಕುಂಡಲಿ

| | | | | | | | | | | | |
|---|---|---|---|---|---|---|---|---|---|---|---|
| | ಕೇ / ಲ | ಚ ಶು | ರ ಬು ಕು | ಚ | ಬು ರಾ | | | ಕೇ | ಚ / ಲ | | ಬು ವ |
| ಇ | ರಾಶಿ ಕುಂಡಲಿ | | ಗು ವ | | ನವಾಂಶ ಕುಂಡಲಿ | | | | ಭಾವ ಕುಂಡಲಿ | | ಗು ಶ |
| | | | ಶ | ಗು | | | ಶು ಶ | ಇ | | | |
| | | ರಾ | ಕು | ಲ | | ರ ಕೇ | ಕು | | | | ಕು ರಾ |

ಜನನ ದಿನಾಂಕ ಕಾಲ : 14/15–6–1920. ೩–37 A. M. I. S. T. ಲತ್ತವರ 3 ಗ|| 17 ನಿ||

ನಕ್ಷತ್ರ ಕಾಲ : 20.48.35. Long: 77/30″ E LAT. 15/8″ N

ಆಯನಾಂಶ: 22′.38″ ಶ್ರೀ ಚನ್ನಬಸವಸ್ವಾಮಿ ಮುಂದೆ ಶ್ರೀ ಉಮಾಮಹೇಶ್ವರ ಗುರುಪೀಠಾಚಾರ್ಯರು

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾಗಿರುವ ಶ್ರೀಮತ್ಪೂಜ್ಯ ಪಾದ ಶ್ರೀ ಶ್ರೀ ಶ್ರೀ ಶಂಕರಾನಂದ ಗಿರಿ ಗುರುವರ ಸ್ವಾಮಿಗಳವರ ದಿವ್ಯ ಜಾತಕವನ್ನು ಪರಿಶೀಲಿಸಿದಾಗ ಅದರಲ್ಲಿ ಅಂತರ್ಗತವಾಗಿದ್ದ ವೆಸಿ, ವಾಸಿ, ಉಭಯಾಚರಿ, ಹಂಸ, ಬುಧಾದಿತ್ಯ, ಲಕ್ಷ್ಮಿ, ಪಾಗ, ಸದಾ ಸಂಚಾರ, ಅಮರನಾಥ, ಸತ್ಕಥಾ ಶ್ರವಣ, ನಿಷ್ಕಪಟ, ಬುದ್ಧಿಚಾತುರ್ಯ, ದಾತೃತ್ವ ಇತ್ಯಾದಿ ಅನೇಕ ಯೋಗಗಳು ಬಲೀಯವಾಗಿಯೂ ಪ್ರಸ್ಫುಟವಾಗಿಯೂ ಸಂಪೂರ್ಣವಾಗಿ ಯೋಗಫಲವನ್ನು ಈ ಪುಣ್ಯ ಜಾತಕನಿಗೆ ಸಿದ್ಧಿಯನ್ನುಂಟುಮಾಡುವುವು.

ನಮ್ಮ ಪುಣ್ಯ ಚರಿತ್ರ ನಾಯಕರು ಮೇಷ ಲಗ್ನದಲ್ಲಿ ಜನ್ಮಿಸಿ ತಲ್ಲಗ್ನಾಧಿಪತಿ ಕುಜನು ಲಗ್ನಾತ್ ಷಷ್ಠಮದಲ್ಲಿ ಇರುತ್ತಿರುವುದರಿಂದಲೂ, ಲಗ್ನಕ್ಕೆ ಯಾವ ಇತರ ಶುಭ ಗ್ರಹ ದೃಷ್ಟಿಯೂ ಇಲ್ಲದಿರುವುದರಿಂದಲೂ. ಲಗ್ನಾಧಿಪತಿ ಕುಜನು ಸ್ವಂತ ನಕ್ಷತ್ರ ಚಿತ್ತದಲ್ಲಿದ್ದು ಲಗ್ನವನ್ನು ವೀಕ್ಷಿಸುತ್ತಿರುವುದರಿಂದ, ಈ ಜಾತಕನು ಜನ್ಮಿಸಿದ ಲಗಾಯಿತು ಬಲಹೀನನಾಗಿಯೂ ಅನಾರೋಗ್ಯದಿಂದಲೂ 18 ವರ್ಷಗಳವರೆಗೂ ಇದ್ದು ಇರಬಹುದು. ಹಂಸಯೋಗ ಪ್ರಭಾವಿತನಾದ್ದರಿಂದಲೂ ಮತ್ತು ಲಗ್ನದಲ್ಲಿ ಮೋಕ್ಷ ಕಾರಕನಾದ ಕೇತುವು ಇರುತ್ತಿರುವುದರಿಂದಲೂ, ಈ ಜಾತಕನು ಬ್ರಹ್ಮವಿದ್ಯಾಚಾರ

ವಿಚಾರ ಪ್ರಚಾರ ಸಂಪನ್ನನಾಗಿ ಪೂಜ್ಯನಾಗಿ ಮೋಕ್ಷರೂಪಿಯಾಗಿ ಬೆಳಗುವನು. ಇದಕ್ಕೆ ಪ್ರಮಾಣವಾಗಿ ಜ್ಯೋತಿಶ್ಯಾಸ್ತ್ರ ಪ್ರಪಂಚಕ್ಕೆ ತಿಳಿದ ಉತ್ತಮ ಪಂಚ ಮಹಾ ಪುರುಷ ಯೋಗಗಳೆಂದು ಪ್ರಸಿದ್ಧಿಯನ್ನು ಪಡೆದ ಹಂಸ, ಮಾಲವ್ಯ, ಸಾಸ, ಋಚಕ, ಭದ್ರ ಯೋಗಗಳಲ್ಲಿ ಪ್ರಪ್ರಥಮವಾಗಿ ಹೇಳಲ್ಪಡುವ ಹಂಸ ಯೋಗವು ಅತ್ಯಂತ ಉತ್ಕೃಷ್ಟವಾಗಿ, ಪೂರ್ಣವಾಗಿ ಈ ಜಾತಕ ಚಕ್ರದಲ್ಲಿ ತೋರುತ್ತಿದೆ. ಇವರಿಗೆ ಅನೇಕ ಧನಯೋಗಗಳು, ರಾಜಯೋಗಗಳು, ವಿದ್ಯಾಯೋಗಗಳು ಇದ್ದರೂ ಗ್ರಂಥ ವಿಸ್ತೃತ ವಾಗುವುದೆಂದು ಅವುಗಳನ್ನು ಬಿಟ್ಟು, ಅತಿ ಪ್ರಧಾನವಾದ ಕೇವಲ ಹಂಸಯೋಗವನ್ನು ಮಾತ್ರ ತಿಳಿಸುತ್ತಿದ್ದೇನೆ.

**ಹಂಸಯೋಗ :** ಬೃಹಸ್ಪತಿ ಸ್ವಕ್ಷೇತ್ರದಲ್ಲಿಯಾಗಲಿ ಅಥವಾ ಉಚ್ಚಕ್ಷೇತ್ರದಲ್ಲಿ ಯಾಗಲಿ ಕೇಂದ್ರ ಸ್ಥಿತಿಯನ್ನು ಹೊಂದಿದಾಗ ಹಂಸಯೋಗ ಜಾತಕನೆಂಬುದಾಗಿ ಕರೆಯ ಲ್ಪಡುತ್ತಾನೆ. ಪ್ರತ್ಯಕ್ಷ ಪ್ರಮಾಣಗಳಿಂದ ನಿರೂಪಿಸಿ ನೋಡುವುದಕ್ಕೂ ಜಾತಕನ ಪಾದಗಳಲ್ಲಿ ಶಂಖ, ಪದ್ಮ, ಮತ್ಸ್ಯ, ಅಂಕುಶ ಚಿಹ್ನೆಗಳಲ್ಲಿ ಯಾವದಾದರೊಂದಾಗಲಿ ಇರುತ್ತವೆ. "ಈ ನಮ್ಮ ಚರಿತ್ರನಾಯಕರಾದ ಸ್ವಾಮಿಯವರ ದಿವ್ಯಪಾದಗಳಲ್ಲಿ ಶಂಖ, ಪದ್ಮ, ಅಂಕುಶ ಚಿಹ್ನೆಗಳು ಪ್ರತ್ಯಕ್ಷವಾಗಿ ಕಾಣುತ್ತವೆ." ಹಂಸಯೋಗ ಜಾತಕರು ಶ್ರೀರಾಮ, ಕಪಿಲ ಮಹರ್ಷಿ, ಶ್ರೀಕೃಷ್ಣ, ಸೀಜರ್, ಜೀಸಸ್ ಕ್ರಿಸ್ತ, ಸ್ವಾಮಿ ವಿದ್ಯಾರಣ್ಯರು, ಶ್ರೀ ಅರವಿಂದರು, ಆರನೆಯ ಜಾರ್ಜ್ ಪ್ರಭುವು ಮತ್ತು ಈ ನಮ್ಮ ಪುಣ್ಯ ಚರಿತ್ರ ನಾಯಕರು ಶ್ರೀ ಶ್ರೀ ಶ್ರೀ ಶಂಕರಾಸಂದಗಿರಿ ಗುರುಸ್ವಾಮಿ ಯವರನ್ನು ಹೇಳಬಹುದು. ಹಂಸಯೋಗ ಜಾತಕರು ಸಾಂಖ್ಯ ಶಾಸ್ತ್ರ ಜ್ಞಾನ ದಿಂದಲೂ, ಅಪರೋಕ್ಷ ಜ್ಞಾನಾನುಭವದಿಂದಲೂ ಕರ್ಮ ಬಂಧನಗಳನ್ನು ಭೇದಿಸು ವರು. ಅಪಾರವಾದ ಪ್ರೇಮ ದಯಾರ್ದ್ರ ಹೃದಯರೂ, ಧರ್ಮಪ್ರತಿಸ್ಥಾಪಕರೂ, ಸತ್ಯವಂತರೂ ವಿಶ್ವಮಾನವ ಶಾಂತಿ ಸೌಭಾಗ್ಯಕ್ಕೆ ತಮ್ಮ ಜೀವಿತವನ್ನು ಅಂಕಿತ ಮಾಡುವರು. ಪ್ರಧಾನವಾಗಿ ಈ ಜಾತಕರು ಅಲೆಗಳಿಲ್ಲದ ಅಂಬುಧಿಯಂತೆ ಪ್ರಸನ್ನ ಗಂಭೀರವಾದ ಮನಸ್ಸುಳ್ಳವರಾಗಿ ಜ್ಞಾನಪ್ರಭೋಧೆಯನ್ನು ಮಾಡುತ್ತಾರೆ.

## ಬಾಲ್ಯವು – ವಿದ್ಯಾಭ್ಯಾಸ

ಮಾತಾ ಪಿತೃರು ಪುತ್ರ ಸಂತಾನಾರ್ಥವಾಗಿ ಭಕ್ತಿಯಿಂದ ಕೇದಾರ ಗೌರೀ ವ್ರತ ವನ್ನಾಚರಿಸಲು, ಆ ತಪಃ ಫಲವಾಗಿ ಏಕೈಕ ಪುತ್ರನಾಗಿ ಉದಯಿಸಿದ ಈ ಸ್ವಾಮಿಗಳು ಹೆತ್ತ ತಾಯಿ-ತಂದೆಗಳಿಗೆ ಅಮಿತಾನಂದವನ್ನು ಉಂಟು ಮಾಡುತ್ತಾ, ದಿನ ದಿನಾಭಿ ವೃದ್ಧಿಯನ್ನು ಹೊಂದಿ ವಿದ್ಯಾಭ್ಯಾಸಕ್ಕೆ ತಕ್ಕ ವಯಸ್ಸುಳ್ಳವರಾಗಿ ಸ್ವಗ್ರಾಮದಲ್ಲಿಯೇ 5ನೆಯ ತರಗತಿಯವರೆಗೆ ತೆಲುಗು ವಿದ್ಯೆಯನ್ನು ಕಲಿತರು. ಅನಂತರ ಅಲ್ಲಿಗೆ

ಸಮೀಪದಲ್ಲಿರುವ ಉರವಕೊಂಡೆ "ಕರಿಬಸವಸ್ವಾಮಿ ಬೋರ್ಡ್ ಹೈಸ್ಕೂಲ್" ನಲ್ಲಿ ವಿದ್ಯಾರ್ಥಿಯಾಗಿ ಸೇರಿದರು.

ಇವರಿಗೆ ಬಾಲ್ಯದಿಂದಲೂ ಭಗವದ್ಭಕ್ತಿ ಅತ್ಯಧಿಕ. ಪ್ರತಿದಿನವೂ ವೇದೋಕ್ತ ವಿಧಿಗಳಿಂದ ಶಿವಪೂಜೆಯನ್ನು ಎರಡು ಮೂರು ಘಂಟೆಗಳು ಮಾಡುತ್ತಾ ತನ್ಮಯರಾಗಿ ರುತ್ತಿದ್ದರು. ಇವರಿಗೆ ವಿಷ್ಣು ವಿಗ್ರಹವೆಂದರೆ ಅತ್ಯಂತ ಪ್ರೀತಿಯಾಗುತ್ತಿತ್ತು. ಆದ ಕಾರಣ ಕೈಯಲ್ಲಿ ವಿಗ್ರಹವನ್ನು ಹಿಡಿದುಕೊಂಡು ಆಡಿಕೊಳ್ಳುತ್ತಾ ಏನೇನೋ ಹಾಡು ಗಳನ್ನು ಪದ್ಯಗಳನ್ನು ಹೇಳುತ್ತಿದ್ದರು. ಈ ಸ್ಥಿತಿ ಇವರ ಭಾವಿ ಜೀವಿತದಲ್ಲುಂಟಾಗುವ ಶಿವಕೇಶವಾಭೇಧ ರೂಪವಾದ ಅದ್ವೈತ ದರ್ಶನಕ್ಕೆ ಮಾರ್ಗದರ್ಶಕವೇನೋ ಎಂಬಂತೆ ಕಾಣುತ್ತಿತ್ತು!

ಶ್ರೀಗಳವರ ಬಾಲ್ಯ ಲೀಲೆಗಳು ಅದ್ಭುತವಾದವುಗಳು. 12-13 ವಯಸ್ಸಿನಲ್ಲೇ ಇವರಿಗೆ "ನಾನು ಸರ್ವ ಜಗತ್ಪತಿಯಾದ ಪರಮಾತ್ಮನನ್ನು ಕಣ್ಣಾರೆ ಕಾಣಬೇಕು" ಅನ್ನುವ ತೀವ್ರ ಇಚ್ಛೆಯುಂಟಾಯಿತು. ಆದ್ದರಿಂದ ಒಂದು ದಿನ "ನಾನು ದೇವರನ್ನು ನೋಡುವುದಕ್ಕಾಗಿ ಅಡವಿಗೆ ಹೋಗಿದ್ದೇನೆ. ನನ್ನನ್ನು ಕುರಿತು ನೀವು ಯಾರು ಚಿಂತಿಸಬಾರದು" ಹೀಗೆಂದು ಒಂದು ಕಾಗದದ ಮೇಲೆ ಬರೆದು ಮನೆಯಲ್ಲಿ ತಮ್ಮ ಪುಸ್ತಕಗಳ ಪೆಟ್ಟಿಗೆಯ ಮೇಲಿಟ್ಟು, ಮಿತ್ರನಾದ B. ಆಂಜನೇಯ ಎಂಬ ಬಾಲಕ ನೊಡನೆ ಅರ್ಧರಾತ್ರಿ ಮನೆಯನ್ನು ಬಿಟ್ಟು ಅಡವಿಗೆ ಹೊರಟರು; ಪಿನಾಕಿನೀ (ಪೆನ್ನಾ) ನದೀ ತೀರದ ಪೆನ್ನ ಹೋಬಳಿದ ಕಾಡಡವಿಯಲ್ಲಿ ಪ್ರವೇಶಿಸಿದರು.

ಹೀಗಾದ ಮೇಲೆ ಮರುದಿನ ಮನೆಯಲ್ಲಿ ಮಗನು ಕಾಣಿಸಲಿಲ್ಲ. ಪೆಟ್ಟಿಗೆಯ ಮೇಲಿದ್ದ ಕಾಗದವನ್ನು ಕಂಡು ದುಃಖಾಕ್ರಾಂತರಾದರು. ಈ ಪ್ರಕಾರ ಅಡವಿಗೆ ಹೊರಟ ಈ ಇಬ್ಬರು ಬಾಲಕರು ತಮ್ಮ ತಮ್ಮ ತಾಯಿ ತಂದೆಯವರಿಗೆ ಏಕೈಕ ಪುತ್ರರೇ, ಮತ್ತಿನ್ನು ಯಾರೂ ಇಲ್ಲ. ಇವರು ಹೊರಟು ಹೋದುದರಿಂದ ಆ ತಾಯಿ ತಂದೆಯವರಿಗೆ ಮತ್ತು ಮನೆಯಲ್ಲಿ ಎಲ್ಲರಿಗೂ ಹೇಳಲಸಾಧ್ಯವಾದ ತಾಪ ವಾಯಿತು. ಕೂಡಲೇ ಎಲ್ಲಿಯವರಲ್ಲಿಯೇ ಆಯಾ ದಿಕ್ಕುಗಳಲ್ಲಿ ಈ ಹುಡುಗರನ್ನು ಹುಡುಕುವುದಕ್ಕಾಗಿ ಹೊರಟರು. ಅವರಲ್ಲೊಬ್ಬರು ಪೆನ್ನ ಹೋಬಳಿದ ಪ್ರಾಂತಕ್ಕೆ ಹುಡುಕುತ್ತಾ ಹುಡುಕುತ್ತಾ ಬಂದು ಶ್ರಮಾಪನಯನಾರ್ಥವಾಗಿ ಆ ನದೀ ತೀರಸ್ಥ ವಾದ ಒಂದಾನೊಂದು ಅಶ್ವತ್ಥ ವೃಕ್ಷದ ಛಾಯೆಯಲ್ಲಿ ಬಳಲಿ ಕೂತುಕೊಂಡಿದ್ದರು.

ಇಷ್ಟರಲ್ಲಿ ಅಲ್ಲಲ್ಲಿ ಅಡವಿಯಲ್ಲಿ ಓಡಾಡುತ್ತಿರುವ ಈ ಬಾಲಕರು ಒಂದು ವಿಚಿತ್ರವಾದ ಸನ್ನಿವೇಶವನ್ನು ಕಂಡರು. ಯಾರೋ ಒಬ್ಬ ವ್ಯಕ್ತಿ ಈ ಬಾಲಕರನ್ನು ನೋಡಿ "ಓ ವಟುಗಳಿರಾ! ಬಾಲಕರೇ! ಹೀಗೆ ಬನ್ನಿ, ನೀವು ಯಾರು? ಎಲ್ಲಿಗೆ ಹೋಗುತ್ತಿದ್ದೀರಿ? ಅದು ಮಾರ್ಗವೇ ಅಲ್ಲವಲ್ಲ! ಎಂದು ನುಡಿದರು,

ಬಾಲಕರು: "ಅಯ್ಯಾ! ನಾವು ದೇವರನ್ನು ನೋಡುವುದಕ್ಕಾಗಿ ಈ ಬೆಟ್ಟಗಳನ್ನು ಹತ್ತುತ್ತಾ ಗವಿಗಳನ್ನು ಸೇರಲು ಹೋಗುತ್ತಿದ್ದೇವೆ. ದೇವರು ಅಂತರ್ಗೃಹ ನಿವಾಸಿ ಎಂದು ಶಾಸ್ತ್ರಗಳು ಹೇಳುತ್ತವೆ.

ಆ ವ್ಯಕ್ತಿ : ಮಹಾ ಸಂತೋಷ. ಪ್ರಪೂರ್ಣ ಹೃದಯದಿಂದ "ಮಕ್ಕಳಿರಾ! ನಿಮ್ಮನ್ನು ಹೆತ್ತ ತಾಯಿ ತಂದೆಗಳು ಎಷ್ಟು ಪುಣ್ಯಾತ್ಮರೊ! ಈ ಚಿಕ್ಕ ಪ್ರಾಯದಲ್ಲೇ ದೇವರನ್ನು ಕಣ್ಣಾರೆ ನೋಡಬೇಕೆನ್ನುವ ಈ ದೊಡ್ಡ ಬುದ್ಧಿ ಹೇಗೆ ಹುಟ್ಟಿತು? ನಿಜವಾಗಿಯೂ ನೀವು ಪುಣ್ಯಾತ್ಮರೇ! ಬನ್ನಿ" ಎಂಬುದಾಗಿ ಆ ಮಕ್ಕಳ ಕೈಗಳನ್ನಿಡಿದು "ಅಪ್ಪಾ! ಈ ನಿಮ್ಮ ಇಚ್ಛೆ ಬಹಳ ಒಳ್ಳೆಯದು. ದೇವರು ತಪ್ಪದೆ ನಿಮ್ಮಲ್ಲಿ ನಿಮಗೆ ಕಾಣಿಸುತ್ತಾನೆ. ಕಂದಗಳಾದ ನಿಮಗೆ ಈ ಅಡವಿಯಲ್ಲಿ ಈಗ ದೊರೆಯುವುದಿಲ್ಲ, ಕಾಣುವುದಿಲ್ಲ. ನೀವಿನ್ನು ಕೆಲವು ಕಾಲ ಮನೆಯಲ್ಲಿ ಇರುತ್ತಾ ಚೆನ್ನಾಗಿ ಓದಿಕೊಂಡು ಅಧ್ಯಯನ ಮಾಡುತ್ತಾ, ಉತ್ತಮ ವಿದ್ಯಾಭ್ಯಾಸವನ್ನು ಮಾಡಿ ಬುದ್ಧಿವಂತರಾಗಿ ದೈವಭಕ್ತಿಯಿಂದಿರುತಿರಲು, ಆ ದೇವರೇ ನಿಮ್ಮ ಹತ್ತಿರಕ್ಕೆ ಬರುತ್ತಾನಯ್ಯ. ಹೀಗೆ ಅಡವಿಯಲ್ಲಿ ಹೋಗಬಾರದಪ್ಪ" ಎಂದು ಲಾಲಿಸಿ ಅವರ ಬುದ್ಧಿಯನ್ನು ಹಿಂದಕ್ಕೆ ತಿರುಗಿಸಿ "ಆ, ಊಂ" ಅನ್ನುತ್ತ ಆ ವ್ಯಕ್ತಿ ಕಾಣಿಸದಂತೆ ಆದನು.

ದೈವಯೋಗವನ್ನು ಯಾರು ಬಲ್ಲರು. ಆ ವ್ಯಕ್ತಿಯ ರೂಪದಿಂದ ಭಗವಂತನೇ ಬಾಲಕರನ್ನು ಗೃಹೋನ್ಮುಖರನ್ನಾಗಿ ಮಾಡಿದನು, ಹಾಗಿಲ್ಲದೆ ಹೋದ ಪಕ್ಷದಲ್ಲಿ ಈ ಹುಡುಗರು "ಬೆಟ್ಟಗಳನ್ನು ಹತ್ತಿ ಗುಹೆಗಳನ್ನೊಕ್ಕು ಕಣ್ಣುಗಳನ್ನು ಮುಚ್ಚಿಕೊಂಡ್ರು ಮತ್ತಾವುದನ್ನು ನೋಡದೆ, ನೋಡಲು ಬಾರದಂತೆ. ಕಣ್ಣು ರೆಪ್ಪೆಗಳು ತೆಗೆಯಲು ಬಾರದೆ ಗಟ್ಟಿಯಾಗಿರುವಂತೆ, ರೆಪ್ಪೆಗಳಿಗೆ ಅಂಟನ್ನು ಹಚ್ಚಿ ಕೇವಲ ಭಗವನ್ನಾಮ ಸ್ಮರಣ– ಪ್ರಣವ ಪಂಚಾಕ್ಷರ ಮಹಾ ಮಂತ್ರವನ್ನು ಜಪಿಸುತ್ತಾ ಕೂಡೋಣ, ಭಗವಂತನೇ ನಮ್ಮ ಹತ್ತಿರಕ್ಕೆ ಬಂದು ಕಣ್ಣುಗಳನ್ನು ಬಿಚ್ಚಿದಾಗ ದೇವರನ್ನು ಮಾತ್ರ ನಾವು ನೋಡುವವರಾಗಬೇಕು. ಎಷ್ಟೇ ಕಾಲವಾಗಲಿ ನಾವು ಮೇಲಕ್ಕೇಳಬಾರದು. ಸ್ವಾಮಿಯೇ ಬಂದು ಎಬ್ಬಿಸಬೇಕು ಅನ್ನುವ ನಿಶ್ಚಯದಿಂದ ಹೋಗಿದ್ದರಂತೆ. ಶಿವ ಶಿವಾ! ಶಿವನ ಲೀಲೆ, ಆ ಚಿಕ್ಕಮಕ್ಕಳು ಅಂದುಕೊಂಡ ಹಾಗೆ ಆಗಿದ್ದರೆ, ಆ ಪಟ್ಟನ್ನು ಹಿಡಿದು ಹೋದ ಆ ಪಾಪಗಳು (ಚಿಕ್ಕವರು) ಏನಾಗಿ ಹೋಗುತ್ತಿದ್ದರೋ ಏನೋ! ದೇವ ದೇವನಾದ ಪರಮಾತ್ಮನು ಪ್ರಚ್ಛನ್ನವಾಗಿ ಆ ವ್ಯಕ್ತಿಯ ರೂಪದಿಂದ, ಅವರಿಗೆ ಮನಸ್ಸನ್ನು ಹಿಂದಿರುಗಿಸಿ ಮಾರ್ಗವನ್ನು ತೋರಿಸಿದನು. ಆಮೇಲೆ ಈ ಬಾಲಕರು ನೆಮ್ಮದಿಯಾಗಿ ಅಡವಿಯನ್ನು ಬಿಟ್ಟು ರೋಡ್ ಮಾರ್ಗಕ್ಕೆ ಬಂದರು.

ಅಷ್ಟಕ್ಕೆ ಪೂರ್ವದಲ್ಲಿಯೇ ಅವರನ್ನು ಹುಡುಕುವದಕ್ಕಾಗಿ ಬಂದು ಹುಡುಕಿ ಹುಡುಕಿ ಸೋತು ವಿಶ್ರಾಂತಿಗಾಗಿ ಅಶ್ವತ್ಥವೃಕ್ಷದ ಕೆಳಗೆ ಕೂತು ಆಚೆ ಈಚೆ ನೋಡುತ್ತಾ ಇದ್ದ ಆತನಿಗೆ, ಹಾದಿಯನ್ನೇರಿದ ಮಕ್ಕಳು ಕಣ್ಣಿಗೆ ಬಿದ್ದ ಕೂಡಲೇ ಓಡಿ

ಬಂದು ಹುಡುಗರನ್ನು ನೋಡಿ ಅಪ್ಪಿಕೊಂಡು, ಕಳಕೊಂಡ ನಿಧಿಯನ್ನು ಭಗವತ್ಕೃಪೆ ಯಿಂದ ಮತ್ತೆ ಪಡೆದವನ ಹಾಗೆ, ಹರ್ಷನಿರ್ಭರಿತನಾಗಿ ಅವರ ಸ್ಥಿತಿಯನ್ನು ನೋಡಿ ಚಿಂತಿಸಿ "ಎಷ್ಟು ಜನರಿಗೆ ದುಃಖವನ್ನು ಕೊಟ್ಟಿರಪ್ಪಾ! ಎಷ್ಟು ತಾಪವನ್ನು ಉಂಟು ಮಾಡಿದಿರಲ್ಲಾ" ಎಂದು ಅನ್ನುತ್ತಾ ಅವರನ್ನು ಕರೆದುಕೊಂಡು ಬರುತ್ತಾ ದಾರಿಯಲ್ಲಿ, ಮುಸ್ಟೂರು ಗ್ರಾಮದ ಗೌಡರಿಂದಲೂ ಇವರನ್ನು ಹುಡುಕುವುದಕ್ಕಾಗಿ ಕಳುಹಿಸಲ್ಪಟ್ಟ ಮನುಷ್ಯರನ್ನು ಕೂಡಾ ಕಲೆತುಕೊಂಡು ಸಾಯಂಕಾಲಕ್ಕೆ ಮುಷ್ಟೂರು ಗೌಡರ ಮನೆಗೆ ಬಂದರು. ಅಲ್ಲಿ ಸ್ನಾನ ಪೂಜೆ ಭೋಜನಾದಿಗಳನ್ನು ಮಾಡಿಸಿದರು.

ಈ ಸಣ್ಣವರ ದೊಡ್ಡದಾದ ಭಗವದ್ಭಾವನೆಗೆ ಅಲ್ಲಿ ಎಲ್ಲರೂ ಇವರನ್ನು ನೋಡಿ ತುಂಬಾ ಸಂತೋಷಗೊಂಡರು, ಆಶ್ಚರ್ಯಚಕಿತರಾದರು. ಈ ದಿನದವರೆಗೂ ಈ ಗೌಡರು ನಮ್ಮ ಶ್ರೀಗಳವರನ್ನು ನೋಡಿದಾಗ ಪರಮ ಭಕ್ತಿಭಾವದಿಂದ ಪ್ರೀತಿ ಯಾಗಿ "ಓ ಅಡವಿಸ್ವಾಮೀ! ಓ ಅಡವಿಸ್ವಾಮೀ!" ಎನ್ನುವದಾಗಿ ಕರೆಯುವುದುಂಟು. ಇನ್ನು ಮಾರನೆಯ ದಿನ ಅಲ್ಲಿಂದ ಸ್ವಸ್ಥಾನವನ್ನು ಸೇರಿದರು.

ಈ ಪ್ರಕಾರವಾಗಿ ತಮ್ಮ ಭವಿಷ್ಯಜ್ಜೀವನದ ಶುಭಸೂಚಕ ಚಿಹ್ನೆಗಳು, ಕ್ರಿಯೆ ಗಳು ಈ ಸ್ವಾಮಿಗಳಲ್ಲಿ ಚಿಕ್ಕ ವಯಸ್ಸಿನಿಂದಲೇ ಕಾಣಿಸಿಕೊಳ್ಳುತ್ತಿದ್ದವು.

ಅನಂತರ ಎಲ್ಲರ ಒತ್ತಾಯದಿಂದ ಶ್ರೀ ಚನ್ನಬಸವಸ್ವಾಮಿಯವರು ಯಥಾ ರೀತಿ ತಮ್ಮ ಉನ್ನತ ಪಾಠಶಾಲೆಯಲ್ಲಿ ವಿದ್ಯಾವಿಧಾನದಲ್ಲಿ ಪರಮ ಶ್ರದ್ಧೆಯಿಂದ ಪಠಿಸುತ್ತಾ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಬಹುಮಾನ ಗ್ರಂಥಗಳನ್ನು ಪಡೆದರು. ಹೀಗೆ ಭಗವದ್ಭಕ್ತಿ ದಿನ ದಿನಾಭಿವೃದ್ಧಿಯಾಗುತ್ತಿರಲು ಭೂಮಿಯಲ್ಲಿ ಹುದುಗಿದ್ದ ಬೀಜವು ಪಕ್ವಕಾಲ ಬಂದಾಗ ಅಂಕುರಿಸುವಂತೆ, ಇವರ ಆಧ್ಯಾತ್ಮಿಕ ಸುಸ್ಕಾರ ಬೀಜಗಳು ಅಂಕುರಿಸಿ ಉದ್ಬುದ್ಧವಾಗುವ ಸಮಯ ಬಂತು. ಅಷ್ಟರಲ್ಲಿಯೇ ಕೆಲವು ಕಾಲಕ್ಕೆ ಉಮಾಮಹೇಶ್ವರ ಪೀಠಸ್ಥರಾದ ಆತ್ಮಾನಂದಸ್ವಾಮಿ ಸದ್ಗುರು ವರೇಣ್ಯರ ಸಚ್ಛಿಷ್ಯರು ಆಧ್ಯಾತ್ಮಿಕ ತತ್ವವಿದರಾದ ಡೋಣೇಕಲ್ಲು ವೀರಯ್ಯಸ್ವಾಮಿ ಯೆಂಬುವವರು ಲತ್ತವರ ಗ್ರಾಮಕ್ಕೆ ಅಧ್ಯಾಪಕರಾಗಿ ಬಂದು ಸೇರಿದರು. ನಮ್ಮ ಚೆನ್ನಬಸವ ಸ್ವಾಮಿಗಳಿಗೆ ಇವರಲ್ಲಿ ಅತ್ಯಂತ ಪೂಜ್ಯ ಬುದ್ಧಿಯುಂಟಾಯಿತು. ಅನುದಿನ ಹೈಸ್ಕೂಲಿನಿಂದ ಬಂದ ಮೇಲೆ ಇವರ ಹತ್ತಿರಕ್ಕೆ ಹೋಗಿ ವಿನಯ ವಿಧೇಯರಾಗಿದ್ದರು. ಈ ಸ್ವಾಮಿಗಳವರ ಶುಭ ಸುಸ್ಕಾರವನ್ನು ನೋಡಿ ವೀರಯ್ಯಸ್ವಾಮಿಯವರಿಗೆ ಈ ಚಿಕ್ಕವರಲ್ಲಿ ಅತ್ಯಂತ ಪ್ರೇಮ ಉಂಟಾಯಿತು. ಅನೇಕ ಧಾರ್ಮಿಕ ಆಧ್ಯಾತ್ಮಿಕಾದಿ ವಿಷಯಗಳನ್ನು ತಿಳುಹುತ್ತಾ ಕ್ರಮವಾಗಿ ವೇದಾಂತ ಪಂಚದಶಿ, ನೈಷ್ಕರ್ಮ್ಯ ಸಿದ್ಧಿ, ಮುಂತಾದ ಗ್ರಂಥ ತಾತ್ಪರ್ಯಾರ್ಥಗಳನ್ನು ಬೋಧಿಸಲಾರಂಭಿಸಿದರು. ಈ ನಮ್ಮ ಸ್ವಾಮಿಗಳವರ ಚಿತ್ತವೃತ್ತಿ ಆಧ್ಯಾತ್ಮಿಕ ತತ್ತ್ವಾಭಿಮುಖವಾಯಿತು. ಇವರೇ ನಮ್ಮ ಶ್ರೀ ಚನ್ನಬಸವೇಶ್ವರ ಸ್ವಾಮಿಗಳವರಿಗೆ ಪ್ರಪ್ರಥಮ ಮಾರ್ಗದರ್ಶಕರಾದರು.

# ಶ್ರೀ ಗುರು ದರ್ಶನ

ಹೀಗಿರುತ್ತಿರಲು ಕೆಲವು ಕಾಲಕ್ಕೆ ರಾಗನಹಾಳು ಶ್ರೀ ಪ್ರಣವಾತ್ಮಾನಂದಾಶ್ರಮ ದಲ್ಲಿ ಜರುಗುವ ಶ್ರೀ ಆತ್ಮಾನಂದ ಸದ್ಗುರು ಸ್ವಾಮಿಗಳವರ ಪುಣ್ಯಾರಾಧನ ಮಹೋತ್ಸವಕ್ಕೆ, ಈ ವೀರಯ್ಯಸ್ವಾಮಿಯವರು ನಮ್ಮ ಚನ್ನಬಸವಸ್ವಾಮಿಯನ್ನು ಹಿಂದೆ ಕರೆದುಕೊಂಡು ಆಶ್ರಮಕ್ಕೆ ಹೋದರು. ಆ ವರ್ಷ ಅಲ್ಲಿ ನಡೆಯುವ ಸಭೆ ಸಮಾವೇಶಕ್ಕೆ 'ಆಧ್ಯಾತ್ಮ ವಿದ್ಯಾವಾಚಸ್ಪತಿ' 'ವೇದಾಂತ ಕೇಸರಿ' 'ಪೌರಾಣಿಕ ಗಜಸಿಂಹ' 'ಕಲಿಯುಗ ವ್ಯಾಸ' ಇತ್ಯಾದಿ ಬಿರುದಾಂಕಿತರೂ ಸದಾಚಾರ ಸಂಪನ್ನರೂ ಆದ ಶ್ರೀ ಸಂಗಮೇಶ್ವರ ಶಾಸ್ತ್ರಿ ಸ್ವಾಮಿಗಳು ದಯಮಾಡಿಸಿದ್ದರು. ಇನ್ನೂ ಅನೇಕ ಸಾಧು ಸತ್ಪುರುಷರು ಬಂದಿದ್ದರು. ಆ ತುಂಬಿದ ಸಭೆಯಲ್ಲಿ ವಿದ್ಯಾನಿಧಿಗಳಾದ ಶ್ರೀ ಶಾಸ್ತ್ರಿಗಳವರು ತಮ್ಮ ಪ್ರವಚನ ನಡೆಸುತ್ತಿದ್ದರು. ಅವರ ಸಾಮೀಪ್ಯದಲ್ಲಿಯೇ ಕೂತು ಕೇಳುತ್ತಿದ್ದ ನಮ್ಮ ಚನ್ನಬಸವಸ್ವಾಮಿ, ಆ ಸಭೆಯನ್ನು ಮತ್ತು ಪ್ರಸನ್ನವಾಗಿ ಉಪನ್ಯಾಸ ಮಾಡುತ್ತಿದ್ದ ಸ್ವಾಮಿಗಳವರನ್ನು ಕಂಡು ಪರಮಾನಂದಭರಿತರಾಗಿ ತಾವು ಉಪನ್ಯಸಿಸಬಹುದಾ! ಎಂಬ ಕುತೂಹಲವನ್ನು ಅಭಿವ್ಯಕ್ತಪಡಿಸಿದರು.

ಇವರ ಸಂತೋಷ ಮುಖವನ್ನು ವೀಕ್ಷಿಸಿ ಉಪನ್ಯಾಸಕರಾದ ಶ್ರೀ ಸಂಗಮೇಶ್ವರ ಶಾಸ್ತ್ರಿಗಳವರು ಉಪನ್ಯಾಸ ವೇದಿಕೆಯ ಮೇಲಿಂದಲೇ ಈ ಚಿಕ್ಕಸ್ವಾಮಿಗಳವರ ಉತ್ಸಾಹ ಚಿಹ್ನೆಗಳನ್ನು ಕಂಡು, ಕೂಡಲೇ "ಅಯ್ಯಾ ಆ ಚಿಕ್ಕವರು ಯಾರೊ! ಆತನ ಮುಖದಲ್ಲಿ ಉಪನ್ಯಸಿಸಬೇಕೆಂಬ ಉತ್ಸಾಹದ್ಯೋತಕವಾಗುತ್ತಿದೆ. ಆತನಲ್ಲಿ ಅದು ಉಕ್ಕೇರಿ ಹರಿಯುತ್ತಿದ್ದಂತೆ ಕಾಣುತ್ತೆ. ಇಲ್ಲಿ ಬಾಪ್ಪಾ! ಬಾರಯ್ಯಾ! ಎಂದು ಸಮೀಪಕ್ಕೆ ಕರೆದು ಮಗುವನ್ನು ಮುಟ್ಟಿ ಯಾವ ಹುತ್ತಿನಲ್ಲಿ ಯಾವ ಹಾವು ಇದೆಯೋ" ಅನ್ನುತ್ತಾ ತಮ್ಮ ಪ್ರವಚನವನ್ನು ನಿಲ್ಲಿಸಿ ಈ ಚಿಕ್ಕವರನ್ನು ತಮ್ಮ ಪಕ್ಕದಲ್ಲಿ ನಿಲ್ಲಿಸಿಕೊಂಡು "ಊ, ಊ, ಆರಂಭಿಸು" ಎಂದು ನುಡಿದರು. ಆಗ ಈ ಬಾಲಭಾನು ಮುದ್ದು ಮಾತುಗಳಿಂದ ಪರಮಾರ್ಥ ತತ್ವವನ್ನು ಮಾತನಾಡುತ್ತಾ ಆ ಸಭೆಯನ್ನು ಮುಗ್ಧಗೊಳಿಸಿದನು. ಏನಾದರೇನು? ಆ ಚಿಕ್ಕ ಪ್ರಾಯವುಳ್ಳ ಸ್ವಾಮಿ ತುಂಬಿದ ಸಭೆಯಲ್ಲಿ ಸಧೈರ್ಯವಾಗಿ ಸ್ವಾಮಿಯವರ ಸನ್ನಿಧಿಯಲ್ಲಿ ನಿಂತು ಮಾತನಾಡಿದ. ಆ ಬಾಲಭಾಷೆ ಎಲ್ಲರಿಗೂ ಅಮಿತಾನಂದವನ್ನುಂಟು ಮಾಡಿತು. ಆ ದಿನವೇ ನಮ್ಮ ಬಾಲಗುರು ಸ್ವಾಮಿ ಅಲ್ಲಿ ನೆರೆದಿದ್ದ ಮಹಾತ್ಮರ ಮನೋರಂಗದಲ್ಲಿ ಪ್ರತಿಷ್ಠಿತರಾದರು. ಇವರ ಭಾವಿಜೀವಿತ ಗುರುಕುಲವಾಸಕ್ಕೆ ಇದೊಂದು ಯಶಸ್ಸಂಪನ್ನವಾದ ಕರದೀಪಿಕೆಯಾಯಿತು. ಆ ದಿನ ಆ ಸಭೆಯಲ್ಲಿ ಮುಂದೆ ಶ್ರೀಗಳವರಿಗೆ ಗುರುಗಳಾಗುವ ಪೂಜ್ಯಪಾದ ಶ್ರೀ ಶ್ರೀ ಶ್ರೀ ಸದಾನಂದ ಸದ್ಗುರು ಸ್ವಾಮಿಯವರು ಉತ್ತಮಾಸನವನ್ನು

ಅಲಂಕರಿಸಿ ಉಪಸ್ಥಿತರಾಗಿದ್ದರು. ಮುಂದೆ ಶಿಷ್ಯರಾಗುವ ನಮ್ಮ ಚನ್ನಬಸವಸ್ವಾಮಿಗಳ ಮಾತುಗಳನ್ನು ಮಂದಸ್ಮಿತರಾಗಿ ಸಂತೋಷದಿಂದ ಕೇಳುತ್ತಿದ್ದರು. ಅಲ್ಲಿ ಮೂರು ದಿನಗಳು ಕಾರ್ಯವು ನಡೆದು ಪೂರ್ಣವಾಯಿತು. ಅನಂತರ ಇವರಿಬ್ಬರು ಲತ್ತವರಕ್ಕೆ ಬಂದು ಸೇರಿದರು.

ಶ್ರೀ ಚನ್ನಬಸವಸ್ವಾಮಿಗಳಿಗೆ ಮೋಕ್ಷೇಚ್ಛೆ ಅಧಿಕವಾಗುತ್ತಿರಲು ತಮ್ಮ ಹೈಸ್ಕೂಲು ವಿದ್ಯೆ (V) ಫಿಫ್ತ್ ಫಾರಂ ಶ್ರದ್ಧೆಯಿಂದ ಓದುತ್ತಿದ್ದರು. ಆದರೇನು ಆ ಸಮಯದಲ್ಲಿ ಇವರಿಗೆ ಕೆಲವು ಕಷ್ಟಗಳು ಬಂದವು. ವಸ್ತುತಃ ಇವರಿಗೆ ಆಸ್ತಿ ಪಾಸ್ತಿಗಳು ಇಲ್ಲವೆಂದಲ್ಲ. ಬೇಕಾದಷ್ಟು ಸ್ಥಿರ ಚರಾಸ್ತಿಗಳಿದ್ದು ಕಷ್ಟಪಡಬೇಕಾಯಿತು. ಕಾರಣವೇನಂದರೆ ಮಗನು ಮುಂದಕ್ಕೋದಿಕೊಳ್ಳುವುದು ಹೆತ್ತ ತಾಯಿಗೆ ಇಷ್ಟವಿಲ್ಲ. ಇನ್ನು ಓದಿಕೊಳ್ಳುವದು ಸಾಕುಮಾಡಿ, ಇದ್ದ ನಮ್ಮ ಆಸ್ತಿ ಪಾಸ್ತಿಗಳನ್ನು ನೋಡಿಕೊಂಡು ಮನೆಯಲ್ಲೇ ಇರಬೇಕೆಂಬ ತಾಯಿಯ ಆಗ್ರಹವಾದ ಇಚ್ಛೆ; ನೀನು ಹಾಗಿಲ್ಲದ ಪಕ್ಷದಲ್ಲಿ ಯಾವ ಪ್ರಕಾರವಾಗಿಯೂ ನಿನಗೆ ದುಡ್ಡು ಕೊಡುವುದಿಲ್ಲವೆಂದು ತಾಯಿಯ ಹಠ. ಇನ್ನ ತಂದೆಯಾದರೋ ದೈವಯೋಗದಿಂದ ಆಗ್ಗೆ ಸ್ವಲ್ಪ ಉನ್ಮಾದ ಸ್ಥಿತಿಯಲ್ಲಿದ್ದರು. ಮಗನಾದ ಚನ್ನಬಸವಸ್ವಾಮಿಗೋ ಓದಿಕೊಳ್ಳುವುದನ್ನು ಬಿಡುವುದಿಷ್ಟವಿಲ್ಲ. ಇನ್ನು ಮುಂದೆ ಓದು ಜರುಗುವುದು ಹೇಗೆ? ಏನಾದರಾಗಲಿ "ಕ್ಷಮಾವೀರಸ್ಯ ಭೂಷಣಮ್" ಅಂದ ಹಾಗೆ ಎಷ್ಟು ಕಷ್ಟಗಳೇ ಬರಲಿ ವಿದ್ಯಾಭ್ಯಾಸ ಮಾಡಿಯೇ ತೀರಬೇಕೆಂಬ ದೃಢನಿಶ್ಚಯದಿಂದ, ಸಹಜವಾಗಿಯೇ ಜನ್ಮತಃ ಮಾಹೇಶ್ವರರಾದ ತಾವು ಭಿಕ್ಷಾವೃತ್ತಿಯನ್ನವಲಂಬಿಸಿಯಾದರೂ ಓದಬೇಕೆಂದು ನಿರ್ಧರಿಸಿಕೊಂಡು, ಆ ವಿಷಯವಾಗಿ ಗಂಜಿಗುಂಟ ಶ್ರೀ ಸದ್ಗುರು ಪ್ರಣವಾನಂದಾಶ್ರಮಕ್ಕೆ ಬಂದರು. ಅಲ್ಲಿ ಧನಿಕರೂ ಧಾರ್ಮಿಕರೂ ಆದ ಶ್ರೀಮಾನ್ ವೆಲನಾಟಿ ವೆಂಕಟಪ್ಪ ಎಂಬುವರನ್ನು ಅರ್ಥಿಸೋಣವೆಂದು ಬಂದಿದ್ದರು.

ಆಶ್ರಮದಲ್ಲಿ ಶ್ರೀ ಸದಾನಂದ ಸದ್ಗುರು ಸ್ವಾಮಿಗಳು ಶ್ರೀ ಆತ್ಮಾನಂದ ಸ್ವಾಮಿಗಳ ಶಿಷ್ಯರಾದ ಶ್ರೀ ಸಹಜಾನಂದ ಸ್ವಾಮಿಗಳು ಇನ್ನಿತರ ಭಕ್ತಾದಿಗಳೊಂದಿಗೆ ಕೂಡಿ ಪರಮಗುರು ವಿರಚಿತ "ಕೈವಲ್ಯ ನವನೀತ ಸಾರಸಂಗ್ರಹ" ಗ್ರಂಥಪ್ರಸಂಗವನ್ನು ನಡೆಸುತ್ತಿದ್ದರು. ಆ ದಿನ ಪ್ರಣವಾತ್ಮಾನಂದಾಶ್ರಮದಲ್ಲಿ ನೋಡಿದ ಈ ಬಾಲಕನ ಸ್ಮೃತಿ ಗುರುಗಳ ಹೃತ್ಫಲಕದಲ್ಲಿ ಮುದ್ರಿತವಾಗಿತ್ತಲ್ಲವೇ! ಈ ಬಾಲಕನು ಬಂದು ಭಕ್ತಿಯಿಂದ ನಮಸ್ಕರಿಸಲು ಅವರು ಈತನನ್ನು ಕುಳಿತುಕೊಳ್ಳಲು ಆಜ್ಞಾಪಿಸಿ, ಪ್ರಿಯ ವಚನಗಳಿಂದ ಮಾತನಾಡುತ್ತಾ "ಏನಪ್ಪಾ ಮಗು, ಬಂದಿರುವೆಯಾ? ಏನು ಬೇಕು? ಏನು?" ಎಂದು ವಿಚಾರಿಸುತ್ತಿರಲಾಗಿ ಶ್ರೀ ವೆಂಕಟಪ್ಪನವರು ಅಲ್ಲಿಗೆ ಬಂದರು. ಆಗ ನಮ್ಮ ಚನ್ನಬಸವಸ್ವಾಮಿ ತನ್ನ ವಿಷಯವನ್ನು ಅವರಿಗೆ ಬಿನ್ನವಿಸಿಕೊಂಡರು. ಅವರು ಆ ವಿಷಯವನ್ನೆಲ್ಲಾ ಆಲಿಸಿ ಶ್ರೀ ವೆಂಕಟಪ್ಪನವರು ಶ್ರೀ ಚನ್ನಬಸವಸ್ವಾಮಿಗಳನ್ನು

ನೋಡುತ್ತಾ "ಸ್ವಾಮಿ ಈ ಕುಕ್ಷಿಂಭರ ಅನಾತ್ಮ ವಿದ್ಯೆ ನಿಮಗೇಕೆ? ಜನ್ಮತಃ ಗುರುಕುಲ ಸಂಜಾತರಾದ ಮಾಹೇಶ್ವರರು (ಸ್ವಾಮಿಗಳು) ನೀವು. ಈ ನಮ್ಮ ಸ್ವಾಮಿಗಳವರ ಸನ್ನಿಧಿಯಲ್ಲಿ ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡಿರಿ. ನಿಮಗೆ ಬೇಕಾದ ಎಲ್ಲಾ ಖರ್ಚುಗಳನ್ನು ನಾನು ಭರಿಸಿಕೊಳ್ಳುತ್ತೇನೆ." ಹೀಗೆಂದು ಅತ್ಯಂತ ಪ್ರೇಮಾದರದಿಂದ ಹೇಳಿದರು.

ಈ ಮಾತುಗಳನ್ನು ಕೇಳಿ ಅಲ್ಲಿದ್ದ ಜನರೆಲ್ಲರು ಪರಮ ಸಂತುಷ್ಟರಾದರು. ಮತ್ತು ಶ್ರೀ ಸದ್ಗುರು ಸದಾನಂದ ಸ್ವಾಮಿಯವರು ಅತ್ಯಂತ ಪ್ರೇಮ ವಾತ್ಸಲ್ಯದಿಂದ, "ಸ್ವಾಮೀ, ನೀವು ಬಂದ ಮುಹೂರ್ತವು ಬಹಳ ಶ್ರೇಷ್ಠವಾಗಿದೆ. ಇದು ಒಳ್ಳೆಯ ಅವಕಾಶ. ಇದನ್ನು ಕಳೆದುಕೊಳ್ಳಬೇಡಿ. ನಿಮ್ಮ ಜನ್ಮ ಸಾಫಲ್ಯಕ್ಕೆ ಹೇತುವಾದ ಬ್ರಹ್ಮವಿದ್ಯೆಯನ್ನು ಸಾಧಿಸಿರಿ. ಇಲ್ಲೇ ಆಶ್ರಮದಲ್ಲಿ ಇರಬಹುದು" ಎಂದು ಹೇಳಿದರು. ಈ ಮಾತುಗಳನ್ನು ಕೇಳಿ ನಮ್ಮ ಶ್ರೀ ಚನ್ನಬಸವಸ್ವಾಮಿಗಳ ಚಿತ್ತವು ಪರಿವರ್ತಿತ ವಾಯಿತು. ಅಯಸ್ಕಾಂತದ ಸನ್ನಿಧಿಗೆ ಕಬ್ಬಿಣ ಆಕರ್ಷಿಸಲ್ಪಟ್ಟಂತೆ ಶ್ರೀಗುರು ಮಹಾಸನ್ನಿಧಿಗೆ ಸ್ವಾಮಿಗಳ ಹೃದಯವು ಆಕರ್ಷಿಸಲ್ಪಟ್ಟಿತು. ಕೂಡಲೇ ಗುರುಗಳಿಗೆ ನಮಸ್ಕರಿಸಿ ಮತ್ತು ಬರುತ್ತೇನೆಂದು ಹೇಳಿ ಅತ್ಯಂತ ಮುದದಿಂದ ಪುನಃ ಪುನಃ ವಂದನೆಗಳನ್ನು ಆಚರಿಸಿ ಉತ್ತರಕ್ಕೆ ಹೊರಟುಹೋದರು.

ಪುಣ್ಯಾತ್ಮರಾದ ಶ್ರೀ ವೆಂಕಟಪ್ಪನವರ ಸಂಕಲ್ಪವೆಷ್ಟು ಔದಾರ್ಯಪೂರ್ಣವೋ, ಈ ಶ್ರೀ ಚನ್ನಬಸವಸ್ವಾಮಿಗಳ ಜನ್ಮಧನ್ಯತೆಗೆ ಅದು ಬುನಾದಿಯಾಯಿತು. ಮಾರನೆಯ ದಿನ ಸೋಮವಾರ ಯಥಾರೀತಿ ಹೈಸ್ಕೂಲಿಗೆ ಹೋಗಿ ತಮ್ಮ ಪುಸ್ತಕ ಗಳನ್ನೆಲ್ಲಾ ಮತ್ತೊಬ್ಬ ಬಡವಿದ್ಯಾರ್ಥಿಗೆ ಉಚಿತವಾಗಿ ಕೊಟ್ಟು, ತಮಗೆ ಬರುತ್ತಿದ್ದ ವಿದ್ಯಾರ್ಥಿ ವೇತನವನ್ನು ಇನ್ನೊಬ್ಬ ಬಡವಿದ್ಯಾರ್ಥಿಗೆ ಕೊಡುವುದು ಎಂಬುದಾಗಿ ತಿಳಿಸುತ್ತ, ಪ್ರಧಾನೋಪಾಧ್ಯಾಯರೊಡನೆ ಸವಿನಯವಾಗಿ ಬಿನ್ನವಿಸಿಕೊಂಡು "ಮಹಾಶಯಾ! ನಾನಿನ್ನು ಹೈಸ್ಕೂಲಿಗೆ ಬರುವುದಿಲ್ಲ. ಗುರುಕುಲದಲ್ಲಿ ತಪವನ್ನಾ ಚರಿಸಲು ಹೊರಡುತ್ತೇನೆ" ಹೀಗೆಂದು ಧೈರ್ಯವಾಗಿ ನುಡಿಯಲು, ಅದಕ್ಕೆ ದಯಾ ನಿಧಿಗಳೂ ಸದಾಚಾರ ಸಂಪನ್ನರೂ ಪ್ರಧಾನೋಪಾಧ್ಯಾಯರೂ ಆದ ಬ್ರಹ್ಮಶ್ರೀ P. ರಾಘವೇಂದ್ರಾಚಾರ್ಯರು "ಆ, ಏನು ? ಇಷ್ಟು ಚಿಕ್ಕವಯಸ್ಸಿನಲ್ಲೇ ಇಷ್ಟು ದೊಡ್ಡದಾದ ಬಯಕೆಯಾ! ನಿನಗಿದು ಹೇಗೆ ಉಂಟಾಯಿತು? ನಿನ್ನ ಮಾತುಗಳನ್ನು ಕೇಳುತ್ತಿದ್ದರೆ ಪೂರ್ವದ ಋಷಿಗಳು ನೆನಪಿಗೆ ಬರುತ್ತಿದ್ದಾರಲ್ಲಾ! ಆ ಕಾಲದಲ್ಲಿ ಬ್ರಹ್ಮಚಾರಿಗಳು ಗುರುಕುಲದಲ್ಲಿ ವೇದ ವಿದ್ಯಾಧ್ಯಯನ ಶೀಲ ತಪಸ್ಸಂಪನ್ನರಾಗಿರು ತ್ತಿದ್ದರು ಎಂಬುದಾಗಿ ಪುರಾಣಗಳಲ್ಲಿ ಉಪನಿಷತ್ತುಗಳಲ್ಲಿ ಕೇಳಿ ಬರುತ್ತದೆ. ಇಷ್ಟು ಒಳ್ಳೆಯ ಮಾತು ಈ ದಿನ ನಿನ್ನ ಬಾಯಿಂದ ಬರುತ್ತದೆಂದರೆ ಬಹಳ ಸಂತೋಷ. ಶಬಾಷ್! ಒಳ್ಳೆಯದು. ಆದರೂ ಇನ್ನೊಂದು ವರ್ಷ ಮೆಟ್ರಿಕ್‌ವರೆಗೂ ಇಲ್ಲೇ

ಓದಿದ್ದರೆ ಬಹಳ ಚೆನ್ನಾಗಿರುತ್ತಿತ್ತಲ್ಲಾ!" ಎಂಬುದಾಗಿ ಹೇಳಿದರು. ಅದಕ್ಕೆ ಬ್ರಹ್ಮ ವಿದ್ಯಾಭಿಲಾಷೆಯುಳ್ಳ ಶ್ರೀ ಚನ್ನಬಸವಸ್ವಾಮಿಗಳು "ಅದು ಅಧ್ಯಯನವೇ, ಓದೇ ಅಲ್ಲಾ! ದೇವಾ! ಸರ್ ಆ ಬ್ರಹ್ಮವಿದ್ಯೆ ನನಗೆ ಚೆನ್ನಾಗಿ ಬರುವಂತೆ ಆಶೀರ್ವದಿಸಿರಿ" ಇತ್ಯಾದಿ ವಿನಯ ಸಂಪನ್ನವಾದ ಮಾತುಗಳಿಂದ ಪ್ರಧಾನ ಅಧ್ಯಾಪಕರಿಗೂ, ಇನ್ನಿತರ ಅಧ್ಯಾಪಕರಿಗೆಲ್ಲರಿಗೂ ತಿಳುಹುತ್ತಾ ವಂದನೆಗಳನ್ನು ಆಚರಿಸಿ ಸಹಾಧ್ಯಾಯಿಗಳಿಗೆ ವಿಷಯವನ್ನು ವಿದಿತಗೊಳಿಸಿ ಸ್ವಗ್ರಾಮಕ್ಕೆ ಬಂದರು.

ಈ ವಿಷಯವನ್ನು ಇಲ್ಲಿ ಎಲ್ಲರಿಗೂ ತಿಳಿಯ ಹೇಳಿದರು. ಇದಕ್ಕೆ ಮನೆಯವ ರಾರೂ ಸಮ್ಮತಿಸಲಿಲ್ಲ. ಸಹಾಧ್ಯಾಯಿಗಳಾದ ಮಿತ್ರರು ಬಲವಂತವಾಗಿ ಅಡ್ಡಿ ಮಾಡಿದರು. ಆದರೂ ಆ ತೀವ್ರವಾದ ಗುರುಸನ್ನಿಧಿಯೆಂಬ ಅಯಸ್ಕಾಂತವು ಇವರ ಸುಸಂಸ್ಕೃತ ಚಿತ್ತವನ್ನು ಆಕರ್ಷಿಸುತ್ತಿರುವಾಗ ಯಾರೇನು ಮಾಡುವರು. ಕೂಡಲೇ ಪ್ರಯಾಣವನ್ನು ನಿಶ್ಚಯಿಸಿದರು. ಇದೇ ಶ್ರೀಗಳವರು (ಚನ್ನಬಸವಸ್ವಾಮಿ) ತಮ್ಮ ಮನೆಯನ್ನು ಬಿಟ್ಟು ಹೊರಡಲು ಸುಮುಹೂರ್ತ. ಆ ದಿನ ಶ್ರೀ ಪ್ರಮಾದಿ ನಾಮ ಸಂವತ್ಸರ ಆಷಾಢ ಶುದ್ಧ ಸ್ಕಂದ ||6|| ಷಷ್ಠಿ ಗುರುವಾರ ಶಾ. "1861" (22-6-1939) ದಿನಾಂಕ ಸಾಯಂಕಾಲ ಅಂದಾಜು 4 ಗಂಟೆಗೆ ಶ್ರೀಗುರು ಸನ್ನಿಧಿ ಗಂಜಿಗುಂಟ ಶ್ರೀ ಸದ್ಗುರು ಪ್ರಣವಾನಂದಾಶ್ರಮವನ್ನು ಸೇರಿದರು. ಇನ್ನು ಇಲ್ಲಿ ಸ್ವಗ್ರಾಮದಲ್ಲಿ ಶ್ರೀಗಳವರ ಗೃಹ ನಿರ್ವಹಣ ಭಾರವು ಅಂದರೆ ವೃದ್ಧರಾದ ಅವ್ವ, ತಾತ, ತಂದೆ ಸೋದರತ್ತೆ ಮುಂತಾದವರನ್ನೆಲ್ಲಾ ಪೋಷಿಸುವ ಭಾರವು ಸಂಪೂರ್ಣ ವಾಗಿ ಮಾವನಾದ ವೇದಮೂರ್ತಿ ಬಾಪುರಮಠದ ಶ್ರೀ ಕರಿಬಸವಯ್ಯಸ್ವಾಮಿ ಯವರ ಮೇಲೆ ಬಿತ್ತು. ಆದರೂ ಸದ್ಗುಣ ಸಂಪನ್ನರಾದ ಆ ಯಜಮಾನರು ಇವ ರೆಲ್ಲರನ್ನೂ ನೋಡಿಕೊಂಡರು. ಕರುಣಾಮಯನಾದ ಪರಮಾತ್ಮನು ಆತನ ಬೆಂಬಲ ವಿದ್ದು ನಮ್ಮ ಚನ್ನಬಸವಸ್ವಾಮಿಯ ಆಧ್ಯಾತ್ಮಿಕ ಮಾರ್ಗಕ್ಕೆ ಎಳ್ಳಷ್ಟಾದರೂ ಆತಂಕ ವನ್ನುಂಟು ಮಾಡದೆ ಚಿರಸ್ಮರಣೀಯವಾದ ಮಹೋಪಕಾರವನ್ನು ಮಾಡಿದನು.

# ಶ್ರೀ ಗುರು ಸಾನ್ನಿಧ್ಯ

ಶ್ರೀಗುರು ಸನ್ನಿಧಿಯನ್ನು ಸೇರಿದ ಆ ಸಾಯಂಕಾಲ ಸಮಯದಲ್ಲಿ ಗುರುಗಳು ಪೀಠೋಪಸ್ಥಿತರಾಗಿ ವಿಚಾರಸಾಗರ ಗ್ರಂಥ ಪ್ರವಚನವನ್ನು ನಡೆಸುತ್ತಿದ್ದರು. ಬ್ರಹ್ಮ ವಿದ್ಯಾರ್ಥಿಯಾಗಿ ಬರುತ್ತಿರುವ ಈ ನೂತನ ವಟುವನ್ನು ಕಂಡು "ಓ ಸ್ವಾಮಿ ಬಂದು ಬಿಟ್ಟರು" ಅನ್ನುವ ಶಬ್ದವು ಗುರುಪೀಠದಲ್ಲಿ ಉಪಸ್ಥಿತರಾದ ಸ್ವಾಮಿಗಳವರಿಂದ ಬಂತು. ಅಲ್ಲಿದ್ದ ಶ್ರೋತೃಗಳೆಲ್ಲರೂ ಸಂತೋಷವನ್ನು ಹೊಂದಿದರು. ಆಮೇಲೆ ಗುರುಸನ್ನಿಧಿಗೆ ಸಾಷ್ಟಾಂಗ ದಂಡ ಪ್ರಣಾಮವನ್ನು ಗೈದು ಗುರುವಾಜ್ಞೆ ಹೊಂದಿ ಕುಳಿತರು. ಗುರುಗಳು "ಇವರು ಹೇಗೆ ಪಠಿಸುತ್ತಾರೋ ನೋಡೋಣ" ವೆಂದು ತಾವು ಓದುತ್ತಿದ್ದ ಆ ಗ್ರಂಥವನ್ನು ಈ ವಟುವಿನ ಕೈಯಲ್ಲಿ ಕೊಟ್ಟರು. ಭಕ್ತಿಯಿಂದ ಗ್ರಂಥವನ್ನು ತೆಗೆದುಕೊಂಡು ಸುಸ್ಪಷ್ಟವಾಗಿಯೂ ಶಾಂತವಾಗಿಯೂ ಪಠಿಸಿದರು. ಇದನ್ನು ಕಂಡು ಶ್ರೀಗುರು ದೇವರು, ಮತ್ತೆಲ್ಲರೂ ಸಂತೋಷದಿಂದ ಇವರ ಅಧ್ಯಯನವು ಚೆನ್ನಾಗಿದೆ ಎನ್ನುತ್ತಾ ಸಾದರದಿಂದ ನುಡಿದು ಆ ಸಮಯದ ಪ್ರವಚನವನ್ನು ಮುಗಿಸಿದರು.

ಇನ್ನು ಗುರು ಸಾನ್ನಿಧ್ಯ ಸುಖವು ಏನೆಂದು ಬಣ್ಣಿಸಬಹುದು. ಅನೇಕ ಜನ್ಮಾರ್ಜಿತ ಪುಣ್ಯ ಪರಿಪಾಕದಿಂದ ನಮ್ಮ ಚನ್ನಬಸವಸ್ವಾಮಿಗಳಿಗೆ ಅಂಥಾ ಸುಖವು ಸಂಪ್ರಾಪ್ತವಾಯಿತು. ಮೊದಲನೆಯದಾಗಿ ಈತನಿಗೆ ವಿವೇಕಚೂಡಾಮಣಿ ಮೂಲ ಶ್ಲೋಕಗಳನ್ನು ಎತ್ತಿ ಬರೆಯಬೇಕೆಂಬುದಾಗಿಯೂ ಮತ್ತು ಕಂಠಗತ ಮಾಡಬೇಕೆಂದು ಗುರುಗಳು ಆಜ್ಞೆಯನ್ನಿತ್ತರು. ಶಿರಸಾವಹಿಸಿ ಅದನ್ನಾಚರಿಸುತ್ತಾ ಅನುದಿನ ಆಶ್ರಮ ಸೇವೆ ಗುರು ಸೇವೆ ಮಾಡುತ್ತಿದ್ದರು. ಆಶ್ರಮದಲ್ಲಿ ಪ್ರತಿದಿನ ಉದಯ, ಸಾಯಂಕಾಲ ಗಳಲ್ಲಿ ಗುರುಗಳಿಂದ ಶಾಸ್ತ್ರ ಶ್ರವಣವು ಮತ್ತು ಪ್ರತ್ಯೇಕವಾಗಿ ಇವರಿಗೋಸ್ಕರ ರಾತ್ರಿ 7 ಗಂ|| ಯಿಂದ 8 ಗಂ|| ವರೆವಿಗೂ ಯೋಗವಾಶಿಷ್ಠಸಾರವಾದ ಜ್ಞಾನವಾಸಿಷ್ಠವನ್ನು ಓದಿಸುತ್ತಾ ಅನೇಕ ಆಧ್ಯಾತ್ಮಿಕ ರಹಸ್ಯಗಳನ್ನು ತಿಳುಹುತ್ತಿದ್ದರು. ಹೀಗೆ ನಿತ್ಯ ನಿಯಮಾನುಷ್ಠಾನ ಅಧ್ಯಯನಾದಿಗಳಿಂದ ಶಿಷ್ಯನು ದಿನದಿನಾಭಿವೃದ್ಧಿ ಹೊಂದುತ್ತ, ಆಗಾಗ ಹೃದಯವು ಭಾವಾವೇಶಪೂರಿತವಾಗಿ ಗುರುಗಳನ್ನು ಭಕ್ತಿಯಿಂದ ಅನೇಕ ವಿಷಯಗಳನ್ನು ಕೇಳಿ ಅರಿಯುತ್ತಿದ್ದರು. ಒಂದು ದಿನ ಗುರುಗಳನ್ನು ಹೀಗೆ ಕೇಳಿದರು: "ಸ್ವಾಮೀ, ಬ್ರಹ್ಮನಿಷ್ಠೆ ಎಂದರೆ ಅಂತರ್ಮುಖರಾಗಿ ಸರ್ವದಾ ಅಲ್ಲಿಯೇ ಸ್ವಾತ್ಮಾನಂದ ಸ್ವರೂಪ ಸ್ಥಿತಿಯಲ್ಲಿಯೇ ಇರುವದಲ್ಲವೇ? ಆದ್ದರಿಂದ ಆ ಸ್ಥಿತಿಯಲ್ಲಿಯೇ ಇರದೆ ಮತ್ತಿನ್ನು ಹೊರಗೆ ಬಂದು ಈ ವಿಷಯ ವ್ಯವಹಾರದ ಮಾತನಾಡುವುದೇಕೆ? ಈ

ಬಾಹ್ಯಾಡಂಬರ ವ್ಯಾಪಾರಗಳಲ್ಲಿ ಏಕೆ ಮುಳುಗಬೇಕು ಮತ್ತು ಈ ದುಃಖಗಳನ್ನು ಏಕೆ ಅನುಭವಿಸಬೇಕು? ಪ್ರಶಾಂತವಾಗಿ ಏನೊಂದಿಲ್ಲದೆ ಸದಾ ಬ್ರಹ್ಮನಿಷ್ಠೆಯಲ್ಲೇ ಇದ್ದರಾಯಿತಲ್ಲಾ" ಎಂದು ಕೇಳಿದರು.

ಆದಕ್ಕೆ ಪರಮೇಶ್ವರ ಸ್ವರೂಪಿಗಳಾದ ಶ್ರೀಗುರುಗಳು ಮಂದಸ್ಮಿತ ವದನಾರ ವಿಂದರಾಗಿ ಹೀಗೆಂದರು:

"ಅಯ್ಯಾ! ನಿನ್ನ ಚಿತ್ತವು ಪರಮಪವಿತ್ರವಾಗಿ ಲೌಕಿಕ ವಿಷಯ ದೂರವಾಗಿ ಸುಕೋಮಲಸ್ಥಿತಿ ಶಿವಭಾವನೆಯಲ್ಲಿ ಇರುತ್ತೆಯಾದ್ದರಿಂದ ಅಂಥಾ ಸ್ವರೂಪನಿಷ್ಠೆ ಯಾವಾಗಲೂ ಇದ್ದರೆ ಚೆನ್ನಾಗಲ್ಲಾ! ಎಂದು ಕೇಳುತ್ತಿದ್ದೀರಿ. ಸಂತೋಷ, ಒಳ್ಳೇದು. ನಿನ್ನ ಚಿತ್ತವು ಎಷ್ಟೆಷ್ಟು ಬ್ರಹ್ಮವಿಚಾರಣ ದೃಷ್ಟಿಯಿಂದ ತದಾಕಾರವಾಗುತ್ತದೆಯೋ ಅಷ್ಟಷ್ಟಾಗಿ ಆ ಸ್ಥಿತಿಯಲ್ಲಿ ಅಪೂರ್ವವಾದ ಒಂದು ಸಂತೃಪ್ತಿಯುಂಟಾಗಿ ಅಲ್ಲಿ ಸ್ಥಿತಿ ಯಾಗುವುದು. ಇದು ಕೇವಲ ನಿವೃತ್ತಿ ಸುಖವಾದ ಪ್ರಸಂಗವಪ್ಪಾ! ಇನ್ನು ತತ್ತ್ವ ಜ್ಞಾನಿಗಳಾದರೋ ಸಹಜ ಸ್ಥಿತಿಯನ್ನು ಹೊಂದಿರುವರಾದ್ದರಿಂದ, ಅವರಿಗೆ ಲೌಕಿಕ ಪಾರಮಾರ್ಥಿಕಗಳೆಂಬ ಭಿನ್ನದೃಷ್ಟಿಯೇ ಇರುವುದಿಲ್ಲ. ಪ್ರಾರಬ್ಧಾನುಸಾರ ವ್ಯವಹಾರ ದೆಶೆಯಲ್ಲಿದ್ದರೂ ಅವರ ಜ್ಞಾನಕ್ಕೆ ಬಾಧೆಯಿಲ್ಲ. ಇರುವದೊಂದೇ ಪಾರಮಾರ್ಥಿಕ ಸತ್ತೆ. ಅದೇ ಅವರ ಸಹಜ ಸ್ಥಿತಿಯಾಗಿರುವುದು. ಅವರಲ್ಲಿ ಯಾವದಾದರೊಂದು ವ್ಯವಹಾರವಿದ್ದಂತೆ ಗೋಚರಿಸಿದರೂ, ಅದು ಕೇವಲ ಲೋಕಾನುಗ್ರಹಕ್ಕಾಗಿಯೇ ಎಂದು ತಿಳಿಯಬೇಕಪ್ಪಾ! ಅವರಿಗಾಗಿ ಏನೂ ಇರುವುದಿಲ್ಲ. ಆದ್ದರಿಂದ ಸ್ವಾಮೀ! ನಾವು ಆ ಕೇವಲ ಸ್ಥಿತಿಯಲ್ಲಿಯೇ ನಿಂತುಹೋದರೆ ನಿನಗೆ ಈ ತತ್ತ್ವವನ್ನು ತಿಳಿಸುವ ರಾರಪ್ಪಾ! ಆದ್ದರಿಂದ ನಿಮ್ಮಂಥಾ ಮುಮುಕ್ಷುಗಳ ಜನ್ಮಚರಿತಾರ್ಥಕ್ಕಾಗಿ ಬ್ರಹ್ಮ ವೇತ್ತರು ಬಹಿರ್ಮುಖತೆಯಿಂದ ಅದು ಇದು ನೋಡಿ ಮಾತನಾಡಿದರೂ ಮಾತನಾಡ ದವರೇ. ಅವರ ಬ್ರಹ್ಮದೃಷ್ಟಿಗೆ ಪ್ರಚ್ಯುತಿಯಿಲ್ಲ; ಮಾರ್ಪಾಡಾಗುವುದಿಲ್ಲ. ಅದು ಸಹಜಸ್ಥಿತಿ. ಈ ಸತ್ಯಾರ್ಥ ವಿಷಯಗಳೆಲ್ಲವೂ ಇನ್ನು ಮುಂದೆ ನಿನ್ನಲ್ಲಿಯೇ ನೀನು ನೋಡುವೆ. ಈ ಸ್ಥಿತಿಯನ್ನು ಕಾಣುವ ಕಣ್ಣು (ಶಕ್ತಿ)ಯನ್ನು ಶ್ರೀಗುರು ಪರಮಾತ್ಮ ನಿಮಗೆ ಪ್ರಸಾದಿಸಲಿ!" ಹೀಗೆಂದು ಅತ್ಯಂತ ವಾತ್ಸಲ್ಯದೊಡನೆ ಬೋಧಿಸಿದರು. ಮತ್ತೊಂದು ದಿನದಲ್ಲಿ ಪೂಜ್ಯ ಗುರುದೇವರು ಗುರುನಿಷ್ಠೆಯನ್ನು ಕುರಿತು ಹೇಳಿದರು.

ಸ್ವಾಮೀ! ಯಾವ ನಿಷ್ಠೆಯೂ ಗುರುನಿಷ್ಠೆಗೆ ಸಮವಲ್ಲ! (ಇಲ್ಲಿ ಗುರುಗಳು ಶಿಷ್ಯನಾದ ಚನ್ನಬಸವಸ್ವಾಮಿಯನ್ನು ಸ್ವಾಮೀ! ಎಂದು ಸಂಬೋಧಿಸುವ ಕಾರಣ ವೇನೆಂದರೆ, ಇವರು ಜನ್ಮತಃ ಗುರುಕುಲ ಸಂಜಾತರಾದ ಸ್ವಾಮಿಗಳೇ ಆದ್ದರಿಂದ ಗುರುಗಳು ಪ್ರೇಮಪೂರ್ವಕವಾಗಿ ಶಿಷ್ಯನನ್ನು ಸ್ವಾಮೀ ಎನ್ನುವದಾಗಿಯೇ ಸಂಬೋ ಧಿಸುತ್ತಿದ್ದರೆಂದು ಗ್ರಾಹ್ಯ. ನಮ್ಮ ಸ್ವಾಮಿಯವರ ಈ ಗುರುಗಳು ಭಕ್ತಸ್ಥಲದ ವೀರಶೈವರಾಗಿದ್ದರು.) ಎಷ್ಟು ಮಂತ್ರಗಳಿದ್ದರೂ ಗುರುಮಹಾಮಂತ್ರಕ್ಕೆ ಯಾವುದೂ

ಸಮವಲ್ಲ. ಯಾವನ ಸ್ಮರಣೆ ಮಾತ್ರದಿಂದಲೇ ಅಧಿಕಾರಿಗಳು ಸರ್ವಾನರ್ಥಗಳಿಂದ ನಿವೃತ್ತರಾಗಿ ಪರಮಶುಭವಾದ ಬ್ರಹ್ಮತತ್ವವನ್ನು ಪಡೆಯಲು ಸಮರ್ಥರಾಗುವರೋ ಅಂಥಾ ಗುರುದೇವರಲ್ಲಿ ದೃಢವಾದ ಭಕ್ತಿ ಶ್ರದ್ಧೆಗಳನ್ನಿಟ್ಟು ಚೆನ್ನಾಗಿ ಸೇವೆಯನ್ನು ಮಾಡಬೇಕು. ಶ್ರೀಮನ್ನಿಜಗುಣ ಶಿವಯೋಗಿಗಳು "ಶ್ರೀಗುರು ವಚನೋಪದೇಶವ ನಾಲಿಸಿದಾಗಳಹುದು ನರರಿಗೆ ಮುಕುತಿ" ಅನ್ನುವದಾಗಿ ಉತ್ತಮಾಧಿಕಾರಿಯನ್ನು ಕುರಿತು "ಆಲಿಸಿದಾಗಳೇ" ಕೇಳಿದ ಕೂಡಲೆ ಸಕೃಚ್ಛ್ರವಣ ಮಾತ್ರದಿಂದಲೇ ಜ್ಞಾನ ವುಂಟಾಗಿ ಮುಕ್ತನಾಗುವನೆಂದು ಹೇಳಿದ್ದಾರೆ. ಆದ್ದರಿಂದ ವತ್ಸಾ! ಎಲ್ಲಾ ಪದಾರ್ಥ ಗಳನ್ನು ನೋಡುವ ದೃಷ್ಟಿಯಿಂದ ಗುರುದೇವರನ್ನು ನೋಡಬಾರದು. ಅದನ್ನು ಸರ್ವವಿಲಕ್ಷಣ ಪರಮಪೂಜ್ಯವಾದ ದೃಷ್ಟಿಯಿಂದ ನೋಡುತ್ತಾ ಸದಾ ಅವರು ಹೇಳಿದ ಪ್ರಕಾರ ಪ್ರವರ್ತನಶೀಲನಾಗಿರಬೇಕು. ಆಗ ಹೃದಯದಲ್ಲಿ ಜ್ಞಾನನೇತ್ರವು ಪೂರ್ಣ ವಾಗಿ ಪ್ರಕಾಶಿಸುವುದು. ಎಲ್ಲೆಡೆಯಲ್ಲಿಯೂ ಗುರುತತ್ವವನ್ನು ಕಾಣುವ ಸಾಮರ್ಥ್ಯ ಉಂಟಾಗುತ್ತೆ. ಅದೇ ಭಕ್ತಿ" ಇತ್ಯಾದಿ ಅಮೃತೋಪಮವಾದ ವಾಕ್ಯಗಳನ್ನು ನುಡಿದರು.

ಮತ್ತೊಂದು ದಿನ ಶ್ರೀಗುರುದೇವರನ್ನು ಚನ್ನಬಸವಸ್ವಾಮಿ ಹೀಗೆ ಕೇಳಿದರು: ಪೂಜ್ಯ ಮಹಾಸ್ವಾಮೀ! ಜ್ಞೇಯ ಬ್ರಹ್ಮವೆಂತಲೂ ಧ್ಯೇಯ ಬ್ರಹ್ಮವೆಂತಲೂ ಹೇಳು ತ್ತಾರಲ್ಲಾ! ಹಾಗಾದರೆ ಬ್ರಹ್ಮಪದಾರ್ಥವು ದ್ವಿವಿಧವಾ? ಇದರ ಅಭಿಪ್ರಾಯವೇನು?"

ಗುರು: "ಸ್ವಾಮೀ! ವಸ್ತುತಃ ಬ್ರಹ್ಮಗಳು ಎರಡಿಲ್ಲ. ಗುಣರಹಿತವಾದ ಆತ್ಮಾನು ಭವಕ್ಕೆ ಜ್ಞೇಯ ಬ್ರಹ್ಮವೆಂತಲೂ ಸಗುಣಕ್ಕೆ ಧ್ಯೇಯ ಬ್ರಹ್ಮವೆಂತಲೂ, ಒಂದೇ ವಸ್ತುವಿಗೆ ಅಧಿಕಾರಿ ತಾರತಮ್ಯದಿಂದ ಆಯಾ ಪ್ರಸಂಗಾನುಸಾರ ಬೋಧೆಯನ್ನು ಕಲ್ಪಿಸಲಾಗಿದೆ. 'ವಸತೀತಿ ವಸ್ತುಃ' ಎಂದ ಹಾಗೆ ನಿಜವಾಗಿಯೂ ವಸ್ತುವು ಸಗುಣ ವೆಂತಲೂ ನಿರ್ಗುಣವೆಂತಲೂ ಹೇಳಲ್ಪಡುವುದಿಲ್ಲ ಈ ಎರಡು ಸಾಪೇಕ್ಷಿಕ ಪದಗಳು. ಸರ್ವವೂ ಅದೇ ಅನ್ನುವುದು ಕೂಡಾ ಔಪಚಾರಿಕವೇ "ಏಕಂ ಸದ್ವಿಪ್ರಾಬಹುಧಾ ವದಂತಿ" ಎಂಬ ಶ್ರುತಿ ವಾಕ್ಯವು ಈ ಭಾವವನ್ನೇ ಅರ್ಥವನ್ನೇ ಸ್ಥಿರಗೊಳಿಸುತ್ತದೆ." ಇತ್ಯಾದಿಯಾಗಿ ಹೇಳಿದರು.

ಒಂದಾನೊಂದು ದಿನ ಗುರುದೇವರು ಪ್ರಸಾದ ಸ್ವೀಕಾರ ಸಮಯ. ಅಂದರೆ ಭೋಜನ ಸಮಯದಲ್ಲಿ ಹೀಗೆಂದರು: "ಓ ಸ್ವಾಮೀ! ನೀವು ಯಾವಾಗಲೂ ಮತ್ತೇ ನನ್ನು ಯಾವುದನ್ನು ಅಂದುಕೊಳ್ಳಬೇಡಿ, ಸ್ಮರಿಸಬೇಡಿ. ನೀನು ಶಿವನಾಗಿಯೇ ಇದ್ದು ಶಿವನಾಗಿರುವಿ. ಒಳ್ಳೇ ವಿಚಾರ ದೃಷ್ಟಿಯಿಂದ ಪರಿಶೀಲಿಸಿ ಇದನ್ನು ತಿಳಿಯಬೇಕು. ಇದ್ದವು ಎರಡೇ ಪದಾರ್ಥಗಳೆಂದು ಹೇಳಲ್ಪಡುತ್ತವೆ. "ದೃಕ್ ದೃಶ್ಯೌದ್ವೌಪದಾರ್ಥೌ ಸ್ತಃ ಪರಸ್ಪರ ವಿಲಕ್ಷಣಾ। ದೃಕ್ ಬ್ರಹ್ಮ ದೃಶ್ಯಂ ಮಾಯೇತಿ ಸರ್ವವೇದಾಂತ ಡಿಂಡಿಮಃ" ಅನ್ನುವ ವಾಕ್ಯರೀತಿ ದೃಶ್ಯವೆಲ್ಲವೂ ತೋರಿ ಹಾರಿ ಹೋಗುವ ಅನಾತ್ಮ.

ಆತ್ಮ ದೃಗ್ರೂಪವು. ಅದೇ ಬ್ರಹ್ಮವು. ಅದು ನೀನು. ನಿರಾಲಂಬವಾದ ಆ ಸ್ಥಿತಿಯಲ್ಲಿ ಯಾವ ವಿಕಲ್ಪಗಳಿಲ್ಲದೆ ಸುಮ್ಮನಿರು. ಆಗ ನಿನಗೆ ಅನ್ಯವು ಅನ್ಯವಲ್ಲ ನೀನಾಗಿಯೇ ಇರುವಿ. ಬ್ರಹ್ಮವೆಂದರೆ ಯಾವದೋ ವಸ್ತುವು ಎಲ್ಲಿಯೋ ಇದೆ ಅಂತಲ್ಲ ಅದೇ ನೀನು. ಅಂಥಾ ನಿನ್ನನ್ನು ನೀನೇ ನೋಡುತ್ತಿರು."

ಹೀಗೆ ಗುರು ಸಾನ್ನಿಧ್ಯದಲ್ಲಿ ಸ್ವಾಮಿಗಳು ವಾಕ್ಯಾರ್ಥ ಶ್ರವಣಮನನಾದಿಗಳಿಂದಲೂ, ತಪೋಧ್ಯಾನಾದಿಗಳಿಂದಲೂ, ಶ್ರೀಗುರು ಸೇವೆಯಿಂದಲೂ, ಆಶ್ರಮ ಸೇವೆಯಿಂದಲೂ ಮನೋವಾಕ್ಕಾಯಗಳು ಪುಟಪಾಕಶೋಧಿತ ಸುವರ್ಣದಂತೆ ಪರಿಶುದ್ಧವಾಗಲು, ಗುರುಸನ್ನಿಧಿಯಲ್ಲಿ ಉಪದೇಶ ಸಾಹಸ್ರಿ, ಜ್ಞಾನವಾಶಿಷ್ಠ, ವಿಚಾರ ಸಾಗರ, ನೈಷ್ಕರ್ಮ್ಯ ಸಿದ್ಧಿ, ವೇದಾಂತ ಪಂಚದಶಿ, ಈ ಮುಂತಾದ ಗ್ರಂಥಗಳನ್ನು ಶ್ರವಣ ಮಾಡಿದರು. ಇಷ್ಟೇ ಅಲ್ಲದೆ ತಾವು ಹೈಸ್ಕೂಲಿನಲ್ಲಿ ಓದುವಾಗ ವೈದಿಕ ಕರ್ಮಾನುಷ್ಠಾನಕ್ಕಾಗಿ ಬೇಕಾದ ಸಂಸ್ಕೃತ ಭಾಷಾ ಪರಿಚಯವನ್ನು ಹೊಂದಿದ್ದುದರಿಂದ ಈಗ ಮತ್ತಿಷ್ಟು ಆತ್ಯಾದರಣೆಯಿಂದ ಅಭಿವೃದ್ಧಿಗೊಳಿಸಿಕೊಳ್ಳುತ್ತಾ ಭಗವದ್ಗೀತೆ, ಉಪನಿಷತ್ತುಗಳು, ಬ್ರಹ್ಮಸೂತ್ರ ಇವುಗಳನ್ನು ಅನ್ವಯಕ್ರಮವಾಗಿ ಅನ್ವಯಿಸಿಕೊಳ್ಳುತ್ತಾ, ಸಂಸ್ಕೃತ ಭಾಷಾಭಿವೃದ್ಧಿಯನ್ನು ಮಾಡಿಕೊಳ್ಳುತ್ತಿದ್ದರು. ಅವಿಶ್ರಾಂತವಾದ ಸ್ಥಿತಿಯ ಕೃಷಿಯನ್ನು ಮಾಡಿದರು. ಅಖಂಡವಾಗಿ ಹೀಗೆ ಮೂರು ವರ್ಷಗಳ ಕಾಲ ಗುರುಸನ್ನಿಧಿಯಲ್ಲಿ ಎಡಬಿಡದೆ ಇರುತ್ತಿರಲಾಗಿ, ಸ್ವಾಮಿಗಳವರಿಗೆ ಅಂದರೆ ನಮ್ಮ ಚಿಕ್ಕ ಸ್ವಾಮಿಗಳವರಿಗೆ ಕೆಲವು ಕಷ್ಟಗಳು ಬಂದವು. "ಶ್ರೇಯಾಂಸಿ ಬಹು ವಿಘ್ನಾನಿ" ಅನ್ನುವಂತೆ, ಒಂದನೆಯದು ಮನೆಯವರಿಗೆ ಮತ್ತು ಬರಲಿಲ್ಲವೇ ಎನ್ನುವ ಹಾವಳಿ; ಎರಡನೆಯದು ಮಲೇರಿಯಾ ಜ್ವರ; ಮೂರನೆಯದು ಇದು ನಮಗೆ ಆಚ್ಚಿ ಬರಲಿಲ್ಲ, ಆದ್ದರಿಂದ ಇನ್ನು ಸ್ವಾಮಿ ಗುರುಕುಲವಾಸವನ್ನು ಬಿಟ್ಟು ಮನೆಗೆ ಬರಬೇಕು ಎನ್ನುವ ಹಲವು ಲೌಕಿಕರ ಛಾಂದಸವು.

ಈ ದಿನಗಳಲ್ಲಿಯೇ ಒಂದು ದಿನ ಶ್ರೀಸ್ವಾಮಿಗಳವರ ಜನ್ಮಸ್ಥಾನದಿಂದ ವೃದ್ಧರಾದ ರೆಡ್ಡಿಯೊಬ್ಬರು ಬಂದು ನಮ್ಮ ಸ್ವಾಮಿಗಳೊಂದಿಗೆ:

"ಏನು ಸ್ವಾಮಿ! ಇಷ್ಟು ಚಿಕ್ಕ ವಯಸ್ಸಿನಲ್ಲೇ ನಿಮಗೆ ವೇದಾಂತವಾ? ಇದೆಲ್ಲಾ ಏತಕ್ಕೆ ಬಂದ ಗೊಡವೆಪ್ಪಾ. ನಿನ್ನ ಅವ್ವ ತಾತನವರ ದೊಡ್ಡ ಆಸ್ತಿಯನ್ನು ಬೇಕಾದಷ್ಟು ಇಟ್ಟುಕೊಂಡು– ದೌಹಿತ್ರ ಬಾಧ್ಯತೆಯಿಂದ ನಿಮ್ಮ ಹೆಸರಿನಲ್ಲೇ ಎಲ್ಲಾ ಆಸ್ತಿಗಳನ್ನು ನಿಮಗೆ ಮಾಡಿರಲು, ಅದನ್ನೆಲ್ಲ ಬಿಟ್ಟು ಹೀಗಿರುವದು ನಿನಗೆ ಸರಿಯಲ್ಲ. ಬಂಗಾರದಂತಹ ಹೊಲ ಮನೆಯನ್ನು ಬಿಡಬಾರದು. ಮನೆಯಲ್ಲಿದ್ದು ನೋಡಿಕೊಳ್ಳುತ್ತಾ ಸುಖವಾಗಿರಬಾರದೇ. ಈ ವೇದಾಂತ, ಆಶ್ರಮವಾಸ ನಿನಗೇಕಯ್ಯಾ? ನಿನಗೇನು ಆ ವಯಸ್ಸಾಗಿದೆಯಾ? ಇಲ್ಲ. ಸಣ್ಣವರಾಗಿದ್ದೀರಿ" ಎಂಬುದಾಗಿ ಹೇಳಿದರು. ಅದಕ್ಕೆ ಸ್ವಾಮಿಗಳವರು: "ಹಾಗಾದರೆ ತಾತಾ ಮತ್ತೆ ವೇದಾಂತವನ್ನು ಯಾವ ವಯಸ್ಸಿನಲ್ಲಿ ಅಭ್ಯಾಸ ಮಾಡಬೇಕು? ಅನುಷ್ಠಿಸಬೇಕು?" ಎಂದು ಕೇಳಿದರು.

ಅದಕ್ಕೆ ಆ ತಾತ: 60, 70 ವರ್ಷಗಳಾದ ಮೇಲೆ ವೇದಾಂತ. ಮತ್ತೇನೋ ಈಗೇನಿದೆ. ಈಗ ಬೇಡವೆಂದು ತಮ್ಮ ಸ್ವಭಾವವಾದ ಮಾತುಗಳಿಂದ ಮಾತನಾಡಿದರು. ಅದಕ್ಕೆ ಸ್ವಾಮಿಗಳವರು, "ತಾತನವರೇ ತಮ್ಮ ವಯಸ್ಸು ಎಷ್ಟೆಂದು ಕೇಳಲು 73 ವರ್ಷಗಳೆಂದರು. ಹಾಗಾದರೆ ಸರಿಯಪ್ಪಾ, ನಾನು ಮನೆಗೆ ಹೋಗುತ್ತೀನಿ, ನಿಮಗೆ ವಯಸ್ಸು ಸರಿಹೋಗಿದೆ ಇಲ್ಲೇ ಇದ್ದು ಬಿಡಿರಿ" ಎಂದು ಸ್ವಾಮಿಗಳೆಂದರು.

ಅದಕ್ಕೆ ರೆಡ್ಡಿಯವರು: ನಿಮ್ಮ ಹತ್ತಿರ ನಾವೇನು ಮಾತನಾಡಲಾರೆವು. ನಿಮ್ಮ ವೇದಾಂತ ನಮಗೆ ಬೇಡಪ್ಪಾ ಎಂದು ಅಂದುಕೊಳ್ಳುತ್ತಾ ಹೊರಟು ಹೋದರು.

ಆದರೇನು ಗುರುವು ದೊಡ್ಡವನು. ತತ್ವದರ್ಶಿಯಾದ್ದರಿಂದ ಎಲ್ಲಾ ಪ್ರತಿಬಂಧಗಳನ್ನು ಕಷ್ಟಗಳನ್ನು ದೂರೀಕರಿಸಲು ಏಕಾಂತವಾಸವಾದ ಕುಂದನಗುರ್ತಿ ಗ್ರಾಮದಲ್ಲಿರುವ ಶ್ರೀ ಶಿವಲಿಂಗಾಶ್ರಮ ತಪೋಸ್ಥಲಕ್ಕೆ ಸ್ವಾಮಿಗಳನ್ನು ಕಳುಹಿಸಿದರು.

# ಶ್ರೀ ಶಿವಲಿಂಗಾಶ್ರಮ ನಿವಾಸ

ಕುಂದನಗುರ್ತಿಯಲ್ಲಿರುವ ಪುನೀತವಾದ ಈ ಆಶ್ರಮವು ಶ್ರೀ ಶಿವಲಿಂಗಾರೂಢ ಸ್ವಾಮಿಯವರ ಪಾದಧೂಳಿಯಿಂದ ಪವಿತ್ರವಾದ ಸುಕ್ಷೇತ್ರ. ತಪಸ್ಸಿಗೆ ಅನುಕೂಲವಾದ ಸ್ಥಾನ. ಇದೊಂದು ದೊಡ್ಡ ಗಿರಿಯಲ್ಲ, ಗಿರಿಯಲ್ಲದೆಯೂ ಹೋಗಿಲ್ಲ. ದೊಡ್ಡ ಅಡವಿಯೂ ಅಲ್ಲ, ಅಡವಿಯಲ್ಲದೆಯೂ ಹೋಗಿಲ್ಲ. ಊರಿಗೆ ದೂರವೂ ಅಲ್ಲ, ಸಮೀಪವೂ ಅಲ್ಲ. ಹೀಗಿರುವ ಈ ಆಶ್ರಮದಲ್ಲಿ ತಪಸ್ಸಿಗೆ ಅನುಕೂಲವಾದ ಒಂದು ಒಳ್ಳೆಯ ಗುಹೆ ಇದೆ. ಸರ್ವ ಗುಣಾನ್ವಿತವಾಗಿ ಎಲ್ಲಾ ವಿಧದಿಂದಲೂ ಸಾಧಕರಿಗೆ ಸಾಧನಾನುಷ್ಠಾನಕ್ಕೆ ಅನುಕೂಲವಾದ ಪವಿತ್ರ ವಾತಾವರಣದಿಂದ ಕೂಡಿದ ಆಶ್ರಮ ವಿದು. ಇಲ್ಲಿ ಶ್ರೀ ಶಿವಲಿಂಗಾರೂಢ ಸ್ವಾಮಿಗಳವರ ಶಿಷ್ಯರು ಇದ್ದಾರೆ ಮತ್ತು ಈ ಗ್ರಾಮದಲ್ಲಿ ಸದಾನಂದ ಸದ್ಗುರು ಸ್ವಾಮಿಗಳವರ ಶಿಷ್ಯರೂ ಇದ್ದಾರೆ. ಇವರೆಲ್ಲರ ಭಕ್ತಿಯುತವಾದ ಪ್ರಾರ್ಥನೆಯನ್ನು ಮನ್ನಿಸಿ ಶ್ರೀ ಸದಾನಂದ ಸದ್ಗುರು ಸ್ವಾಮಿ ಗಳವರು ಶ್ರೀ ಚನ್ನಬಸವಸ್ವಾಮಿಗಳನ್ನು ಕುಂದನಗುರ್ತಿಗೆ ಕಳುಹಿಸಿದರು. ಹೀಗೆ ಕಳುಹಿಸುವಾಗ ಶಿಷ್ಯನಿಗೆ ಗುರುವು ಕೆಲವು ಹಿತವಾಕ್ಯಗಳನ್ನು ಹೇಳಿದರು.

"ಸ್ವಾಮೀ! ಇನ್ನು ಮೇಲೆ ನೀವು ಆ ಗಿರಿಯಲ್ಲಿ ಏಕಾಂತ, ಗುರುನಿಷ್ಠಾ ಸಂಪನ್ನ ವಾದ ಸದಾಚಾರ ಪರಾಯಣರಾಗಿ, ಗುರುಸನ್ನಿಧಿಯಲ್ಲಿ ನಿಯಮಿಸಿದ ಎಲ್ಲಾ ಕಾರ್ಯ ಗಳು ನಿಯಮ ನಿಷ್ಠೆಗಳಿಂದ ಅಧ್ಯಯನಶೀಲ ಸಂಪನ್ನರಾಗಿ ಚೆನ್ನಾಗಿರಬೇಕು. ಅನುದಿನ ಆಶ್ರಮದಲ್ಲಿ ಶಾಸ್ತ್ರ ಶ್ರವಣಾದಿಗಳನ್ನು ನಡೆಯಿಸಬೇಕು, ಗುರುಶಾಸ್ತ್ರಗಳಲ್ಲಿ ಅನನ್ಯ ವಾದ ಭಕ್ತಿಯಿರಲಿ. ಜೀವನ ಪರಮ ಲಾಭವು ಲಕ್ಷ್ಯವಾದ ಆತ್ಮಶಾಂತಿಯನ್ನು ಹೊಂದಬೇಕು. ಅತ್ಯಂತ ಶ್ರದ್ಧೆಯಿಂದ ನಿಯಮ ಪ್ರಕಾರ ಅಜಪ ಗಾಯತ್ರಿ ಹಂಸೋ ಪಾಸನವನ್ನು ಮಾಡುತ್ತಿರಬೇಕು ಮತ್ತು ಪ್ರಣವ ಪಂಚಾಕ್ಷರ ಮಹಾಮಂತ್ರವನ್ನು ಎಡೆಬಿಡದೆ ಭಕ್ತಿಯಿಂದ ಜಪಿಸುತ್ತಿರಬೇಕು. ಅದೇ ನಿಮಗೆ ಅವಿಭಾಜ್ಯವಾದ ಅಕ್ಷಯ ಸುಖವನ್ನೀಯುವುದು." ಹೀಗೆಂದು ಬೋಧಿಸುತ್ತಾ ಆಶೀರ್ವದಿಸಿ ಅಲ್ಲಿಗೆ ಬಂದ ಆ ಭಕ್ತರೊಡನೆ ಕುಂದನಗುರ್ತಿ ಶ್ರೀ ಶಿವಲಿಂಗಾಶ್ರಮಕ್ಕೆ ಕಳುಹಿಸಿದರು.

ಈ ಏಕಾಂತ ಸ್ಥಾನದಲ್ಲಿ ಸ್ವಾಮಿಗಳು ತಪೋಧ್ಯಾನಾನುಷ್ಠಾನಗಳಿಂದಲೂ, ಎರಡು ವೇಳೆಗಳಲ್ಲಿ ವೇದಾಂತ ವಿಚಾರರೂಪ ಶಾಸ್ತ್ರ ಶ್ರವಣವನ್ನು ನಡೆಸುತ್ತಾ, ಪ್ರಸ್ಥಾನತ್ರಯ ಭಾಷ್ಯಾರ್ಥಗಳನ್ನು ಮತ್ತು ಪ್ರಕರಣ ಗ್ರಂಥಗಳನ್ನು ಉತ್ತಮ ರೀತಿ ಯಲ್ಲಿ ಅವಲೋಕನ ಪ್ರವಚನಾದಿ ಕಾರ್ಯಗಳಿಂದ, ಅಲ್ಲಿಯ ಭಕ್ತವೃಂದದೊಂದಿಗೆ ಅನನ್ಯವಾಗಿ ಇರುತ್ತಾ ಎರಡು ವರ್ಷಗಳ ಕಾಲಪರ್ಯಂತವೂ ದೀಕ್ಷಾಬದ್ಧರಾಗಿ

ಇದ್ದರು. ಆ ಆನಂದದ ದಿನಗಳು ಮರೆವಿಗೆ ಬಾರದವು. ಆಗಿನ ಒಂದು ಪ್ರಸಂಗ ಶ್ರೀಗಳವರು ಭಾವಾವೇಶದಿಂದ ಪ್ರಾರ್ಥಿಸುತ್ತಿದ್ದ ವಿಷಯವನ್ನು ತಿಳುಹಲಾಗುತ್ತೆ.

“ಪರಾತ್ಪರಾ! ಪ್ರಭೋ! ಗುರುದೇವಾ! ನೀನೊಂದು ಸಲ ಉತ್ತಮ ಪಂಡಿತ ನಂತೆಯೂ, ಇನ್ನೊಂದು ಸಲ ಜಡರೂಪನಾ! ಎಂದ ಹಾಗೆಯೂ, ಮತ್ತೊಮ್ಮೆ ಸಮಾಧಿ ನಿಷ್ಠಾಗರಿಷ್ಠನಾಗಿಯೂ, ಮಗದೊಂದು ವೇಳೆ ಮಹಾವ್ಯಾವಹಾರಿಕ ನಾಗಿಯೂ, ಇನ್ನೊಂದಾವೃತ್ತಿ ಮಹಾರಾಜನಂತೆ ಸುಖವನ್ನನುಭವಿಸುವನಾಗಿಯೂ, ಭಿಕ್ಷುಕನಂತೆಯೂ ಮತ್ತು ಪರಮ ಸಾತ್ವಿಕನಾಗಿಯೂ ಮಹಾ ರಾಜಸಿಕನಾಗಿಯೂ ಕಡೆಗೆ ತಾಮಸಿಕನಾಗಿಯೂ, ಎಲ್ಲಾ ನಾಮರೂಪಗಳಿಂದ ನೀನು ತಾಂಡವಿಸುವ ವೇಳೆ ಯಲ್ಲಿ ಆ ಈ ಪ್ರಚಂಡ ಪ್ರಕೃತಿ ಬಾಹ್ಯ ವಿಡಂಬನವನ್ನು ಕಂಡು ಏತತ್ಸತ್ಯವನ್ನ ಕಾಣದೆ ಮೋಸಹೋಗಿ ಅಹಂಕಾರ ಕಾಮಾದಿ ಶತ್ರುವರ್ಗದಲ್ಲಿ ಸಿಲುಕಿ ಅನರ್ಥಗಳ ಪಾಲಾಗದಂತೆ, ಕುದೃಷ್ಟಿಯನ್ನು ದೂರಮಾಡಿ, ಆತ್ಮರಾಮನಾದ ನಿನ್ನನ್ನು ನಿನ್ನ ನಿಜಸ್ವರೂಪವನ್ನು ಅಧಿಷ್ಠಾನ ಸ್ಮೃತಿಯನ್ನು ಪಡೆದು ನಾನೇ ನೀನೆಂದು ನೋಡುವ ಸಮಾಧಾನವು, ಪರಮ ಪವಿತ್ರ ದೃಷ್ಟಿಯನ್ನು (ಒಳಗಣ್ಣನ್ನು) ನನಗೆ ಪ್ರಸಾದಿಸಿ ರಕ್ಷಿಸು. ದೇವಾ! ಎಲ್ಲಾ ರೂಪಗಳು ನೀನೇಯಲ್ಲವೇ? ನಿನಗೆ ಅನ್ಯವೇ ಬೇರೊಂದಿಲ್ಲ ದಾಗ ನಮ್ಮನ್ನು ನಿನಗಿಂತಲೂ ಅನ್ಯವಾಗಿ ಏತಕ್ಕೆ ಮಾಡುವೆ? ಹಾಗಲ್ಲದೆ ಎಲ್ಲೆಡೆ ಯಲ್ಲಿಯೂ ನಿನ್ನನ್ನು ನೋಡುವ ನೇತ್ರವನ್ನು ದಯಪಾಲಿಸು. ನಿನ್ನಲ್ಲಿ ಅವಿಚ್ಯುತ ಭಕ್ತಿ ಪ್ರಪತ್ತಿಗಳು ಉಳ್ಳವರಾಗಿ ವರ್ತಿಸುವಂತೆ ಮಾಡು. ನಿನ್ನನ್ನು ಭಜಿಸುವ ನಾವು (ನಾನು) ನಿನಗಿಂತಲೂ ಅನ್ಯವಲ್ಲ. ನೀನೇ ನಾನೆಂಬ ಅದ್ವಿತೀಯ ದೃಷ್ಟಿ ಯನ್ನು ದಯಪಾಲಿಸು ಪ್ರಭೂ! ಪರಮಶಿವಾ! ಗುರುದೇವಾ!

ತೇಷಾಂ ಸತತ ಯುಕ್ತಾನಾಂ ಭಜತಾಂ ಪ್ರೀತಿ ಪೂರ್ವಕಂ ।
ದದಾಮಿ ಬುದ್ಧಿ ಯೋಗಂ ತಂ ಯೇನ ಮಾಮುಪಯಾನ್ತಿ ತೇ ॥
ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮ ಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥
(ಗೀತೆ ಅ. 10 ಶ್ಲೋ. 10-11)

“ನನ್ನನ್ನೇ ನಂಬಿ ಸತತವು ಭಜಿಸುವ ಭಕ್ತರ ಮೇಲೆ ದಯೆಯಿಂದ ನನ್ನನ್ನು ಹೊಂದಲು ಯೋಗ್ಯವಾದ ಬುದ್ಧಿಯೋಗವನ್ನು ಅನುಗ್ರಹಿಸಿ, ಅಜ್ಞಾನರೂಪವಾದ ಕತ್ತಲೆಯನ್ನು ಜ್ಞಾನವೆಂಬ ದೀಪ ಪ್ರಕಾಶದಿಂದ ನಿವಾರಿಸುತ್ತಾ, ನನ್ನಲ್ಲಿ ಪ್ರಬೋಧೆ ಯನ್ನು ಪಡೆಯುವಂತೆ ಮಾಡಿಕೊಳ್ಳುವೆನೆಂಬ ಶ್ರೀಮುಖದ ನುಡಿಯೇ ಅಂದರೆ ಭಗವದ್ಗೀತಾ ವಾಕ್ಯವು ಹೀಗೆಂದು ಹೇಳುತ್ತಿದೆಯಲ್ಲಾ! ನಮ್ಮನ್ನು ಕಾಪಾಡಯ್ಯಾ! ನಮ್ಮ ಭಕ್ತಿ ವಿಶ್ವಾಸಗಳಲ್ಲಿ ತಿಳಿಯದೆ ಏನಾದರೂ ಲೋಪವಿದ್ದರೆ ಸಂಸ್ಕರಿಸು, ಶಿಕ್ಷಿಸು.

ನಿನ್ನ ಆಶ್ರಯವನ್ನು ಕೊಟ್ಟು ರಕ್ಷಿಸು, ಓಂ." ಈ ಪ್ರಕಾರ ಶ್ರೀಯವರು ಆಗಾಗ ಶ್ರವಣ ಸಮಯದಲ್ಲಿ ಮಾತನಾಡುತ್ತಿದ್ದರಂತೆ. ಒಂದಾನೊಂದು ದಿನ ಸಂಭಾಷಣೆ—

ಪ್ರಶ್ನೆ: ಪೂಜ್ಯಸ್ವಾಮೀ! "ಕ್ಷುರಸ್ಯಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋವದನ್ತಿ" ಎಂದು ಶ್ರೀಗಳು ಶ್ರುತಿಯನ್ನು ಹೇಳುತ್ತಿದ್ದೀರಲ್ಲಾ, ಹಾಗಾದರೆ ಮೋಕ್ಷ ಮಾರ್ಗವು ಅಷ್ಟು ಕಠಿಣವಾದದ್ದಾ? ಎಂದು ಪ್ರಶ್ನಿಸಿದರು.

ಉತ್ತರ: ಹಾಗೇನು ಇಲ್ಲ. ಶ್ರುತಿಮಾತೆ ವಸ್ತುತತ್ವದ ಅಪೂರ್ವತೆಯನ್ನು ಹೇಳುವದಕ್ಕಾಗಿ ಶ್ರದ್ಧೋತ್ಪಾದನಾರ್ಥವಾಗಿ ಹಾಗೆ ಹೇಳಿದೆ. ತತ್ವತಃ ಹಾಗಿಲ್ಲ. ನಿಜವಾದ ಉತ್ತಮ ಶ್ರದ್ಧೆಯಿಂದ ತತ್ವವನ್ನು ಅರಿತರೆ ಅಷ್ಟು ಕಷ್ಟವಿಲ್ಲ. ಅರ್ಥಾತ್ ಅಸಾಧ್ಯವೆಂತಲ್ಲ, ಕಷ್ಟಸಾಧ್ಯವೆಂಬರ್ಥವು ಶ್ರುತಿಯಲ್ಲಿ ನಿನದಿಸುತ್ತೆ. ಶ್ರದ್ಧಾವಂತನಿಗೆ ಸಾಧ್ಯವು ಶ್ರದ್ಧಾಸೂಚಕವೇ ಈ ಮಾತು. ಆ ವಸ್ತುತತ್ವವು ದೂರವೂ ಅಲ್ಲ, ಸಾಮೀಪ್ಯವೂ ಅಲ್ಲ, ಸಂಪ್ರಾಪ್ತವಾಗುವದೂ ಅಲ್ಲ. ಅದು ನೀನೇಯಾಗಿದ್ದೀಯಿ ಸ್ವಸಂವೇದ್ಯವು. ಪರಮಶಾಂತವು "ಶ್ರದ್ಧಾವಾನ್ ಲಭತೇ ಜ್ಞಾನಂ" "ಶ್ರದ್ಧೇಯ ಮಾತ್ಮ ಜ್ಞಾನಂ" ಎಂಬರ್ಥವನ್ನು ಶ್ರುತಿ ಸೂಚಿಸಿದೆ. ವಿಷಯದ ಅಪೂರ್ವತೆಯನ್ನು ತಿಳುಹಿದೆ. ಅಶ್ರದ್ಧಾಳುವಿಗೆ ಮಾತ್ರ ಅದು ದುರತ್ಯಯವೇ ಎಂದು ಅರ್ಥ.

ಈ ಗ್ರಾಮದಲ್ಲಿ ಶ್ರೀ ಸದಾನಂದ ಸದ್ಗುರು ಸ್ವಾಮಿಗಳವರ ಶಿಷ್ಯರಲ್ಲಿ ಉತ್ತಮ ಸೇವಾಧುರಂಧರರು ಆಂಜನೇಯಸ್ವಾಮಿಯಂತಹ ಇಬ್ಬರು ಬ್ರಹ್ಮಚಾರಿ ಗಳಿದ್ದರು. ಒಬ್ಬರು ಶಿವಲಿಂಗಪ್ಪ ಮತ್ತೊಬ್ಬರು ನಲ್ಲಸಯ್ಯ. ಇವರು ಅಧಿಕ ಕಾಲವು ಆಶ್ರಮದಲ್ಲಿಯೇ ಶ್ರೀ ಸನ್ನಿಧಿಯಲ್ಲಿ ಇರುತ್ತಿದ್ದರು. ಇವರಿಬ್ಬರೇ ಅಲ್ಲದೆ ಸಹೃದಯರಾದ ಗೃಹಸ್ಥ ಶಿಷ್ಯರು ಇದ್ದರು. ಆಯಾ ನಿಯಮಿತ ಕಾಲಗಳಲ್ಲಿ ಸ್ವಾಮಿ ಗಳವರ ಸನ್ನಿಧಿಗೆ ಬಂದು ಶ್ರವಣಾದಿ ಕಾರ್ಯಗಳನ್ನು ಮುಗಿಸಿಕೊಂಡು ಹೋಗು ತ್ತಿದ್ದರು. ಇನ್ನು ಶ್ರೀಗಳವರಿಗೆ ಅನುದಿನ ಶುಚಿರ್ಭೂತರಾಗಿ ಭಕ್ತಿಪೂರ್ವಕವಾಗಿ ವೇದಮೂರ್ತಿ ಪಂಪಯ್ಯಸ್ವಾಮಿ ಮತ್ತು ಶ್ರೀ ಜಾಬಾಲ ಹನುಮಪ್ಪ ಕುಟುಂಬ ದವರು ಭಿಕ್ಷೆಯನ್ನು (ಪ್ರಸಾದವನ್ನು) ಕೊಡುತ್ತಿದ್ದರು. "ಶ್ರೀ ಸ್ವಾಮಿಗಳವರ ಪ್ರಸಾದ ನಿಯಮವೆಂದರೆ ಪರಮ ಸಾತ್ವಿಕವಾದದ್ದು. ಅಂದರೆ ಸಪ್ಪನ ಬೇಳೆ ಕಟ್ಟು, ಅನ್ನ, ಮಜ್ಜಿಗೆ, ಮತ್ತಿನ್ನಿತರ ಉಪ್ಪು ಕಾರಗಳಿಲ್ಲ. ಕಲ್ಲುಪ್ಪು ಮಾತ್ರ ಸ್ವಲ್ಪ ಬಳ ಸುತ್ತಿದ್ದರು. ಈ ಆಹಾರವೇ ಮೊದಲಿನಿಂದಲೂ ಇಂದಿನವರೆಗೂ. ಯಾವಾಗಲೂ ಇದೇ ಸ್ವಭಾವ ಸಿದ್ಧವಾದ ಸಹಜ ಆಹಾರ.

"ಬಲಂಬಲವತಾಚಾಹಂ ಕಾಮರಾಗ ವಿವರ್ಜಿತಮ್" ಅಂದಂತೆ ಪರಮ ಪವಿತ್ರ ವಾದ ಸಾತ್ವಿಕ ಓಜಶ್ಶಕ್ತಿ, ನಿರ್ಮೋಹವಾದ ಶರೀರ ಸಂಪತ್ತು ಸ್ವಾಮಿಯವರಲ್ಲಿ ರುವುದು. ಇದು ಜನ್ಮಾಂತರ ನಿಷ್ಕಾಮ ತಪಃ ಫಲವೆಂದು ತಿಳಿಯುತ್ತೆ.

"ಕುಕ್ಷೌ ತಿಷ್ಠತಿ ಯಸ್ಯಾನ್ನಂ ಬ್ರಹ್ಮಜ್ಞಾನೇನ ಜೀರ್ಯತೇ । ಸನಿಸ್ತರತಿ ದಾತಾರಂ ದಶ ಪೂರ್ವಾನ್ ದಶಾಪರಾನ್" ಅಂದ ಹಾಗೆ ಯಾವ ಪುಣ್ಯಪುರುಷನಿಗೆ ಕೊಟ್ಟ ಅನ್ನೋದಕಗಳು, ಅವರಲ್ಲಿ ಬ್ರಹ್ಮಾನುಸಂಧಾನಾತ್ಮಕವಾಗಿ ಬ್ರಹ್ಮನಿಷ್ಠೆಯಿಂದ ಜೀರ್ಣವಾಗುವದೋ, ಆ ಭಿಕ್ಷೆಯನ್ನಿತ್ತ ಪುಣ್ಯಾತ್ಮರು ಹಿಂದೆ ಹತ್ತು ಮುಂದೆ ಹತ್ತು ತರಗಳವರು ಧನ್ಯರಾಗುವರೆಂದು ಪ್ರಮಾಣ. ಆದ್ದರಿಂದ ಶ್ರೀ ಸ್ವಾಮಿಗಳವರಿಗೆ ಭಿಕ್ಷೆಯನ್ನಿತ್ತ ಪುಣ್ಯಾತ್ಮರು ಧನ್ಯರು. ಅವರ ವಂಶವು ಪಾವನ.

"ಯತಿರ್ಯಸ್ಯ ಗೃಹೇ ಭುಂಕ್ತೇ ತಸ್ಯ ಭುಂಕ್ತೇ ಹರಿಃ ಸ್ವಯಂ ।
ಹರಿರ್ಯಸ್ಯ ಗೃಹೇ ಭುಂಕ್ತೇ ತಸ್ಯ ಭುಂಕ್ತೇ ಜಗತ್ರಯಂ ॥
ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ ।
ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಂ ಏವಚರಾಚರಮ್" ॥

ಹೀಗೆಂದು ಈ ಪ್ರಮಾಣವನ್ನು ಶ್ರೀಗಳವರು ಪ್ರಸಾದ ಭಿಕ್ಷೆಯ ಮಹಿಮೆಯನ್ನು ಕುರಿತು ಉದಾಹರಿಸಿ, ಅದರ ಅರ್ಥದ ವಿವರವನ್ನು ಭಕ್ತರೊಂದಿಗೆ ತಿಳುಹುತ್ತಿದ್ದರು.

# ಅರುಣಾಚಲ ರಮಣ ದರ್ಶನ

ಶ್ರೀಗಳವರಿಗೆ ಬಹುಕಾಲದಿಂದ ಭಗವಾನ್ ಶ್ರೀ ರಮಣ ಮಹರ್ಷಿಗಳವರನ್ನು ಸಂದರ್ಶಿಸಿ, ಅವರ ದಿವ್ಯಸನ್ನಿಧಿಯಲ್ಲಿ ಸಂಭಾಷಣೆಯನ್ನು ಮಾಡಿ, ಶ್ರೀ ಮುಖದಿಂದ ಬರುವ ಕೃಪಾಮಯವಾದ ಅವರ ಪ್ರಸಾದ ವಾಕ್ಕುಗಳನ್ನು ಕೇಳಬೇಕೆಂಬ ಇಚ್ಛೆ ಇತ್ತು. ಅದಕ್ಕಾಗಿ ಶಿವಲಿಂಗಾಶ್ರಮ ಭಕ್ತರೊಂದಿಗೆ ಕಲೆತು ತಿರುವಣ್ಣಾಮಲೈ ಅರುಣಾಚಲ ಶ್ರೀ ರಮಣ ಋಷಿಗಳ ದರ್ಶನಾರ್ಥವಾಗಿ ಹೊರಟರು. ಶ್ರೀ ರಮಣಾಶ್ರಮದಲ್ಲಿ ಶ್ರೀ ರಮಣ ಮಹರ್ಷಿಗಳವರ ಚರಣ ಕಮಲಗಳಿಗೆ ತಮ್ಮ ಶಿರಸ್ಸನ್ನಿಟ್ಟು ನಮಸ್ಕರಿಸಿ, ಮೌನಗಂಭೀರವಾದ ಆ ಸಭಾಸಾಗರದಲ್ಲಿ ವಿನಮ್ರವಾಗಿ ಕೂತು ರಮಣರನ್ನು ವೀಕ್ಷಿಸುತ್ತಾ ಆಮೇಲೆ ಎದ್ದು ದಂಡವತ್ಪ್ರಣಾಮಗಳನ್ನು ಆಚರಿಸಿ ವಿನಯವಾಗಿ ಹೀಗೆಂದು ಪ್ರಶ್ನಿಸಿದರು:

ಭಗವನ್! ಆತ್ಮ (ತಾನು) ಸಚ್ಚಿದಾನಂದ ಸ್ವರೂಪನೇ ಎಂಬುದಾಗಿ ಗುರು, ಶ್ರುತಿಗಳು ಹೇಳುತ್ತವೆ. ಆದರೂ ಸತ್ತು ಚಿತ್ತುಗಳು ಮಾತ್ರ ವೇದ್ಯವಾಗುತ್ತವೆ. ಆನಂದವು ಸರ್ವಕಾಲದಲ್ಲಿ ಭಾಸವಾಗುವುದಿಲ್ಲವಲ್ಲಾ! ಇದಕ್ಕೆ ಕಾರಣವೇನು? ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ತಮ್ಮ ಕೃಪಾಮಯ ದೃಷ್ಟಿಯಿಂದ ಅತ್ಯಂತ ಶಾಂತ ಸಾಮ್ಯ ವದನಾರವಿಂದರಾಗಿ ಮಹರ್ಷಿ ಪುಂಗವರು ಹೀಗೆಂದರು:

"ಆ! ಸತ್ತು ಚಿತ್ತುಗಳಿಗೆ ಬೇರೆಯಾಗಿ ಆನಂದ ಹಿಂದಿದೆಯಾ! ಇಲ್ಲವಲ್ಲಾ? ಸರ್ವ ಸಂಕಲ್ಪಗಳ ಸಂಪೂರ್ಣ ನಾಶವೇ ಸರ್ವದಾ ಆನಂದಾನುಭವವು. ಅದು ಸತ್ತು ಚಿತ್ತುಗಳಿಗೆ ಬೇರೆಯಾಗಿಲ್ಲ ನಿದ್ರೆಯಲ್ಲಿ ನೀನು ಬೇರೆ ನಿನ್ನ ನಿದ್ರೆ ಬೇರೆಯಾದೆಯಾ? ಇಲ್ಲವಲ್ಲಾ! ಅಲ್ಲಿ ನಿಂತು ನೋಡು, ನಿನ್ನ ಸ್ವರೂಪವು ಸದಾ ಆನಂದವೇ" ಹೀಗೆಂಬ ಅಮೃತೋಪಮವಾದ ವಾಕ್ಯಗಳನ್ನು ಉಪದೇಶಿಸಿದರು. ಆ ಪರಾವಾಣಿಯನ್ನು ಕೇಳಿ ಭೃಂಗವು ತಾವರೆಯ ಹೂವನ್ನು ಆಶ್ರಯಿಸಿ ಅದರಲ್ಲಿರುವ ಮಧುವನ್ನು ಮೈಮರೆತು ಸ್ವೀಕರಿಸುವಂತೆ, ನಮ್ಮ ಸ್ವಾಮಿಗಳವರ ಚಿತ್ತಭೃಂಗವು ರಮಣಋಷಿ ಮುಖಾರವಿಂದದಿಂದ ಹೊರಹೊರಟ ಉಪದೇಶ ಮಕರಂದವನ್ನು ಆಸ್ವಾದಿಸುತ್ತಾ ಅನುಸಂಧಾನ ಮಾಡುತ್ತಾ ತದಾಕಾರವಾಯಿತು. ಸಾಷ್ಟಾಂಗ ದಂಡ ಪ್ರಣಾಮಗಳನ್ನು ಆಚರಿಸಿ ಮಹರ್ಷಿಗಳೊಡನೆ ಸಂಭಾಷಿಸುವ ಭಾಗ್ಯವು ಆಯಿತೆಂದು ಅಂದುಕೊಳ್ಳುತ್ತಾ ಸ್ವಸ್ಥಾನದಲ್ಲಿ ಕುಳಿತರು.

ಹೀಗೆ ಮಹಾಸನ್ನಿಧಿ ಮೂರು ದಿನಗಳು ಆಶ್ರಮದಲ್ಲಿದ್ದು ಅನಂತರ ಶ್ರೀ ಅರುಣಾಚಲೇಶ್ವರ ದೇವಾಲಯ ಮೊದಲಾದವುಗಳನ್ನು ಸಂದರ್ಶಿಸಿ, ಶ್ರೀ ಕಾಳಹಸ್ತಿ

ಕ್ಷೇತ್ರ ಸಂದರ್ಶನ ಗೈದು ವ್ಯಾಸಾಶ್ರಮಕ್ಕೆ ಹೋಗಿ ಅಲ್ಲಿಂದ ಶ್ರೀ ಶಂಕರ ಮಹೋತ್ಸವ ನಡೆಯುವ ಗುಡಿವಾಡ ಪ್ರಣವಾಶ್ರಮಕ್ಕೆ ಎಲ್ಲರು ಬಂದರು. 7 ದಿನಗಳು ಅಲ್ಲಿ ನಡೆಯುವ ಸಪ್ತಾಹ ಮಹೋತ್ಸವದಲ್ಲಿ ಭಾಗವಹಿಸಿ, ಮಹನೀಯರು ಪಂಡಿತರು ಸ್ವಾಮಿಗಳು ಮೊದಲಾದವರ ಪ್ರವಚನಗಳನ್ನು ಪರಮ ಶ್ರದ್ಧೆಯಿಂದ ಶ್ರವಣ ಮಾಡಿ ಆನಂದಿಸಿದರು.

ಆ ಆಶ್ರಮಾಧ್ಯಕ್ಷರಾದ ಪೂಜ್ಯಪಾದ ಶ್ರೀ ಶ್ರೀ ಶ್ರೀ ಪ್ರಣವಾನಂದ ಸ್ವಾಮಿಗಳ ಮತ್ತು ಅಲ್ಲಿ ನೆರೆದ ಮಹಾತ್ಮರ ಆಧ್ಯಾತ್ಮಿಕ ಪ್ರಸಂಗಗಳು ಹೃದಯಂಗಮವಾಗಿದ್ದು ಶ್ರೀ ಶಾಂಕರ ಸಿದ್ಧಾಂತಾನುಸಾರ ಅದ್ವೈತಾತ್ಮ ಬೋಧಕವಾಗಿದ್ದವು. ಅಲ್ಲಿ ನಡೆದ ವಾಕ್ಯಾರ್ಥ ಪ್ರಸಂಗಗಳಲ್ಲಿ ನಮ್ಮ ಶ್ರೀ ಸ್ವಾಮಿಗಳವರ ಮುಖಾರವಿಂದದಿಂದ ಕೇಳಿದ, ದಿನಚರ್ಯದಲ್ಲಿ ಬರೆದ ಮಾತುಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ.

"ಅನೇಕವನ್ನು ಏಕವಾಗಿ ನೋಡುವುದು ಸಮದೃಷ್ಟಿಯೇ ಆಗಲಿ ಅದ್ವಿತೀಯ ದೃಷ್ಟಿಯಲ್ಲ. ಜಹದ ಜಹಲ್ಲಕ್ಷಣಾತ್ಮಕವಾದ ಭಾಗತ್ಯಾಗ ದೃಷ್ಟಿಯಿಂದ ಅನುಭವಿಸಲ್ಪಡುವ ಸ್ಥಿತಿಯೇ ಅದ್ವಿತೀಯ ದೃಷ್ಟಿ.

ಆತ್ಮನಲ್ಲಿ ಅನಾತ್ಮಧರ್ಮ ಆರೋಪಿಸಲ್ಪಡುವುದಕ್ಕೆ ಕಾರಣವಾವುದೋ ಅದನ್ನು ನಿವಾರಿಸುವದರಲ್ಲಿಯೇ ವೇದಾಂತವು ಪ್ರಮಾಣ.

ಪ್ರತ್ಯಗಾತ್ಮ ದೃಷ್ಟಿಯಲ್ಲಿ ಜ್ಞಾನಾನುಭವವು; ದೇಹಾತ್ಮ ದೃಷ್ಟಿಯಲ್ಲಿ ಕರ್ಮಾಚರಣೆ.

ಅನುಭವವು ಅವಸ್ಥೆಗಳಾಗಿ ಇರುವದಕ್ಕೆ ಕಾರಣ ಅನುಭವವು ಏಕವೆಂದು ಅರಿಯದಿರುವ ಅಜ್ಞಾನವೇ ಕಾರಣ.

ಸಂಶಯುವನ್ನುಂಟು ಮಾಡುವುದು ವೇದವಲ್ಲ; ಸಂಶಯ ನಿವೃತ್ತಿ ಮಾಡುವದು ವೇದ. ದೇಹವನ್ನು ಕುರಿತಾಗಲಿ ಲೋಕವನ್ನು ಕುರಿತಾಗಲಿ ಸಂದೇಹವು ಯಾರಿಗೂ ಇಲ್ಲ. ವೇದವು ಕರ್ಮ ಜ್ಞಾನಗಳೆಂಬ ಎರಡು ವಿಧವಾಗಿ ಇದ್ದುದರಿಂದ, ಅದರಲ್ಲಿ ಯಾವದು ಆಚರಣೀಯವೋ ಎನ್ನುವದಾಗಿ ಮಾತ್ರವೇ ಸಂಶಯ. ಅದು ಶ್ರೋತ್ರಿಯ ಬ್ರಹ್ಮನಿಷ್ಠರಾದ ಗುರುಗಳಿಂದ ಮಾತ್ರ ನಿವಾರಣೆಯಾಗಿ ಸ್ವಸ್ವರೂಪದ ಅರಿವಾಗುತ್ತೆ.

ತನಗಿಂತಲೂ ಸಣ್ಣವರಾದವರಲ್ಲಿ ಪ್ರೇಮ, ತನ್ನ ಸಮನಾದವರಲ್ಲಿ ಸ್ನೇಹ, ದೊಡ್ಡವರಲ್ಲಿ ಭಕ್ತಿಯೂ ಯಾರ ಹೃದಯದಲ್ಲಿ ಪ್ರಫುಲ್ಲಿತವಾಗಿ ಸ್ಫುರಿಸುವದಿಲ್ಲವೋ, ಅವರು ನಿಜವಾದ ಮಾನವರಲ್ಲ.

ಫಲನ್ಯಾಸ ಉಳ್ಳವನನ್ನು ಉದ್ದೇಶಿಸಿ ಕರ್ಮಯೋಗ, ಪ್ರತ್ಯಗಾತ್ಮ ದೃಷ್ಟಿಯುಳ್ಳವನನ್ನು ಉದ್ದೇಶಿಸಿ ಸರ್ವಕರ್ಮ ಸನ್ಯಾಸದ್ವಾರಾ ಶಾಸ್ತ್ರ ಶ್ರವಣ ಮನನಾದಿ ರೂಪ ಜ್ಞಾನಯೋಗವು ಹೇಳಲ್ಪಟ್ಟಿದೆ.

ವಸ್ತು ಲಕ್ಷಣವನ್ನು ಭೋದಿಸುವದು ತತ್ತ್ವಮಸಿ ಮಹಾವಾಕ್ಯ; ದಾಟಿಸುವದು ಪ್ರಣವಾನುಸಂಧಾನ.

ಸಂನ್ಯಾಸವೆಂದರೆ ರಾಗ ದ್ವೇಷ ಜಯವೇ;
ತಪಸ್ಸಂದರೆ ದೇಹಾತ್ಮ ಬುದ್ಧಿ ದಹನವೇ.

ಅಹಂಪದ ಶೋಧನೆಯೆಂದರೆ ಅಹಂಕಾರಕ್ಕೆ ಈಚೆ ಇರುವ ದೇಹಾದಿಗಳಿಂದ ಬಿಡುಗಡೆ; ತ್ವಂ ಪದ ಶೋಧನೆ ಎಂದರೆ ಅಹಂಕಾರಕ್ಕೂ ಸಾಕ್ಷಿಗೂ ಇರುವ ಗ್ರಂಥಿ ವಿಮರ್ಶನ.

ಸತ್ತು ಹೋಗುವರೆಂಬುವ ದಯೆಯೇ ಶೋಕ; ಸಾಯಿಸುವೆನೆಂಬ ಕರ್ತೃತ್ವವೇ ಮೋಹ; ಈ ಎರಡು ದೇಹೋಹಂ ಬುದ್ಧಿಯಿಂದ ಹೇಳಲ್ಪಡುವವು. ಆದ್ದರಿಂದ ಅರ್ಜುನನ ಪ್ರವರ್ತನೆ ಶ್ರೀ ಕೃಷ್ಣಪರಮಾತ್ಮನಿಗೆ ಅಧರ್ಮವಾಗಿ ಕಾಣಿಸಿತು.

ಆಶ್ಚರ್ಯ ವತ್ಪಶ್ಯತಿ-ಪೂರ್ವ ಪರಿಚಯವಿಲ್ಲದ್ದನ್ನು ಕುರಿತು ಆಶ್ಚರ್ಯ ಉಂಟಾಗಬಹುದು. ಆದರೆ ಅನುಭವವು ಆತ್ಮ (ಸ್ವರೂಪ) ಸ್ವಭಾವವಾದ್ದರಿಂದ ಈ ಪ್ರಮಾಣದಲ್ಲಿ ಹೇಳಲ್ಪಟ್ಟ ಆಶ್ಚರ್ಯವುಳ್ಳವರು ಯಾರೂ ಆತ್ಮನನ್ನು ತಿಳಿದವರಲ್ಲ. ಆತ್ಮನನ್ನು ಕುರಿತು ಹೇಳುವದೇ ಅಪೂರ್ವ; ಕೇಳುವದು ವಿಚಾರಿಸುವದು ಅದಕ್ಕಿಂತಲು ವಿರಳ. ಏಕೆ ? ಆತ್ಮವೇದ, ದೈವ, ಗುರುಗಳ ಅನುಗ್ರವಿಲ್ಲದೆ ಕೇಳಿಸುವುದಕ್ಕಾಗಲಿ ಕೇಳುವುದಕ್ಕಾಗಲಿ ಬಹುಕಷ್ಟ ದುರ್ಲಭ. ಇಂಥಾ ಅನುಗ್ರಹವಿಲ್ಲದ ಶಾಸ್ತ್ರ, ಪಾಠಕರಿಗೆ ಆಶ್ಚರ್ಯವಾಗಿ ಕಾಣಬಹುದು.

ಪ್ರಮಾತೃವಿಗೆ ಪ್ರಮೇಯದ ಅನುಭವವನ್ನು ಮಾಡಿಸುವದೇ ಪ್ರಮಾಣ. ಪ್ರಮೇಯಾನುಭವದಲ್ಲಿ ಪ್ರಮಾಣವು ಎಲ್ಲಿ ನಿಲ್ಲುವುದು ? ಹಾಗೆ ವೇದವು ಧರ್ಮರೂಪನಾದ ಪರಮಾತ್ಮನನ್ನು ತಿಳಿಸುವುದರಲ್ಲಿ ಪ್ರಮಾಣವಾದರೂ, ಪರಮ ಪ್ರಮಾಣವಾದ ಆತ್ಮನನ್ನು (ನೀನೆಂದು) ತಿಳಿಸಿ ತನ್ನ ಪ್ರಾಮಾಣ್ಯವನ್ನು ಬಿಡುವುದು.

# ನಂದ್ಯಾಲ-ತ್ಯಾಗಕುಟೀರ ಸ್ಥಾಪನೆ

ಶ್ರೀ ಶಿವಲಿಂಗಾಶ್ರಮದಲ್ಲಿ ಈ ಪ್ರಕಾರ ಸಾತ್ವಿಕಾನುಷ್ಠಾನಾಧ್ಯಯನ ಶ್ರವಣ ಮನನಾದಿಗಳಿಂದ ಬ್ರಹ್ಮಾನಂದದಲ್ಲಿರುತ್ತಿರಲು, ತಮ್ಮ ಶ್ರೀ ಗುರುಗಳ ಆಜ್ಞಾನುಸಾರ ಗಂಜಿಗುಂಟೆ ಆಶ್ರಮಕ್ಕೆ (ಗುರು ಸನ್ನಿಧಿಗೆ) ಬಂದು ಗುರು ಸೇವಾದಿಗಳಿಂದ ಅಲ್ಲಿರುತ್ತಿರಲು ಶ್ರೀ ಸದ್ಗುರುಗಳು ನಮ್ಮ ಸ್ವಾಮಿಗಳವರಿಗೆ ಹೀಗೆ ಆಜ್ಞೆ ಮಾಡಿದರು. ನಂದ್ಯಾಲ ಬುಕ್ಕಾಪುರಂ ಶ್ರೀ ನಿರ್ವಾಣ ಮಠಕ್ಕೆ ಹೋಗಿ ಕೆಲವು ಕಾಲ ನೀವಿರಬೇಕೆಂದು ತಿಳುಹಿದರು. ಗುರುಗಳ ಆಜ್ಞಾನುಸಾರವಾಗಿ ಪ್ರಯಾಣವಾಗಲು, ಹೋಗುವಾಗ ಗುರುಗಳು ಹೇಳಿದ ಮಾತು "ಸ್ವಾಮೀ ! ಆತ್ಮಾನುಭವ ಅಖಂಡ ಸುಖಾನುಭವವನ್ನು ಪಡೆಯಲು ಅತಿ ಸುಲಭವಾದ ಉಪಾಯವೆಂದರೆ, ಪ್ರಾಣವನ್ನು ಸದಾ ನೋಡುತ್ತಿರುವುದು; ಅಂತಃಕರಣಕ್ಕೆ ಸಾಕ್ಷಿಯಾಗಿರುವುದು; ಹೀಗೆ ಪ್ರಾಣ ಪ್ರತ್ಯವೀಕ್ಷಣೆಯನ್ನು ಮಾಡುತ್ತಿದ್ದರೆ ಮನಸ್ಸು ಆತ್ಮನನ್ನು ಅರಿಯುವುದಕ್ಕೆ ಸಾಧನವಾಗಿ ತತ್ತ್ವವನ್ನುರುಹಿ ತಾನಿಲ್ಲದೆ ಹೋಗುವುದು. ಆಗ ನೀವು ಆತ್ಮಸ್ವರೂಪ ಮಾತ್ರರಾಗಿ ನಿತ್ಯ ಸುಖವನ್ನು ಅನುಭವಿಸುವಿರಿ. ಈ ಅನುಸಂಧಾನವನ್ನು ಮರೆಯಬಾರದಪ್ಪಾ !" ಮತ್ತು ನಂದ್ಯಾಲದಲ್ಲಿ ನಮ್ಮ ಗುರುಭಕ್ತರಾದ ಶ್ರೀ ಪಗಿಡಿ ನಾರಾಯಣ ಶೆಟ್ಟಿ, ಚಾಯಮ್ಮ ಮುಂತಾದ ಭಕ್ತಾದಿಗಳ ಹತ್ತಿರ ಹೋಗಿ ಬರುತ್ತಿರಬೇಕು. ಶುಭ !" ಹೀಗೆಂದು ಆಶೀರ್ವದಿಸಿ ಶ್ರೀ ನಿರ್ವಾಣಾಶ್ರಮಕ್ಕೆ ಕಳುಹಿಸಿದರು.

ಶ್ರೀ ನಿರ್ವಾಣ ಮಠವು ನವನಂದಿಗಳಿಗೆ ಮಧ್ಯ ಶ್ರೀಶೈಲ ಪರ್ವತ ಪ್ರಾಂತವಾಗಿರುವ ರಮ್ಯವಾದ ಏಕಾಂತ ಪ್ರದೇಶ. ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರಾಚಾರ್ಯರು ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯರು ಬ್ರಹ್ಮವಿದ್ವರಿಷ್ಠರಾದ ಶ್ರೀ ಶ್ರೀ ಶ್ರೀ ಪ್ರಣವಾನಂದ ಸದ್ಗುರು ಮಹಾಸ್ವಾಮಿಗಳವರಿಂದ ಸ್ಥಾಪಿಸಲ್ಪಟ್ಟದ್ದು, ಇಲ್ಲಿಯೇ ಈ ಮಹನೀಯರ ಅಧಿಷ್ಠಾನ-ಸಮಾಧಿಯೂ ಇದೆ.

ಈ ಬ್ರಹ್ಮನಿಷ್ಠ ಮಹಾಸ್ವಾಮಿಗಳೇ ನಮ್ಮ ಶ್ರೀಗಳವರಿಗೆ ಪರಮ ಗುರುಗಳು; ತಪೋಧನರು. ಇಂಥಾ ಪರಮ ಪೂಜ್ಯವಾದ ಸ್ಥಾನದಲ್ಲಿ ನಮ್ಮ ಶ್ರೀ ಚನ್ನಬಸವ ಸ್ವಾಮಿಗಳವರು ಬ್ರಹ್ಮನಿಷ್ಠೆಯಿಂದಲೂ ಸದ್ಗ್ರಂಥ ವ್ಯಾಸಂಗದಿಂದಲೂ ಚಿರಸುಖವಾಗಿದ್ದರು. ಆಗ್ಗೆ ಅಲ್ಲಿ ಶಾಂತಾನಂದ ಸ್ವಾಮಿ ಎನ್ನುವರು (M. ಕೋನಪ್ಪ ಶ್ರೇಷ್ಠಿಯವರು) ಆಶ್ರಮ ಧರ್ಮಕರ್ತರಾಗಿದ್ದರು. ಸ್ವಾಮಿಗಳವರನ್ನು ಎಲ್ಲಾ ವಿಧದಿಂದಲೂ ಪ್ರೇಮದಿಂದ ನೋಡಿಕೊಂಡರು. ತಾಪಸ ವೃತ್ತಿಗೆ ತಕ್ಕಂತೆ ಅನುಕೂಲ ಮಾಡಿದರು.

ಅಲ್ಲಿ ಕೆಲವು ಕಾಲವಾದ ನಂತರ ನಂದ್ಯಾಲ ಭಕ್ತರ ಪ್ರಾರ್ಥನಾನುಸಾರ ಉಮಾ ಮಹೇಶ್ವರ ಗುರುಪೀಠ ಭಕ್ತರು ಪಗಿಡಿ ನಾರಾಯಣ ಶ್ರೇಷ್ಠಿಯವರ ಪಾವನ ಗೃಹದಲ್ಲಿ ಪ್ರತ್ಯೇಕವಾಗಿ ಶ್ರವಣ ಪೂಜಾದಿಗಳನ್ನು ನಡೆಸಿದರು.

ಶ್ರೀ ಸದಾನಂದ ಸದ್ಗುರು ಸ್ವಾಮಿಗಳವರ ಶಿಷ್ಯರಾದ ಶ್ರೀ ಯೋಗಿನಿ ಸುಬ್ಬಮ್ಮನವರ ಸಂಕಲ್ಪಾನುಸಾರ ಅವರ ತೋಟದಲ್ಲಿ ಶ್ರೀ ತ್ಯಾಗರಾಜ ಸ್ವಾಮಿಯವರ ಕುಟೀರವನ್ನು ನಿರ್ಮಿಸಿ (14-8-1944) ಅಲ್ಲಿ ಅನುದಿನ ಕೆಲವು ಕಾಲ ಶಾಸ್ತ್ರ ಶ್ರವಣಾದಿಗಳನ್ನು ನಡೆಯಿಸಿ ತ್ಯಾಗರಾಜ ಮೂರ್ತಿ ವಿಗ್ರಹದ ಪ್ರತಿಷ್ಠಾದಿಗಳನ್ನು ಮಾಡಿಸಿದರು. ಅನಂತರ ಅಲ್ಲಿಂದ ಗುರುಗಳ ಆಜ್ಞಾನುಸಾರವಾಗಿ ಗಂಜಿಗುಂಟೆ ಮಠಕ್ಕೆ ಬಂದರು.

ಗುರುಸನ್ನಿಧಿಯಲ್ಲಿ ಆಪ್ತ, ಅಂಗ, ಭಾವಾದಿ ಚತುರ್ವಿಧ ಶುಶ್ರೂಷೆಗಳನ್ನು ಮಾಡುತ್ತಾ ನಿತ್ಯಾನಂದವಾಗಿದ್ದರು. ಈ ಸಮಯದಲ್ಲಿ ಗುಡಿವಾಡ ಶ್ರೀ ಪ್ರಣವಾನಂದ ಸ್ವಾಮಿಗಳವರು ದಯಮಾಡಿಸಿದರು. ಇವರು ಅಪೂರ್ವವಾದ ಆಧ್ಯಾತ್ಮಿಕ ವಿಷಯಗಳನ್ನು ಶ್ರೀ ಶಂಕರ ಸಿದ್ಧಾಂತಾನುಸಾರ ಹೃದಯಂಗಮವಾಗಿ ಬೋಧಿಸುವ ಮಹಾತ್ಮರು. ಇನ್ನು ಕೆಲವರು ಮಹಾತ್ಮರು ಭಕ್ತಾದಿಗಳು ಆಶ್ರಮಕ್ಕೆ ಬಂದರು. ಒಂದಾನೊಂದು ದಿನ ಪ್ರಾಸಂಗಿಕವಾಗಿ ಇವರೆಲ್ಲರೂ ಮತ್ತು ಶ್ರೀಗಳವರ ಗುರುಗಳು ನಮ್ಮ ಶ್ರೀಗಳವರ ಗುರುಗಳು ನಮ್ಮ ಶ್ರೀ ಚನ್ನಬಸವ ಸ್ವಾಮಿಯವರ ಮನೆ ಆಸ್ತಿ ಪಾಸ್ತಿಗಳನ್ನು ಕುರಿತು, ನಮ್ಮ ಚಿಕ್ಕ ಸ್ವಾಮಿಯವರು ಆ ಆಸ್ತಿಪಾಸ್ತಿಗಳಿಂದ ಕೂಡಿ ಇದ್ದರೆ ತಪ್ಪೇನು ? ಅವು ಸುಮ್ಮನೆ ಕೆಟ್ಟು ಹೋಗುವವಲ್ಲಾ ! ಎಂದು ಮಾತನಾಡುತ್ತಾ ನಮ್ಮ ಸ್ವಾಮಿಯವರ ಚಿತ್ತವನ್ನು ನಾನಾ ಪ್ರಲೋಭನೆಗಳಿಂದ ವಿಷಯಾಭಿಮುಖವಾಗಿ ಮಾಡಲು ಯತ್ನಿಸುತ್ತಿದ್ದರು. ಇದನ್ನು ನಮ್ಮ ಶ್ರೀ ಚನ್ನಬಸವಸ್ವಾಮಿಗಳು ಕಂಡು, ಇನ್ನು ನಾನು ಇಲ್ಲಿ ನಿಲ್ಲುವದಾದರೆ ಇವರೆಲ್ಲರು ಏನು ಮಾಡುವರೋ ಏನೋ ! ತಿಳಿದರೆ ನನ್ನ ಪ್ರಯಾಣಕ್ಕೆ ಆತಂಕವಾಗುವದೆಂದು ಎಣಿಸಿ ಪೂಜ್ಯ ಗುರುದೇವರು, ಬಂದ ಮಹಾತ್ಮರು, ಭಕ್ತರು ವಿಶ್ರಾಂತಿಯನ್ನು ತೆಗೆದುಕೊಳ್ಳುವ ಮಧ್ಯಾಹ್ನ ಸಮಯದಲ್ಲಿ ಅವರೆಲ್ಲರಿಗೂ ಹೊರಗೆ ದೂರದಿಂದಲೇ ನಮಸ್ಕಾರವನ್ನು ಮಾಡಿಕೊಂಡು ತೀವ್ರ ವೈರಾಗ್ಯದಿಂದ ಸ್ವಾಮಿಗಳವರು ಶೈವ ಸಾಹಿತ್ಯದಲ್ಲಿ ಚಿದಾಕಾಶ ಸ್ವರೂಪಳಾಗಿ ಬೆಳಗಿದ ವೀರ ವಿರಾಗಿಣಿ ವೈರಾಗ್ಯ ನಿಧಿ ಅಕ್ಕಮಹಾದೇವಿಯಂತೆ ಅಲ್ಲಿಂದ ಹೊರಟು ಕಾಶೀ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು.

# ಕಾಶೀ ಯಾತ್ರೆ-ತಪಸ್ಸು

ಶ್ರೀ ಸ್ವಾಮಿಗಳವರು ಕಾಶೀ ಕ್ಷೇತ್ರವನ್ನು ಸೇರಿ ಪಾವನ ಗಂಗೆಯಲ್ಲಿ ಸ್ನಾನವನ್ನಾಚರಿಸಿ. ವಿಷ್ಣ್ವಾದಿ ಸಕಲ ಸುರಾಸುರೇಶ್ವರಾರ್ಚಿತ ಪಾದಾರವಿಂದನಾದ ಶ್ರೀ ವೀಶ್ವೇಶ್ವರನನ್ನು ಸಂದರ್ಶಿಸಿ, ಪರಮ ಋಷಿಗಳು ಆಚಾರ್ಯ ಪ್ರಭೃತಿಗಳು ತಪವಾಚರಿಸಿ ಧನ್ಯರಾದ ಆ ಪುಣ್ಯಕ್ಷೇತ್ರದಲ್ಲಿ ನಾನೂ ತಪವಾಚರಿಸಬೇಕು ಎನ್ನುವ ಸದಿಚ್ಛೆಯು ಶ್ರೀಗಳವರಿಗೆ ಮೊದಲಿನಿಂದಲೂ ಇತ್ತು. ಅದು ಈಗ ಕಾರ್ಯರೂಪವಾಗಿ ವೈರಾಗ್ಯಭಾನು ಪ್ರಭೆಗಳು ಪ್ರಸಾರವಾಗುತ್ತಿರಲು ಶ್ರೀ ಚನ್ನಬಸವಸ್ವಾಮಿ ಆ ಮಧ್ಯಾಹ್ನ ಸಮಯದಲ್ಲಿ ಪಾದಚಾರಿಗಳಾಗಿ ಕಂಚುಕ ವಿಮುಕ್ತವಾದ ಸರ್ಪದಂತೆ ಅಲ್ಲಿಂದ ಓಡಿ ಹೋದರು. ಒಂದೇ ಸಮದ ಓಟದಲ್ಲಿ 10 ಮೈಲು ದೂರ ತಮಗೆ ತಿಳಿಯದ ಯಾವದೊ ದಾರಿಯನ್ನು ಹಿಡಿದು ಹೋದರು. ಅಲ್ಲಿಗೆ ಬಂಟನಹಾಳ್ ರೈಲ್ವೇ ಸ್ಟೇಷನ್ ಬಂತು. ಸಾಯಂಕಾಲ 5, 6 ಗಂಟೆಗೆ ಅಲ್ಲಿ ಸೇರಿದರು.

ಆ ದಿನ ಅಡವಿಯಲ್ಲಿ ಪಾಂಡವರು ಪಾಂಚಾಲಿಯೊಡನೆ ಭುಜಿಸಿ ತೊಳೆದಿಟ್ಟ ಸೂರ್ಯಪ್ರದತ್ತ ಪವಿತ್ರ ಪಾತ್ರೆಯಲ್ಲಿ ಯಾವದೊ ಒಂದು ಮೂಲೆಗೆ ಹತ್ತಿಕೊಂಡಿದ್ದ ಒಂದು ಎಲೆ (ಪತ್ರವೇ) ಅಕ್ಷಯವಾಗಿ, ಅಕಾಲದಲ್ಲಿ ಭಿಕ್ಷೆಗಾಗಿ ತಮ್ಮ ಹತ್ತಿರಕ್ಕೆ ಶಿಷ್ಯರೊಡನೆ ಬಂದ ದುರ್ವಾಸ ಮಹಾ ಮುನಿಯನ್ನು ತೃಪ್ತಿ ಹೊಂದಿಸಿದಂತೆ, ನಮ್ಮ ಸ್ವಾಮಿಯವರ ಕೈಯ್ಯಲ್ಲಿದ್ದ ಗೀತಾ ಪುಸ್ತಕದ ಅಟ್ಟೆಯಲ್ಲಿ ಅಡಗಿಸಿಟ್ಟಿದ್ದ ಒಂದೂವರೆ ಆಣೆಯೇ ಕಾಶೀ ಕ್ಷೇತ್ರವನ್ನು ಸೇರುವವರೆಗೆ ಅಕ್ಷಯವಾಗಿ ರಕ್ಷಿಸಿತು. ಪಾಪ ! ಈ ಪಾವನ ಮೂರ್ತಿ ಇದುವರಿವಿಗೆ ಯಾವಾಗಲೂ ಎಂದೂ ಸ್ವತಂತ್ರವಾಗಿ ಟಿಕೆಟ್ಟು ಇಲ್ಲದೆ ರೈಲುಗಾಡಿಯನ್ನು ಏರಿದವರಲ್ಲ. ಆದರೇನು ವೈರಾಗ್ಯಾಸ್ತ್ರವುಳ್ಳವರಿಗೆ ಭಯವೇಕೆ ? ಭಗವದಾಯತ್ತ ಚಿತ್ತರಾಗಿ ಪ್ರಣವ ಪಂಚಾಕ್ಷರ ಮಹಾಮಂತ್ರ ಸ್ಮರಣೆಯನ್ನು ಮಾಡುತ್ತಾ ಹಂಸ ನಿಷ್ಠೆಯಿಂದ ಸ್ಟೇಷನ್‌ನಲ್ಲಿ ಕುಳಿತರು. ಅಷ್ಟರೊಳಗೆ ರಾತ್ರಿ 7 ಗಂಟೆಗೆ ಗುಂತಕಲ್ಲಿನಿಂದ ರೈಲು ಗಾಡಿ ಬಂದು ಸ್ಟೇಷನ್‌ನಲ್ಲಿ ನಿಂತಿತು. ಕೂಡಲೇ ಹೃತ್ಪೂರ್ವಕವಾಗಿ ಓ ಕಾಶೀ ವಿಶ್ವೇಶ್ವರಾ ! ವಿಶ್ವನಾಥಾ ! ನನ್ನನ್ನು ಯಾವ ರೀತಿಯಿಂದ ನಿನ್ನ ಸನ್ನಿಧಿಗೆ ಸೇರಿಸಿಕೊಳ್ಳುವೆಯೋ ದೇವಾ ! ನನಗೇನೂ ತಿಳಿಯದು. ಅನಾಥನಾಥಾ ಶ್ರೀ ಗುರು ಪರಮಾತ್ಮಾ ! ಪರಮಶಿವಾ ! ನೀನೇ ರಕ್ಷಿಸೆನ್ನುತ್ತಾ ಆನಂದ ಭಾಷ್ಪಾವೃತ ನೇತ್ರರಾಗಿ "ಶಿವಾ ಶಿವಾ" ಎನ್ನುತ್ತಾ ಗಾಡಿಯನ್ನು ಹತ್ತಿದರು.

ಸತ್ಯ ಸಂಶೋಭಿತವಾದ ಪವಿತ್ರ ಸಂಕಲ್ಪವು ವಜ್ರ ಸನ್ನಿಭವಾದದ್ದು. ಅದು ಹೇಗೆ ರಿಕ್ತವಾದೀತು ? ಸ್ವಾಮಿಯವರು ಹುಬ್ಬಳ್ಳಿ ಸೇರಿ ಆ ಸ್ಟೇಷನ್‌ನಲ್ಲಿ ಇಳಿದು ಪೂನಾ ಗಾಡಿಯನ್ನೇರಿ ಅಲ್ಲಿಂದ ಕಲ್ಯಾಣ್, ಅನಂತರ ಅಲಹಾಬಾದ್–ಪ್ರಯಾಗ ಕ್ಷೇತ್ರವನ್ನು ನಾಲ್ಕು ದಿನಗಳಲ್ಲಿ ಸೇರಿದರು. ಏನೂ ತಿಳಿಯದೆ ಎಲ್ಲೆಲ್ಲೊ ಏರಿದ ಈ ಗಾಡಿಗಳೆಲ್ಲವು ಸ್ವಾಮಿಯವರವೇನಾ ! ಎಂದ ಹಾಗೆ ಎಲ್ಲಿಯೂ ಯಾರೂ ಟಿಕೆಟ್ಟು ಕೇಳಲಿಲ್ಲ.

ಪ್ರಯಾಗ ಕ್ಷೇತ್ರದಿಂದ ಕಾಶೀ ಕ್ಷೇತ್ರವು ಸಾಮಾನ್ಯವಾಗಿ 40-೬0 ಮೈಲು ದೂರವಿರಬಹುದೇನೋ ಆ ರಾತ್ರಿ ಗಾಡಿಯನ್ನೇರಿದರೆ ಉದಯ ಸೋಮವಾರ ವಾಗುತ್ತೆ. ಕಾಶೀ ಕ್ಷೇತ್ರವನ್ನು ಸೇರಿ ವಿಶ್ವೇಶ್ವರನನ್ನು ಸಂದರ್ಶಿಸುತ್ತೇನೆ. ಪಾವನ ಗಂಗಾ ಜಲದಲ್ಲಿ ಸ್ನಾನವಾಚರಿಸಿ ಬೇಕಾದಷ್ಟು ಪಾನ ಮಾಡಬಹುದು ಅನ್ನುವ ಇತ್ಯಾದಿ ಭಾವತರಂಗಳು ಉಕ್ಕೇರಿ ಹರಿಯುತ್ತಿದ್ದವು. ಅಷ್ಟರಲ್ಲಿಯೇ ಕತ್ತಲಾಯಿತು. ಕಡೆಯ ಪ್ಲಾಟ್‌ಫಾರಮ್ ಮೇಲೆ ಗಾಡಿ ಬಂದು ನಿಂತು ಮತ್ತು ಹೊರಡಲು ಉಪಕ್ರಮಿಸಿ ಆ ಪ್ಲಾಟ್‌ಫಾರಮ್ ಕಡೆಯಲ್ಲಿ ಹೋಗುತ್ತಿತ್ತು, ಅಷ್ಟರವರವಿಗೂ ಎಲ್ಲಿಯೋ ಅಡಗಿಕೊಂಡಿದ್ದ ಸ್ವಾಮಿಗಳು ಬೇಗನೆ ಬಂದು ಹೋಗುತ್ತಿರುವ ಆ ಗಾಡಿಯ ಕಂಬಿ ಯನ್ನು ಹಿಡಿಡುಕೊಂಡು ಮೇಲಕ್ಕೇರುತ್ತಿರಲು ಕೈಜಾರಿ ಕೆಳಗೆ ಬಿದ್ದು ಹೋದರು. ಗಾಡಿ ಮುಂದಕ್ಕೆ ಹೊರಟು ಹೋಯಿತು. ಕೂಡಲೇ ಅಲ್ಲಿಂದ ಎದ್ದು "ಶಿವ ಶಿವಾ" ನಾಳೆಗೆ ಶ್ರೀ ಕ್ಷೇತ್ರವನ್ನು ಸೇರುವ ಯೋಗವು ಇಲ್ಲದೆ ಹೋಯಿತೆ" ಎಂದು ಕೆಳಗೆ ದೃಷ್ಟಿಯನ್ನು ಸಾರಿಸಿ ಬಿದ್ದ ಸ್ಥಳವನ್ನು ನೋಡಿದರು. ಕಲ್ಲುಗಳು ಮೊದಲಾದವು ಗಳಿಂದ ತುಂಬಿ ಬಹಳಾ ಪ್ರಮಾದಕರವಾಗಿತ್ತು. ಆದರೇನು ಶರಣಾಗತ ರಕ್ಷಕನೂ ಭಕ್ತ ಚಿಂತಾಮಣಿಯಾದ ಭಗವಂತನೇ ಆ ದಿನ ಪ್ರಹ್ಲಾದನನ್ನು ಪರ್ವತದಿಂದ ಕೆಳಗೆ ಎಸೆದಾಗ ರಕ್ಷಿಸಿದಂತೆ, ಸ್ವಾಮಿಗಳಿಗೆ ಯಾವ ವಿಧವಾದ ಪೆಟ್ಟು ಸೋಂಕದಂತೆ ಗುರುಸ್ವಾಮಿ ರಕ್ಷಿಸಿದನು. ಅಘಟನ, ಘಟನ ಸಮರ್ಥನಾದ ಪರಮ ಶಿವನು ಶ್ರೀ ವಿಶ್ವೇಶ್ವರನೇ ಸರ್ವರೂಪನಾಗಿದ್ದಾನಲ್ಲಾ. ಆತನಿಂದ ಪರಿರಕ್ಷಿಸಲ್ಪಟನು ಸ್ವಾಮಿ. ಅನಂತರ ಗಾಡಿ 2,3 ಫರ್ಲಾಂಗುಗಳ ದೂರ ಹೋಗಿ ಆ ಮೇಲೆ ನಿಂತು ಹೋಯಿತು. ಅರ್ಧ ಗಂಟೆವರಿವಿಗೂ ಹೋಗಲಿಲ್ಲ. ಇದನ್ನು ನೋಡಿ ನಮ್ಮ ಸ್ವಾಮಿಗಳವರು ನಾನು ಬಿದ್ದು ಹೋದುದರಿಂದ ನನ್ನನ್ನು ಹಿಡಿದುಕೊಳ್ಳುವದಕ್ಕಾಗಿ ರೈಲು ನಿಲ್ಲಿಸಿ ಬರುತ್ತಾರೇನೋ ಎಂದು ಚಿಂತಿಸುತ್ತಾ ಭಯದಿಂದ ಪ್ಲಾಟ್ ಫಾರಂ ಕತ್ತಲಲ್ಲಿ ಅಡಗಿ ದರು. ಎಷ್ಟು ಹೊತ್ತಾದರೂ ಗಾಡಿ ಕದಲದೇ ಇರುವುದರಿಂದ ಇದು ಗಾಡಿಯ ವಿಷಯವಾದ ಪ್ರತಿಬಂಧವೇನೋ ಎಂದು ಸ್ವಾಮಿಗೆ ಅರ್ಥವಾಯಿತು ಮತ್ತು ಸ್ವಲ್ಪ ಹೊತ್ತಾದ ನಂತರ ನೆಮ್ಮದಿಯಾಗಿ ಹೋಗಿ ಅದೇ ಗಾಡಿಯಲ್ಲಿ ಸ್ವಸ್ಥರಾಗಿ ಕುಳಿತರು. ಅದೇನು ವಿಚಿತ್ರವೋ ! ಸ್ವಾಮಿಗಳವರು ಕುಳಿತ ಕೂಡಲೇ ಗಾಡಿ ಹೊರಟಿತು,

ತಮ್ಮ ಶುಭ ಸಂಕಲ್ಪಾನುಸಾರವಾಗಿ ಸೋಮವಾರವೇ ಕಾಶೀ ಕ್ಷೇತ್ರವನ್ನು ಸೇರಿದರು. ಪರಮ ಪಾವನವಾದ ಗಂಗಾತೀರವನ್ನು ಸಮೀಪಿಸುತ್ತಾ ದೂರದಿಂದಲೇ ಗಂಗೆಯನ್ನು ಸಂದರ್ಶಿಸಿ ಪುಲಕಾಂಕಿತರಾಗಿ,

"ಶೈಲೇಂದ್ರಾದವತಾರಿಣೀ ನಿಜಜಲೇ ಮಜ್ಜಜ್ಜನೋತ್ತಾರಿಣೀ ।
ಪಾರಾವಾರ ವಿಹಾರಿಣೀ ಭವಭಯ ಶ್ರೇಣಿ ಸಮುತ್ಸಾರಿಣೀ ॥
ಶೇಷಾಹೇರನುಕಾರಿಣೀ ಹರ ಶಿರೋವಲ್ಲೀದಲಾಕಾರಿಣೀ ।
ಕಾಶೀ ಪ್ರಾಂತ ವಿಹಾರಿಣೀ ವಿಜಯತೇ ಗಂಗಾ ಮನೋಹಾರಿಣೀ ॥"

ಶ್ರೀ ಶಂಕರಾಚಾರ್ಯಸ್ವಾಮಿ ವಿರಚಿತವಾದ ಈ ಸ್ತೋತ್ರವನ್ನು ಮುಕ್ತ ಕಂಠದಿಂದ ಆನಂದ ಪರವಶರಾಗಿ ಹಾಡುತ್ತಾ ತೀರವನ್ನು ಸೇರಿದರು. ಅದು ದಶಾಶ್ವಮೇಧ ಘಾಟ್ ಎಂದು ತಿಳಿಯಿತು. ಪೂರ್ವದಲ್ಲಿ ಬ್ರಹ್ಮ ದೇವರು ಈ ಸ್ಥಳದಲ್ಲಿ 10 ಅಶ್ವಮೇಧಗಳನ್ನು ಮಾಡಿದುದರಿಂದ ಆ ಸ್ಥಾನಕ್ಕೆ ಆ ಹೆಸರು ಬಂದಿದೆ ಎನ್ನುವರು). ಗಂಗಾಮಾತೆ ಸನ್ನಿಧಿಗೆ ಹೋಗಿ ಕೈ ಮುಗಿದು ಪ್ರದಕ್ಷಿಣೆಯನ್ನಾಚರಿಸಿ, ಪಾವನ ಗಂಗೆಯನ್ನು ಅನಾಮಿಕೆಯಿಂದ ಸ್ಪೃಶಿಸಿ ಕಣ್ಣಿಗೆ ಹಚ್ಚಿಕೊಂಡು ಶಿರದಲ್ಲಿ ಸಂಪ್ರೋಕ್ಷಿಸಿ, ತಾಯಿಯ ಉಡಿಯಲ್ಲಿ ಮಗನು ಹೋಗಿ ಅಡಗಿದಂತೆ ಗಂಗಾ ಮಾತೆಯ ಉಡಿಯಲ್ಲಿ ಅಡಗಿದರು. ಅಂದರೆ ಗಂಗೆಯಲ್ಲಿ ಮುಳುಗಿದರು. ತೃಪ್ತಿಯಾಗಿ ಸ್ನಾನವನ್ನಾಚರಿಸಿ ತಾಯೀ ! ನಿನ್ನ ಮಗನನ್ನು ಪುನೀತನನ್ನಾಗಿ ಮಾಡಿ ಅವಿಚ್ಯುತವಾದ ಭಕ್ತಿ ಜ್ಞಾನ ವೈರಾಗ್ಯಗಳನ್ನು ಕೊಟ್ಟು ರಕ್ಷಿಸಮ್ಮಾ! ನಿನ್ನನ್ನು ನೋಡಲು ಇಷ್ಟು ದೂರ ಬಂದೆನಮ್ಮಾ ! ಅನಾಯಾಸವಾಗಿ ನಿನ್ನ ಉಡಿಯಲ್ಲಿ ನನ್ನನ್ನು ಸೇರಿಸಿಕೊಂಡೆಯಲ್ಲಮ್ಮಾ. ನನ್ನ ತಪ್ಪುಗಳೇನಾದರು ಇದ್ದರೆ ಕ್ಷಮಿಸಮ್ಮಾ ! (ಶ್ರೀಯವರ ಹೆತ್ತ ತಾಯಿಯ ಹೆಸರೂ ಗಂಗಮ್ಮನೇ) "ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ" ಕೆಟ್ಟ ಮಗನಿರಬಹುದು, ಕೆಟ್ಟ ತಾಯಿ ಎಂದಿಗೂ ಇರಲಾರಳು. ಆದ್ದರಿಂದ ರಕ್ಷಿಸಮ್ಮಾ ! ನಿರಾವರಣ ವೃತ್ತಿಸಹಿತ ಬ್ರಹ್ಮಾತ್ಮನಾ ಸಂಸ್ಥಿತಿ ರೂಪ ಅಭೇದ ಜ್ಞಾನ ನಿಷ್ಠೆಯನ್ನು ಕೊಡು ತಾಯೀ ! ಹೀಗೆಂದು ನಾನಾ ಪ್ರಕಾರ ದೇವಿಯನ್ನು ಸ್ತುತಿಸಿ, ಸಂಕಲ್ಪಿಸಿ, ಆಚಮನವನ್ನು ಮಾಡಿ ಪ್ರಣಾಮಾಂಜಲಿಗಳನ್ನರ್ಪಿಸಿ, ಪ್ರಣವೋಚ್ಚಾರಣ ಪೂರ್ವಕವಾಗಿ ತೀರಿದ ಮೇಲೆ ಬಂದರು.

ಅಲ್ಲಿಂದ ಶ್ರೀ ವಿಶ್ವನಾಥನನ್ನು ದರ್ಶಿಸಲು "ಪತ್ರಂ ಪುಷ್ಪಂ ಫಲಂ ತೋಯಂ" ಎಂದ ಹಾಗೇ ಕಡೆಗೆ ಸ್ವಾಮಿಗೆ ಗಂಗಾ ಜಲವನ್ನಾದರು ಸಮರ್ಪಿಸೋಣವೆಂದರೆ ಯಾವ ವಿಧವಾದ ಪಾತ್ರೆಯು ಇಲ್ಲ. ಆದರೇನು ಅಕ್ಷಯ ಪಾತ್ರೆ ಗೀತಾ ಪುಸ್ತಕದ ಅಟ್ಟೆಯಲ್ಲಿ ಉಳಿದಿರುವುದು ಒಂದೂವರೆ ಆಣೆಯಲ್ಲಿ ಕಾಲಾಣೆ ಎಂದರೆ ಒಂದು ಬೊಟ್ಟು ಉಳಿದಿದೆ. ಅದನ್ನು ತೆಗೆದು ಕೊಟ್ಟು ಒಂದು ಸಣ್ಣ ಮಣ್ಣಿನ ಪಾತ್ರೆ

ಯನ್ನು ಕೊಂಡು, ಅದರಲ್ಲಿ ಗಂಗಾತೀರ್ಥವನ್ನು ತೆಗೆದುಕೊಂಡು ವಿಶ್ವಂಭರ ಮೂರ್ತಿಯಾದ ಶ್ರೀ ವಿಶ್ವನಾಥನಿಗೆ ತಮ್ಮ ಹಸ್ತಗಳಿಂದ ಭಕ್ತಿಪೂರ್ವಕವಾಗಿ ಅಭಿಷೇಕವನ್ನು ಮಾಡಿ, ಗಂಟೆಗಳ ಹೊತ್ತು ಸ್ವಾಮಿಯನ್ನು ಭಾವಾವೇಶಪೂರಿತರಾಗಿ ನೋಡುತ್ತಾ ನಿಂತು, ಪ್ರದಕ್ಷಿಣ ಪೂರ್ವಕವಾಗಿ ಈಚೆಗೆ ಬಂದರು.

ಆಗ ಸ್ವಾಮಿಗಳಿಗೆ ಹಸಿವು ಕಾಣಿಸಿತು. ಐದು ದಿನಗಳಿಂದಲೂ ಯಾವ ವಿಧವಾದ ಆಹಾರವಿಲ್ಲ. ವಿಶ್ವೇಶ್ವರನ ವಿನಾ ಅಲ್ಲಿ ಯಾರೂ ಪರಿಚಯವಿಲ್ಲ. ಆದ್ದರಿಂದ ಮತ್ತು ಆತನನ್ನೇ ನಂಬಿ ಪ್ರದಕ್ಷಿಣ ನಮಸ್ಕಾರಗಳು ಮಾಡುತ್ತಿರಲು ಗರ್ಭಾಲಯದ ಸೋಮ ಸೂತ್ರದಿಂದ ಮಧ್ಯಾಹ್ನಿಕ ಪೂಜಾ ಸಮಯದಲ್ಲಿ ಸ್ವಾಮಿಗೆ ಅಭಿಷೇಕ ಮಾಡಿದ ಶುದ್ಧವಾದ ಕ್ಷೀರವು ಹೊರ ಬರುತ್ತಿತ್ತು. ಕಾಲಾಣೆಗೆ ತಾವು ತೆಗೆದು ಕೊಂಡ ಮೃಣ್ಮಯ ಪಾತ್ರೆಯಿಂದ ಮಹದಾನಂದವಾಗಿ ಆ ಕ್ಷೀರವನ್ನು ತೆಗೆದು ಕೊಂಡು ಪಾನ ಮಾಡಿದರು. ಸ್ವಲ್ಪ ಕ್ಷುದ್ಬಾಧೆ ಶಮನವಾಯಿತು. ಸಚೇತನರಾಗಿ ಅಲ್ಲಿಯೇ ಆಲಯದಲ್ಲಿ ಮಹಾಮಂತ್ರವನ್ನು ಜಪಿಸುತ್ತಾ ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತರು. ಕೆಲವು ಭಕ್ತರು ಸ್ವಲ್ಪ ಹೊತ್ತಿನ ಮೇಲೆ ಕೆಲವು ಹಣ್ಣುಗಳು, ಮಿಠಾಯಿಯನ್ನು ಸ್ವಾಮಿಗಳ ಮುಂದೆ ಹಾಕಿ ಹೋಗುತ್ತಿದ್ದರು. ಇದೇ ಪ್ರಕಾರವಾಗಿ ಸ್ವಾಮಿಗಳು ಮೂರು ದಿನ ಯಾರೂ ಗುರ್ತಿಲ್ಲದೆ ಇದ್ದರು. ಅಂದರೆ ಯಾರಾದೂ ಪರಿಚಯವೇ ಇಲ್ಲ.

ನಾಲ್ಕನೆಯ ದಿನ ಸಾಯಂಕಾಲ ಆತ್ಮಾನಂದ ಸ್ವಾಮಿಗಳೆನ್ನುವ ಒಬ್ಬ ಮಹಾನೀಯರು ಆಲಯಕ್ಕೆ ಬಂದಾಗ ಸ್ವಾಮಿಗಳನ್ನು ನೋಡಿ ನೀವ್ಯಾರು ಏನು ? ಇಲ್ಲೇ ಇದ್ದೀರಲ್ಲಾ ? ಎಂಬುದಾಗಿ ಯೋಗಕ್ಷೇಮಗಳನ್ನು ಆಂಗ್ಲ ಭಾಷೆಯಲ್ಲಿ (ಇಂಗ್ಲೀಷಿನಲ್ಲಿ) ವಿಚಾರಿಸಿದರು. ಅದಕ್ಕೆ ಸ್ವಾಮಿಗಳು ಇಂಗ್ಲೀಷು ಭಾಷೆಯಲ್ಲಿಯೇ ಮಾತನಾಡುತ್ತಾ, ನಾವು ಆಂಧ್ರ ದೇಶೀಯರು. ಆಂಧ್ರ ಕರ್ನಾಟಕಗಳು ನಮ್ಮಗೆ ಮಾತೃ ಭಾಷೆಗಳೆಂದು ತಿಳುಹಿದರು. ಶ್ರೀಗಳವರಿಗೆ ಆಗ್ಗೆ ಹಿಂದೀ ಭಾಷೆ ಅಷ್ಟು ಚೆನ್ನಾಗಿ ಬಾರದು. ಆದ್ದರಿಂದ ಕಾಶೀ ಕ್ಷೇತ್ರಕ್ಕೆ ತಪಸ್ಸಿಗೆ ಹೋದ ಈ ಸಮಯದಲ್ಲಿ ತಾವು ಮೊದಲು ಹೈಸ್ಕೂಲಿನಲ್ಲಿ ಕಲಿತ ಇಂಗ್ಲೀಷು ಭಾಷೆಯೇ ಸಹಾಯವಾಯಿತು. ಆಗಲೇ ಆತ್ಮಾನಂದ ಸ್ವಾಮಿಯವರು ಕರ್ನಾಟಕ ಭಾಷೆಯುಳ್ಳ ಶ್ರೀ ಜಂಗಮವಾಡೀ ಮಠಕ್ಕೆ ಶ್ರೀ ಚನ್ನಬಸವ ಸ್ವಾಮಿಗಳನ್ನು ಕರೆದುಕೊಂಡು ಬಂದು ಬಿಟ್ಟು ಹೋದರು.

ಆ ಮಠವನ್ನು ನೋಡಲು ಅದು ನಮ್ಮ ಸ್ವಾಮಿಯ ಪೂರ್ವಾಶ್ರಮ ವಂಶ ಪರಂಪರಾ ಮೂಲ ಸ್ಥಾನವಾದ ಶ್ರೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನ ಮಠವೆಂದು ತಿಳಿಯಿತು. ಧನ್ಯಧನ್ಯವೆಂದು ಭಾವಿಸಿ ಪರಮಾನಂದವನ್ನು ಹೊಂದಿದರು. ಆಗ ಆಸ್ಥಾನದಲ್ಲಿ ಜಗದ್ಗುರುಗಳಾಗಿರುವ ಮಹಾಸ್ವಾಮಿಗಳು ಅಪರ ಸರಸ್ವತಿಯಾ ಎಂಬಂತೆ ದೊಡ್ಡ ವಿದ್ಯಾನಿಧಿಗಳು, ಅನೇಕ ಪಟ್ಟಭದ್ರರೂ ಆದ

1008 ಶ್ರೀ ಮಜ್ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರು, ಪಂಚಗುರು ಮಹಾ ಪೀಠಗಳಲ್ಲಿ ಒಂದಾದ ಈ ಜ್ಞಾನ ಸಿಂಹಾಸನ ಜಗದ್ಗುರು ಪೀಠವನ್ನು ಅದಿಷ್ಠಿಸಿದ್ದರು. ಜಗದ್ಗುರು ಮಹಾ ಸನ್ನಿಧಿಯನ್ನು ಸಂದರ್ಶಿಸಲು ಅಪ್ಪಣೆಯನ್ನು ಪಡೆದು ಒಳಗೆ ಹೋದರು. ಸಿಂಹಾಸನಾಸೀನರಾಗಿದ್ದ ಜಗದ್ಗುರು ಮಹಾಸ್ವಾಮಿಗಳವರು ಸಾಕ್ಷಾತ್ಕೈಲಾಸಾಧಿಪನಂತೆ ಕಂಗೊಳಿಸುತ್ತಿದ್ದರು. ಸನ್ನಿಧಿಗೆ ದಂಡವತ್ಪ್ರಣಾಮಗಳನ್ನಾಚರಿಸಿ ಸಂದರ್ಶಿಸಿದರು. ಆಗ ಶ್ರೀ ಜಗದ್ಗುರು ಸ್ವಾಮಿಗಳು ನಮ್ಮ ಚನ್ನಬಸವಸ್ವಾಮಿಯವರ ಪೂರ್ವಾಪರ ಸರ್ವ ವಿಷಯಗಳನ್ನು ಪರಾಮರ್ಶಿಸಿ-ವಿಚಾರಿಸಿ, ಈ ಬಾಲಕನ ಮೇಲೆ ದಯದಿಂದ "ತಪಸ್ಸನ್ನುತ್ತಿರುವಿರಲ್ಲಾ ಆಗಲಿ ಸಂತೋಷ. ಕೆಲವು ತಿಂಗಳು ಇಲ್ಲೇ ಇರಬಹುದು,ಅನ್ನುತ್ತಾ ಮತ್ತು ಜಗದ್ಗುರುಗಳು ಅಯ್ಯಾ ! ಇಷ್ಟು ಸಣ್ಣತನದಲ್ಲಿಯೇ ನಿನ್ನಗೆ ಇಂಥಾ ವೈರಾಗ್ಯವಾ ! ಕಷ್ಟಪಟ್ಟು ಸಾಧಿಸಬಲ್ಲೆಯಾ ! ಆಗಲಿ ಕೈಲಾಸ ಮಂಟಪದ ಮೇಲಿನ ರೂಮಿನಲ್ಲಿರಬಹುದೆಂದು ಆಶೀರ್ವದಿಸಿದರು. ಮೇನೇಜರರಿಗೂ ಹೇಳಿದರು.

ನಮ್ಮ ಸ್ವಾಮಿಗಳಿಗೆ ಸರ್ವಾನುಕೂಲಗಳಿಂದ ಕೂಡಿರುವ ಆ ಸ್ಥಳವನ್ನು ನೋಡಿ ಹಿಡಿಸಲಾರದಷ್ಟು ಆನಂದವಾಯಿತು. ಆಮೇಲೆ ಶ್ರೀ ಗುರು ಸನ್ನಿಧಿಗೆ ಗಂಜಿಗುಂಟೆ ಮಠಕ್ಕೆ ಭಕ್ತಿಯಿಂದ ತನ್ನ ಯಾವಚ್ಚರಿತ್ರೆಯನ್ನು ಬಿನ್ನವಿಸಿಕೊಳ್ಳುತ್ತಾ ಒಂದು ಲೇಖೆಯನ್ನು (ಪತ್ರ) ಬರೆದುಕೊಂಡರು. ಕಾಶೀ ಕ್ಷೇತ್ರದಲ್ಲಿ ನಮ್ಮ ಸ್ವಾಮಿಯವರ ನಿತ್ಯ ಕಾರ್ಯಕ್ರಮಗಳು "ಬ್ರಾಹ್ಮೇ ಮುಹೂರ್ತೇ ಬುದ್ಧ್ಯೇತ" ಅಂದ ಹಾಗೆ ಬ್ರಹ್ಮ ಮುಹೂರ್ತದಲ್ಲೆದ್ದು ಪಾವನ ಗಂಗಾ ನದಿಯಲ್ಲಿ ಸ್ನಾನವನ್ನಾಚರಿಸಿ ಗಂಗಾ ತೀರದಲ್ಲಿ ಸ್ವಲ್ಪ ಮಟ್ಟಿಗೆ ಜನ ಸಂಪರ್ಕವಿಲ್ಲದ ತ್ರಿಪುರಾಘಾಟ್‌ನಲ್ಲಿ ತೀರಸ್ಥವಾದ ವೇದಿಕೆ (ಅಲಿಗೆ) ಮೇಲೆ ಕೂತು ಕೆಲವು ಗಂಟೆಯವರಿಗೆ ಮಹಾಮಂತ್ರ ಜಪಾನುಷ್ಠಾನ ತಪಸ್ಸಂಯಮಶೀಲರಾಗಿರುತ್ತಿದ್ದರು. ಅನಂತರ ಶ್ರೀ ವಿಶ್ವೇಶ್ವರನನ್ನು ಸಂದರ್ಶಿಸಿ ಶ್ರೀ ಜಂಗಮವಾಡಿ ಮಠಕ್ಕೆ ಬಂದು 11 ಗಂಟೆಗೆ ವಿದ್ಯಾರ್ಥಿಗಳೊಡನೆ ಪ್ರಸಾದವನ್ನು ಸ್ವೀಕರಿಸಿ ಮತ್ತು ಸಾಯಂಕಾಲ 3 ಗಂಟೆಯಿಂದ ತಮ್ಮ ಏಕಾಂತ ವಾಸದಲ್ಲಿ ಗ್ರಂಥ ವ್ಯಾಸಂಗ, ಆ ಗುರುಕುಲ ನಿವಾಸಿಗಳಾದ ಸದ್ಗುಣವಂತರಾದ ಪಂಡಿತ ಶ್ರೀ ಸಿದ್ಧರಾಮ ಶಿವಾಚಾರ್ಯರು, ಪಂಡಿತ ಶ್ರೀ ಗಂಗಾಧರ ಶಾಸ್ತ್ರಿ ಇವರೊಡನೆ ಸಂಸ್ಕೃತ (ವ್ಯಾಕರಣ) ಸೂತ್ರಗಳು ಮುಂತಾದ ಪಾಠಗಳನ್ನು ಹೇಳಿಸಿಕೊಳ್ಳುತ್ತಾ ವಿಷಯಗಳನ್ನು ಅರಿಯುತ್ತಿದ್ದರು. ರಾತ್ರಿ 6 ಗಂಟೆಯಿಂದ 9 ಗಂಟೆಯವರಿವಿಗೂ ತಮ್ಮ ಏಕಾಂತದಲ್ಲಿ ಅನುಷ್ಠಾನ, ಆಮೇಲೆ ಪ್ರಸಾದ ಸ್ವೀಕಾರ ಇತ್ಯಾದಿಯಾಗಿ ಅನುದಿನ ಕಾರ್ಯಕ್ರಮಗಳು. ಈ ಪ್ರಕಾರ ನಿಯಮಶೀಲ ಸಂಪನ್ನರಾಗಿ "ವಿದ್ಯಾತಪೋಭ್ಯಾಂ ಪೂತಾತ್ಮಾ" ಅಂದಂತೆ ವಿದ್ಯಾ ತಪಸ್ಸುಗಳಿಂದ ನಿತ್ಯ ಸಂತುಷ್ಟಾಂತರಂಗರಾಗಿ ಇರುತ್ತಿದ್ದರು.

ಒಂದು ದಿನ ಉದಯ ಮಾಮೂಲಾಗಿ ಗಂಗಾತೀರಕ್ಕೆ ಹೋಗಿ ಗಂಗೆಯ ದಡದಲ್ಲಿ ಯಥಾ ರೀತಿ ನಿಷ್ಠೆಯಿಂದ ಕುಳಿತಿದ್ದರು. ಆಗ ಉದಯ 7 ಗಂಟೆ ಹೊತ್ತಾಗಿರಬಹುದು. ಗಂಗೆಯಲ್ಲಿ ತೇಲಿಯಾಡುತ್ತ ಕೆಲವು ಮಾವಿನ ಎಲೆಗಳು ಮತ್ತು ದರ್ಭೆಗಳಿಂದ ಕೂಡಿದ ಒಂದು ತೆರೆ ತಮ್ಮ ಹತ್ತಿರಕ್ಕೆ ಬಂದಿತು. ಸಹಜವಾಗಿ ಅರ್ಧೋನ್ಮೀಲಿತ ನೇತ್ರಗಳಿಂದ ಕಣ್ಮುಚ್ಚಿಕೊಂಡಿದ್ದ ಸ್ವಾಮಿಗಳು ಮುಂಭಾಗದಲ್ಲಾಗುವ ಆ ಶಬ್ದವನ್ನು ಕೇಳಿ ಕಣ್ಣುಗಳನ್ನು ತೆರೆದು ನೋಡಿದರು. ಮಾವಿನ ಎಲೆಗಳು ದರ್ಭೆಗಳು ಮುಂತಾದವುಗಳ ಮಧ್ಯ ಯಾವುದೋ ಒಂದು ಪುಸ್ತಕವಿದ್ದಂತೆ ಕಾಣಿಸಿತು. ಶ್ರೀಗಳವರು ಬಾಗಿ ಆ ಪುಸ್ತಕವನ್ನು ಭಕ್ತಿಯಿಂದ ತೆಗೆದುಕೊಂಡರು. ಶ್ರೀ ವಿಶ್ವನಾಥನ ಲೀಲೆ ಶ್ರೀಗಂಗಾ ಮಾತೆಯ ಅನುಗ್ರಹವೆನ್ನುವಂತೆ ನಾಗರಲಿಪಿಯಲ್ಲಿದ್ದ ವಿಷ್ಣುಸಹಸ್ರ ನಾಮಯುಕ್ತವಾದ ಶ್ರೀ ಮದ್ಭಗವದ್ಗೀತಾ ಗ್ರಂಥವು ಕುಂಕುಮಾಂಕಿತವಾಗಿ ಪವಿತ್ರ ಗಂಗಾ ಜಲದಿಂದ ನೆನೆದು ಮುದ್ದೆಯಾಗಿ ಮಡಚಿಕೊಂಡಿತ್ತು. ಅದನ್ನು ನೋಡಿ ತೆಗೆದುಕೊಂಡು ಕಣ್ಣುಗಳಿಗೆ ಒತ್ತಿಕೊಂಡು ಸ್ರವಿಸುತ್ತಿರುವ ಆನಂದಾಶ್ರುಗಳಿಂದ ಗಂಗಾಮಾತೆಯು ಕೊಟ್ಟ ಆ ಗ್ರಂಥವು ಮತ್ತಿಷ್ಟು ನೆನೆಯಿತು. ಆನಂದದಿಂದ ಭಾವಸಮಾಧಿಯನ್ನು ಹೊಂದಿ ತಮ್ಮ ಯಥಾರೀತಿ ನಿಯಮಾನುಷ್ಠಾನ ಕ್ರಮವನ್ನು ಮುಗಿಸಿಕೊಂಡು ವಿಶ್ವನಾಥನನ್ನು ಸಂದರ್ಶಿಸಿ ಮಠಕ್ಕೆ ಬಂದರು.

ತಮ್ಮ ಆಪ್ತರಾದ ಪಂಡಿತ ಶ್ರೀ ಸಿದ್ಧರಾಮ ಶಿವಾಚಾರ್ಯರಿಗೆ ಮತ್ತು ಶ್ರೀ ಗಂಗಾಧರ ಶಾಸ್ತ್ರಿಯವರಿಗೆ ಗಂಗಾಮಾತೆ ಪ್ರಸಾದಿಸಿದ ಈ ಗೀತಾ ಪುಸ್ತಕವನ್ನು ತೋರಿಸಿದರು. ಅವರು ಅದಕ್ಕೆ ತುಂಬಾ ಸಂತೋಷ ಪಟ್ಟು ಸ್ವಾಮೀಜಿ ! ಇದೇ ನಿಮ್ಮ ಜೀವಿತಧ್ಯೇಯವಾಗಿದೆ. ಸತ್ಯವಾದ ಸಂಪತ್ತು ನಿಮ್ಮ ಕೈಸೇರಿದೆ. ಗಂಗೆಯಲ್ಲಿ ಮಿಕ್ಕಾದ ಸಂಪದಗಳು ಮುಳುಗಿ ಹೋಗುತ್ತವೆ. ಇದಾದರೇನೊ ಮುಳುಗದೆ ನಿಮ್ಮ ಹತ್ತಿರಕ್ಕೆ ಬಂದಿದೆ. ಸ್ವಾಮೀಜಿ ! ಇದನ್ನು ನೋಡಿದರೆ ಪ್ರಪಂಚವೆಂಬ ಈ ಸಂಸಾರ ಸಮುದ್ರದಿಂದ ಮೇಲಕ್ಕೆ ಬರುವ ವಿದ್ಯೆ ಇದರಲ್ಲಿದೆ. ಇದನ್ನು ಕಲಿತು ಧನ್ಯರಾಗಿರೆಂದು ಗಂಗಾಮಾತೆ ನಿಮ್ಮನ್ನು ಅನುಗ್ರಹಿಸಿದ ವರವೆಂದು ಭಾವಿಸಿರಿ, ನೀವು ಧನ್ಯರು. ಇತ್ಯಾದಿಯಾಗಿ ಮಾತನಾಡಿದರು. ಆ ಪುಸ್ತಕವನ್ನು ಸ್ವಾಮಿಯವರು ಭದ್ರವಾಗಿ ಬಿಸಿಲಿನಲ್ಲಿಟ್ಟು ಒಣಗಿಸಿದರು. ಗ್ರಂಥವು ತಂಗಲು ಆರಿ ಶುದ್ಧವಾಯಿತು. ಕಾಗದಗಳನ್ನು ತೆಗೆದು ನೋಡಲು ಎಲ್ಲೆಲ್ಲಿಯೂ ಒಂದು ಶ್ಲೋಕವಾದರೂ ಹೋಗಿಲ್ಲ. ಈ ಗ್ರಂಥವು ಶ್ರೀಗಳವರ ಹತ್ತಿರ ಇಂದಿಗೂ ಸಾದರದಿಂದ ಪೂಜೆಯ ಪೆಟ್ಟಿಗೆಯಲ್ಲಿ (ಸಂಪುಟದಲ್ಲಿ) ಪೂಜೆಗೊಳ್ಳುತ್ತಿದೆ. ಅಲ್ಲಿ ವಿದ್ವತ್ಸಂಘದ ಪಂಡಿತರೆಲ್ಲರೂ ನೋಡಿ ಆನಂದಾಶ್ಚರ್ಯಗಳನ್ನೊಂದಿದರು.

ಕೆಲವು ಕಾಲಕ್ಕೆ ನಂದ್ಯಾಲ ತ್ಯಾಗರಾಜ ಮಂದಿರಕ್ಕೆ ಗಂಜಿಗುಂಟೆಯಿಂದ ಗುರುದೇವರು ದಯಮಾಡಿಸುತ್ತಾರೆ ತಪ್ಪದೆ ತಾವು ಬರಬೇಕೆಂದು ಪತ್ರ ಬರೆಯುತ್ತಾ 40

ರೂಪಾಯಿಗಳು M.O. ಮೂಲಕವಾಗಿ ಸ್ವಾಮಿಗಳವರಿಗೆ ಕಳುಹಿಸಿದರು ಅನಿವಾರ್ಯವಾಗಿ ಶ್ರೀಗಳವರು ನಂದ್ಯಾಲಿಗೆ ಬರಬೇಕಾಯಿತು. ಪ್ರಯುಕ್ತ ಜಗದ್ಗುರು ಮಹಾಸನ್ನಿಧಿಯಲ್ಲಿಯೂ ಅಲ್ಲಿದ್ದ ಪಂಡಿತರಿಗೂ ಈ ವಿಷಯವನ್ನು ತಿಳಿಸಿದರು. ವಿಶ್ವೇಶ್ವರನನ್ನು ಮನಸಾರೆ ಭಾವಿಸಿ ಪೂಜಿಸಿ ಮಠದಲ್ಲಿ ಶ್ರೀ ಜಗದ್ಗುರುಗಳ ಅಪ್ಪಣೆಯನ್ನು ಪಡೆದು, ಆ ದಿನ ರಾತ್ರಿ 7 ಗಂಟೆ ಗಾಡಿಯನ್ನೇರಿ ಬೆಳಗ್ಗೆ ಶ್ರೀ ಪ್ರಯಾಗ ಕ್ಷೇತ್ರವನ್ನು ಸೇರಿದರು.

ಇಲ್ಲಿ ಗಂಗಾ ಯಮುನ ಸರಸ್ವತಿ ನದಿಗಳ ಸಂಗಮವಾದ ಪವಿತ್ರ ತ್ರಿವೇಣೀ ತೀರ್ಥದಲ್ಲಿ ಸ್ನಾನವನ್ನಾಚರಿಸಿ ಅಲ್ಲಿಂದ 4,5 ಮೈಲು ದೂರದಲ್ಲಿರುವ ಅಲಹಾಬಾದು ಸ್ಟೇಷನಿಗೆ ನಡೆದು ಬರುತ್ತಿರಲಾಗಿ ಮಧ್ಯಮಾರ್ಗದಲ್ಲಿ ಕುಂಭವೃಷ್ಟಿಯಾಯಿತು. ಆಗ "ಶ್ರೀ ರಾಮತೀರ್ಥ ಸ್ವಾಮಿಯವರು ಮನೆಯನ್ನು ಬಿಟ್ಟು ಅಡವಿಗೆ ಹೊರಡುತ್ತಿರಲು ಇಂಥಾ ಕಷ್ಟವನ್ನೇ ಅನುಭವಿಸಿದರಲ್ಲಾ ಎಂದು ಅವರ ಚರಿತ್ರೆಯನ್ನು ಸ್ಮರಿಸುತ್ತಾ" ಭರಿಸಲಸಾಧ್ಯವಾದ ಚಳಿಯನ್ನು ಅನುಭವಿಸಿದರು. ಶ್ರೀಗಳವರಿಗೆ ಮತ್ತೆ ಯಾವ ವಿಧವಾದ ವಸ್ತ್ರಗಳೂ ಇಲ್ಲ. ಧರಿಸಿದ ವಸ್ತ್ರಗಳು ಬಿಟ್ಟು ಮತ್ತೇನು ಇಲ್ಲ. ಆದ್ದರಿಂದ ಚಳಿಯ ಬಾಧೆಯು ಅಸಾಧ್ಯವಾಯಿತು. ಎಷ್ಟೋ ಕಷ್ಟವಾದರೂ ಹಾಗೇ ಸ್ಟೇಷನ್ ಸೇರಿದರು. ಚಳಿಯ ಬಾಧೆಯಿಂದ ಮಯ್ಯೆಲ್ಲಾ ನಡಗುತ್ತಾ ಅಲ್ಲಿ ಒಂದು ಮೂಲೆಯಲ್ಲಿ ಕುಳಿತರು. ಸ್ವಾಮಿಗಳವರಿಗೆ ಆ ಸಮಯದಲ್ಲಿ ಇನ್ನು ಪ್ರಾಣವು ಹೊರಟು ಹೋಗುತ್ತೇನೋ ಎಂದಂತಾಯಿತಂತೆ. ಆದರೇನು ಆಪದ್ಬಾಂಧವನಾದ ಭಗವಂತನು ಆರ್ತ ಭಕ್ತರ ಆಪತ್ತನ್ನು ದೂರ ಮಾಡುತ್ತಾನೆಂಬಂತೆ, ಸ್ಟೇಷನ್‌ನಲ್ಲಿ ಸ್ವಾಮಿಗಳ ಪಕ್ಕದಲ್ಲಿ ಕುಳಿತುಕೊಂಡಿದ್ದ ಒಬ್ಬ ಸತ್ಪುರುಷನು ತನ್ನಲ್ಲಿದ್ದ ಒಂದು ದೊಡ್ಡ ಕಂಬಳಿಯನ್ನು ನಾಲ್ಕು ಮಡಪುಗಳು ಮಡಚಿ ನಮ್ಮ ಈ ಚಿಕ್ಕ ಸ್ವಾಮಿಗಳ ಮೇಲೆ ಹೊದಿಸಿ "ಅಬ್ ಗರಮ್‌ಹುವಾಹೈನಾ" ಎಂದರೆ "ಈಗ ಬೆಚ್ಚಗಾಯಿತೇ" ಎಂದು ನುಡಿಯುತ್ತಾ ದಯೆಯನ್ನು ತೋರಿಸಿದನು. ಸ್ವಾಮಿಗಳಿಗೆ ಸ್ವಸ್ಥವಾಗಿ ಬೆಚ್ಚಗಾಯಿತು. ಸಾಯಂಕಾಲ 6 ಗಂಟೆಗೆ ಹೊದಿಸಿದ ಆ ಕಂಬಳಿಯನ್ನು ರಾತ್ರಿ 9 ಗಂಟೆಯವರಿವಿಗೂ ಆತನದನ್ನು ಕೇಳಲಿಲ್ಲ. ಅನಂತರ ಸಮಯವಾಗಲು ಆ ಕಂಬಳಿಯನ್ನು ಆ ಸತ್ಪುರುಷನಿಗೆ ಕೊಟ್ಟು ನಮಸ್ಕರಿಸಿ 9–30 ಗಂಟೆಗೆ ಅಲ್ಲಿ ಗಾಡಿಯನ್ನೇರಿ ಆ ಈ ಕಷ್ಟಗಳಿಂದ ನಾಲ್ಕು ದಿನಗಳಿಗೆ ನಂದ್ಯಾಲ ಸೇರಿದರು. "ಆ ಚಳಿಯ ಸಮಯದಲ್ಲಿ ಆತನು ನಮಗೆ ಪ್ರಾಣದಾತ" ಎಂಬುದಾಗಿ ಭಕ್ತಾದಿಗಳಲ್ಲಿ ಶ್ರೀಗಳವರು ಆಗಾಗ ಈ ಮಾತು ಹೇಳುತ್ತಿದ್ದರು.

ನಂದ್ಯಾಲ ಶ್ರೀ ತ್ಯಾಗಕುಟೀರಕ್ಕೆ ಶ್ರೀ ಸ್ವಾಮಿಗಳವರ ಗುರುವರೇಣ್ಯರು ಪೂಜ್ಯಪಾದ ಶ್ರೀ ಶ್ರೀ ಶ್ರೀ ಸದಾನಂದ ಸದ್ಗುರು ಸ್ವಾಮಿಗಳು ದಯಮಾಡಿಸಿದ್ದರು. ನಮ್ಮ ಶ್ರೀಗಳವರು ತ್ಯಾಗರಾಜ ಕುಟೀರವನ್ನು ಪ್ರವೇಶಿಸಿದೊಡನೆಯೇ ಎಲ್ಲರೂ

ಪರಮಾನಂದವನ್ನು ಹೊಂದಿದರು. ಪೂಜ್ಯ ಗುರುಗಳಿಗೆ ಸಾಷ್ಟಾಂಗ ದಂಡ ಪ್ರಣಾಮಗಳನ್ನು ಸಲ್ಲಿಸಿ ಪರಮ ಭಕ್ತಿಯಿಂದ ತಾವು ಕಾಶಿಯಿಂದ ತೆಗೆದುಕೊಂಡು ಬಂದ ಗಂಗಾ ತೀರ್ಥದೊಡನೆ ಶ್ರೀ ಗುರು ಪಾದಾಭಿಷೇಕವನ್ನು ಮಾಡಿ ಪೂಜಿಸಿದರು. ಆ ದಿನ ಸಾಯಂಕಾಲ ಪೂಜ್ಯ ಗುರುಗಳು ನಮ್ಮ ಸ್ವಾಮಿಯನ್ನೇ ಪ್ರವಚನ ಮಾಡಲು ಆಜ್ಞಾಪಿಸಿ "ನೈಷ್ಕರ್ಮಸಿದ್ಧಿ" 3 ನೆಯ ಪ್ರಕರಣ 36 ನೆಯ ವಾಕ್ಯವನ್ನು ಆ ಮುಂದಿನ ಶ್ಲೋಕಗಳನ್ನು ವ್ಯಾಖ್ಯಾನಿಸು ಎಂಬುದಾಗಿ ಗ್ರಂಥವನ್ನು ತೆಗೆದು ಶಿಷ್ಯನಿಗೆ ಕೊಟ್ಟರು. ಭಕ್ತಿಯಿಂದ ಆ ಗ್ರಂಥವನ್ನು ಕೈಕೊಂಡು ತತ್-ತ್ವಂ ಪದಗಳ ಅಖಂಡಾರ್ಥ ಬೋಧಕವಾದ "ತತ್ತ್ವಮಸಿ ಮಹಾವಾಕ್ಯ ನಿರೂಪಣೆಯನ್ನು ಸಾಮಾನಾಧಿಕರಣ ಸಂಬಂಧದಿಂದ, ಪದಗಳಿಗೆ ವಿಶೇಷಣ ವಿಶೇಷ್ಯಭಾವ ಸಂಬಂಧವು ಕಡೆಗೆ ಭಾಗ ತ್ಯಾಗಲಕ್ಷಣದಿಂದ, ಅಖಂಡಾರ್ಥ ಬೋಧಕವಾದ ತತ್ತ್ವಮಸಿ ಮಹಾವಾಕ್ಯಾರ್ಥ ನಿರೂಪಣೆಯನ್ನು ಶ್ರೀ ಗುರು ಕೃಪೆಯಿಂದ ಶಾಸ್ತ್ರೋಕ್ತವಾಗಿ ಅನುಭವ ಸಂಪನ್ನವಾದ ವಾಕ್ಯಗಳಿಂದ, ಗಂಟೆಯ ಹೊತ್ತು ಶ್ರೋತೃ ಜನಾನಂದಪ್ರದವಾಗಿ ತನ್ಮಯತ್ವದಿಂದ ಪ್ರವಚಿಸಿದರು. ಅದನ್ನು ನೋಡಿ ತಮ್ಮ ಗುರುಗಳು ಮತ್ತು ಭಕ್ತರೆಲ್ಲರು ಸಂತೋಷಪಟ್ಟರು. ಮಂಗಳವಾಯಿತು.

ಶ್ರೀ ತ್ಯಾಗರಾಜ ಕುಟೀರದಲ್ಲಿ ಪೂಜಾ ಪರಾಯಣ ಪ್ರವಚನ ಇತ್ಯಾದಿ ಕಾರ್ಯಕ್ರಮಗಳು, ಯಥಾರೀತಿ ವೈಭವೋಪೇತವಾಗಿ ಆ ಮಹೋತ್ಸವವು ಸಾಂಗಮಂಗಳವಾಗಿ ನಡೆಯಿತು.

ಸರಿ, ಮೂರನೆಯ ದಿನ ನಮ್ಮ ಶ್ರೀ ಸ್ವಾಮಿಗಳವರ ಪೂರ್ವಾಶ್ರಮ ಸಂಬಂಧವಾದ ಆ ತಾಯಿತಂದೆಗಳಿಗೆ ಇವರು ಏಕೈಕ ಪುತ್ರರು, ತಾಯಿಯವರದೇ ಈ ಆಸ್ತಿಯಲ್ಲವು. ಅಷ್ಟೇಕೆ ಇನ್ನು ಆ ವಂಶಕ್ಕೇನೆ ಯಾರೂ ಸಂತಾನವಿಲ್ಲ. ಆಸ್ತಿಪಾಸ್ತಿಗಳೇನೊ ಬಹಳ ದೊಡ್ಡವಾಗಿವೆ. ಇವರೋ ಹೀಗೆ ವಿರಕ್ತರಾಗಿದ್ದಾರೆ. ಹೇಗಾದರೂ ಮಾಡಿ ವಿವಾಹಾದಿ ಸಂಬಂಧಗಳನ್ನು ಕಲ್ಪಿಸಿ ಸಾಂಸಾರಿಕ ಜೀವಿಗಳನ್ನಾಗಿ ಮಾಡಬೇಕೆಂಬುವ ಇತ್ಯಾದಿ ಲೌಕಿಕ ಪ್ರಸಂಗಗಳನ್ನು ಗುರುದೇವರು ಮತ್ತು ಅಲ್ಲಿ ನೆರೆದ ಭಕ್ತಾದಿಗಳು ಕಾರ್ಯಕ್ರಮಕ್ಕೆ ಬಂದ ಇತರ ಸ್ವಾಮಿಗಳು ವಿವಿಧ ರೀತಿಗಳಿಂದ ನಮ್ಮ ಸ್ವಾಮಿಗಳವರಿಗೆ ಹೇಳಲಾರಂಭಿಸಿದರು. ಈ ಮಾತುಗಳನ್ನು ಕೇಳಿ ವೈರಾಗ್ಯ ಮೂರ್ತಿಗಳಾದ ಶ್ರೀ ಸ್ವಾಮಿಗಳವರ ಚಿತ್ತವು ಇದೇನಪ್ಪಾ ! ಶಿವಾ ಶಿವಾ ! ಎಂದು ಮತ್ತಷ್ಟು ತೀವ್ರ ವೈರಾಗ್ಯದಿಂದ ತುಂಬಿ ತುಳುಕಿತು. ಶ್ರೀ ಗುರುದೇವರ ಸನ್ನಿಧಿಯಾದ್ದರಿಂದ ಏನೂ ಮಾತನಾಡದೆ ಸುಮ್ಮನಿದ್ದರು. ಇನ್ನು ಈ ಸಮಯದಲ್ಲಿ ನಾನು ಜಾಗ್ರತೆಯನ್ನು ವಹಿಸದಿದ್ದರೆ ಪ್ರಮಾದವಾಗುವುದು. "ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್ ಎಂಬ ವಾಕ್ಯಾನುಸಾರ ಇಲ್ಲಿಂದ ಪ್ರಚ್ಛನ್ನವಾಗಿ ಹೊರಟು, ಪ್ರೇಷೋಚ್ಚಾರಣ ಮಂತ್ರ ಪೂರ್ವಕವಾಗಿ ಶಿಖಾಯಜ್ಞೋಪವೀತಗಳನ್ನು ತ್ಯಾಗ ಮಾಡಿ, ಸನ್ನ್ಯಸಿಸಿ ಕಾಷಾಯಾಂಬರಗಳನ್ನು ಧರಿಸಿ ಈ ಲೋಕಕ್ಕಿಂತಲೂ ವಿಲಕ್ಷಣ

ವಾಗಿರದ ಹೊರತು ಈ ಲೌಕಿಕರ ಉಪದ್ರವವು ನನಗೆ ತಪ್ಪುವದಿಲ್ಲ"ವೆಂದು ನಿಶ್ಚಯಿಸಿಕೊಂಡು "ಶ್ರೀ ಘುಬುದ್ಧೇಃ ಫಲಾಯನಮ್" ಎಂದು ಸಿದ್ಧ ಸಂಕಲ್ಪರಾಗಿ ಆ ದಿನ ರಾತ್ರಿ ಪಗಿಡಿ ಚಾಯಮ್ಮನವರ ಮನೆಯಲ್ಲಿ ಗುರುದೇವರಿಗೆ, ಬಂದ ಸ್ವಾಮಿಗಳಿಗೆ, ಭಕ್ತರೆಲ್ಲರಿಗೆ ಪ್ರಸಾದ (ಭೋಜನ) ಏರ್ಪಾಟು ಆಗಿತ್ತು. ಎಲ್ಲರು ಪ್ರಸಾದವನ್ನು ಸ್ವೀಕರಿಸುತ್ತಿರುವಾಗ ನಮ್ಮ ಸ್ವಾಮಿಗಳವರು ಎಲ್ಲರ ಆಜ್ಞೆಯನ್ನು ಪಡೆದು, ಅವರೆಲ್ಲರಿಗಿಂತಲೂ ಮುಂಚಿತವಾಗಿ ಎದ್ದು ಕೈಕಾಲುಗಳನ್ನು ತೊಳೆದುಕೊಂಡು, ಮಾನಸಿಕವಾಗಿಯೇ ಮನೆಗೆ ಹೊರಗಿನಿಂದಲೇ ಗುರುದೇವರಿಗೆ ನಮಸ್ಕಾರ ಮಾಡಿ, ಮೊದಲೇ ಸಿದ್ಧವಾಗಿ ಆ ಮನೆಯ ವಸಾರದ ಗೂಡಿನಲ್ಲಿಟ್ಟುಕೊಂಡ ಗೋಣೀ ತಟ್ಟನ್ನು ತೆಗೆದುಕೊಂಡು, ಮಿಕ್ಕ ಎಲ್ಲಾ ವಸ್ತ್ರಗಳನ್ನು ತೆಗೆದು ಹಾಕಿ ಕೌಪೀನ ಮಾತ್ರ ಧಾರಿಯಾಗಿ, ಸರ್ವಾರ್ಥಸಿದ್ಧನು ಬುದ್ಧನಾಗುವದಕ್ಕಾಗಿ ಅರ್ಧರಾತ್ರಿ ಅಂತಃಪುರವನ್ನು ಬಿಟ್ಟು ಅಡವಿಗೆ ಹೊರಟಂತೆ, ನಮ್ಮ ಸ್ವಾಮಿಗಳು ತುರೀಯಾಶ್ರಮ ಸ್ವೀಕಾರಕ್ಕಾಗಿ ಸರ್ವಸಂಗಪರಿತ್ಯಾಗಿಯಾಗಿ ಹೊರಟು ಹೋದರು.

ಭೋಜನಾನಂತರ ಅಲ್ಲಿಯವರೆಲ್ಲರೂ ಹೊರಗೆ ಬಂದು ನೋಡಿ ವಿಚಾರಿಸಲು ನಮ್ಮ ಸ್ವಾಮಿಗಳು ಕಾಣಿಸಲಿಲ್ಲ. ಕುಟೀರಕ್ಕೇನೋ ಮುಂದೆ ಹೊರಟಿರಬಹುದೆಂದು ಅಂದುಕೊಂಡು ಎಲ್ಲರು ಕುಟೀರಕ್ಕೆ ಬಂದು ನೋಡಿದರು. ಅಲ್ಲಿಯೂ ಇವರಿಲ್ಲ. ಆದ್ದರಿಂದ ಓಹೋ ಎಂಥಾ ಕೆಲಸವಾಯಿತು. ಬೆಳಿಗ್ಗೆ ನಾವು ಮಾತನಾಡಿಕೊಂಡ ಮಾತುಗಳ ಪರಿಣಾಮವೇ ಇಷ್ಟಾಯಿತಲ್ಲಾ ! ಪಾಪ, ಪವಿತ್ರವಾದ ಮೂರ್ತಿ ಈ ರಾತ್ರಿ ಸಮಯದಲ್ಲಿ ಎಲ್ಲಿ ಹೋದರೋ ಏನೋ ಎಂಬುವದಾಗಿ ಎಲ್ಲರೂ ಪರಿಪರಿ ವಿಧವಾಗಿ ಪರಿತಪಿಸಿ ಹುಡುಕಿದರು. ಆಮೇಲೆ 4, 5 ದಿನಗಳಾದ ನಂತರ ಬಂದವರೆಲ್ಲರು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

# ಸನ್ಯಾಸಾಶ್ರಮ ಸ್ವೀಕಾರ

ನಮ್ಮ ಶ್ರೀಗಳವರು ಈ ಸನ್ಯಸನ ಘಟ್ಟದಲ್ಲಿ ಅನೇಕ ಭಗವನ್ನಿದರ್ಶನಗಳನ್ನು ಕಂಡರು. ಇವೆಲ್ಲವೂ ಶ್ರೀ ಸ್ವಾಮಿಗಳವರ ಮುಖದಿಂದ ಕೇಳಿದ ವಿಷಯಗಳನ್ನು ಇಲ್ಲಿ ಬರೆಯುತ್ತಿದ್ದೇವೆ. ಆ ರಾತ್ರಿಯ ವೇಳೆಯಲ್ಲಿ ಹೊರಟ ಆ ಮಹಾನುಭಾವನನ್ನು ವರ್ಣಿಸಿದರೆ ನಿರಾಲಂಬನಾದ ಸಾಕ್ಷಾತ್ ಶಂಭುವೇ ಎಂದು ಹೇಳಬಹುದು. ಕೈಯಲ್ಲಿ ಒಂದು ಪೈಸೆಯಾದರು ದುಡ್ಡಿಲ್ಲ. ಉಡಲು ಬೇರೊಂದು ವಸ್ತ್ರವಿಲ್ಲ. ಹಿಡಿಯಲು ಭಿಕ್ಷಾಪಾತ್ರೆಯಿಲ್ಲ. ಇದ್ದಿದ್ದು ಆ ಒಂದು ಗೋಣಿಯ ತಟ್ಟೇ ಆಸ್ತಿ. ಇಂಥಾ ಆಕೃತಿಯಿಂದ ಆ ದಿನ ರಾತ್ರಿ ನಡೆದು ನಡೆದು ಹೋಗುತ್ತಾ, ಒಂದು ಹತ್ತರ ನಿಂತು ಬೆಳಕಾದ ಮೇಲೆ ಘೋರಾರಣ್ಯವಾದ ಶ್ರೀಶೈಲ ಪರ್ವತ ಶ್ರೇಣಿಯ ಆ ವನ ಸೌಂದರ್ಯವನ್ನು ನೋಡುತ್ತಾ ಗಾಜುಲಪಲ್ಲಿಯಿಂದ ಅದೇ ರೈಲ್ವೇ ಮಾರ್ಗದ ಪಕ್ಕದಲ್ಲಿ ನಡೆದುಹೋಗೋಣ. ಮುಂದೆ ಬರುವ ಮಹಾರಣ್ಯ ಪ್ರಕೃತಿ ಮಾತೆ ಹೇಗೆ ನನ್ನನ್ನು ಗುಂಟೂರು ಶ್ರೀ ಗುರುನಾಥಾಶ್ರಮಕ್ಕೆ ಸೇರಿಸುವಳೋ ನೋಡೋಣ. ಏನು ಕಷ್ಟನಿಷ್ಠುರುಗಳು ಬರುವವೋ ಕಾಣೋಣ. ಭಗವಂತನಾದ ಶ್ರೀ ಗುರುಪರಮಾತ್ಮನೇ ನನ್ನನ್ನು ಕಾಯಲಿ ! ಈ ಪ್ರಾಕೃತ ಸಂಬಂಧಗಳಿಂದ ದೂರಾಗಿ ಪರಮಾತ್ಮ ಸ್ವರೂಪದಿಂದಿರಲು ನನ್ನನ್ನು ಅನುಗ್ರಹಿಸಲಿ ! ಈ ದೇಹೇಂದ್ರಿಯಗಳು ಭಗವತ್ಸೇವೆಗಾಗಿ ಉಪಯೋಗವಾಗುವದಿದ್ದರೆ ಇರಿಸಲಿ, ಇಲ್ಲದೆ ಹೋದರೆ ಹೋಗಲಿ ಶಿವೇಚ್ಛೆ ಎಂಬ ದೃಢ ನಿಶ್ಚಯದಿಂದ 'ಶಿವಾಯ ನಮಃ' ಎಂದು ಗಾಜುಲ ಪಲ್ಲಿ ಸ್ಟೇಷನ್‌ನಿಂದ ರೈಲ್ವೇ ರೋಡ್ ಪಕ್ಕದಲ್ಲಿಯೇ ನಡೆದು ಹೋದರು;

ಇಂಥಾ ನಿಶ್ಚಯದಿಂದ ಹೊರಟ ಸ್ವಾಮಿಗಳು ಆ ಗಾಜುಲಪಲ್ಲಿ ಸ್ಟೇಷನ್‌ನಿಂದ ನಡೆದು ನಡೆದು ಸಾಯಂಕಾಲ 7 ಗಂಟೆ ಆಗಿರಬಹುದು, 'ಚಲಮ' ಎಂಬ ಸ್ಟೇಷನ್ ಸೇರಿದರು. ಅರಣ್ಯ ಮಧ್ಯದಲ್ಲಿರುವ ಇದೊಂದು ಚಿಕ್ಕ ಸ್ಟೇಷನ್. ಇಲ್ಲೊಂದು ವಿಚಿತ್ರ ಸಂಘಟನೆ ಜರಿಗಿತ್ತಂತೆ. ಗತರಾತ್ರಿ ಆ ಸ್ಥಳದಲ್ಲಿ ಕಳ್ಳತನವಾಗಿದೆ. ಆದ್ದರಿಂದ ಅಲ್ಲಿಯ ಸ್ಟೇಷನ್ ಮಾಸ್ಟರ್ಸ್ ಮುಂತಾದವರು ಒಂದು ದೊಡ್ಡ ಭ್ರಾಂತಿ ಭಯ ದಿಂದಿದ್ದರು. ಇನ್ನು ಆ ಸಾಯಂ ಸಮಯಕ್ಕೆ ಗೋಣಿಯ ತಟ್ಟನ್ನು ಮೈಮೇಲೆ ಹಾಕಿಕೊಂಡು ಬಂದ ನಮ್ಮ ಸ್ವಾಮಿಗಳನ್ನು ನೋಡಿ, ಅವರು ಅನುಮಾನಿಸಿ ಹಿಡಿದು ಕೊಂಡು ಹೋಗಿ ಸ್ಟೇಷನ್ ಪಕ್ಕದ ರೂಮಿನಲ್ಲಿ ಕೂಡಿಸಿ ಕದಗಳು ಹಾಕಿ ಬೀಗ ಹಾಕಿದರು. ಇದನ್ನು ಕಂಡು ಸ್ವಾಮಿಗಳವರು ಇದೂ ಒಳ್ಳೆಯದೇ ಆಯಿತು. ಇಷ್ಟರ ವರಿಗೂ ಚಳಿ ಗಾಳಿಯಲ್ಲಿ ಬಂದು ಚಳಿಯಾಗಿತ್ತು. ಈಗ ಬೆಚ್ಚಗಾಯಿತು. ಹೀಗೆನ್ನುವ

ಭಾವದಿಂದ ಮತ್ತೇನು ಮಾತನಾಡದೆ ಆ ರೂಮಿನಲ್ಲಿ ಬೆಚ್ಚಗೆ ಪ್ರಶಾಂತವಾಗಿ ಗುರು ಸ್ಮರಣೆಯನ್ನು ಮಾಡುತ್ತಾ ಕುಳಿತರು. ಅಂದಾಜು ಆ ರಾತ್ರಿ 9 ಗಂಟೆ ಆಗಿರ ಬಹುದು. ಆ ಸ್ಟೇಷನ್ ಮಾಷ್ಟರ್ರುಸ್ಸ ಇನ್ನಿತರರು ಭೋಜನವನ್ನು ತೀರಿಸಿಕೊಂಡು ವಿನೋದವಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಾ ಅವರಲ್ಲಿ ಒಬ್ಬರು ಹೀಗೆಂದು ಪ್ರಶ್ನೆ ಹಾಕಿಕೊಂಡರು.

ಏನಯ್ಯಾ ಇದು, ಧರ್ಮ, ಧರ್ಮಯೆಂಬುವದಾಗಿ ಶಾಸ್ತ್ರ. ಏಕಪುತ್ರ ಸಂತಾನ ವಾದ ಮೇಲೆ ತನ್ನ ಸತೀಮಣಿಯನ್ನು ತಾಯಿಯಾಗಿ ನೋಡಬೇಕೆಂದು ಹೇಳುತ್ತಾ ರಲ್ಲಾ, ಹಾಗಾದರೆ ಕುಚೇಲನಿಗೆ ಅಷ್ಟರಮಟ್ಟಿಗೆ ತಿಳುವಳಿಕೆ ಇದ್ದಿಲ್ಲವೇ. ಅದೇಕೆ, 27 ಮಂದಿ ಮಕ್ಕಳಾತನಿಗೆ ಅನ್ನುತ್ತಾರಲ್ಲಾ? ಈ ರೂಪವಾದ ಪ್ರಶ್ನೆ ಅವರಲ್ಲುಂಟಾಗಿ ಮಾತನಾಡಿಕೊಳ್ಳುತ್ತಿದ್ದರು. ಅಲ್ಲಿದ್ದ ಅವರೊಳಗವರೇ ಅದಕ್ಕೇನೇನೋ ವಿಪರೀತ ವಾದ ಅರ್ಥರಹಿತ ಪ್ರಲಾಪಗಳನ್ನು ಹೇಳಿಕೊಳ್ಳುತ್ತಿದ್ದರಂತೆ. ಈ ಪ್ರಶ್ನೋತ್ತರ ಗಳೆಲ್ಲವೂ ರೂಮಿನಲ್ಲಿ ಬೆಚ್ಚಗೆ ಕುಳಿತಿರುವ ನಮ್ಮ ಸ್ವಾಮಿಯವರಿಗೆ ಕೇಳಿಸುತ್ತಿದ್ದವು. ಅವರಿಷ್ಟಾನುಸಾರವಾದ ಮಾತುಗಳನ್ನು ಕೇಳಿ ಸಹಿಸಲಾರದೆ "ಅಯ್ಯಗಳಿರಾ ! ಆ ಪ್ರಶ್ನೆಗೆ ನೀವುಗಳು ಅಂಥಾ ವಿರುದ್ಧವಾದ ಅರ್ಥಗಳನ್ನು ಹೇಳಿಕೊಳ್ಳಬಾರದು. ಆಸ್ತಿಕನಾಗಿ ಧಾರ್ಮಿಕ ಬುದ್ಧಿಯಿಂದ ಕೇಳುವವನಿಗೆ ಪೌರಾಣಿಕವಾದ ಆ ಧರ್ಮ ರಹಸ್ಯಗಳು ತಿಳಿಯುತ್ತವೆ. "ನತು ಗುಹ್ಯಾಃ ಪ್ರತೀಯಂತೇ ಪುರಾಣೇಷ್ವಲ್ಪ ಚೇತಸಾಮ್" ಅಂದಹಾಗೆ ಪುರಾಣಗಳ ಸತ್ಯಾರ್ಥ ಅಲ್ಪಬುದ್ಧಿಗಳಿಗೆ ಭೋಧ್ಯ ವಾಗದು." ಹೀಗೆಂದು ಸ್ವಾಮಿಗಳು ರೂಮಿನೊಳಗಿನಿಂದ ನುಡಿದರು. ಆ ಮಾತು ಗಳನ್ನು ಕೇಳಿದ ಕೂಡಲೇ ಸ್ಟೇಷನ್ ಮಾಸ್ಟರುಗಳು ಅಲ್ಲಿದ್ದವರು ಗಾಬರಿಯಿಂದ ಕದಗಳನ್ನು ತೆಗೆದು ಬ್ಯಾಟ್ರೀ ಹಾಕಿ ಸ್ವಾಮಿಗಳನ್ನು ಕೆಳಗೆ ಮೇಲೆ ನೋಡಿದರು. ಅಯ್ಯೋ ! ನಾವು ತಪ್ಪು ಕೆಲಸ ಮಾಡಿದಿವಿ, ಪಾಪವಾಯಿತು. ಈತನಾರೋ ಒಳ್ಳೇ ಸ್ವಾಮಿಯಾಗಿದ್ದಂತಿದೆ. ಓದಿಕೊಂಡವರ ಹಾಗೆ ಕಾಣಿಸುತ್ತಾರೆ "ನಾರಾಯಣ, ನಾರಾಯಣ" ಅಂದುಕೊಳ್ಳುತ್ತಾ ನಮಸ್ಕರಿಸಿದರು. ನಮ್ಮ ಶ್ರೀಗಳವರು 'ಶಿವಾಯ ನಮಃ' ಎಂದು ಒಡಲು ಹೇಳಿದರು. ಅನಂತರ ಶ್ರೀಗಳವರನ್ನು ಹೊರಗೆ ಕರೆದು ಕೊಂಡು ಬಂದು ಗತರಾತ್ರಿ ಅಲ್ಲಿ ನಡೆದ ವಿಷಯವನ್ನು ತಿಳಿಸಿ "ಸ್ವಾಮೀ ಇಷ್ಟರ ವರಿಗು ತಾವಾರೋಯೆಂಬ ವಿಷಯವು ತಿಳಿಯದೆ ತಪ್ಪು ಮಾಡಿದೆವು. ಕ್ಷಮಿಸ ಬೇಕು". ಎಂದು ಕೇಳುತ್ತಾ ಭಕ್ತಿ ಶ್ರದ್ಧೆಗಳಿಂದ, "ಸ್ವಾಮೀ ! ಸ್ನಾನ ಮಾಡು ತ್ತೀರಾ ?" ಎಂದು ಕೇಳಿ ತಣ್ಣನ ನೀರಿನ ಕೊಡ ಒಂದನ್ನು ಬಾವಿಯಲ್ಲಿ ಸೇದಿಕೊಂಡು ಬಂದಿಟ್ಟರು. ಸಕ್ಕರೆಯನ್ನು ಕಲಿಸಿದ ಹಾಲು, ನಾಲ್ಕು ಬಾಳೆಹಣ್ಣುಗಳನ್ನು ತಂದು ಮುಂದಿಟ್ಟರು. ಇದೆಲ್ಲಾ ಶಿವನ ಲೀಲೆ ಎನ್ನುತ್ತಾ ಸ್ವಾಮಿಯವರು ಸ್ನಾನವನ್ನು ಮಾಡಿ ಅವರು ಕೊಟ್ಟ ಹಾಲು ಹಣ್ಣುಗಳನ್ನು ಶಿವಾ ಶಿವಾ ! ಎಂದು ಸ್ವೀಕ

ರಿಸಿ ಸುಖವಾಗಿ ಮಲಗಿದರು. ಮತ್ತು ಉದಯ ಎದ್ದ ಕೂಡಲೇ ಸ್ವಾಮಿಗಳವರು ಪ್ರಯಾಣ ಮಾಡಲು ಉದ್ಯುಕ್ತರಾದರು. ಆಗ ಅಲ್ಲಿದ್ದ ಸ್ಟೇಷನ್ ಮಾಷ್ಟರ್‌ಗಳು, "ಸ್ವಾಮೀ ತಾವು ಎಲ್ಲಿಗೆ ಹೋಗಬೇಕೋ ಹೇಳಿರಿ. ಅಲ್ಲಿಯವರಿಗೂ ತಮಗೆ ಯಾವ ಅಡ್ಡಿ ಇಲ್ಲದಂತೆ ಗಾರ್ಡ್‌ಗೆ ಹೇಳಿ ಗಾಡಿಹತ್ತಿಸುವೆವು" ಎಂದು ಹೇಳಿದರು. ಅದಕ್ಕೆ ಸ್ವಾಮಿಗಳವರು ಹಾಗಲ್ಲಪ್ಪಾ ! ಭಗವದೈಶ್ವರ್ಯ ವಿಸ್ತಾರವಾದ ಈ ಘೋರಾರಣ್ಯ ದಲ್ಲಿಯ ಪ್ರಕೃತಿ ಸೌಂದರ್ಯಗಳನ್ನು ವೀಕ್ಷಿಸುತ್ತಾ ಪಾದಚಾರಿಗಳಾಗಿಯೇ ನಾವು ನೋಡಬೇಕೆಂದು ಶುದ್ಧ ಸಂಕಲ್ಪ. ಇಷ್ಟು ಒಳ್ಳೆಯ ಸದ್ಭಾವವುಳ್ಳ ನಿಮಗೆ ಪರ ಮಾತ್ಮನು ಶುಭಪ್ರದನಾಗಲಿ ! " ಎಂದು ಶುಭಾಶಂಸನವನ್ನು ಹೇಳಿ ಮುಂದೆ ಹೊರಟರು.

ಆ ವಿಪಿನದಲ್ಲಿ ಝೇಂಕರಿಸುವ ಭೃಂಗಗಳ ಝೇಂಕಾರವು, ಗಲಿಬಿಲಿಯಾಗಿ ಕಳಕಳಿಸುವ–ಶಬ್ದಿಸುವ ನಾನಾವಿಧ ಶುಕಪಿಕಾದಿ ಪಕ್ಷಿಗಳ ಧ್ವನಿಗಳು, ದೂರದಲ್ಲಿಂದ ಕೇಳಿಬರುವ ಮೃಗಗಳ ಗರ್ಜನೆಯಿಂದ ಕೂಡಿರುವ ಶಬ್ದಗಳಿಂದೊಪ್ಪುವ ಸೌಂದರ್ಯಾ ರಣ್ಯವನ್ನು ಕಾಣುತ್ತ, ಭಗವದಾಯತ್ತ ಚಿತ್ತರಾಗಿ ಮಹಾಮಂತ್ರವನ್ನು ಸ್ಮರಿಸಿ ಕೊಳ್ಳುತ್ತಾ ಶ್ರೀಗಳವರು ನಿರ್ಭಯರಾಗಿ ಒಬ್ಬರಾಗಿ ಹೊರಡುತ್ತಿದ್ದಾರೆ. ನನಗೇಕೆ ಯಾವ ವಿಚಾರವು "ನಾಕೇಲ ಏವಿಚಾರಮು ಏಕಂಬಗು ದಾನಿನಂದಿನ ಶ್ರೀ ಕಂಠ ಉಮಾಮಹೇಶ್ವರಾಖ್ಯ ಗುರುಪರಂಪರ ಮುಂಡಗ" ಎನ್ನುವ ಗುರು ಪರಂಪರಾ ಸ್ತೋತ್ರ ಪಾಠವನ್ನು ಉತ್ಕಂಠದಿಂದ ಹಾಡಿಕೊಳ್ಳುತ್ತಾ ಆ ದಿನವೆಲ್ಲವೂ ನಡೆದು ನಡೆದು, ಮಾರನೆಯ ದಿನ ಸಾಯಂಕಾಲ ಪ್ರಾಯಶಃ 3, 4 ಗಂಟೆಯವರಿವಿಗೂ ನಡೆದರು. ಆದರೇನು, ಆ ಸುಕುಮಾರ ದೇಹವು ಇಂಥಾ ಕಷ್ಟಗಳನ್ನು ಯಾವಾ ಗಲು ಪಟ್ಟಿದಿಲ್ಲ. ಆಹಾರವೂ ಇಲ್ಲವಾಯಿತು. ರೈಲ್ವೇ ಕಂಬಿಗಳ ಪಕ್ಕದಲ್ಲಿ ನಡೆದು ದರಿಂದ ಪಾದಗಳು ಬಾತು ಹೋದವು, ಅಡಿ ಇಡುವುದಕ್ಕು ಕಷ್ಟವಾಯಿತು. ಇನ್ನು 8 ಮೈಲು ಅಡವಿಯಲ್ಲಿ ನಡೆದರೆ ಸ್ವಾಮಿಗಳವರ ಸಿದ್ಧಸಂಕಲ್ಪದಂತೆ ಅಡವಿಗಳು ಮುಗಿದು 'ದಿಗುವ ಮೆಟ್ಟ' ಸ್ಟೇಷನ್ ಸೇರಬಹುದು. ಆದರೇನು, ಅದಕ್ಕಾಗಲಿ ಶಕ್ತಿ ಬೇಕಲ್ಲವೇ ? ಇಂಥಾ ಸಮಯದಲ್ಲಿ ಆಹಾರವನ್ನು ಕೊಟ್ಟು ರಕ್ಷಿಸುವರಾರು ? ಕೊಟ್ಟರೆ ಆ ಪರಮೇಶ್ವರನೇ ವಿನಾ ಮತ್ತಾರು ಕೊಡುವರು ! ಆ ಅರಣ್ಯದಲ್ಲಿ ದಿಕ್ಕಿಲ್ಲ.

ಹೀಗೆಂದು ಪೋತನಾಮಾತ್ಯನ ಭಾಗವತದ ತೆಲಗು ಪದ್ಯವನ್ನು "ರಕ್ಷಕುಲು ಲೇನಿವಾರಲರಕ್ಷಿಂಚೆದ ನನುಚು ಚಕ್ರಿರಾಜ್ಯೆಯುಂಡನ್........" ಎನ್ನುವ ಅರ್ಥವಂಥ ವಾದ ಪದ್ಯವನ್ನು ಹೇಳಿಕೊಳ್ಳುತ್ತಾ; ಆ ದಿನ ತಾಯಿಯ ಹೊಟ್ಟೆಯಲ್ಲಿದ್ದಾಗ ಕಿಷ್ಕಿಂದವಾದ ಆ ಸ್ಥಾನದಲ್ಲಿ ಯಾವ ದೇವದೇವನು ಅನ್ನಪಾನಾದಿಗಳನಿಟ್ಟು ರಕ್ಷಿಸಿ ದನೊ, ಆ ಪರಮಾತ್ಮ ಈ ಹೊರಗೂ ಇದ್ದಾನಲ್ಲವೇ ! ಸರ್ವಾಂತರ್ಯಾಮಿ ಶಂಭು

ಪರಮಾತ್ಮ ಸರ್ವರಕ್ಷಕನನ್ನು ನಂಬಿಕೆಟ್ಟವರಿಲ್ಲ; ನಂಬದೆ ಧನ್ಯರಾದವರಿಲ್ಲ ಎಂಬ ನುಡಿಯನ್ನು ಸ್ಮರಿಸುತ್ತಾ ಹೋಗುತ್ತಿರಲು ಆ ಅಡವಿ ಮಧ್ಯದಲ್ಲಿ ಬಹು ಆಶ್ಚರ್ಯ ಕರವಾಗಿ ನಮ್ಮ ಸ್ವಾಮಿಗಳಿಗೆ ಪ್ರಸಾದವನ್ನು ಕೊಟ್ಟು ರಕ್ಷಿಸಿದನು.

ಅದು ಹೇಗೆಂದರೆ ಆ ಘೋರ ವಿಪಿನದಲ್ಲಿ ನಡೆಯುವ ಶಕ್ತಿಯಿಲ್ಲದೆ ಸ್ವಾಮಿಗಳು ನಡೆಯಲಾರದೆ ನಡೆಯುತ್ತ ಹೋಗುತ್ತಲಿದ್ದರು. ಆ ಸಮಯಕ್ಕೆ ಗುಂತಕಲ್ಲಿನಿಂದ ರೈಲು (ಹುಬ್ಬಿಗಾಡಿ) ಬರುವ ಶಬ್ದವು ಕೇಳಿಸಿತು. ಸ್ವಾಮಿಯವರು ಪಕ್ಕದಲ್ಲಿ ದೂರ ವಾಗಿ ನಡೆಯುತ್ತಿದ್ದರು. ಬಂಡಿ ಮುಂದೆ ಹೊರಟು ಹೋಯಿತು. ಕೆಲವು ದೂರ ಹೋದ ಮೇಲೆ ಕಿಟಕಿಯಿಂದ ಏನೋ ಒಂದು ಚಿಕ್ಕ ವಸ್ತು–ಗಂಟುಬಿದ್ದಂತೆ ಸ್ವಾಮಿ ಯವರಿಗೆ ಕಾಣಿಸಿತು. ನೆಮ್ಮದಿಯಾಗಿ ಅಲ್ಲಿಗೆ ಹೋಗಿ ಅದನ್ನು ಸಮೀಪಿಸಿ ನೋಡಲು ಹೊಟ್ಟೆಯೊಡೆದು ದೊಡ್ಡದೊಂದು ಕಾಗದ ಪಟ್ನ ಬಿದ್ದಿತ್ತು. ಅದನ್ನು ತೆಗೆದು ನೋಡಲು ಶುಭ್ರವಾದ ಕೆಲವು ಲಡ್ಡುಗಳೂ ಇನ್ನಿತರ ತಿನ್ನುವ ಪದಾರ್ಥಗಳೂ ಇದ್ದವು. ಈ ದೃಶ್ಯವನ್ನು ನೋಡಿ ಆನಂದಾಶ್ರುಧಾರೆ ಅಖಂಡವಾಗಿ ಸುರಿಯು ತ್ತಿರಲು, ಕರುಣಾಮಯನಾದ ಗುರುದೇವನನ್ನು ಮನದಲ್ಲಿ ಭಾವಿಸುತ್ತಾ ಭಾವ ಸಮಾಧಿಯನ್ನು ಹೊಂದಿ ಸುಮ್ಮನಿದ್ದು ಸ್ವಲ್ಪ ಹೊತ್ತಿನ ಮೇಲೆ ಎಚ್ಚರವನ್ನು ಪಡೆದು "ಭೋ ಪರಮೇಶಾ ! ಗುರುದೇವಾ ! ಶ್ರೀ ವಿವೇಕಾನಂದ ಸ್ವಾಮಿಯವರಿಗೆ ಶ್ರೀ ರಾಮಕೃಷ್ಣ ಗುರು ಪರಮಾತ್ಮ ಆಹಾರವನ್ನು ಕಳಿಸಿದಂತೆ, ಈ ನಿಬಿಡವಾದ ಅಡವಿ ಯಲ್ಲಿ ಈ ನಿಮ್ಮ ಮಗುವನ್ನು ರಕ್ಷಿಸುವುದಕ್ಕೆ ಅನೂಹ್ಯವಾದ ಈ ರೂಪದಿಂದ ಪ್ರಸಾದವನ್ನು ಕಳಿಸಿದೆಯಾ ? ತಂದೇ ! ರೈಲಿನಲ್ಲಿ ಯಾರ ಕೈಯ್ಯಿಂದ ಕೆಳಗೆ ಜಾರಿ ಬಿತ್ತೋ, ಅವರ ಕೈಗಳು ಅವರೆಷ್ಟು ಪುಣ್ಯಾತ್ಮರೋ, ಇದು ನಿನ್ನ ವಿಚಿತ್ರಲೀಲೆ "ಓಂ ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಸ್ತುತೇ ಸರ್ವತ ಏವ ಸರ್ವ............" (ಗೀತ 11–40) ಈ ಶ್ಲೋಕವನ್ನು ಪಠಿಸುತ್ತಾ ನಮಸ್ಕರಿಸುತ್ತಾ ದೇವರು ಕಳು ಹಿದ ಮಹಾ ಪ್ರಸಾದವನ್ನು ತೃಪ್ತಿಯಾಗಿ ಸ್ವೀಕರಿಸಿ. ಆ ರೈಲ್ವೇ ರೋಡು ಪಕ್ಕದಲ್ಲಿ ಕಂಡ ಕುಣಿಯಲ್ಲಿಯ ನೀರನ್ನು ಕುಡಿದು, ನೆಮ್ಮದಿಯಾಗಿ ನಡೆದು ದಿಗುವ ಮೆಟ್ಟ ಸ್ಟೇಷನ್ ಸೇರಿದರು. ಇನ್ನು ಅಲ್ಲಿಂದ ಅರಣ್ಯ ಪ್ರವಾಸವಿಲ್ಲ. ಸಣ್ಣ ಸಣ್ಣ ಗ್ರಾಮ ಗ್ರಾಮಾಂತರದಿಂದ ನಡೆದು–ನಡೆದು ಕೆಲವು ದಿನಕ್ಕೆ ಗುಂಟೂರು ಶ್ರೀ ಗುರು ನಾಥಾಶ್ರಮವನ್ನು ಸೇರಿದರು. ಅಲ್ಲಿ ಶ್ರೀ ವೇದಾನಂದ ಸ್ವಾಮಿಗಳು, ಪೂರ್ಣಚಂದ್ರ ರಾವು (ಪೂರ್ಣಾನಂದರು) ಇದ್ದರು. ನಮ್ಮ ಸ್ವಾಮಿಗಳನ್ನು ಕಂಡು ಮಹಾ ಸಂತೋಷವನ್ನು ಹೊಂದಿದರು, ಪೂರ್ಣಚಂದ್ರರಾವ್ ಅವರು ಗುಡಿವಾಡ ಪ್ರಣ ವಾಶ್ರಮದಲ್ಲಿ ಸ್ವಾಮಿಗಳನ್ನು ಚೆನ್ನಾಗಿ ತಿಳಿದವರಾಗಿದ್ದರು. ಆದ್ದರಿಂದ ನಮ್ಮ ಸ್ವಾಮಿಗಳನ್ನು ಪ್ರೇಮಾದರಣೆಯಿಂದ ನೋಡಿಕೊಂಡರು.

ಶ್ರೀ ಸ್ವಾಮಿಗಳವರು ಪಾದಚಾರಿಗಳಾಗಿ ಬಂದುದರಿಂದ ಕಾಲುಗಳು ಬಾತು ಹೋಗಿದ್ದವು. ಅದನ್ನು ನೋಡಿ ಎಲ್ಲಾ ವಿಷಯಗಳನ್ನು ಕೇಳಿ, ಆ ಆಶ್ರಮದ ಯಜಮಾನರಾದ ಶ್ರೀ ಚಕ್ಕಾ ಸುಬ್ಬಾರಾವವರಿಗೆ ಪತ್ರವನ್ನು ಬರೆದು, ಈ ಬಂದ ನಮ್ಮ ಸ್ವಾಮಿಗಳಿಗೆ ಕೆಲವು ಚಿಕಿತ್ಸೆಯ ಸಾಮಾನುಗಳನ್ನು ಕಳುಹಿಸಬೇಕೆಂದು ತಿಳುಹಿಸಿದರು. ಆ ಸಾಯಂಕಾಲಕ್ಕೆ ಸುಬ್ಬಾರಾವವರೇ ತೈಲ ಮೊದಲಾದವುಗಳನ್ನು ತೆಗೆದುಕೊಂಡು ಆಶ್ರಮಕ್ಕೆ ಬಂದು, ಶ್ರೀಗಳವರನ್ನು ಸಂದರ್ಶಿಸಿ ಪರಮ ಸಂತೋಷಪಟ್ಟು ಸ್ವಾಮಿಗಳವರು ಯಾವಾಗಲು ಇಲ್ಲೇ ಇರಬೇಕೆಂದು ಪ್ರೇಮದಿಂದ ಬೇಡಿದರು.

ಆ ಏಕಾಂತವಾದ ಪವಿತ್ರ ಸ್ಥಳದಲ್ಲಿ ಬ್ರಹ್ಮನಿಷ್ಠೆಯಿಂದ ಸುಖವಾಗಿರುತ್ತ, ಅಲ್ಲಿದ್ದ ಸ್ವಾಮಿಗಳೊಡನೆ ತಾವು ಅಲ್ಲಿಗೆ ಬಂದ ವಿಷಯವನ್ನು ಪರಸ್ಪರವಾಗಿ ಮಾತನಾಡಿಕೊಂಡು, ಶ್ರೀ ವೇದಾನಂದ ಸ್ವಾಮಿಗಳವರು ಕಾಷಾಯಾಂಬರ ಪರಿಧಾನರೂ ಯತೀಶ್ವರರೂ ಸುಜನ ಸಂಪನ್ನರಾದ್ದರಿಂದ ಅವರಿಂದ ತುರೀಯಾಶ್ರಮ ಸ್ವೀಕರಿಸಬೇಕೆಂದು ನಿಶ್ಚಯಿಸಿ, ಪೂರ್ವಾಶ್ರಮದ ತೊಂದರೆಗಳು ವಗ್ಯೆರಾ ವಿಷಯಗಳನ್ನು ತಿಳುಹಿಸಿ, ಶ್ರೀಯವರ ಗುರುಗಳು ಶ್ರೀ ಸದಾನಂದ ಸದ್ಗುರು ಸ್ವಾಮಿಯವರು ಪೂರ್ವಾಶ್ರಮ ಚಿಹ್ನೆಗಳಿಂದಲೇ ಇರುವ ಶ್ರೋತ್ರಿಯ ಬ್ರಹ್ಮನಿಷ್ಠ ಮಹಾಪುರುಷರಾದ ಶ್ರೀ ವೀರಪ್ಪಸ್ವಾಮಿಯೆಂಬಭಿಧಾನ ಉಳ್ಳವರು, ಆದ್ದರಿಂದ ನಮ್ಮಗೆ ಯತ್ಯಾಶ್ರಮ ಸ್ವೀಕಾರವಾಗಬೇಕೆಂದು ಎಲ್ಲಾ ವಿಷಯಗಳು ಮಾತನಾಡಿದರು. ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರಾಶಕ್ತಿ ನಮ್ಮನ್ನು ಕಾಪಾಡಲೆಂಬುದಾಗಿಯೂ ಆ ದಿನ ಪೂರ್ಣಾನದಿಯಲ್ಲಿ ಶ್ರೀ ಶಂಕರನನ್ನು ಮೊಸಳೆ ಹಿಡಿದು ನುಂಗುವಾಗ ಅದು ಅಯ್ಯಾ ! ನೀನು ಸನ್ಯಾಸಿಯಾದರೆ ಬಿಡುತ್ತೇನೆ ಇಲ್ಲದೆ ಹೋದರೆ ನುಂಗುತ್ತೇನೆ ಅಂದಂತೆ, ನನ್ನ ಸ್ಥಿತಿಯು ಹಾಗೇ ಇದೆ ಎಂದು ಹೇಳಿದರು. ಈ ವಿಷಯವನ್ನು ಅವರು ಕೇಳಿ ಮುಂದೆ ಆಶ್ರಮ ಸ್ವೀಕಾರಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಲು ಸುಬ್ಬಾರಾವವರಿಗೆ ತಿಳುಹಿಸಿ ಏರ್ಪಾಟು ಮಾಡಿದರು.

ನಮ್ಮ ಸ್ವಾಮಿಗಳವರು ತದೇಕ ದೃಷ್ಟಿಯಿಂದಿರುತ್ತಿರಲು ಶ್ರೀ ರುಕ್ಮಿಣೀ ಕಲ್ಯಾಣೋತ್ಸವ ಸಂದರ್ಭೋಚಿತ ಪ್ರಸಂಗದಂತೆ, ಅದೇ ದೃಷ್ಟಿಯಲ್ಲಿರುವ ಸ್ವಾಮಿಗಳನ್ನು ತುರೀಯಾಶ್ರಮ ಸ್ವೀಕರಿಸಿತು. ಆ ದಿನ ಸ್ವಸ್ತಿ ಶ್ರೀ ತಾರಣನಾಮ ಸಂವತ್ಸರ ಫಾಲ್ಗುಣ ಶುದ್ಧ ಪೂರ್ಣಿಮ ಸೋಮವಾರ || ಶಾ || ಶಕೆ || 1866 ದಿನಾಂಕ (26-2-45) ಕಾಮದಹನ ಪರ್ವಕಾಲ. ಪವಿತ್ರವಾದ ಅಮರಾವತೀ ಕ್ಷೇತ್ರ ಕೃಷ್ಣಾ ನದೀ ತೀರದಲ್ಲಿ ಸಶ್ರಾದ್ಧ, ವಿರಜಾದಿ ಪೂರ್ವ ಭಾಗವಾದ ವೈದಿಕ ಕ್ರಿಯಾ ಕಲಾಪಗಳು ಯಥಾ ಶಾಸ್ತ್ರವಾಗಿ ನಡೆದು ಮುಗಿದವು. ಶ್ರೀ ಮದುಮಾಮಹೇಶ್ವರ ಗುರುಪೀಠ ಪರಂಪರಾ ಸ್ತೋತ್ರಾನುಸ್ಮರಣ ಪೂರ್ವಕ ಸ್ವಗುರು ನಮಸ್ಕಾರವನ್ನು ಮಾಡಿ, ಸಂಪ್ರದಾಯಾನುಸಾರ ಪ್ರೇಘೋಚ್ಚಾರಣ ಮಂತ್ರವನ್ನು ಮೂರುಸಲ

ಉಚ್ಚರಿಸಿ, ಸನ್ಯಸ್ತರಾಗಿ "ಶ್ರೀ ಶ್ರೀ ಶ್ರೀ ಶಂಕರಾನಂದಗಿರಿ ಸ್ವಾಮಿ"ಗಳೆಂಬ ಯೋಗ ಪಟ್ಟವನ್ನು ಪಡೆದರು. ಆಗ ಹೇಳಬೇಕಾದ ಎಲ್ಲಾ ವಿಷಯಗಳನ್ನು ಶ್ರೀ ವೇದಾನಂದ ಸ್ವಾಮಿಗಳು ಹೇಳಿದರು. ಶ್ರೀ ಶಂಕರಾನಂದಗಿರಿ ಸ್ವಾಮಿಯತೀಶ್ವರ ರಾಗಿ ಮಂತ್ರ ಪೂತವಾದ ಪವಿತ್ರ ಕಾಷಾಯಾಂಬರಗಳನ್ನು ಧರಿಸಿದ ಕೂಡಲೇ, ಸಚೇತನವಂತವಾದ ಯಾವದೋ ಒಂದು ದಿವ್ಯ ತೇಜಸ್ಸು ದೇಹವೆಲ್ಲ ಆಪಾದ ಮಸ್ತ ಕವೂ ನಮ್ಮ ಸ್ವಾಮಿಗಳವರನ್ನು ವ್ಯಾಪಿಸಿದಂತಾಯಿತು 'ಅಭಯಂ ಸರ್ವ ಭೂತೇಭ್ಯಃ' ಅನ್ನುತ್ತಾ ಭಾವಸಮಾಧಿಯನ್ನು ಹೊಂದಿದರು. ಅನಂತರ ಶ್ರೀ ಗುರುನಾಥಾಶ್ರಮಕ್ಕೆ ಬಂದರು.

ಈ ಶುಭವಾರ್ತೆಯನ್ನು ತಮ್ಮ ಪೂಜ್ಯ ಗುರುವರೇಣ್ಯರು ಶ್ರೀ ಶ್ರೀ ಶ್ರೀ ಸದಾ ನಂದ ಸದ್ಗುರು ಸ್ವಾಮಿಯವರಿಗೆ, ಅತ್ಯಂತ ಭಕ್ತಿಪೂರ್ವಕವಾಗಿ ಇಲ್ಲಿ ನಡೆದ ಶುಭ ವಿಷಯವನ್ನು ಪತ್ರಮೂಲಕ ತಿಳುಹಿಸಿಕೊಂಡರು. ಇದೆಲ್ಲವು ಗುರುದೇವರ ಕೃಪೆ ಯೆಂದು ಅರಿಕೆಮಾಡಿಕೊಂಡರು. ಇನ್ನು ಮಿಕ್ಕ ಸ್ವಾಮಿಗಳಿಗೂ ಮತ್ತು ತಮ್ಮ ಆಪ್ತರೂ ಇಷ್ಟರಾದ ಎಲ್ಲರಿಗೂ ಈ ವಿಷಯವನ್ನು ತಿಳುಹಿದರು. ಇದೊಂದು ಚಿತ್ರ. ಈ ಸಮಾಚಾರವು ಕೆಲವರಿಗೆ ಅಮಿತಾನಂದವನ್ನುಂಟು ಮಾಡಿತು; ಮತ್ತು ಕೆಲವರನ್ನು ದುಃಖಾಬ್ಧಿಯಲ್ಲಿ ಮುಳುಗಿಸಿತು; ಇನ್ನು ಕೆಲವರಿಗೆ ಪ್ರೇಮಾನಂದಗಳು ಉಕ್ಕೇರಿ ಹರಿದವು; ಹಾಗೆ ಮತ್ತು ಕೆಲವರು ಭಕ್ತಿ ಭಾವಾವೇಶ ಪೂರಿತರಾಗಿ ಸಂತೋಷಗೊಂಡರು; ಹಲವರು ಆನಂದದಿಂದ ಶುಭಸಂದೇಶಗಳನ್ನು ಕಳುಹಿದರು. ಅವುಗಳಲ್ಲಿ ಒಂದೆರಡು ಪದ್ಯಗಳನ್ನು ಉದಾಹರಿಸುತ್ತೇವೆ

### ಶ್ರೀ ಚಿದಾನಂದ ಸ್ವಾಮಿಯವರು ಕಳುಹಿದ್ದು

ಶಾ|| "ಎಂದೋಗೈದ ಸುಕರ್ಮಮಿಂದು ಪರಿಪಕ್ವಾವಸ್ಥೆಯಂ ಪೊಂದಿ ತಾ
ನೆಂದೆಂದು ಕೆಡದಾತ್ಮಸೌಖ್ಯ ಮತಿಯೋಳ್ ತಂದಿತುದಂ ಕಂಡು ಆ
ನಂದಂ ಪೊಂದುವ ಭಾಗ್ಯ ನಿನ್ನ ಹೃದಯಕ್ಕೈದಿರ್ಕು ಹೇ ಶಂಕರಾನಂದಾ !
ಧನ್ಯನು ಧನ್ಯ ನೀನು ಭುವಿಯೊಳ್ ಬಂದೊಮ್ಮೆ ನಿಂಕಾಣ್ಬುದೈ"

### ಕಾಶೀ ಪಂಡಿತರು ಕಳುಹಿದ್ದು
### (ಶ್ರೀ ಸಿದ್ಧರಾಮ ಶಿವಾಚಾರ್ಯರು)

ಭಾ ||ಷ|| ಶಂಕರಾಧ್ವಗರಮಲ ಯತಿಗಳು
ಟೊಂಕ ಕಟ್ಟಿರುವವರು ಹಮ್ಮಿನ
ಬಿಂಕ ಮುರಿದಲೆದಾಡುತಿರ್ಪರು ಲೋಕ ಸಂಗ್ರಹಕೇ ||

ಮಂಕು ಮನುಜರ ಸಂಖ್ಯೆ ಶಂಕೆ ಗ
ಳಂಕುರವ ಕಿತ್ತೊಗೆದು ನಿಜಸುಖ
ಮಂಕುಡುವ ತತ್ತ್ವಭೋಧಕ ಭವ ಸದ್ಗುರುವು ||
ಅರಿವು ವಿರತಿ ಸುಕರ್ಮ ಭಕ್ತಿಯು
ಕರಗಿ ಮೆರೆದಿಹ ಮೂರ್ತಿಯೋ ? ಶಂ
ಕರನು ತಾನವತರಿಸಿ ಬಂದಿಹನೇನೊ ಎಂಬಂತೆ ||
ಗುರುಗಳೆನಿಸಿ ಶಂಕರಾನಂದ
ಗಿರಿಸುನಾಮದೆ ತೋರುತಿಳೆ ಜನ ಃ
ಕರುಹಿ ತತ್ವವ ಧನ್ಯರಾಗಿಸಿ ಮೆರೆದರಿಳೆಯೊಳಗೆ ||

ಶ್ರೀಗಳವರು ಇಲ್ಲಿಯೇ ಕೆಲವು ದಿನಗಳಿದ್ದು ಆಮೇಲೆ ಅಲ್ಲಿರುವ ಮಹನೀಯರಿಗೆ ಪ್ರಣಾಮಗಳನ್ನು ತಿಳುಹಿಸಿ

ವೇದಾಂತೇ ಪ್ರತಿಪಾದಿತಂ ಸುವಿಮಲಂ ತತ್ವಂ ಯದಾತ್ಮೇತಿ ಯಃ
ಶಾಸ್ತ್ರಾಚಾರ್ಯನಿಷೇವಣಾದನುದಿನಂ ನಿಶ್ಚಿತ್ಯ ಯುಕ್ತ್ಯಾ ಸ್ವಯಂ
ಶಿಷ್ಯಾಣಾ ಮಪವರ್ಗಮಾರ್ಗ ಮನಿಶಂ ಸಂಬೋದಯನ್ ರಾಜತೇ
ವೇದಾನಂದ ಯತೀಶ್ವರಃ ಕರುಣಯಾ ಪಾಯಾದಪಾಯತ್ಸನಃ ||

ಎಂದು ನುತಿಸಿ ಮತ್ತು ಶ್ರೀ ಚಕ್ಕಾ ಸುಬ್ಬರಾವವರಿಗೆ ಹೇಳಿ, ಅಲ್ಲಿಂದ ಗುಡಿವಾಡ ಶ್ರೀ ಪ್ರಣವಾಶ್ರಮಕ್ಕೆ ದಯಮಾಡಿಸಿದರು,

# ಸಿದ್ಧಗೀತೆ-ಸದ್ಗೋಷ್ಠಿ

ಒಂದು ದಿನ ಗುಡಿವಾಡ ಶ್ರೀ ಪ್ರಣವಾಶ್ರಮದ ಉದ್ಯಾನವನದಲ್ಲಿ ಶ್ರೀ ಶುದ್ಧ ಚೈತನ್ಯ ಸ್ವಾಮಿಗಳವರು ಹೀಗೆಂದರು: ಸ್ವಾಮೀ ! ಯೋಗವಾಶಿಷ್ಠದಲ್ಲಿ ಜ್ಞಾನ ಸಿದ್ಧರು ಜನಕನ ಉದ್ಯಾನವನದಲ್ಲಿ ಸೇರಿ ಬ್ರಹ್ಮಜ್ಞಾನ ವಿಷಯವನ್ನು ಮಾತನಾಡಿದಂತೆ ಇದೆ. ಅದರಂತೆ ನಾವುಗಳು ಬ್ರಹ್ಮಜ್ಞಾನ ವಿಷಯಗಳನ್ನು ಮಾತನಾಡಿಕೊಳ್ಳೋಣ" ಅದಕ್ಕೆ ಶ್ರೀ ಶುದ್ಧ ಚೈತನ್ಯ ಸಿದ್ಧರು ಹೀಗೆಂದರು:

"ಎರಡನೆಯದಿಲ್ಲದ ಅಸ್ತಿತ್ವವೇ ನಾನು"

ಶ್ರೀ ಸೀತಾರಾಮ ಸಿದ್ಧರು "ಆತ್ಮ ನಾನು ಅನ್ನುವದಿಲ್ಲ ಅಂಥಾ ಅನುಭವವನ್ನು ಸರ್ವತ್ರ ದರ್ಶಿಸುವುದೇ ತತ್ವದೃಷ್ಟಿ"

ಶ್ರೀ ಪೂರ್ಣಚಂದ್ರ ಸಿದ್ಧರು "ಕ್ಷೇತ್ರವು ಕ್ಷೇತ್ರಜ್ಞನೆಂಬ ಭೇದವು ಬಾಧಿಸಲ್ಪಟ್ಟ ಅಖಂಡ ಸ್ಥಿತಿಯೇ ನಾನು.

ನಮ್ಮ ಶ್ರೀ ಶಂಕರಾನಂದಗಿರಿ ಸ್ವಾಮಿ ಸಿದ್ಧರು.

"ಅದು ಇದು ಎನ್ನುವ ಬುದ್ಧಿ ವೃತ್ತಿಗಳಿಲ್ಲದ ಅಖಂಡ ಸಂವಿತ್ತೇ ನಾನು" ಮುಮುಕ್ಷುವು ಅಭ್ಯಾಸವನ್ನು ಬಿಡದಿದ್ದರೆ ಈ ತತ್ವವನ್ನು ಸತ್ವರವಾಗಿ ಸರ್ವತ್ರ ಕಾಣುವನು. ಇದು ಗುರುಕೃಪಾಲಬ್ಧವು ಸ್ವಸಂವೇದ್ಯವು.

ಹೀಗೆ ಈ ನಾಲ್ಕು ಜನ ಸಿದ್ಧರು ತಮ್ಮ ತಮ್ಮ ಅನುಭವಗಳನ್ನು ಗಾನ ಮಾಡಿದರು, ಮಾತನಾಡಿಕೊಂಡರು. ಅನಂತರ ಶ್ರೀ ಶುದ್ಧ ಚೈತನ್ಯ ಸಿದ್ಧರು, ಶ್ರೀ ಸೀತಾರಾಮ ಸಿದ್ಧರು ಹೀಗೆಂದರು: ಇಂದಿನ ಈ ಸಿದ್ಧಗೀತಾಗಾನದಲ್ಲಿ ನಮ್ಮ ಶ್ರೀ ಶಂಕರಾನಂದಗಿರಿ ಸಿದ್ಧರ ಗಾನವು ಋಷಿ ಸಂಪ್ರದಾಯವನ್ನು ಪೋಷಿಸುವ ಸದನುಭವವಾಗಿದೆ. ಹೀಗೆಂಬುದಾಗಿ ಮಹಾಸಂತೋಷದಿಂದ ಮಾತನಾಡಿದರು.

ಈ ದಿನಗಳಲ್ಲಿಯೇ ಪೂಜ್ಯರಾದ ಶ್ರೀ ಶ್ರೀ ಶ್ರೀ ಶುದ್ಧ ಚೈತನ್ಯ ಸ್ವಾಮಿಯವರು ಅಷ್ಟೋತ್ತರ ಶತೋಪನಿಷತ್ ನಾಗರಲಿಪಿ ಮೂಲ ಗ್ರಂಥವನ್ನು ನಮ್ಮ ಶ್ರೀ ಸ್ವಾಮಿಗಳವರಿಗೆ ಸಮರ್ಪಿಸಿದರು ಮತ್ತು ಶ್ರೀ ಸ್ವಾಮಿಗಳವರು ಭಗವದ್ಗೀತಾ ಪರಮಾರ್ಥ ಚಂದ್ರಿಕೆ 9 ಮಂದಿ ಭಾಷ್ಯ ಇರುವ 6 ಭಾಗಗಳ ಗ್ರಂಥವನ್ನು ಸಾಂಗವಾಗಿ ಶ್ರದ್ಧೆಯಿಂದ ಅವಲೋಕಿಸಿದರು ಮತ್ತು ಬರೆದಿಟ್ಟ ಮಾನಸೋಲ್ಲಾಸಿನಿ ಎಂಬ ಸುರೇಶ್ವರಾಚಾರ್ಯರ ಗ್ರಂಥವನ್ನು ಕೂಡಾ ಅವಲೋಕಿಸಿದರು. ಈ ಒಳಗೆ ಪೂಜ್ಯ ಶ್ರೀ ಸ್ವಾಮಿಗಳವರ ಜನಕರು ಪರಮ ಪದಿಸಿದಂತೆ ಗುಡಿವಾಡ ಆಶ್ರಮಕ್ಕೆ ಅಲ್ಲಲ್ಲಿ ತಿರುಗಿ ಪತ್ರ ಬಂತು. ಆ ದಿನವೇ ಎಲ್ಲವನ್ನು ತಮ್ಮನ್ನು ಬಿಟ್ಟವರಾಗಿದ್ದರು.

ಇನ್ನೇನು ಮಾಡುವದಿಲ್ಲದೆ ಶಿವ ಶಿವಾ ! ಎಂಬುವದಾಗಿ ಜ್ಞಾನಾನುಭವಕ್ಕೆ ಸಾಧನ ವಾದ ಈ ಪಾತ್ರೆಯನ್ನು ಕೊಟ್ಟ ನನ್ನನ್ನು ಹೆತ್ತ ಜನ್ಮದಾತ ತಂದೆಯವರು ಧನ್ಯ ರೆನ್ನುತ್ತಾ ಓಂ ನಮಶ್ಶಿವಾಯ ಓಂ ನಮಶ್ಶಿವಾಯ ಓಂ ನಮ ಶ್ಶಿವಾಯ ಎಂದು ಶ್ರದ್ಧಾಂಜಲಿಯನ್ನಿತ್ತರು.

ಅನಂತರ ಕೆಲವು ದಿನಗಳಲ್ಲಿ ಆಳ್ಳಗಡ್ಡೆ ಪೂಜ್ಯಪಾದ ಶ್ರೀ ಶ್ರೀ ಶ್ರೀ ಶಂಕರಾ ನಂದ ಸ್ವಾಮಿಗಳವರು ಶ್ರೀ ಶಂಕರ ಜಯಂತಿ ಮಹೋತ್ಸವವು ಈ ವರ್ಷವೇ ಇಲ್ಲಿ ಆಶ್ರಮದಲ್ಲಿ ಪ್ರಾರಂಭವಾಗುತ್ತದೆ. ತಮ್ಮ ಕೈಯಿಂದಲೇ ಈ ಕಾರ್ಯವು ನಡೆಯ ಬೇಕೆಂದು ನಮ್ಮ ಇಷ್ಟ. ಆದ್ದರಿಂದ ತಾವು ತಪ್ಪದೆ ಬರಬೇಕೆಂಬುದಾಗಿ ಪತ್ರ ಬರೆ ದರು. ಆದ್ದರಿಂದ ಸ್ವಾಮಿಗಳವರು ಅಲ್ಲಿಂದ ಪಾರ್ಥಿವ ವೈಶಾಖ ಶುದ್ಧ ತದಿಗೆ ಆಳ್ಳಗಡ್ಡೆ ಶ್ರೀ ಶಂಕರಾನಂದಾಶ್ರಮಕ್ಕೆ ಸೇರಿದರು. ಪೂಜ್ಯ ಶ್ರೀ ಸ್ವಾಮಿಗಳು ಎಷ್ಟೋ. ಪ್ರೇಮಾದರದಿಂದ ನಮ್ಮ ಸ್ವಾಮಿಗಳವರ ತುರೀಯಾಶ್ರಮ ಸ್ವೀಕಾರಾದಿ ಎಲ್ಲಾ ವಿಷಯಗಳನ್ನು ಕೇಳಿ ಸಂತೋಷಪಟ್ಟರು.

ಮಾರನೆಯ ದಿನ ವೈಶಾಖ ಶು ||೫|| ಪಂಚಮಿ ಶ್ರೀ ಶಂಕರ ಜಯಂತಿ ಮಹೋತ್ಸವವು. ಆ ಆಶ್ರಮದಲ್ಲಿ ನಮ್ಮ ಶ್ರೀಗಳವರು ವಿಧ್ಯುಕ್ತವಾಗಿ ಕಲ್ಪೋಕ್ತ ಪ್ರಕಾರ ಜಯಂತಿ ಕಾರ್ಯಕ್ರಮವನ್ನು ನಿರ್ವರ್ತಿಸಿದರು. ಸಾಯಂಕಾಲ ಶ್ರೀ ಶಂಕರ ವಿಜಯ ಪುರಾಣ ಪ್ರವಚನವನ್ನು ಮಾಡಿದರು ಮತ್ತು ಹೈದರಾಬಾದ್ ಶ್ರೀನಿವಾಸ ಶಾಸ್ತ್ರಿಗಳು ಅಧ್ಯಕ್ಷತೆಯನ್ನು ವಹಿಸಿ ಉಪನ್ಯಸಿಸಿದರು. ಆಶ್ರಮಾಧಿಪತಿಗಳಾದ ಶ್ರೀ ಶಂಕರಾನಂದ ಸ್ವಾಮಿಗಳವರ ಉಪನ್ಯಾಸ ನಡೆದು ಕಾರ್ಯಕ್ರಮ ಸಮಾಪ್ತಿ ಯಾಯಿತು.

ಒಂದೆರಡು ದಿನಗಳಾದ ಮೇಲೆ ನಮ್ಮ ಸ್ವಾಮಿಗಳವರು ಆಳ್ಳಗಡ್ಡೆ ಶ್ರೀ ಶಂಕರಾ ನಂದ ಸ್ವಾಮಿಗಳವರ ಹತ್ತಿರ ಪೂಜ್ಯಸ್ವಾಮೀ ! ಮೈಸೂರು ರಾಜ್ಯದಲ್ಲಿ ಇರುವ ತಮ್ಮ ಶ್ರೀ ಗಿರಿ ಆಶ್ರಮ ಕ್ಷೇತ್ರ ಅತ್ಯುತ್ತಮವಾದ ಏಕಾಂತ ಸ್ಥಾನವೆಂದು ಹೇಳು ತ್ತಿದ್ದೀರಿ. ಆದ್ದರಿಂದ ಆ ಪವಿತ್ರ ಕ್ಷೇತ್ರದಲ್ಲಿ ನಾವು ತಾಪಸ ವೃತ್ತಿಯಿಂದಿರುತ್ತೇವೆ. ತಾವು ಅದಕ್ಕೆ ಅನುಜ್ಞೆಯನ್ನೀಯಬೇಕೆಂದು ಕೇಳಿದರು. ಕೂಡಲೇ ಶ್ರೀ ಸ್ವಾಮಿ ಗಳವರು: ಆಹಾ ! ತಮ್ಮಂಥಾ ಅನುಷ್ಠಾನ ಪರರಾದ ಆದರ್ಶ ಪುರುಷರದೇ ಆ ಆಶ್ರಮ. ತಮಗೆ ಯಾವ ಅಭ್ಯಂತರವಿಲ್ಲ, ಹೋಗಬಹುದೆಂದು ಅಪ್ಪಣೆ ಕೊಡಿಸಿದರು. ಈ ವಿಷಯವಾಗಿ ಅಲ್ಲಿ ತಮಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಮಾಡಿಸು ತ್ತೇವೆಂದು ಹೇಳಿದರು.

ನಮ್ಮ ಸ್ವಾಮಿಗಳವರು ಮರುದಿನವೇ ಅಲ್ಲಿಂದ ನೇರವಾಗಿ ಶ್ರೀ ಗಿರಿ ಕ್ಷೇತ್ರಕ್ಕೆ ಹೋದರು. ಈ ವಿಷಯುವನ್ನು ನಂದ್ಯಾಲ ಭಕ್ತರೆಲ್ಲರು ಕೇಳಿ ಪರಮ ಸಂತೋಷ ಗೊಂಡರು.

# ಗಿರಿಕ್ಷೇತ್ರವಾಸ–ಚಾತುರ್ಮಾಸ್ಯ ಮಹಾ ವ್ರತಾಚರಣೆ

ಈ ಕ್ಷೇತ್ರವು ಮೈಸೂರು ರಾಜ್ಯ ಕಡೂರು ಜಿಲ್ಲಾ ಬೀರೂರಿಗೆ ಸಮೀಪವಾಗಿ ಶ್ರೀ ದತ್ತಾತ್ರೇಯ ಆದಿಗದ್ದಿಗೆ-ಅಥವಾ ಶ್ರೀ ಸಿದ್ಧೇಶ್ವರ ಕ್ಷೇತ್ರ ಹೊಗರೇ ಖಾಸ್ ಗಿರಿ ಶ್ರೀ ಶಿವಾನಂದ ಸೇವಾಶ್ರಮ. ಇದು ಅತ್ಯಂತ ರಮಣೀಯವಾದ ಪ್ರಕೃತಿ ಸೌಂದರ್ಯಗಳಿಂದೊಪ್ಪುವ ಮಹಾ ಪರ್ವತಶ್ರೇಣಿ. ಅನೇಕ ವನಸ್ಪತಿಗಳಿಂದಲೂ, ಉನ್ನತವಾದ ವೃಕ್ಷರಾಜಗಳಿಂದಲೂ, ಹಸುರು ಬಯಲುಗಳಿಂದಲೂ, ದೊಡ್ಡ ಕಾಫಿ ತೋಟಗಳಿಂದಲೂ, ನಾನಾವಿಧ ಮೃಗಖಗಗಳಿಂದ ಒಪ್ಪುತ್ತಲೂ ಘೋರಾಟ ವಿಯಾಗಿ ಮನಸ್ಸನ್ನು ಹರಿಸುವಂಥಾ ಸೌಂದರ್ಯದಿಂದ, ಮೂರುಸಾವಿರ ಅಡಿಗಳ ಎತ್ತರವಾಗಿರುವ ಪರ್ವತರಾಜವಿದು ಮತ್ತು ಇದಕ್ಕಿಂತಲು ಉಪರಿ ಭಾಗದಲ್ಲಿ ಶ್ರೀ ಶಿವಾನಂದ ಸೇವಾಶ್ರಮವಿದೆ. ಇದು ಕೈಲಾಸಾಧಿಪತಿಯಾದ ಪರಶಿವನು ಸಿಂಹಾಸನ ದಲ್ಲಿ ಕುಳಿತು ಶಿವ ಸಭೆಯನ್ನು ಮಾಡುತ್ತಿದ್ದಾನೆಯಾ ! ಎನ್ನುವಂತೆ ಗಂಭೀರವಾದ ಶೋಭೆಯಿಂದೊಪ್ಪುವ ಉಚ್ಚಸ್ಥಾನ. ಈ ಆಶ್ರಮದ ಕೆಳಭಾಗದಲ್ಲಿ (ತಪ್ಪಲಲ್ಲಿ) ಪವಿತ್ರವಾದ ಒಂದು ದೊಡ್ಡ ಜಲಸ್ರವಂತಿ (ಹೊಂಡ). ಆ ಮುಂದೆ ದತ್ತಾತ್ರೇಯ ಪೀಠವಾದ ಸಿದ್ಧೇಶ್ವರಾಲಯ. ಈ ಪ್ರಕಾರವಾಗಿ ಉತ್ತಮ ವಾತಾವರಣವಾಗಿರುವ ಈ ಕ್ಷೇತ್ರವನ್ನು ಕಂಡು ನಮ್ಮ ಸ್ವಾಮಿಗಳವರು ಮೈಮರೆತರು. ಪರಮ ಋಷಿಗಳು ಇಂಥಾ ಸ್ಥಳದಲ್ಲಿಯೇ ಇರುತ್ತಿದ್ದರಲ್ಲಾ ! ಎಂದು ಸ್ಮರಿಸಿ ಅಲ್ಲಿಯ ಗುಹೆಗಳನ್ನು ಸಂದರ್ಶಿಸಿದರು.

"ವಾಸೋ ಗಿರಿವರೇ ನಿತ್ಯಂ ಗೀತಾಧ್ಯಯನ ತತ್ಪರಃ ।
ಗಂಭೀರಾಚಲ ಬುದ್ಧಿಶ್ಚ ಗಿರಿ ನಾ ಮಾಸ ಉಚ್ಯತೇ ॥"

ಅಂದ ಹಾಗೆ ಸ್ವಾಮಿಗಳವರ ಶುಭನಾಮಕ್ಕೆ ಅನ್ವರ್ಥವಾಗಿ ಒಪ್ಪುತ್ತಿದೆ.

ಕೆಳಗೆ ಹಳ್ಳಿಯಿಂದ ಮೂರು ಮೈಲುಗಳು ಪರ್ವತವನ್ನೇರಿ ಈ ಆಶ್ರಮಕ್ಕೆ ಬರಬೇಕಾಗಿರುತ್ತದೆ ಮತ್ತು ಇಲ್ಲಿಯ ಕಾಫಿ ತೋಟದ ಯಜಮಾನರು ವಾಸಿಸು ತ್ತಿದ್ದ ಕೆಲವು ಬಂಗ್ಲೆಗಳು ಅಂದರೆ ಮನೆಗಳು ಆಶ್ರಮದ ಕೆಳಭಾಗದಲ್ಲಿವೆ. ಆಳ್ವಗಡ್ಡೆ ಸ್ವಾಮಿಯವರ ಶಿಷ್ಯರಿದ್ದಾರೆ. ಅವರಲ್ಲಿ ವೇದಮೂರ್ತಿ ಶ್ರೀ ಬಸವಲಿಂಗಯ್ಯ ನವರೆಂಬುವ ಸದ್ಗೃಹಸ್ಥರು ನಿತ್ಯಭಕ್ತಿಯಿಂದ ಭಿಕ್ಷೆಯನ್ನು ತೆಗೆದುಕೊಂಡು ಬಂದು

ಸ್ವಾಮಿಗೆ ಸಮರ್ಪಿಸುತ್ತಾ ಎಲ್ಲಾ ವಿಧವಾಗಿಯೂ ನೋಡಿಕೊಳ್ಳುತ್ತಿದ್ದರು. ಆಗಾಗ ಅಲ್ಲಿಯ ಭಕ್ತರು ಬಂದು ಶ್ರೀಗಳವರ ಸನ್ನಿಧಿ ಭಜನ ಪಾರಾಯಣ ಶ್ರವಣಾದಿಗಳು ಮಾಡಿಕೊಂಡು ಸಂತೋಷವಾಗಿ ಬಂದು ಹೋಗುತ್ತಾ ಏನಾದರು ಆಧ್ಯಾತ್ಮಿಕ ಪ್ರಶ್ನೆಗಳನ್ನು ಕೇಳುತ್ತಿದ್ದರು,

ಪ್ರಶ್ನೆ : ಸ್ವಾಮೀ ! ಇಂದ್ರಿಯಗಳನ್ನು ನಿಗ್ರಹಿಸುವದಕ್ಕಾಗಿ ನಾನೆಷ್ಟು ಪ್ರಯತ್ನಿಸಿದರೂ ಅದು ಸಾಧ್ಯವಾಗದಿದೆ. ಏನು ಮಾಡಬೇಕು ?

ಉತ್ತರ : ನಾನು ಎಂಬ ಅಹಂಕಾರವನ್ನು ಬಿಟ್ಟು ನಾನಿದ್ದಲ್ಲಿಯೇ ಇರು. ಹಾಗಾದರೆ ಸಾಧ್ಯವಾಗುತ್ತದೆ. ಅಂದರೆ ಮಹಾತ್ಮರ ಸನ್ನಿಧಿಯಲ್ಲಿದ್ದರೆ ಆ ಇಂದ್ರಿಯಗಳು ಉಪಶಮವಾಗುತ್ತವೆ. ಸದಾಶಿವ ಚಿಂತನೆಯಿಂದ ಶಾಂತಿಸುವವೆಂದು ಭಾವ.

ಪ್ರಶ್ನೆ : ಪೂಜ್ಯಸ್ವಾಮೀ, ಹೇಗಿದ್ದರೆ ಶಾಂತಿ ಲಭಿಸುವದು, ಅದಕ್ಕೇನು ಮಾಡಬೇಕು ?

ಉತ್ತರ : ನಿನ್ನ ಗುರುದೇವರು ಹೇಳಿದ ಶ್ರುತಿ ಸಮ್ಮತವಾದ ಮಾರ್ಗದಲ್ಲಿ ನಡೆಯುತ್ತಾ ಆಚೆ ಈಚೆ ಕಾಣಿಸುವ ಚಿತ್ರ ವಿಚಿತ್ರ ವ್ಯಾಮೋಹ ಪದಾರ್ಥಗಳಿಗೆ ಒಳಪಡದೆ, ಮೋಸಹೋಗದೆ, ನಾನು ಚೈತನ್ಯಾತ್ಮ ಸ್ವರೂಪನೆಂಬುವ ಸ್ಮರಣೆಯಿಂದ, ನಿನ್ನ ವೃತ್ತಿಯನ್ನು ಒಂದೇ ಸ್ಥಾನದಲ್ಲಿರಿಸು. ತಪ್ಪದೆ ಶಾಂತಿ ಬರುತ್ತೆ.

ಪ್ರಶ್ನೆ : ನಿಜವಾಗಿಯೂ ನಿನ್ನಲ್ಲಿ ದುಃಖವೇ ಇಲ್ಲವೆಂದೆನ್ನುತ್ತಾರಲ್ಲಾ. ಹಾಗಾದರೆ ಈ ದುಃಖವೆಲ್ಲಿಂದ ಬಂತು ?

ಉತ್ತರ : ದುಃಖವೆಲ್ಲಿಂದ ಬರಲಿಲ್ಲ. ಒಳ್ಳೇ ವಿಚಾರದೃಷ್ಟಿ ಇಲ್ಲದ ನಿನ್ನ ಮಾನಸಿಕ ದೌರ್ಬಲ್ಯವೇ ದುಃಖರೂಪವಾಗಿ ಪರಿಣಮಿಸಿತು. ಕಶ್ಮಲವಾದ ಮನಸ್ಸೇ ದುಃಖವಾಗಿ ಕಾಣುತ್ತೆ. ಗುರು ಶರಣಾಗತಿಯಿಂದ, ಶಿವ ಸ್ಮರಣೆಯಿಂದ, ಮಾನಸಿಕ ಮಲವು ದೂರವಾಗುವದು. ಆಗ ನಾನಾರೆಂಬುವ ವಿವೇಕೋದಯವಾಗಿ ದುಃಖವೆಂಬುವದು ನನಗಿಲ್ಲ; ಸುಖವೇ ನನ್ನ ಸ್ವರೂಪವೆಂಬುವ ಅರಿವಾಗುವದು.

ಆ ಕ್ಷೇತ್ರದಲ್ಲಿ ಮಹದಾನಂದವಾಗಿ ತಪವನ್ನಾಚರಿಸಿಕೊಳ್ಳುತ್ತಾ ಸ್ವರೂಪ ನಿಷ್ಠೆಯಿಂದಿರುತ್ತಿರಲು, ಆಳ್ಳಗಡ್ಡೆ ಶ್ರೀ ಶಂಕರಾನಂದ ಸ್ವಾಮಿಯವರು ಶ್ರೀಗಳವರಿಗೆ ಒಂದು ಲೇಖೆಯನ್ನು ಬರೆದರು.

"ಸ್ವಾಮೀ,ಬ್ರಹ್ಮವೇಯಾಗಿದ್ದು ಬ್ರಹ್ಮವಾಗುವದು ಬಹು ಆಚರಣೀಯವಾಗಿದೆ. ಅತ್ಯಂತ ಆಶ್ಚರ್ಯಕರವು. "ವಿಮುಕ್ತಶ್ಚ ವಿಮುಚ್ಯತೇ" ಎನ್ನುವ ಶ್ರುತಿರೀತಿ ತಾವು ನಿತ್ಯ ಮುಕ್ತರೇ ಆಗಿದ್ದು, ಸದಾಚಾರ ವಿಚಾರಗಳಿಂದ ವರ್ತಿಸುತ್ತಿರುವ ನಿಮ್ಮ ಆದರ್ಶ ಜೀವನವು ಅತ್ಯಂತ ಧನ್ಯವು, ಲೋಕಕಲ್ಯಾಣಕಾರಕವು, ಸತ್ಯಪಥಾದರ್ಶಕವಾದದ್ದು........... ಈ ಮಾತುಗಳಿರುವ ಲೇಖೆಯನ್ನು ಕಂಡು ಸ್ವಾಮಿಯವರು ಮತ್ತು ಅಲ್ಲಿರುವವರೆಲ್ಲರೂ ಸಂತೋಷಭರಿತರಾದರು.

# ಮೊದಲನೆಯ
# ಶ್ರೀ ಚಾತುರ್ಮಾಸ್ಯ ಮಹಾವ್ರತ

ಇಷ್ಟರಲ್ಲಿಯೇ ಶ್ರೀ ಚಾತುರ್ಮಾಸ್ಯ ವ್ರತಾರಂಭ ಕಾಲವು ಸಮೀಪಿಸಿತು. ಈ ವರ್ಷದಿಂದಲೇ ಪೂಜ್ಯ ಶ್ರೀಗಳವರು ಈ ವ್ರತವನ್ನು ವಿಧ್ಯುಕ್ತವಾಗಿ ಪ್ರಾರಂಭಿಸಿ ಪ್ರತಿವರುಷ ನಡೆಯಿಸುತ್ತಿದ್ದಾರೆ.

ಸ್ವಸ್ತಿ ಶ್ರೀ ಪಾರ್ಥಿವ ನಾಮ ಸಂವತ್ಸರ ಆಷಾಢ ಶುದ್ಧ ಏಕಾದಶಿ (20-7-45) ಶುಕ್ರವಾರ ಬ್ರಹ್ಮಮುಹೂರ್ತದಲ್ಲಿ ಶಿವ ಸಂಕಲ್ಪವನ್ನು ಮಾಡಿ ಪ್ರಣವ ಧ್ಯಾನ ಪೂರ್ವಕ ಈ ಮಹಾವ್ರತ ಕಲ್ಪೋಕ್ತ ಪ್ರಕಾರ ಕಲಶ ಸ್ಥಾಪನೆ, ಶ್ರೀ ಉಮಾಮಹೇಶ್ವರ ಚಂದ್ರಮೌಳೀಶ್ವರ ಪೂಜೆ, ಗುರುಪೀಠ ಪರಂಪರಾಚಾರ್ಯರ ಪೂಜಾದಿ ಕಾರ್ಯಗಳಿಂದ ವಿಧ್ಯುಕ್ತವಾಗಿ ಪ್ರಾರಂಭವಾಯಿತು. ಮಂಗಳವಾದ್ಯ ಗಳಾದವು.

ಈ ವ್ರತವು ಕಾರ್ತಿಕ ಶುದ್ಧ ದ್ವಾದಶಿಯವರೆಗು 4 ತಿಂಗಳು ಮತ್ತು ಈ ವ್ರತ ವನ್ನು ಆಷಾಢ ಶುದ್ಧ ಗುರುಪೂರ್ಣಿಮೆ ಮೊದಲು ಕಾರ್ತಿಕ ಶುದ್ಧ ಪೂರ್ಣಿಮೆ ವರೆಗು ಆಚರಿಸುವದುಂಟು.

ಈ ವ್ರತ ಕಾಲದಲ್ಲಿ ಸ್ವಾಮಿಗಳವರು 4 ಮಾಸಗಳು ಸಂಪೂರ್ಣವಾಗಿ ಮೌನ, ಅಪಕ್ವಾಹಾರ, ನಿರಂತರ ಬ್ರಹ್ಮಾನುಸಂಧಾನ, ಉಪನಿಷತ್ಸೂತ್ರ ಗೀತಾಭಾಷ್ಯ ಅವಲೋಕಾನಾದಿಗಳಿಂದ ಸಂಯಮ ಶೀಲರಾಗಿ, ಆ ಪುಣ್ಯ ತಪೋಭೂಮಿಯಲ್ಲಿ ಕ್ಷೇತ್ರ ಮಹಿಮೆಯಿಂದ ಅನೇಕ ದೈವಾದೇಶಗಳು ಮಹಿಮಗಳನ್ನು ಕಂಡರು. ಪರಮ ಋಷಿಗಳನ್ನು ಸಂದರ್ಶಿಸಿದರು. ಆತ್ಮಸ್ಥೈರ್ಯದಿಂದ ಕೆಲವು ಸ್ಥಿರಾನುಭವಗಳನ್ನು ಪಡೆದರು. ಇಷ್ಟೇ ಅಲ್ಲದೆ ಲಕ್ಷಗಾಯತ್ರೀ ಮಂತ್ರವನ್ನು ಜಪಮಾಡಿ ಪೂರ್ಣಾಹುತಿ ಗೈದು ಮಂತ್ರಾಧಿದೇವತೆಯನ್ನು ನಿಷ್ಠೆಯಲ್ಲಿ ಕಂಡರು, ಶ್ರೀ ಚಕ್ರಯಂತ್ರರಾಜವನ್ನು ತಾಮ್ರ ಪತ್ರದಲ್ಲಿ ಲಿಖಿಸಿ ವಿಧ್ಯುಕ್ತವಾಗಿ ಪ್ರತಿಷ್ಠಿಸಿದರು ಮತ್ತು ಅನುದಿನ ಪೂಜಾ ಪಾರಾಯಣಾದಿಗಳನ್ನು ಭಕ್ತರಿಂದ ನಡೆಯಿಸುತ್ತಾ ಶಿವ ಸಪ್ತಾಹವನ್ನು ನಡೆಯಿಸಿ ದರು. ಅತಿ ವೈಭವದಿಂದ ಎಲ್ಲಾ ಕಾರ್ಯಗಳು ನಡೆದು ಪೂರ್ಣಾಹುತಿ-ಉತ್ಸವವು ಆಯಿತು. ವಿಶೇಷವಾಗಿ ಅನ್ನ ಸಂತರ್ಪಣವು ನಡೆಯಿತು. ಶ್ರೀಗಳವರು ಪವಿತ್ರ ಕ್ಷೇತ್ರದಲ್ಲಿ ಒಂದೂವರೆ ವರುಷವಿದ್ದರು.

# ಶೃಂಗೇರೀ ಜಗದ್ಗುರು ಪೀಠದರ್ಶನ

ಶ್ರೀ ಗಿರಿ ಆಶ್ರಮದಿಂದ ಪೂಜ್ಯ ಶ್ರೀಗಳನ್ನು R.M.S. ಆಫೀಸರೊಬ್ಬರು ಶೃಂಗೇರೀ ಜಗದ್ಗುರು ಪೀಠ ಸಂದರ್ಶನಾರ್ಥವಾಗಿ ಶೃಂಗೇರೀ ಕ್ಷೇತ್ರಕ್ಕೆ ಕರೆದುಕೊಂಡು ಹೋದರು. ಜಗದ್ಗುರು ಶ್ರೀ ಶಂಕರಾಚಾರ್ಯ ಸ್ವಾಮಿಯವರ ಚತುರಾಮ್ನಾಯ ಪೀಠಗಳಲ್ಲಿ ಶಾರದಾ ಪೀಠ ಒಂದು. ಇದು ಅರಣ್ಯ ಮಧ್ಯ ತುಂಗಾನದೀ ಪ್ರವಾಹ ಪರಿಸರ ಪುಣ್ಯಭೂಮಿ. 'ಗಂಗಾ ಸ್ನಾನಂ, ತುಂಗಾ ಪಾನಂ'ಯೆಂಬುದಾಗಿ ಪ್ರಸಿದ್ಧ. ಈ ಮಹಾಸ್ಥಳ ವಿಭಾಂಡಕ ಮಹಾಮುನಿಗೆ ಉದಯಿಸಿದ ಋಷ್ಯಶೃಂಗನು ಇಲ್ಲಿ ಮಲ್ಲಿಕಾರ್ಜುನ ಮಹಾಲಿಂಗದಲ್ಲಿ ಐಕ್ಯವೊಂದಿದ ಪುಣ್ಯಕ್ಷೇತ್ರವೆಂದು ಪುರಾಣ ಪ್ರಸಿದ್ಧ. ಈ ಸ್ಥಳವು ಪರಸ್ಪರ ವೈರವನ್ನು ಬಿಟ್ಟು ಪ್ರೇಮ ಸೌಹಾರ್ದ್ರತೆಗಳಿಂದಿದ್ದ ಸ್ಥಳವೆಂದು ಇಲ್ಲಿರುವ ಹಾವು ಕಪ್ಪೆಯ ಮೈತ್ರಿಯನ್ನು ತೋರಿಸುವ ಗುರುತುಂಟು. ಆದ್ದರಿಂದ ಪರಶಿವನು ಶಂಕರನೆಂಬ ನಾಮದಿಂದ ಭೂಲೋಕದಲ್ಲಿ ಅವತರಿಸಿ ಈ ಪವಿತ್ರ ಸ್ಥಾನವನ್ನು ಕಂಡು ತುಂಗಾ ನದಿಯ ದಡದಲ್ಲಿ ಶ್ರೀ ಶಾರದಾ ಪೀಠವನ್ನು ಸ್ಥಾಪಿಸಿದನು. ಇಂಥಾ ವಾಗ್ದೇವಿಯನ್ನು, ಶ್ರೀ ಶಂಕರಾಚಾರ್ಯರನ್ನು ಸಂದರ್ಶಿಸಿ ಸಂತುಷ್ಟಾಂತರಂಗರಾಗಿ ಅನಂತರ ಸಾಯಂ ಸಮಯ ನದಿಯ ಆಚೆ ನೃಸಿಂಹವನಕ್ಕೆ ಹೋಗಿ. ಮೌನದಲ್ಲಿರುವ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರನ್ನು ದೂರದಿಂದ ಸಂದರ್ಶಿಸಿ ನಮಸ್ಕರಿಸಿದರು ಮತ್ತು ಉಪಸ್ವಾಮಿಗಳಾದ ಜಗದ್ಗುರು ಶ್ರೀ ಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರನ್ನು ಸಂದರ್ಶಿಸಿದರು.

ಈ ಶ್ರೀ ಜಗದ್ಗುರು ಮಹಾಸನ್ನಿಧಿಯವರು ಪ್ರೇಮ ವಾತ್ಸಲ್ಯಪೂರ್ವಕವಾಗಿ ನಮ್ಮ ಸ್ವಾಮಿಗಳವರನ್ನು ಪರಾಮರ್ಶಿಸಿ ಸಂತೋಷವಾಗಿ ಮಾತನಾಡಿದರು. "ಸ್ವಾಮೀ! ಎಷ್ಟು ಘನಕಾರ್ಯವನ್ನು ಮಾಡಿದರೂ ಇನ್ನೂ ಮಿಕ್ಕೇಯಿರುತ್ತೆ, ಅದು ಪೂರ್ಣವಾಗದು. "ತತಃ ಕಿಮ್ ತತಃ ಕಿಮ್ ಎಂದ ಹಾಗೇಯಿರುತ್ತೆ" ಆದರೆ ಮಾನವನು ಯಾವಾಗ ಅದ್ವಿತೀಯವಾದ ಆತ್ಮಾನುಭವವನ್ನು ಬ್ರಹ್ಮಾನುಭವವನ್ನು ಪಡೆಯುವನೋ, ಆಗ ಇನ್ನು ಮಾಡಬೇಕಾದುದಿಲ್ಲ, ಹೊಂದಬೇಕಾದುದಿಲ್ಲ, ತಾನೇ ತಾನು. ಇದು ಸರ್ವ ಶ್ರುತಿಗಳ ತಾತ್ಪರ್ಯವು. ಆದ್ದರಿಂದ ಶ್ರೀ ಶಂಕರ ಭಗವತ್ಪಾದಾಚಾರ್ಯರು ಗುರ್ವಷ್ಟಕದಲ್ಲಿ ಹೀಗೆಂದರು............ ಮಿಕ್ಕದೆಲ್ಲವೂ ರಜ್ಜು ಸರ್ಪದಂತೇ ಎನ್ನುವದಾಗಿ ಈ ಪ್ರಕಾರ ಪ್ರಸಾದವಾಕ್ಕುಗಳನ್ನು ತಿಳಿಸುತ್ತಾ ಶ್ರೀ ಶಾರದಾ ಶಂಕರ

ಪ್ರಸಾದವನ್ನು ಪ್ರಸಾದಿಸಿದರು. 2 ದಿನಗಳು ಶ್ರೀ ಶಂಕರ ಮಠದಲ್ಲಿಯೇ ಇದ್ದು ಸಿದ್ಧಗಂಗಾ ಶಿವಗಂಗಾದಿ ಕ್ಷೇತ್ರಗಳನ್ನು ನೋಡಿ ಗಂಜಿಗುಂಟಿ ಶ್ರೀ ಮಠಕ್ಕೆ ಗುರು ಮಹಾಸನ್ನಿಧಿಗೆ ಬಂದರು.

ಗುರುದೇವರು ತಮ್ಮ ಶಿಷ್ಯನನ್ನು ಹೀಗೆ ಪ್ರಶ್ನಿಸಿದರು:

"ಅಪ್ಪಾ ! ಸ್ವಾಮಿ ನೀನು ಜನ್ಮತಃ ನಿತ್ಯ ಸನ್ಯಾಸಿಯೇ ಆಗಿದ್ದೆಯಲ್ಲಾ ! ಮತ್ತು ಇನ್ನು ಈ ಸನ್ಯಾಸವೆಂದರೆ ಅರ್ಥವೇನು ? ಇದೇಕೆ ?"

ಶಿಷ್ಯನ ಉತ್ತರ : "ಪೂಜ್ಯ ಗುರುದೇವಾ ! ವಸ್ತುತಃ ನಾನು ನಿತ್ಯ ಸನ್ಯಾಸಿಯೇ ಆಗಿದ್ದರೂ ಆ ನನ್ನ ಗುರುತುಗಳು ಹೊರಗೆ ಕಾಣಿಸುತ್ತಿರಲಿಲ್ಲ. ಈ ಲೌಕಿಕರ ಹಾವಳಿಯನ್ನು, ಸಂಸಾರ ಸಂಬಂಧವಾದ ಮಾತುಗಳು ನನ್ನ ಸಂಬಂಧವಾದವುಗಳಲ್ಲ ಎಂಬುದನ್ನು ತೋರಿಸುತ್ತಾ, ದೂರಾಗಿ ಬ್ರಹ್ಮಾನುಭವ ನಿಷ್ಠೆಯನ್ನು ಪಡೆಯಲು ಶಾಸ್ತ್ರೀಯ ಸಂಪ್ರದಾಯ ಸಿದ್ಧವಾದ ಈ ಕಂಚುಕದಿಂದ ಅರ್ಥಾತ್ ಕಾಂಚನಚೇಲ ಕಾಷಾಯಾಂಬರ ಪರಿಧಾನನಾದೆ. ಇದೆಲ್ಲವು ನನ್ನ ಹೃದಯಸ್ಥ ಗುರುದೇವರಾದ ತಮ್ಮ ಆಶೀರ್ವಾದದಿಂದ ಆಯಿತು, ಕ್ಷಮಿಸಲು ಪ್ರಾರ್ಥನೆ. ಇತ್ಯಾದಿಯಾಗಿ ವಿನಯ ಭಯ-ಭಕ್ತಿಗಳಿಂದ ತಮ್ಮ ಗುರುದೇವರ ಸನ್ನಿಧಿಯಲ್ಲಿ ಬಿನ್ನವಿಸಿಕೊಂಡು ಸಾಷ್ಟಾಂಗ ದಂಡ ಪ್ರಣಾಮಗಳನ್ನು ಮಾಡಿದರು. ಶ್ರೀ ಸದ್ಗುರುಮೂರ್ತಿ ತಮ್ಮ ಶಿಷ್ಯನ ಶಾಸ್ತ್ರೀಯವಾದ ಸಮಾಧಾನವನ್ನು ಕೇಳಿ ಪರಮ ಸಂತೋಷದಿಂದ, "ಆಗಲಪ್ಪಾ ! ಶಿವಮಸ್ತು !" ಎಂದು ಆಶೀರ್ವದಿಸಿದರು.

## ವಿಚಿತ್ರ ಸಂಘಟನೆ

ಶ್ರೀಗಳವರು ಶ್ರೀ ಗುರುಸನ್ನಿಧಿ ಗಂಜಿಗುಂಟೆ ಮಠದಲ್ಲಿ ಕೆಲವು ಕಾಲವಿದ್ದು ಗುರುಗಳ ಆಜ್ಞೆಯಂತೆ ಕುಂದನಗುರ್ತಿ ಶ್ರೀ ಶಿವಲಿಂಗಾಶ್ರಮಕ್ಕೆ ಬಂದರು. ಇಲ್ಲಿ ಎಲ್ಲರಿಗೂ ಮಹದಾನಂದವಾಯಿತು. ಧರ್ಮ ಕರ್ಮ ಸಂಯೋಗದಿಂದ ಆ ಗ್ರಾಮ ದಲ್ಲಿ ಇದುವರಿವಿಗೂ ಮಳೆಯಿಲ್ಲದೆ ಇದ್ದು, ಶ್ರೀಗಳವರು ಬಂದ ದಿನವೇ ಕುಂಭ ವೃಷ್ಟಿಯಾಗಿ ವಾತಾವರಣ ತಣ್ಣಗಾಯಿತು. ಓಹೋ ಹೋ ! ನಮ್ಮ ಸ್ವಾಮಿಗಳವರು ನಮ್ಮ ಗ್ರಾಮಕ್ಕೆ ಬಂದುದರಿಂದ ಇಷ್ಟು ದೊಡ್ಡ ಮಳೆ ಆಯಿತು. ಬಹಳ ಸಂತೋಷವೆಂದು ಎಲ್ಲರೂ ಹೊಗಳಲಾರಂಭಿಸಿದರು. ಅದಕ್ಕೆ ಸ್ವಾಮಿಗಳವರು ಈ ಲೌಕಿಕರ ಸ್ತುತಿನಿಂದೆಗಳನ್ನು ಗಣಿಸಬಾರದು. ಅಯ್ಯಾ ! ಹಾಗನ್ನಬೇಡಿರಿ. ಮಳೆ ಬರುವುದು ಬಿಡುವುದು ಮಾಯೋಪಾಧಿಕನಾದ ಶಿವನ ಲೀಲೆ "ತಪಾಮ್ಯಹಮಹಂ ವರ್ಷಮ್ ನಿಗೃಹ್ಣಾಮ್ಯುತ್ಸೃಜಾಮಿಚ"ಯೆಂಬುದಾಗಿ ಭಗವದ್ವಾಕ್ಯವೇ ಇದೆ. ಅಷ್ಟೇ ಅಲ್ಲದೆ "ಉತ್ಪತ್ತಿಂ ಪ್ರಳಯಂ ಚೈವ, ಭೂತಾನಾಮಾಗತಿಂ ಗತಿಂ ! ವೇತ್ತಿ ವಿದ್ಯಾಮವಿದ್ಯಾಂಚ ಸವಾಚ್ಯೋ ಭಗವಾನಿತಿ||" ಯೆಂದು ಭಗವಚ್ಛಬ್ದ ನಿರ್ವಚನ.

ಉತ್ಪತ್ತಿ, ಪ್ರಳಯ, ಭೂತಗಳು ಬರುವಿಕೆ ಹೋಗುವಿಕೆ (ಮಳೆ ಬರುವುದು ಹೋಗುವುದು) ವಿದ್ಯ ಅವಿದ್ಯ ಈ ಆರನ್ನು ಅರಿತಾತನು ಭಗವಂತನೆಂದು ಹೇಳಿದ್ದಾರೆ. ಆದ್ದರಿಂದ ಈ ಮಳೆ ಬಂದುದರಿಂದ ಹೀಗೆಲ್ಲಾ ನೀವು ಅಂದುಕೊಳ್ಳಬಾರದು. ಅದು ಈಶ್ವರೇಚ್ಛೆಯಣ್ಣಾ ! ಎಂದು ತಿಳಿ ಹೇಳಿದರು.

ಅನಂತರ ಪ್ರತಿನಿತ್ಯ ಶಾಸ್ತ್ರ ಶ್ರವಣ ಪೂಜಾನುಷ್ಠಾನಾದಿ ಸನ್ನಿಯಮಗಳಿಂದ ಶ್ರೀಗಳವರು ಸಂತೃಪ್ತರಾಗಿ ಇರುತ್ತಿದ್ದರು.

## ಎರಡನೆಯ ವರ್ಷದ ಚಾತುರ್ಮಾಸ್ಯ ಮಹಾವ್ರತ

ಶ್ರೀ ವ್ಯಯನಾಮ ಸಂ|| ಆಷಾಢ ಶುದ್ಧ ಏಕಾದಶಿ ಬುಧವಾರ 10–7–1946 ಶುಭದಿನ ಯಥಾ ಶಾಸ್ತ್ರವಾಗಿ ಹಿಂದೆ ಗತ ಸಂವತ್ಸರ ನಡೆದಂತೆ ಮಹಾವ್ರತ ಕಲ್ಪೋಕ್ತ ಪ್ರಕಾರ ಪೂಜಾನುಷ್ಠಾನಾದಿಗಳಿಂದ ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟಿತು. ಈ ವರ್ಷವು ಕೂಡ 4 ತಿಂಗಳು ಸಂಪೂರ್ಣ ಮೌನವ್ರ, ಅಪಕ್ವಾಹಾರ, ಬ್ರಹ್ಮ ನಿಷ್ಠಾದಿ ಸನ್ನಿಯಮಗಳಿಂದ ಪ್ರಶಾಂತವಾಗಿ ಆ ಏಕಾಂತ ಪ್ರದೇಶದಲ್ಲಿ ವ್ರತಾಚರಣ ಶೀಲಸಂಪನ್ನರಾಗಿದ್ದರು. ಈ ಆಶ್ರಮದಲ್ಲಿ ತಪಸ್ಸಿಗನುಕೂಲವಾದ ಗುಹೆಯು ಇದೆ.

ಇಷ್ಟರಲ್ಲಿ ಭಾದ್ರಪದ ಆಶ್ವಯುಜ ಮಾಸಗಳ ಮಧ್ಯ ದೈವಯೋಗದಿಂದ ಮಳೆಯು ಸಕಾಲಕ್ಕೆ ಬಾರದೆ ಹೋಯಿತು. ಪಾಪ ! ಆ ತಿಳಿಯದ ಮನುಜರು ಆಗ ಸ್ವಾಮಿಯವರು ಬಂದಾಗ ಮಳೆ ಬಂತೆಂದು ಸ್ತುತಿಸಿದವರು ಈಗ ಮಳೆ ಬರಲಿಲ್ಲ. ವೆಂದು ನಿಂದಿಸಲು ಪ್ರಾರಂಭಿಸಿದರಂತೆ, ಏನೆಂದರೆ,

"ಈ ಸ್ವಾಮಿಯವರು ಅನ್ನ ನೀರು ಬಿಟ್ಟು ಏನೊ ತಪಸ್ಸು ಮಾಡುತ್ತಿದ್ದಾರಂತೆ. ಅದಕ್ಕಾಗಿ ಮಳೆ ಬರಲಿಲ್ಲ. ನಾವು ಗುಡ್ಡದ ಮೇಲಕ್ಕೆ ಹೋಗಿ ಅವರ ವ್ರತವನ್ನು ಬಿಡಿಸಿ ಕೆಳಗೆ ಇಳಸೋಣ" ಹೀಗೆಲ್ಲಾ ಮಾತನಾಡಿಕೊಂಡು ಸಂಸಿದ್ಧರಾದರಂತೆ. ಅದೇನು ವಿಚಿತ್ರವೋ ಆ ದಿನ ರಾತ್ರಿಯೇ ವಿಶೇಷವಾಗಿ ಮಳೆ ಬಂದಿದೆ. ಬಂದ ಆ ಮಳೆ 8,10 ದಿನಗಳವರಿಗೂ ಬಿಡದೆ ಒಂದೇ ಸಮನೆ ಬರಹತ್ತಿತು. ಆಗ ಅಮಾಯಕ ಭಕ್ತರು "ಓ ನೋಡಿದಿರಾ ! ನಾವೆಲ್ಲರೂ ಸ್ವಾಮಿಗಳನ್ನು ಕುರಿತು ಅವರನ್ನು ಕೆಳಗಿಳಿಸೋಣ ಎನ್ನುವದಾಗಿ ಏನೇನೋ ಮಾತನಾಡಿಕೊಂಡೆವು ತಪ್ಪಾಯಿತು. ಹಿಡಿದ ಮಳೆ ಬಿಡದಂತೆ ಕೊಂಪೆಗಳನ್ನು ನಾಶ ಮಾಡುತ್ತಿದೆ. ಸ್ವಾಮಿಗಳವರು ಏನೋ ಮಂತ್ರ ಹಾಕಿದ್ದಾರೆ. ಮತ್ತೆ ನಾವು ಸ್ವಾಮಿಗಳವರ ಪಾದದ ಮೇಲೆ ಬಿದ್ದು ತಪ್ಪಾಯಿತೆಂದು ಬೇಡಿಕೊಳ್ಳೋಣವೆಂಬುದಾಗಿ ನಿಶ್ಚಯಿಸಿಕೊಂಡು ಬೆಳಿಗ್ಗೆ ಗುಡ್ಡಕ್ಕೆ ಬರಬೇಕೆಂದು ಇದ್ದರಂತೆ. ಆ ದಿನ ರಾತ್ರಿಗೆ ಮಳೆ ನಿಂತು ಹೋಯಿತು. ಈ ವಿಷಯಕವಾದ ಇವರ ಕಲ್ಪನೆಗಳು ಅನುಷ್ಠಾನದಲ್ಲಿರುವ ಶ್ರೀ ಸ್ವಾಮಿಗಳವರಿಗೆ ಏನೂ ತಿಳಿಯದು. ಕಾಕತಾಳೀಯ ನ್ಯಾಯವಾಗಿ ಹೀಗೆ ನಡೆದ ಭಗವಲ್ಲೀಲಾ ರೂಪವಾದ

ವಿಚಿತ್ರ ಸಂಘಟನೆಗಳನ್ನು ಕಂಡು ಆ ಜನರು ಮತ್ತೂ ಓ ಹೋ ಹೋ ನಮ್ಮ ಸ್ವಾಮಿ ಗಳವರು ದೊಡ್ಡವರಪ್ಪಾ, ನಾವೇನೋ ಅಂದುಕೊಂಡರೆ ಆ ಪೆಟ್ಟು ನಮಗೇ ಬಿತ್ತು, ಮಂತ್ರವನ್ನು ತಿರುಗಿಸಿ ಬಿಟ್ಟರು. ಅವರ ಕೈಯಲ್ಲಿದೆ. ಅವರು ನಮಗೆ ಸ್ವಾಮಿ ಗಳು ಎನ್ನುವುದಾಗಿ ಹೇಳಿಕೊಳ್ಳುತ್ತಾ ಆಮೇಲೆ ಭಯ ಭಕ್ತಿಗಳಿಂದ ಈ ದಿನವರೆಗೂ ನಡೆದುಕೊಳ್ಳುತ್ತಿದ್ದಾರೆ.

ಈ ವಿಷಯಗಳೆಲ್ಲವೂ ಮಹಾ ವ್ರತಾನಂತರ ಭಕ್ತರು ಸ್ವಾಮಿಗಳಿಗೆ ತಿಳಿಸಿದ ರಂತೆ. ಸ್ವಾಮಿಗಳಾಗ ನಕ್ಕು "ಪಾಪ ಅವರು ತಿಳಿಯದ ಚಿಕ್ಕವರಪ್ಪಾ ! ಭಗ ವಂತನು ಅವರಿಗೆ ಒಳ್ಳೆಯದನ್ನು ಮಾಡಲಿ" ಎಂದರು. ಹೀಗೆ ಮಹಾ ಕಾರ್ಯವು ಸಾಂಗವಾಗಿ ನಡೆದು ಎಲ್ಲಾ ವೈಧಿಕಗಳಿಂದ ಮೊದಲಿನಂತೆ ಉತ್ಸವಾದಿ ಕಾರ್ಯ ಗಳೊಂದಿಗೆ ಪೂರ್ಣವಾಯಿತು,

# ಹಂಪಿ—ಕ್ಷೇತ್ರಯಾತ್ರೆ

ವ್ರತಾನಂತರ ಯಾತ್ರಾರ್ಥವಾಗಿ ಅಲ್ಲಿಂದ ಯಾವತ್ತು ಭಕ್ತರಿಂದ ಕೂಡಿ ಪಂಪಾ ಕ್ಷೇತ್ರಕ್ಕೆ ಹೋದರು. ತುಂಗಭದ್ರಾ ಪಾವನ ಗಂಗಾ ತೀರಕ್ಕೆ ಎಲ್ಲರೂ ಆಗ್ಗೆ ಮಳೆಯು ಚಳಿಯು ಹೆಚ್ಚಾಗಿತ್ತು. ಗಂಗಾತೀರದಲ್ಲಿ ಕುಳಿತು ಓ ವಿರೂಪಾಕ್ಷೇಶ್ವರಾ ! ಶ್ರೀ ರಾಮಚಂದ್ರನ ಕಾರ್ಯದಲ್ಲಿ ಪಶುಪಕ್ಷಿಗಳು ಕಲ್ಲು ಮಣ್ಣುಗಳು ಪ್ರಕೃತಿಯೇ ಆತನಿಗೆ ಸಹಕರಿಸಿತಂತೆ. ಆ ವಿಧವಾಗಿ ನಿನ್ನ ಭಕ್ತರಾದ ನಾವೆಲ್ಲರೂ ಬಂದಿದ್ದೇವೆ. ಸೂರ್ಯ ಭಗವಂತನು ಕಾಣಿಸಿದರೆ ಸ್ನಾನವನ್ನಾಚರಿಸಿ ದೇವಾ ! ನಿನ್ನನ್ನು ನೋಡುತ್ತೇವೆ. ಈ ಪ್ರಕಾರ ಸ್ತುತಿಸುತ್ತಾ ಕುಳಿತಿರಲು ಸ್ವಲ್ಪ ಹೊತ್ತಿಗೇ ಸೂರ್ಯ ಭಗವಂತನು ಹೊರಗೆ ಬಂದು ತನ್ನ ಪ್ರಖರವಾದ ಕಿರಣಗಳಿಂದ ನಮ್ಮೆಲ್ಲರನ್ನು ಬೆಚ್ಚಗಾಗುವಂತೆ ಮಾಡಿದ. ಅದನ್ನು ಕಂಡು ಸ್ವಾಮಿಯ ಕೃಪೆಯೆಂದು ಭಜಿಸುತ್ತಾ ಓ ಭಾಗೀರಥೀ ಗಂಗಾಮಾತೇ ! ನಮ್ಮೆಲ್ಲರಿಗೆ ಭಕ್ತಿ ಜ್ಞಾನ ವೈರಾಗ್ಯಗಳಿಂದ ಬ್ರಹ್ಮನಿಷ್ಠೆಯನ್ನು ಪ್ರಸಾದಿಸೆನ್ನುತ್ತಾ ಸ್ನಾನವನ್ನಾಚರಿಸಿ, ಶ್ರೀ ವಿರೂಪಾಕ್ಷೇಶ್ವರಾಲಯಕ್ಕೆ ಬಂದು ಸ್ವಾಮಿಗೆ ಮಹಾನ್ಯಾಸ ಪೂರ್ವಕ ರುದ್ರಾಭಿಷೇಕವನ್ನು ಮಾಡಿಸಿ ಧನ್ಯರಾದರು. ಸಾಯಂಕಾಲ ಯಥಾರೀತಿ ಪೂಜಾದಿ ಕಾರ್ಯಗಳೊಡನೆ ಶ್ರವಣವನ್ನು ನಡೆಯಿಸಿದರು. ಅಲ್ಲಿ ನೆರೆದ ಭಕ್ತರು ಸ್ವಾಮಿಯನ್ನು ಹೀಗೆ ಪ್ರಶ್ನೆ ಮಾಡಿದರು.

ಪ್ರಶ್ನೆ : ಮಹಾತ್ಮಾ ! ಮೌನವೆಂದರೇನು ? ಅದರ ಪ್ರಯೋಜನವೆಂಥಾದ್ದು ? ಅಪಕ್ವಾಹಾರದಿಂದ ಉಂಟಾಗುವ ಲಾಭವೇನು ?

ಉತ್ತರ : ಅಯ್ಯಗಳಿರಾ ! ಮೌನವೆಂದರೆ ಯಾವ ವಿಧವಾದ ಮನೋವೃತ್ತಿಗಳು ಇಲ್ಲದಿರುವಿಕೆ. ಆದರಿಂದಾಗುವ ಪ್ರಯೋಜನ ಆತ್ಮಲಾಭ; ಶಾಂತಿ; ಸುಖ, "ಮೋಕ್ಷಸ್ಯ ಪ್ರಥಮಂ ದ್ವಾರೋ ವಾಙ್ನಿರೋಧೋಽಪರಿಗ್ರಹಃ" ಎಂದು ಹೇಳಿದ್ದಾರೆ. ಅಂದರೆ ಮೋಕ್ಷಕ್ಕೆ ಪ್ರಥಮ ದ್ವಾರ ವಾಕ್ಕನ್ನು ನಿಯಮಿಸುವುದು ಅರ್ಥಾತ್ ಸಂಯಮದಿಂದ ವಾಗ್ರೂಪಕವಾಹವನ್ನು ಮುಚ್ಚಬೇಕು. ಆಗ ಮನಸ್ಸು ವೈಖರೀ ಸ್ಥಾನವನ್ನು ಬಿಟ್ಟು ಮಧ್ಯಮ ವಾಕ್ಕಿನಲ್ಲಿ ಲೀನವಾಗುವುದು. ಅದು ಹೊರಗೆ ಬರಬೇಕೆಂದು ಪ್ರಯತ್ನಿಸಿದರೂ ಬಾಗಿಲು ಮುಚ್ಚಲ್ಪಟ್ಟಿದೆ. ಅಂದರೆ ವಾಕ್ ನಿರೋಧವಾಗಿದೆ, ಮಾತನಾಡುವುದಕ್ಕಿಲ್ಲದೆ ಅಲ್ಲಿ ಸ್ವಲ್ಪ ಹೊತ್ತು ಮನಸ್ಸು ಚಲಿಸಬಹುದು. ಕಡೆಗೆ ಪಶ್ಯಂತಿಯಲ್ಲಿ ಸೇರುವುದು. ಅಲ್ಲಿ ಆತ್ಮ ಪ್ರತಿಫಲನವನ್ನು ನೋಡುತ್ತಾ ನೋಡುವುದಾಗಿದೆಯೇ ವಿನಾ ನೋಡಲ್ಪಡುವುದಾಗಿಲ್ಲ. ಸುಮ್ಮನಿದ್ದ ಕಾರಣ ಸ್ವಲ್ಪ

ಹೊತ್ತಿಗೆ ಅದು ಆ ಸ್ಥಾನವನ್ನು ಬಿಟ್ಟು ಕೇವಲ ಪರಾವಾಣಿಯೆಂದು ಹೇಳಲ್ಪಡುವ ಆತ್ಮ ಸ್ಥಿತಿಯನ್ನು ಹೊಂದುವುದು. ಇನ್ನು ಮನಸ್ಸಿನ ಆಚೆ ಸ್ಥಳವಿಲ್ಲವಾದ್ದರಿಂದ ಆ ಸ್ಥಾನದಲ್ಲಿ ನಿಂತು ನೋಡು ನೋಡುತ್ತಿರಲಾಗಿ ಇನ್ನೇನಿಲ್ಲದ ತಾನೇ ಆಗುವುದು. ಪರಾರೂಪವಾದ ಆತ್ಮ ಮಾತ್ರವಾಗಿ ಮಾತನಾಡಿಯೂ ಮಾತನಾಡಿದ್ದಲ್ಲ, ಹೀಗೆ ಮನೋವೃತ್ತಿಗಳು ಬಾಧಿಸಲ್ಪಟ್ಟು ಬ್ರಾಹ್ಮಸ್ಥಿತಿ ಚಿತಧಭ್ಯಾಸ ಬಲದಿಂದ ಸಹಜ ನಿಷ್ಠೆಯಾಗುವುದು. ಈ ಮೂಲಕ ಪ್ರಥಮದಲ್ಲಿ ವಾಙ್ನಿರೋಧ ಅತ್ಯುತ್ತಮವಾದದ್ದು. ಅಷ್ಟೇ "ಮೌನೇನ ಕಲಹಂ ನಾಸ್ತಿ". ಗೋಪ್ಯದಲ್ಲಿ ಮಹಾ ಗೋಪ್ಯವು ಮೌನವು ನಾನೆಂದು ಭಗವಂತನು ಹೇಳಿದ್ದಾನೆ. ಮೌನವು ಪರಬ್ರಹ್ಮ ತತ್ವವನ್ನು ವಿಸ್ಪಷ್ಟವಾಗಿ ತಿಳಿಸುವ ಉತ್ತಮವಾದ ಭಾಷೆ. ಇನ್ನು ಅಪಕ್ವಾಹಾರವೆಂದರೆ ವಿಕಾರವನ್ನು ಹೊಂದಿಸುವ ಆಹಾರ ಪದಾರ್ಥಗಳನ್ನು ಭುಂಜಿಸದಿರುವಿಕೆ. ಇನ್ನಿತರವನ್ನು ಅನುಭವಿಸಬೇಕೆನ್ನುವ ಬುದ್ಧಿಯನ್ನೆ ಆಹಾರವಾಗಿ ಸ್ವೀಕರಿಸಿ ಸುಮ್ಮನಿರುವಿಕೆ. (ಇದು ಪ್ರತ್ಯಾಹಾರ) ನಿಯಮವಾದ ಅಪಕ್ವಾಹಾರದಿಂದ ಬುದ್ಧಿಕುಶಲತೆ ಪವಿತ್ರತೆ ಉಂಟಾಗಿ ತತ್ವಾರ್ಥವನ್ನರಿಯಲು ಉತ್ತಮ ಸಹಾಯಕವಾದದ್ದು ಇತ್ಯಾದಿಯಾಗಿ ಶ್ರೀಗಳವರು ಹೇಳಿದರು.

## ಹುಬ್ಬಳ್ಳಿ ಶ್ರೀ ಸಿದ್ಧಾರೂಢಾಶ್ರಮ

ಪಂಪಾ ಕ್ಷೇತ್ರದಿಂದ ಎಲ್ಲರೂ ಪ್ರಸಿದ್ಧವಾದ ಹುಬ್ಬಳ್ಳಿ ಶ್ರೀ ಸಿದ್ಧಾರೂಢಾಶ್ರಮಕ್ಕೆ ಹೋಗಿ ಸಂದರ್ಶಿಸಿದರು. ಆ ಕಾಲದಲ್ಲಿ ವೇದಾಂತ ತತ್ವ ಪ್ರಚಾರಕ್ಕೆ ಪ್ರಸಿದ್ಧವಾದ ಪ್ರಧಾನ ಕೇಂದ್ರವದು. ಶ್ರೀ ಸಿದ್ಧಾರೂಢಸ್ವಾಮಿಗಳ ಅಧಿಷ್ಠಾನವು (ಸಮಾಧಿಯು) ಇಲ್ಲಿದೆ, ಅಲ್ಲಿ ಅಖಂಡವಾಗಿ ಪ್ರಣವ ಪಂಚಾಕ್ಷರ ಮಹಾಮಂತ್ರ ಭಜನೆ ನಡೆಯುತ್ತಿರುತ್ತೆ. ಪ್ರಸ್ತುತ ಗುರುಗಳು ಶ್ರೀಗುರುನಾಥಾರೂಢ ಸ್ವಾಮಿಗಳವರು. ಮಹಾ ಮೌನಿಗಳಾಗಿದ್ದರು. ಅವರನ್ನು ಸಂದರ್ಶಿಸಿ ಎಲ್ಲರೂ ಸಂತೃಪ್ತರಾದರು, ಪ್ರಧಾನವಾಗಿ ಯಾವಾಗಲೂ ವೇದಾಂತ ಶಾಸ್ತ್ರ ಶ್ರವಣವು ಮಹಾತ್ಮರಿಂದ ನಡೆಯುತ್ತೆ. ನಮ್ಮ ಶ್ರೀಗಳವರು ಪರಿವಾರದೊಡನೆ ಹೋದಾಗ ಶ್ರವಣ ಜರುಗುತ್ತಿತ್ತು. ಸ್ವಾಮಿಗಳವರನ್ನು ಕಂಡು ಅಲ್ಲಿಯವರು ಆದರದಿಂದ ಪರಾಮರ್ಶಿಸಿ ಪೂಜಾನುಷ್ಠಾನಗಳಿಗೆ ಅನುಕೂಲ ಮಾಡಿಕೊಟ್ಟರು. ಮಾರನೆಯ ದಿನ ತಾವೇ ಪ್ರವಚನವನ್ನು ಮಾಡಬೇಕೆಂಬುದಾಗಿ ನಮ್ಮ ಶ್ರೀಗಳವರನ್ನು ಭಕ್ತಿಯಿಂದ ಬಯಸಿ ಶ್ರೀ ಮನ್ನಿಜಗುಣ ಶಿವಯೋಗಿಗಳ ವೇದಾಂತ ಪಂಚರತ್ನ ಅಥವಾ ಷಟ್ ಶಾಸ್ತ್ರದಲ್ಲಿಯ ಅನುಭವಸಾರದ ಒಂದು ಸೂತ್ರವನ್ನು ಕೊಟ್ಟು ಇದನ್ನು ವ್ಯಾಖ್ಯಾನಿಸಿರೆಂದು ಭಕ್ತಿಯಿಂದ ಬಯಸಿದರು.

ಸೂತ್ರ :– "ಚಿತ್ತಿನ ವಿವರ್ತವೆಂದೆನಲೇಕೆ ಜಗವಿದಂ ಮತ್ತೆ ಮಾಯಾ ಮಾತ್ರವೆನಲಾಗದೆ" ಈ ಸೂತ್ರಾರ್ಥವನ್ನು ಸ್ವಾಮಿಗಳವರು ವಿವರಿಸಿದರು. ಜಗತ್ತನ್ನು ಮಾಯಾ ಮಾತ್ರವೇ ಎಂದು ಹೇಳದೆ ಚಿದ್ವಿವರ್ತವೆಂದು ಏಕೆ ಹೇಳಬೇಕು ಎಂದು ಪ್ರಶ್ನೆ.

"ನಾಸತೋ ವಿದ್ಯತೇ ಭಾವಃ ನಾಽಭಾವೋ ವಿದ್ಯತೇ ಸತಃ" ಅಸತ್ತಿಗೆ (ಅನಾತ್ಮಕ್ಕೆ) ಇರುವಿಕೆ ಇಲ್ಲ. ಆತ್ಮಕ್ಕೆ ಇಲ್ಲದಿರುವಿಕೆ ಇಲ್ಲ, ಇದು ನಿಯಮ. ಜಗತ್ತೆಂಬುದು ಪ್ರತ್ಯಕ್ಷವಾಗಿ ಅಪೃಥಕ್ಸಿದ್ಧಿ ಲಕ್ಷಣಾತ್ಮಕ ಸ್ವಯಂ ಶಕ್ತಿಯಿಂದ ಉಳ್ಳದ್ದಲ್ಲ. ಆ ಬ್ರಹ್ಮವೇ ಇದಾಗಿ ಗೋಚರಿಸುತ್ತದೆ. ಆದ್ದರಿಂದ ಜಗತ್ತೆಂದರೆ ವಿವರ್ತೋಪಾದಾನವೇ ಕಿಂತು ಮಾಯೋಪಾದಾನವೆನ್ನಬಾರದು." "ಅಪ್ರಚ್ಯುತ ಪೂರ್ವ ಸ್ವರೂಪಸ್ಯ ಅಸತ್ಯ ನಾನಾ ಪ್ರಕಾರಾವಬಾಸಃ ವಿವರ್ತಃ"ಎಂದರೆ ಪೂರ್ವರೂಪವು ಕೆಡದಲೆ ಕೆಟ್ಟಂತೆ ಕಾಣಿಸುವುದು. ಹೇಗೆ ರಜ್ಜುವು ಕೆಡದಲೆ ಸರ್ಪವಾಗಿ ಕಾಣಿಸಿದಂತೆ ಮತ್ತು ಕಾಣಿಸುವ ಆ ಸರ್ಪವು ಅನ್ಯೋಪಾದಾನವಾಗಿ ರಜ್ಜುವಿಗಿಂತಲೂ ಭಿನ್ನವಾಗಿ ಸತ್ಯವಾಗಿ ಹೇಗಿಲ್ಲವೋ, ಇದ್ದ ರಜ್ಜುವೆ ಭ್ರಮೆಯಿಂದ ಸರ್ಪವಾಗಿ ಕಾಣಿಸಿತೋ ಅದು ಅದಿಷ್ಠಾನ ಜ್ಞಾನದಿಂದ ಹೇಗೆ ಭಾಧಿತವಾಗುವುದೋ ಹಾಗೆ, ನಿಜವಾಗಿ ಇಲ್ಲದ ಜಗತ್ತಿಗೆ ಅನಿರ್ವಚನೀಯವಾದ ಮಾಯೆ ಉಪಾದಾನವಲ್ಲ. ಇದ್ದ ಚಿದ್ರೂಪ ಬ್ರಹ್ಮವೇ ವಿವರ್ತೋಪದಾನದಿಂದ ಜಗವಿದು ಬಾಧ ಯೋಗ್ಯವಾಗಿ ಭಾವಿಸುತ್ತದೆ ಅಷ್ಟೇ........" ಈ ಮೊದಲಾದ ವಿಷಯಗಳನ್ನು ಹೇತು ದೃಷ್ಟಾಂತಾನುಭವಗಳೊಡನೆ ಆ ಸೂತ್ರಾರ್ಥವನ್ನು ಒಂದು ಗಂಟೆಯ ಹೊತ್ತು ಪ್ರತಿಪಾದಿಸಿದರು. ಶ್ರೋತೃ ಜನರೆಲ್ಲರು ಸಂತೋಷಿಸಿದರು. ಅಲ್ಲಿಯವರು ಸ್ವಾಮಿಗಳವರು ಇನ್ನು ಕೆಲವು ದಿನಗಳಿರಬೇಕೆಂದು ಬಯಸಿದರು. ಹೆಚ್ಚು ದಿನವಿರಲು ಅವಕಾಶವಿಲ್ಲೆಂದು 2,3 ದಿನಗಳಿದ್ದು ಎಲ್ಲರೂ ಶ್ರೀ ಶಿವಲಿಂಗಾಶ್ರಮಕ್ಕೆ ಬಂದರು.

## ಶ್ರೀ ಶಂಭುಲಿಂಗನ ಬೆಟ್ಟ

ಶ್ರೀ ಸ್ವಾಮಿಗಳವರು ಶ್ರೀ ಮನ್ನಿಜಗುಣ ಶಿವಯೋಗಿಗಳು ತಪವನ್ನಾಚರಿಸಿ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದ ಪುಣ್ಯ ಸ್ಥಳ ಚಿಲಕವಾಡಿ ಶಂಭುಲಿಂಗನ ಬೆಟ್ಟಕ್ಕೆ ದಯಮಾಡಿಸಿದರು. ಇದು ಮೈಸೂರಿನಿಂದ ಸಂಜನಗೂಡು ಮೇಲೆ ಕೊಳ್ಳೇಗಾಲಕ್ಕೆ ಹೋಗುವ ಹಾದಿಯಲ್ಲಿ ಮೂಗೂರಿಗೆ 5 ಮೈಲು ದೂರದಲ್ಲಿದೆ. ಶ್ರೀ ಮನ್ನಿಜಗುಣರು ಷಟ್ ಶಾಸ್ತ್ರಗಳನ್ನು ಇಲ್ಲೇ ಬರೆದರೆಂದು ಚರಿತ್ರೆಯಿದೆ. ಇಂಥಾ ಪವಿತ್ರ ಸ್ಥಾನದಲ್ಲಿ ನಮ್ಮ ಶ್ರೀಗಳವರು ಕೆಲವು ಕಾಲ ಧ್ಯಾನಮಗ್ನರಾಗಿ ತಪವನ್ನಾಚರಿಸಿ ಅಧ್ಯಯನ ಮಾಡಿದರು.

ಆಮೇಲೆ ಶ್ರೀ ಶಂಭುಲಿಂಗನ ಬೆಟ್ಟದಿಂದ ಕೆಲವು ಕಾಲಕ್ಕೆ ಶ್ರೀಗಳವರು ಮೈಸೂರಿಗೆ ಬರಲು ಮೂಗೂರುವರೆಗೂ 5 ಮೈಲುಗಳು ನಡೆದು ಬಂದರು. ಆಗ್ಗ ಸ್ವಾಮಿಗಳವರ ಹತ್ತಿರವಿದ್ದ 5 ರೂಪಾಯಿಗಳ ನೋಟು ಎಲ್ಲಿಯೋ ಬಿದ್ದು ಹೋಯಿತು. ಮೈಸೂರಿಗೆ ಬರಲು ಚಾರ್ಜಿಗಿಲ್ಲ, ಬಸ್ಸಿನವರು ಬಸ್ಸಿನಲ್ಲಿ ಸುಮ್ಮನೆ ಕೂಡಿಸುವುದಿಲ್ಲವೆಂದರು. ಅಷ್ಟರೊಳಗೆ ಯಾರೋ ಒಬ್ಬ ಶಿವಭಕ್ತರು ಶ್ರೀಗಳವರಿಗೆ 10 ರೂ. ಕಾಣಿಕೆ ಕೊಟ್ಟು ನಮಸ್ಕರಿಸಿದರು. ಆಗ ಬಸ್ಸಿನವರಿಗೆ ದುಡ್ಡು ಕೊಡಲು ಹೋದರೆ

ಅವರು ಚಾರ್ಜ ತೆಗೆದುಕೊಳ್ಳಲಿಲ್ಲ. ಶ್ರೀಗಳವರನ್ನು ಉಚಿತವಾಗಿ ಬಸ್ಸಿನಲ್ಲಿ ಕೂಡಿಸಿಕೊಂಡು ಹೋಗಿ ಮೈಸೂರಿನಲ್ಲಿ ಬಿಟ್ಟರು. ಇದೊಂದು ಶಿವನ ಲೀಲೆ.

ಮೈಸೂರಿನಲ್ಲಿ ಭಕ್ತರು ಶ್ರೀ ಪಿ. ಗೋವಿಂದಪ್ಪನವರ ಪವಿತ್ರ ಗೃಹಕ್ಕೆ ಬಂದರು, ಪೂಜಾನುಷ್ಠಾನ ಕಾರ್ಯಗಳು ನಡೆದವು. ಆಮೇಲೆ ಶ್ರೀ ಸ್ವಾಮಿಗಳವರು ಮೈಸೂರು ಮಹಾರಾಜರ ಗುರುಗಳು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಪ್ರೇಮಾದರದಿಂದ ತೋರಿಸಿದ ಶ್ರೀ ಚಾಮುಂಡೇಶ್ವರಿ ಬೆಟ್ಟದ ತಪ್ಪಲಲ್ಲಿರುವ ಏಕಾಂತ ಪ್ರದೇಶದಲ್ಲಿ ನಿಷ್ಠೆಯಲ್ಲಿದ್ದರು.

## ಕಪಿಲಾ ನದೀ ತೀರ – ನಂಜುಂಡೇಶ್ವರ ಕ್ಷೇತ್ರ
## ಮೂರನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ 1947 ॥ಸಂ॥

ಪೂಜ್ಯ ಶ್ರೀ ಸ್ವಾಮಿಗಳವರು ಕಪಿಲಾನದೀತೀರದ ಶಿವಾಲಯಕ್ಕೆ ದಯ ಮಾಡಿಸಿದರು. ಇದೊಂದು ವಿಜನ ಪ್ರದೇಶವು. ಪುರಾತನವಾದ ಆ ಆಲಯದ ಪಕ್ಕದಲ್ಲಿಯೇ ಕಪಿಲಾ ನದಿ ಇದೆ. ಹೀಗೆ ಏಕಾಂತವಾದ ಆ ಪ್ರದೇಶವನ್ನು ಕಂಡು ಸಂತೋಷದಿಂದ ಗುರು ಪರಂಪರೆಯಲ್ಲಿ ತಮ್ಮ ಪರಮೇಷ್ಠಿ ಗುರು ಶ್ರೀ ವೆಂಕಟರಂಗ ದೇಶಿಕರು ಇಂಥಾ ಶಿಥಿಲವಾದ ಒಂದು ಪುರಾತನ ಆಲಯದಲ್ಲಿದ್ದಂತೆ ಅವರ ಚರಿತ್ರೆಯಲ್ಲಿದೆ. ಬ್ರಹ್ಮಾನುಭವಿಗಳು ಸರ್ವಜ್ಞರು ಸಮಾಧಿ ನಿಷ್ಠರಾದ ಪರಮೇಷ್ಠಿ ಗುರು ಚರಿತ್ರೆಯನ್ನು ಸ್ಮರಿಸುತ್ತಾ ನಾನು ಈ ಶಿವಾಲಯದಲ್ಲಿ ಪರದೇಶಿಯಾಗಿರುತ್ತೇನೆ. ಮಹದಾನಂದವೆಂದು ಭಾವಿಸಿ ಶಿವ ಸಂಕಲ್ಪ ಪೂರ್ವಕ ಯಥಾ ವಿಧಿ ವಿಧ್ಯುಕ್ತವಾಗಿ ಮಹಾವ್ರತವನ್ನು ಪ್ರಾರಂಭಿಸಿ, ತಮ್ಮ ನಿಯಮ ನಿಷ್ಠೆಗಳಿಂದ ಅತ್ಯಂತ ಮಿತವಾಗಿ ಮಾತನಾಡುತ್ತಾ ಸುವಿಶಾಲವೂ ಸುಪ್ರಸನ್ನವೂ ಆದ ಆ ಶಿವಾಲಯದಲ್ಲಿ ವ್ರತ ದೀಕ್ಷಾ ಪರರಾಗಿ 4 ತಿಂಗಳು ಇದ್ದರು.

ಈ ಸಮಯದಲ್ಲಿ ಅದು ಪಟ್ಟಣವಾದ್ದರಿಂದ ಸ್ವಾಮಿಗಳವರ ಸನ್ನಿಧಿಗೆ ಬಂದು ಪರಸ್ಪರವಾಗಿ ಕೆಲವು ಆಧ್ಯಾತ್ಮಿಕ ವಿಷಯಗಳನ್ನು ತಿಳಿದುಕೊಂಡು ಹೋಗುತ್ತಿದ್ದ ಯೋಗ್ಯರೂ ದೊಡ್ಡ ಮನುಷ್ಯರೂ ಇದ್ದರು ಮತ್ತು ಮಧ್ಯಮರೂ, ಸಾಮಾನ್ಯ ಜನರೂ ಆಗಾಗ ಸ್ವಾಮಿಗಳವರ ಸನ್ನಿಧಿಗೆ ನಿಯಮಿತ ಕಾಲದಲ್ಲಿ ಬಂದು ಹಲವು ಪ್ರಶ್ನೆಗಳನ್ನು ಮಾಡಿ ತಿಳಿದುಕೊಳ್ಳುತ್ತಿದ್ದರು. ಆ ಕೆಲವು ಪ್ರಶ್ನೋತ್ತರಗಳು: ಒಂದು ದಿನ ಒಬ್ಬ ವ್ಯಕ್ತಿ:

ಪ್ರಶ್ನೆ :– ಸ್ವಾಮೀ ಅದ್ವೈತ ಮತಸ್ಥರು ಸರ್ವವೂ ಮಿಥ್ಯೆಯೆನ್ನುತ್ತಾರಲ್ಲಾ ಅಂದಾಗ ಪ್ರಮಾಣಗಳಾದ ಶ್ರುತಿಗಳು ಕೂಡಾ ಅವರಿಗೆ ಮಿಥ್ಯೆಯೇ ಆದಾಗ. ಅದ್ವೈತಕ್ಕೆ ಪ್ರಾಮಾಣ್ಯವೆಲ್ಲಿಯದು ? ಇತ್ಯಾದಿಯಾಗಿ ಪ್ರಶ್ನಿಸಿದರು.

ಉತ್ತರ : ಅದ್ವೈತ ಸ್ಥಿತಿಯು ಪ್ರಮಾಣಗಳಿಗೆಲ್ಲ ಪರಮ ಪ್ರಮಾಣವಾದದ್ದು, ಅದ್ವೈತ ಮತಕ್ಕೆ ಮತ್ತೊಂದು ಪ್ರಮಾಣ ಅಗತ್ಯವಿಲ್ಲ. ಅದು ಸ್ವಯಂ ಪ್ರಮಾಣವೇ. ಅಸತ್‌ತದ್ಬುದ್ಧಿಯನ್ನು ಮಾತ್ರ ಪ್ರಮಾಣವು ದೂರೀಕರಿಸುವದು.

ಆತ್ಮನನ್ನು ಬ್ರಹ್ಮವಾಗಿ ಬೋಧಿಸುವದರಿಂದ ಶ್ರುತಿ ಪ್ರಮಾಣವಾಗಿದೆ. ಸಿದ್ಧ ವಸ್ತು ಬೋಧಕವೆಂದಲ್ಲ........" ಇತ್ಯಾದಿಯಾಗಿ ವಿಪುಲೀಕರಿಸಿ ತಿಳುಹಿದರು.

ಪ್ರಶ್ನೆ : ಸ್ವಾಮೀ ! ನಮಗೊಂದು ಒಳ್ಳೆಯ ಮಠವಿದೆ. ಅದಕ್ಕೆ ತುಂಬಾ ಆಸ್ತಿಯಿದೆ. ಆ ಗ್ರಾಮವು ಇಲ್ಲಿಗೆ ಸಮೀಪವಿದೆ. ತಾವು ಬಂದು ಅಲ್ಲಿ ಯಜಮಾನ ರಾಗಿದ್ದರೆ, ಅದೆಲ್ಲಾ ನಿಮ್ಮದೇ ಆಗುತ್ತೆ. ಬಹಳ ಸಂತೋಷ. ತಮ್ಮಂಥಾ ಶೀಲ ವಂತರು ದೊರೆಯುವುದು ಬಹಳ ದುರ್ಲಭ.

ಉತ್ತರ : ಸ್ವಾಮಿಗಳವರು ನಗುತ್ತಾ ಯಜಮಾನರೇ ನಿಮ್ಮ ಮಠಕ್ಕೆ ಬರು ವುದು, ಅಲ್ಲಿ ನಿಮ್ಮಂತೆ ನಾವಾಗುವ ದೊಡ್ಡಸ್ತಿಕೆ ನಮಗೆ ಬೇಡ.

ಪ್ರಶ್ನೆ : ಇಲ್ಲ ಮಹಾಸ್ವಾಮೀ ! ತಾವಲ್ಲಿಗೆ ಬಂದರೆ ನಮ್ಮವರೆಲ್ಲರು ತಮ್ಮನ್ನು ಪೂಜ್ಯವಾಗಿ, ದೊಡ್ಡವರನ್ನಾಗಿ ಕಂಡು ಗೌರವಿಸುತ್ತಾರೆ. ಪೂಜ್ಯ ಬುದ್ಧಿಯಿಂದ ತಮ್ಮ ಮಾತನ್ನು ಮೀರದೆ ಎಲ್ಲರು ವಿನಯ ವಿಧೇಯತೆಗಳಿಂದ ನಡೆದುಕೊಳ್ಳುತ್ತಾರೆ. ಚೆನ್ನಾಗಿರುತ್ತೆ.

ಸ್ವಾಮಿ ಉತ್ತರ : ಇನ್ನು ಸಾಕಪ್ಪಾ ! ಈ ಅಶಾಶ್ವತವಾದ ಗೌರವಗಳು, ಆಧಿಪತ್ಯಗಳು ನಮಗೆ ಬೇಡ. ಅವುಗಳನ್ನು ಎಂದೋ ಬಿಟ್ಟು ಬಂದಿದ್ದೇವೆ, ಅವು ಗಳನ್ನು ಕುರಿತ ಪ್ರಸಂಗಗಳು ಇನ್ನು ಬೇಡ. ಜೀವನದ ಧ್ಯೇಯವದಲ್ಲ. ಮಹಾ ರಾಜರ ಸುಖ ಮೊದಲುಗೊಂಡು ಹಿರಣ್ಯಗರ್ಭನ ಸುಖದವರಿಗೂ ಇರುವ ಎಲ್ಲಾ ಸುಖಗಳೂ ಈಗ ನಾವು ಹೊಂದುತ್ತಿರುವ ಸುಖದ ಲೇಶಾಂಶವಪ್ಪಾ ! ನಿಷ್ಕಾಮ ಬುದ್ಧಿ ಮತ್ತು ಆತ್ಮವೇ ಬ್ರಹ್ಮವೆಂಬುವ ದೃಢ ನಿಶ್ಚಯವಿರುವವರಿಗೆ ಅದು ರುಚಿಸು ವುದಿಲ್ಲವೆಂದು ಹೇಳಿದರು, ಆತನು ಮತ್ತೆ ಬರಲಿಲ್ಲ; ಹಣ್ಣು ತರಲಿಲ್ಲ.

ಇದರಂತೆಯೇ ಮತ್ತೊಬ್ಬಾತನು ಆಗಾಗ ಸ್ವಾಮಿಗಳವರಿಗೆ ಹಣ್ಣುಗಳನ್ನು ತಂದು ಕೊಡುತ್ತಿದ್ದನು. ಸ್ವಾಮಿಗಳವರು ಆತನನ್ನು ಕುರಿತು ಒಂದು ದಿನ ಇದೇಕಪ್ಪಾ, ಪ್ರತಿದಿನ ಹಣ್ಣು ತರುತ್ತಿದ್ದೀಯಲ್ಲಾ! ನಿಮಗಿದೊಂದು ಖರ್ಚಲ್ಲವೇ ಅಂದರು. ಆ ಮಾತಿಗಾತನು ಸ್ವಾಮಿ ! 'ನೀರುಕೋಳಿ ನೀರಿನಲ್ಲಿ ಮುಳುಗಿದರೆ ಅದಕ್ಕೆ ಸ್ನಾನ ವಾಯಿತು. ತಿನ್ನುವದಕ್ಕೆ ಮೀನು ಸಿಕ್ಕಿತು' ಅದರಂತೆ ತಮಗೆ ಹಣ್ಣು ಕೊಟ್ಟರೆ ನಮ್ಮ ಪಾಪ ಹೋಯಿತು ನಿಮ್ಮ ಪುಣ್ಯ ನಮಗೆ ಬಂತು ಸ್ವಾಮೀ ಇದು ಒಳ್ಳೆಯ ದೆಂದು ಅನ್ನುತ್ತಿದ್ದನಂತೆ.

ಮತ್ತೊಂದು ದಿನ S. ಚಂದ್ರಶೇಖರಯ್ಯ ಎನ್ನುವ ವಿವೇಕಿಗಳೊಬ್ಬರು ಆ ಪಟ್ಟಣ ವಾಸಿಗಳು ಯೋಗ್ಯ ಸದ್ಗೃಹಸ್ಥರು. ಅವರು ಶ್ರೀಗಳವರ ಸನ್ನಿಧಿಗೆ ಬಂದು ಭಕ್ತಿ ವಿಶ್ವಾಸಗಳಿಂದ ಹೀಗೆ ಪ್ರಶ್ನಿಸಿದರು.

ಪ್ರಶ್ನೆ : ಪೂಜ್ಯಸ್ವಾಮೀ ಆತ್ಮ ಚಿದಾಕಾಶ ಸ್ವರೂಪನು ಎಂದರೆ ಅದು ಅನುಭವದಲ್ಲಿ ಹೇಗೆ ದರ್ಶನ ?

ಉತ್ತರ : ಅಪ್ಪಾ ! ವೃತ್ತಿಗೆ ಮತ್ತೊಂದು ವೃತ್ತಿಗೆ ಮಧ್ಯದಲ್ಲಿರುವ ಅವಕಾಶ ತನ್ನ ಇರುವಿಕೆ ಯಾವದು ಇದೆಯೋ ಅದು ಚಿದಾಕಾಶ "ದೇಶಾದ್ದೇಶಾಂತರ ಪ್ರಾಪ್ತೌ ಸಂವಿದೋ ಮಧ್ಯ ಮೇವಯತ್, ನಿಮೇಷೇಣ ಚಿದಾಕಾಶಂ ತದ್ವಿದ್ಧಿ ವರ ವರ್ಣಿನಿ" 'ಪೂರ್ವ ವೃತ್ತೇ ರ್ವಿಲಯಃ ಉತ್ತರ ವೃತ್ತೇರನುದಯಃ' ಈ ಮಧ್ಯ ಕಾಲ............ || "ಅವಲಂಬ್ಯ ನಿರಾಲಂಬಂ ಮಧ್ಯೇ ಮಧ್ಯೇ ಸ್ಥಿರೋಭವ" ಅಂದ ಹಾಗೆ ಉಭಯ ಕಲ್ಪನೆಗಳಿಲ್ಲದ ಸಮಾಕಾಶದ ಸ್ಥಿತಿಯೇ (Space) ಚಿದಾಕಾಶದ ಅನುಭವ. ಸ್ಥೂಲವಾದ ದೃಶ್ಯ ಜಗತ್ಪದಾರ್ಥಗಳಿರುವುದು ಭೂತಾಕಾಶ. ಸಮಸ್ತ ಪದಾರ್ಥಗಳಿಗೆ ಸಂಬಂಧಿಸಿದ ಮನೋಭಾವನೆಗಳಿರುವ ಸ್ಥಳವೇ ಚಿತ್ತಾಕಾಶ, ಇವೆರಡಲ್ಲದೆ ಈ ಕಲ್ಪನೆಗಳಿಗೆ ಆಶ್ರಯವಾಗಿ ತಾನಸಂಗವಾಗಿರುವ ವ್ಯಾಪಕವಾದ ಚಿದಾತ್ಮ ಸ್ಥಿತಿಯೇ ಚಿದಾಕಾಶ. ಅದೇ ನೀನು,ನಾನು, ಸರ್ವವು. ನಿಷ್ಠೆಯಿಂದ ಇದನ್ನು ಕಾಣಬೇಕು.

ಪ್ರಶ್ನೆ : ಪೂಜ್ಯ ಗುರುವರ್ಯಾ ! ಜ್ಞಾನ ಕರ್ಮೋಪಾಸನಗಳ ಸಂಗ್ರಹಾರ್ಥ ವೇನು ?

ಉತ್ತರ : ವಸ್ತುವಿನ ಯಥಾರ್ಥವನ್ನು ತಿಳಿಸುವುದು, ಅರ್ಥಾತ್ ಬೋಧಿಸುವುದು ಜ್ಞಾನವೆನ್ನುವರು, ಕೇವಲ ಭಾವವನ್ನು ಉಂಟುಮಾಡಿ ತಾರಣೋಪಾಯಕ್ಕೆ ಸಾಧನವಾದದ್ದು ಉಪಾಸನೆ. ಕರ್ತೃತ್ವವನ್ನು ಉಂಟು ಮಾಡುವುದು ಕರ್ಮ.

ಪ್ರಶ್ನೆ : ಮಹಾಸ್ವಾಮೀ ಹೇಗಿದ್ದರೆ ನನಗೆ ಈ ಜ್ಞಾನದಾರ್ಢ್ಯವಾಗುತ್ತೆ ?

ಉತ್ತರ : ದ್ರವ್ಯವಿದ್ದರೆ ಧರ್ಮವು, ಉತ್ತಮನಾದ ಮಂತ್ರಿಯಿದ್ದರೆ ರಾಜ್ಯವು, ಪತಿವ್ರತೆಯಾದ ಗೃಹಿಣಿಯಿದ್ದರೆ ಗೃಹವು, ಹೇಗೆ ಚೆನ್ನಾಗಿರುತ್ತೊ ಹಾಗೆ ಎಡೆಬಿಡದೆ ಸಾಧನಾನುಷ್ಠಾನಗಳಿಂದ ಸತತವಾಕ್ಯಾರ್ಥ ಶ್ರವಣ ಮನನಾದಿಗಳನ್ನು ಮಾಡುತ್ತಿದ್ದರೆ ಸಹಜವಾಗಿ ಜ್ಞಾನದಾರ್ಢ್ಯವಾಗುವದು.

ಪ್ರಶ್ನೆ : ಅನುಷ್ಠಾನವೆಂದರೇನು ?

ಉತ್ತರ : ಮನಸ್ಸನ್ನು ವೃತ್ತಿ ರೂಪಾಕೃತಿಯಾಗಿ ಹೊಂದಗೊಡದಂತೆ,ಹಾಗೂ ಹೀಗೂ ಚಲಿಸದೆ ಒಂದೇ ಸ್ಥಾನದಲ್ಲಿ ಮನಸ್ಸು ಬಹುಕಾಲವಿದ್ದರೆ ಅದು ಅನುಷ್ಠಾನ.

ಪ್ರಶ್ನೆ : ಪೂಜ್ಯ ಚರಣಾ ! ತಮ್ಮ ಈ ಕಾರ್ಯಗಳಿಗೆ ಸಹಾಯವಾಗಿ ನೋಡಿ ಕೊಳ್ಳುವವರಾರು ?

ಉತ್ತರ : ಅಪ್ಪಾ ! ಕರ್ತೃತ್ವವಿಲ್ಲದ ಮಹಾತ್ಮರನ್ನು ಭಕ್ತರನ್ನು ಸಚ್ಚಿದಾನಂದ ಮೂರ್ತಿಯಾದ ಪರಮೇಶ್ವರನೇ, ಶ್ರೀ ಉಮಾಮಹೇಶ್ವರನೇ ನೋಡಿಕೊಳ್ಳುತ್ತಾನೆ. ಅಂದರೆ ಕೆಲವರು ಶ್ರೀ ಪುಟ್ಟಣ್ಣನವರು ಮೊದಲಾದ ಭಕ್ತರು ಈ ಕಾರ್ಯವನ್ನು ನೋಡಿಕೊಳ್ಳುತ್ತಿದ್ದಾರಪ್ಪಾ. ಈ ಸತ್ಯ ವಾಕ್ಯಗಳನ್ನು ಕೇಳಿ ಪರಮ ಭಕ್ತರಾದ ಚಂದ್ರಶೇಖರಯ್ಯನವರು ಸ್ವಾಮಿಗಳವರಿಗೆ ಬೇಕಾದವುಗಳನ್ನು ನಾನು ಕಳುಹಿಸಿಕೊಡುತ್ತೇನೆ ಸ್ವಾಮೀ, ತಪ್ಪದೆ ನಮ್ಮ ಸೇವೆಯನ್ನು ಸ್ವೀಕರಿಸಬೇಕೆಂದು ವಿನಯದಿಂದ ನಮಸ್ಕರಿಸಿ ಹೋದರು.

ಮತ್ತೊಂದು ದಿನ ಲೌಕಿಕರೊಬ್ಬರು ಬಂದು ನಿಗ್ರಹವೆನ್ನುತ್ತಾರಲ್ಲಾ, ತಾವು ಏನು ನಿಗ್ರಹಿಸಿದ್ದೀರಿ. ಅನ್ನ ನೀರು ಬಿಟ್ಟಿರುವಿರಾ ? ಎಂದು ಪ್ರಶ್ನೆ ಹಾಕಿದನು. ಅದಕ್ಕೆ ಸ್ವಾಮಿಯವರು ಮೌನ ಮುದ್ರೆಯಿಂದ ಜವಾಬು ಕೊಟ್ಟರು. ಸುಮ್ಮನಿದ್ದರು. ಆತನು ಸ್ವಲ್ಪ ಹೊತ್ತು ಸುಮ್ಮನಿದ್ದು ನೋಡಿ ನೋಡಿ ಅದೇ ಸಮಾಧಾನವೆಂದರಿತು ಹೊರಟು ಹೋದನು.

ಈ ಸ್ಥಾನದಲ್ಲಿ ಕೆಲವು ಯುವಕರು ಕುಚೇಷ್ಟೆಗಳಿಂದ ಗಲಾಟೆ ಮಾಡುತ್ತಾ ಸ್ವಾಮಿಗಳ ನಿಷ್ಠೆಗೆ ಭಂಗಕಾರಕವಾಗಿದ್ದರು. ಒಂದು ದಿನ ಇವರು ಆ ಆಲಯದ ಕಾಂಪೋಂಡಿನ ಮೇಲಿದ್ದ ಕಲ್ಲುಗಳನ್ನು ಎಸೆದರು. ಒಬ್ಬಿಬ್ಬರು ಆ ದೇವಾಲಯದ ಪ್ರಕಾರದ ದೊಡ್ಡ ಗೋಡೆ ಮೇಲಿದ್ದ ಮತ್ತೊಬ್ಬನನ್ನು ಎಳೆದುಕೊಳ್ಳುವ ಸಮಯದಲ್ಲಿ ಎತ್ತರವಾದ ಆ ಪ್ರಹರಿಗೋಡೆಯ ಮೇಲಿಂದ ಅವರೆಲ್ಲರು ಒಬ್ಬರಿಗೊಬ್ಬರು ತಗಲಿ ಹಾಗೇ ಜಾರಿ ಕೆಳಗೆ ಬಿದ್ದರು ಆಗ ಅವರಿಗೆ ಅಲ್ಲಲ್ಲಿ ಪೆಟ್ಟುತಾಕಿ ಗಾಯಗಳಾದವು. ಕಡೆಗೆ ತಮ್ಮ ತಪ್ಪನ್ನು ತಾವು ತಿಳಿದುಕೊಂಡು ಸ್ವಾಮಿಗಳವರ ಸನ್ನಿಧಿಗೆ ಬಂದು, ನಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಶರಣಾಗತರಾಗಿ ಆ ದಿನದಿಂದ ಶ್ರೀಗಳವರಿಗೆ ಬಂಟರಾದರು. ಆಗಾಗ ಸ್ವಾಮಿಗಳವರಿಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಬಂದು ಕೊಡುತ್ತಲಿದ್ದರು. ಭಗವದಾಯತ್ತ ಚಿತ್ತ ಉಳ್ಳವರಿಗೆ ಆಗುವ ಪ್ರತಿಬಂಧಗಳನ್ನು ಆ ಭಗವಂತನೇ ಪ್ರಕಾರಾಂತರವಾಗಿ ಅಚಿರ ಕಾಲದಲ್ಲೇ ತೊಲಗಿಸುತ್ತಾನೆ.

ಈ ಸ್ಥಾನದಲ್ಲಿ ಅನೇಕರು ಅನೇಕ ವಿಧವಾಗಿ ಉತ್ತಮರು ಪಂಡಿತರು ಸಾಮಾನ್ಯರು ಬಂದು ಹೋಗುವ ಭಕ್ತಾದಿಗಳು ಕರ್ಮ ಭಕ್ತಿ ಜ್ಞಾನ ಧರ್ಮಾದಿ ಅನೇಕ ವಿಷಯಗಳನ್ನು ಶ್ರೀಗಳವರ ಮುಖದಿಂದ ಕೇಳಿದರು. ಎಲ್ಲಾ ವಿಧದಿಂದಲೂ ಶಿವಂಕರವಾಗಿತ್ತು.

ಆ ಪ್ರಾಂತದ ವಿವಿಧಾಚಾರ, ಸಂಸ್ಕಾರ ಮತ್ತು ಸಂಸ್ಕಾರೇತರರನ್ನು ನೋಡಿದರು; ಮೇರೆ ತಪ್ಪದೆ ತಮ್ಮ ನಿತ್ಯ ನಿಯಮಾನುಷ್ಠಾನಾದಿಕಾರ್ಯಗಳನ್ನು ಶಿವಪ್ರದವಾಗಿ ನಡೆಸಿಕೊಂಡು, 3ನೇ ಶ್ರೀ ಚಾತುರ್ಮಾಸ್ಯ ಮಹಾವ್ರತವು ಕಪಿಲಾನದೀ ತೀರಸ್ಥ ಜೀರ್ಣ ಶಿವಾಲಯದಲ್ಲಿ ನಿತ್ಯಾನಂದವಾಗಿ ನಡೆಯಿಸಿ ಪೂರ್ಣಗೊಳಿಸಿದರು.

ಅಲ್ಲಿನ ಎಲ್ಲಾ ಭಕ್ತರಿಗೆ ಶುಭವಾಗಲೆಂದು ಶುಭಾಶಂಸನೆಗಳನ್ನು ಹೇಳಿ, ಮೈಸೂರು ಗೀತಾ ಪ್ರಚಾರಿಣೀ ಸಭೆ ಎನ್ನುವ ಆಶ್ರಮಕ್ಕೆ ಬಂದರು.

ಸುವಿಶಾಲವಾದ ಆ ಆಶ್ರಮದಲ್ಲಿರುತ್ತ ಆಶ್ರಮದ ಯಜಮಾನರು ಪೂಜ್ಯರಾದ ಶ್ರೀ ಶಂಕರಾನಂದ ಭಾರತೀ ಸ್ವಾಮಿ ಪಂಡಿತ ಮಹೋದಯರ ಆಸ್ಥಾನದಲ್ಲಿ ಪಂಡಿತರ ಬೋಧೆಗಳನ್ನು ಕೇಳಿದರು. ಅಲ್ಲಿಂದ ಭಕ್ತರ ಪ್ರಾರ್ಥನಾನುಸಾರ ನಂದ್ಯಾಲ ಶ್ರೀ ತ್ಯಾಗರಾಜಸ್ವಾಮಿ ಆಲಯಕ್ಕೆ ಬಂದರು.

# ಶ್ರೀಶೈಲ ಸಂದರ್ಶನ

ನಂದ್ಯಾಲ ಶ್ರೀ ತ್ಯಾಗರಾಜ ಕುಟೀರದಲ್ಲಿ ನೈಷ್ಕರ್ಮ್ಯ ಸಿದ್ಧಿ ಮಹಾಗ್ರಂಥ ಪ್ರವಚನವನ್ನು ಮಾಡಿ, ಅನಂತರ ಶ್ರೀಶೈಲ ಮಲ್ಲಿಕಾರ್ಜುನ ಮಹಾಲಿಂಗ ಸಂದರ್ಶನಾರ್ಥವಾಗಿ ಶ್ರೀಗಳವರು ಶ್ರೀಶೈಲ ಕ್ಷೇತ್ರಕ್ಕೆ ಪಾದಚಾರಿಗಳಾಗಿ ದಯಮಾಡಿಸಿ, ಶ್ರೀ ಮಲ್ಲಿಕಾರ್ಜುನ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿ,

"ಶಾರ್ದೂಲಾಜಿನಚೇಲ ಪೂರ್ಣ ಕರುಣಾಽಽಶ್ರಿತ್ಯಾತಿ ಭಕ್ತ್ಯಾ ಮಹತ್
ಸ್ಥಾನಂ ತ್ವಾಂ ಬಸವಾದಯೋ ಯಯುರಿಯಾ ಅಕ್ಕಾಖ್ಯದೇವಿ ಪರಂ ।
ಆಚಾರ್ಯತ್ವ ಮವಾಪ ಶಂಕರಯತಿರ್ಜಿತ್ವಾಭಿದಾವಾದಿನೋ
ಬಾವತ್ಕಂ ಕಿಮುಪೇಕ್ಷಸೇ ಮುಕಗಿರಿಂ ಶ್ರೀಗಿರ್ಯಗಾರೇಶ್ವರ ॥

ಹೀಗೆಂದು ಮುಕ್ತಕಂಠದಿಂದ ಉಕ್ತ ರೀತಿ ನನ್ನನ್ನು ಸಂರಕ್ಷಿಸು ದೇವಾ ! ಎಂದು ಮೈಮರೆತು ಮಲ್ಲಿನಾಥನನ್ನು ಸಂಸ್ಮರಿಸಿ, 2 ದಿನಗಳಿದ್ದು ನಂದ್ಯಾಲಕ್ಕೆ ಪರ್ವತದಿಂದ ನಡೆದು ಬರುವಾಗ, ಮಾರ್ಗ ಮಧ್ಯಸ್ಥವಾಗಿ ಬಿಡದಿಯನ್ನು ಮಾಡಿದ್ದ ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಮಜ್ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳನ್ನು ಸಂದರ್ಶಿಸಿ, ಅವರ ಹಿತ ಬೋಧೆಗಳನ್ನು ಆಲಿಸಿ, ಮಹಾಪಂಡಿತರಾದ ಆ ಮಹನೀಯರ ಅತ್ಯಂತ ಪ್ರೇಮಕ್ಕೆ ಪಾತ್ರರಾಗಿ, ಮಹಾಸನ್ನಿಧಿಯವರ ಅಪ್ಪಣೆಯನ್ನು ಪಡೆದು ನಂದ್ಯಾಲ ಸೇರಿದರು.

## ಶ್ರೀ ಶಿವಲಿಂಗಾಶ್ರಮ
## ಶ್ರೀ ಶಂಕರ ಜಯಂತಿ ಮಹೋತ್ಸವ

ಶ್ರೀ ಸ್ವಾಮಿಯವರು ಕುಂದನಗುರ್ತಿ ಶಿವಲಿಂಗಾಶ್ರಮದಲ್ಲಿ ಶ್ರೀ ಶಂಕರ ಜಯಂತಿ ಮಹೋತ್ಸವ ಕಾರ್ಯವನ್ನು ಮಾಡಬೇಕೆಂದು ಎಲ್ಲಾ ವ್ಯವಸ್ಥೆಗಳನ್ನು ಏರ್ಪಡಿಸಿದರು. ಅಲ್ಲಿ ಚಿಂತಲಾಂಪಲ್ಲಿ ನರಸಿಂಹ ಎಂಬುವರು ಭಕ್ತಿಯಿಂದ 500 ರೂಪಾಯಿಗಳನ್ನು ಈ ಕಾರ್ಯಕ್ಕೆ ಸಲ್ಲಿಸಿದರು. ಅವರಿಗೆ ಈಶ್ವರ ಕೃಪೆಯಿಂದ ಸಂತಾನವಾಯಿತು. ಬೆಟ್ಟದ ಮೇಲೆ ಆದ್ದರಿಂದ ಎಲ್ಲಾ ವಸತಿಗಳನ್ನು ಅಲ್ಲಿ ಕಲ್ಪಿಸಲು ಎಲ್ಲಾ ಜನರ ಸೇವೆಯು ಅವಶ್ಯವಾಗಿತ್ತು. ಸರ್ವರು ಭಕ್ತಿಯಿಂದ ಸೇವೆ ಮಾಡಿದರು. ಗಂಜಿಗುಂಟಿ ಮಠದಿಂದ ಪೂಜ್ಯರಾದ ಗುರುದೇವರು ಮೊದಲೇ ಅಲ್ಲಿಗೆ ದಯಮಾಡಿಸಿದ್ದರು. ಗುಡಿವಾಡ ಶ್ರೀ ಪ್ರಣವಾನಂದ ಸ್ವಾಮಿಗಳು ಆಹ್ವಾನಿತರಾಗಿ

ಬಂದರು. ಶ್ರೀ ಚಿದಾನಂದ ಸ್ವಾಮಿಗಳೂ ಬಂದಿದ್ದರು ಮತ್ತು ನಂದ್ಯಾಲ ಗುಂತಕಲ್ಲು ಉರವಕೊಂಡೆ, ಚಿಲಡೋಣ, ರಾಗಸಾಳು ಮೊದಲಾದ ಸ್ಥಾನಗಳಿಂದಲೂ ತಂಡೋಪ ತಂಡವಾಗಿ ಬಂದು ಸಮಾವೇಶವಾದರು. ಶ್ರೀ ಶಂಕರ ಜಯಂತಿ ಕಾರ್ಯಕ್ರಮವು ಸಂಭ್ರಮದಿಂದ ಶ್ರೀ ಸರ್ವಧಾರಿನಾಮ ಸಂ||ರ ವೈಶಾಖ ಶುದ್ಧ ಪಾಡ್ಯಮಿ ಆದಿವಾರ 9-5-1948 ಮೊದಲು 13-5-1948 ಗುರುವಾರದ ವರೆಗೂ ಸರ್ವಜನಾನಂದಕರ ವಾಗಿ ಎಲ್ಲಾ ವೈದಿಕ ಕಾರ್ಯಕ್ರಮಗಳಿಂದ ಶ್ರೀ ಮದಾಚಾರ್ಯಸ್ವಾಮಿ ಪೂಜೆ, ಶಿವಪೂಜೆ, ಉಪನಿಷದ್ಗೀತಾ ಸೂತ್ರ ಪಾರಾಯಣಗಳು, ಶಂಕರ ವಿಜಯ ಪುರಾಣ ಶ್ರವಣ ಮಹಾತ್ಮರ 2 ಹೊತ್ತು ಆಧ್ಯಾತ್ಮಿಕೋಪನ್ಯಾಸಗಳಿಂದ 5 ದಿನಗಳು ಈ ಮಹಾಕಾರ್ಯವು ನಡೆದು ಸಾಂಗ ಮಂಗಳವಾಯಿತು.

## ಮಂಗಳವು

ಜಯತು ಮಂಗಳ ಶ್ರೀ ಜಗದ್ಗುರು । ಶಂಕರಾಚಾರ್ಯ ಪ್ರಭೋ ॥
ಜಯತು ಜಯ ಷಣ್ಮತೋದ್ಧಾರಕ । ಭಯವಿದೂರ ಮಹಾಪ್ರಭೋ ||ಪ||

ಬೇಡೆ ಭಿಕ್ಷೆಯು ನೆಲ್ಲಿಕಾಯಿಯ । ನೀಡಲವಳ ದರಿದ್ರಮಂ ||
ದೂಡಿ ಹೇಮಾಮಲಕ ವರ್ಷವ । ನಾಡೆ ಸುರಿಸಿದೆ ಹೇ ಪ್ರಭೊ ||೧||

ಬಾಲ್ಯದೊಳ್ ಸನ್ಯಾಸವನು ಕೈ । ಕೊಳ್ಳುತಾಗಮ ವೇದದೋಳ್ ||
ಉಳ್ಳ ಪೌರ್ಢಾರ್ಥಗಳರಿದು ನಿಜ । ಮೆಲ್ಲ ಲೋಕಕ್ಕರುಹಿದ್ಯೆ ||೨||

ಶ್ರುತಿ ವಿರುದ್ಧಮೆನಿಪ್ಪ ನಾಸ್ತಿಕ । ಮತವ ದುಸ್ತರ್ಕಂಗಳ ||
ಅತಿಗಳೆದು ಬ್ರಹ್ಮಾತ್ಮ ಸಂಸ್ಥಿತಿ । ಕ್ಷಿತಿಯೊಳೆಲ್ಲರ್ಗು ಸುರಿದ್ಯೆ ||೩||

ಸುಕರ ವೇದಾಂತಾಬ್ಧಿಗತ ಮಾ । ದಖಿಲ ಜ್ಞಾನ ಸುರತ್ನವ ||
ನಕುಟಿಲರ್ಗೊಲಿದಿತ್ತು ಸಂಸೃತಿ । ವಿಕಳತೆಯ ಪರಿಹರಿಸಿದ್ಯೆ ||೪||

ಮತಿಯ ಶುದ್ಧಿಗೆ ಕರ್ಮ ನಿಶ್ಚಲ । ಸ್ಥಿತಿಗೆ ಧ್ಯಾನಪ ವರ್ಗಕೆ ||
ಶ್ರುತಿ ವಿದಿತ ಸುಜ್ಞಾನ ವೆಂದತಿ । ಹಿತದೆ ಸಾರಿದೆ ಲೋಕದೋಳ್ ||೫||

ಮೂರು ಸಲ ಭರತಾವನಿಯ ಸಂ । ಚಾರಗೈಯ್ದದ್ವೈತವ ||
ಸಾರಿ ವೇದಾಂತಾರ್ಥ ನಿಶ್ಚಯ । ಭೇರಿ ಬಾರಿಸಿದಿಳೆಯೊಳು ||೬||

ಅರ್ಧ ಶ್ಲೋಕದೆ ಬ್ರಹ್ಮವಿದ್ಯೆಯ । ಶುದ್ಧಮತಿಗಳಿಗುಸುರಿದ್ಯೆ ||
ಮಧ್ಯ ಮಂದರ್ಗಖಿಲ ಗ್ರಂಥಗ । ಳಾದ್ಯುಪಕೃತಿಯನೆಸಗಿದ್ಯೆ ||೭||

ಕರ್ಮ ಧರ್ಮದ ರೂಪದೆಂಬುವ । ಕರ್ಮಿಮಂಡನ ಮಿಶ್ರಗೇ ||
ಕರ್ಮ ಸನ್ಯಾಸತ್ವದಿಂ ನೈ । ಷ್ಕರ್ಮ್ಯ ಸಿದ್ಧಿಯನಿತ್ತೆಯ್ಯೆ ||೮||

ಸೂತ್ರ ಮೊದಲಾಗಿರ್ಪ ಪ್ರಸ್ಥಾ । ನತ್ರಯ ಪ್ರಾಮಾಣ್ಯದಿಂ ||
ಧಾತ್ರಿಯೊಳಗದ್ವೈತ ಮತವನು । ಚಿತ್ರಿಸಿರುವೆ ಜಗದ್ಗುರೊ ||೯||.

ದಿಟ್ಟತರ ನಾಲ್ಕಾಶ್ರಮಗಳನು । ಕಟ್ಟಿನಾಲ್ದೆರ ದಿಕ್ಕಿನೋಳ್ ||
ಶ್ರೇಷ್ಠ ಸನ್ಯಾಸಿಗಳಿಗಲ್ಲಿಯೆ । ಪಟ್ಟಕಟ್ಟಿದೆ ಹೇ ಪ್ರಭೋ ||೧೦||

ನಿನ್ನ ಚರಿತೆಯನೋದಿ ತಿಳಿಯುವ । ಮಾನ್ಯನವನೇ ಧನ್ಯನು ||
ನಿನ್ನ ಚರಣಾಬ್ಜವನು ನಂಬಿರು । ವೆನ್ನ ರಕ್ಷಿಸು ಶಂಕರಾ ||೧೧||

## ನಾಲ್ಕನೆಯ ಶ್ರೀಚಾತುರ್ಮಾಸ್ಯ ಮಹಾವ್ರತ 1948 ಸಂ|| ರ

ಶ್ರೀಗಳವರು ಶಿವಲಿಂಗಾಶ್ರಮದಲ್ಲಿ ವಿಧ್ಯುಕ್ತವಾಗಿ ಈ 4 ನೆಯ ಚಾತುರ್ಮಾಸ್ಯ ಮಹಾವ್ರತವನ್ನು ಪ್ರಾರಂಭಿಸಿ, 4 ತಿಂಗಳು ಸಂಪೂರ್ಣ ಮೌನ ಅಪಕ್ವಾಹಾರ ಇತ್ಯಾದಿಯಾಗಿ ನಿಯಮ ನಿಷ್ಠೆಗಳಿಂದ ಶಿವಪ್ರದವಾಗಿ ನಡೆಯಿಸಿ ಪೂರ್ಣಗೊಳಿಸಿದರು. ವ್ರತ ಪೂರ್ಣವಾದ ನಂತರ ಶ್ರೀ ರಮಣಾಶ್ರಮಕ್ಕೆ ಹೋಗಿ ರಮಣ ಋಷಿಗಳನ್ನು ಸಂದರ್ಶಿಸಿದರು.

## ಭಗವಾನ್ ಶ್ರೀ ರಮಣ ಮಹರ್ಷಿ ದರ್ಶನ

ಸ್ವಾಮಿಗಳವರು ತಿರುಪತಿ ಕ್ಷೇತ್ರದಿಂದ ತಿರುವಣ್ಣಾಮಲೈ ಅರುಣಾಚಲಕ್ಕೆ ಹೋಗಿ, ಭಗವಾನ್ ಶ್ರೀ ರಮಣ ಮಹರ್ಷಿಯನ್ನು ಸಂದರ್ಶಿಸಿ, ಪ್ರಶಾಂತವಾದ ಆ ವಾತಾವರಣದಲ್ಲಿ ನಿಷ್ಠೆಯಿಂದಿದ್ದರು. ಕೆಲವು ದಿನಗಳಾದ ನಂತರ ಅತ್ಯಂತ ಜಿಜ್ಞಾಸೆಯಿಂದ ಭಗವಾನರ ಸಮೀಪಕ್ಕೆ ಹೋಗಿ, "ಭೋ ಭಗವಾನ್! ನಾನು ಯಾವಾಗಲೂ ಆತ್ಮತೃಪ್ತಿ ಆತ್ಮರತಿಯಿಂದ ಬ್ರಹ್ಮನಿಷ್ಠೆಯಲ್ಲಿರಲು ತೀವ್ರವಾಗಿ ಇಚ್ಛಿಸುತ್ತೇನೆ. ಆ ನಿರಾವರಣ ವೃತ್ತಿ ಆಗಾಗ ಅಂತರಾಯವನ್ನು ಹೊಂದುತ್ತದೆಯಲ್ಲಾ ! ಇದಕ್ಕೆ ನಾನೇನು ಮಾಡಬೇಕು ? ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು." ಹೀಗೆ ಹೃದಯಾವೇದನೆ ಸದಿಚ್ಛೆಯಿಂದ ತೆಲುಗು ಭಾಷೆಯಲ್ಲಿ ಕೇಳಿದ ಮಾತುಗಳನ್ನು ಕರುಣಾನಿಧಿಯಾದ ಶ್ರೀ ರಮಣ ಭಗವಾನರು ನಮ್ಮ ಸ್ವಾಮಿಗಳನ್ನು ವೀಕ್ಷಿಸುತ್ತಾ "ಆ ! ಆಃ ! ಅಂಥಹ ಸ್ಥಿತಿಯನ್ನು ಹೊಂದಲು ಇಚ್ಛಿಸುತ್ತಿರುವಿಯಾ ! ಇದು ಅಂತರಾಯವೆಂದು ನಿನ್ನ ಅಂತರಾತ್ಮಕ್ಕೆ ತಿಳಿಯುತ್ತಿದೆಯಲ್ಲಾ ! ಅದೇ ವೃತ್ತಿಯನ್ನು ಪದೇ ಪದೇ ಆವೃತ್ತಿ ಮಾಡುತ್ತಿರು. ಅಂತರಾಯಗಳು ಅಣಗಿ ಹೋಗುವವು. ಆಗಲೇ "ಆತ್ಮನ್ಯೇವಾತ್ಮನಾತುಷ್ಟಃ" ಅಂದು ಮೌನವನ್ನು ವಹಿಸಿದರು. ಅದಕ್ಕೆ ಸ್ವಾಮಿಗಳವರು ಇದು ಪೂರ್ಣ ನಿಜ ಪ್ರಬೋಧೆಯೆಂದು ಪರಮ ತೃಪ್ತಿಯನ್ನು ಹೊಂದಿದರು. 4-5 ದಿನಗಳಲ್ಲಿಯೇ ಇದ್ದು ಅನಂತರ ನಂದ್ಯಾಲೆಗೆ ಬಂದರು.

# ಕಾಶೀ ಕ್ಷೇತ್ರ ವಾಸ

ಮೊದಲಿನಂತೆ ಕಾಶೀ ಕ್ಷೇತ್ರಕ್ಕೆ ಹೋಗಿ ಉನ್ನತ ಪಾಠ ಶಾಲೆಗಳಲ್ಲಿಯೂ, ಅನುಭವಶಾಲಿಗಳಾದ ಬ್ರಹ್ಮಜ್ಞ ಮಹಾ ಪಂಡಿತರಿಂದಲೂ, ಮತ್ತೊಂದು ಸಲ ಭಾಷ್ಯ ಶಾಂತಿಯನ್ನು ಪಡೆದು (ಶ್ರವಣ ಮಾಡುತ್ತಾ) ಸಂಸ್ಕೃತ ಭಾಷಾಭಿವೃದ್ಧಿಯಿಂದ ನಿಷ್ಠೆಯಲ್ಲಿರುತ್ತಾ, ಚಾತುರ್ಮಾಸ್ಯ ಮಹಾವ್ರತವನ್ನು ಕೂಡಾ ಅಲ್ಲಿಯೇ ನಡೆಯಿಸಬೇಕೆಂಬ ಈಶ್ವರ ಪ್ರೇರಣಾತ್ಮಕವಾದ ಸದಿಚ್ಛೆ ಉಂಟಾಯಿತು. ಈ ವಿಷಯ ತಿಳಿದರೆ ಪ್ರಯಾಣಕ್ಕೆ ಅಡ್ಡಿಯಾಗುವದೆಂದು ಯಾರಿಗೂ ತಿಳುಹದೆ ಪ್ರಯಾಣ ಸನ್ನಾಹ ಮಾಡಿಕೊಂಡಿದ್ದರು.

ಇಲ್ಲಿಂದ ಕಾಶೀ ಕ್ಷೇತ್ರಕ್ಕೆ ಹೋಗುವ ಖರ್ಚನ್ನು ಒಬ್ಬ ನಂದ್ಯಾಲ ಭಕ್ತರು ಗೋಪ್ಯದಿಂದ ಸ್ವಾಮಿಗಳವರಿಗೆ ಕೊಟ್ಟರು. ನಂದ್ಯಾಲ ಶ್ರೀ ತ್ಯಾಗರಾಜಸ್ವಾಮಿ ಕುಟೀರದಲ್ಲಿ ಕಾರ್ಯಕ್ರಮವು ಚೆನ್ನಾಗಿ ನಡೆಯಿತು. ಪೂಜ್ಯ ಗುರುದೇವರು ಸದ್ಗುರು ಸದಾನಂದ ಮಹಾಸ್ವಾಮಿಗಳು ಅಲ್ಲಿಗೆ ದಯಮಾಡಿಸಿ ಉಪನ್ಯಾಸಗಳನ್ನು ನಡೆಸಿದರು. ಸ್ವಾಮಿಗಳವರ ಪ್ರಯಾಣ ವಿಷಯ ಈ ಮಹನೀಯರಿಗೆ ತಿಳಿದರೆ ಆತಂಕವಾಗುತ್ತೆಂದು ತಿಳಿದು, ಆ ಅರ್ಧರಾತ್ರಿಯೇ ಸ್ವಾಮಿಯವರು ಎಲ್ಲರಿಗೂ ದೂರದಿಂದ ನಮಸ್ಕರಿಸಿ ನೇರವಾಗಿ ನಂದ್ಯಾಲ ಸ್ಟೇಷನ್‌ಗೆ ಬಂದು ರೈಲು ಟಿಕೆಟ್ ತೆಗೆದುಕೊಂಡು ಬಂಡಿಯನ್ನೇರಿದರು.

ಇಲ್ಲಿ ಕುಟೀರದಲ್ಲಿ ಉದಯ ಎಲ್ಲರೂ ನಮ್ಮ ಸ್ವಾಮಿಗಳೆಲ್ಲಿ ಎಂಬುದಾಗಿ ನೋಡಿದರೆ ಎಲ್ಲಿಯೂ ಕಾಣಲಿಲ್ಲ. ಅನಂತರ ಸ್ವಾಮಿಗಳವರಿಗೆ ಗುಪ್ತದಾನ ಮಾಡಿದ ಸದ್ಗುಣಿಗಳು ಈ ವಿಷಯವನ್ನು ಸ್ವಾಮಿಗಳಿಗೆ ಹೇಳಿದರು. ತಮ್ಮ ಪ್ರಯಾಣಕ್ಕೆ ಆತಂಕವಾಗುತ್ತದೆಂದು ಸ್ವಾಮಿಗಳವರು ಯಾರಿಗೂ ತಿಳಿಸದೆ ಭಕ್ತಿಯಿಂದ ನಮಸ್ಕರಿಸಿ ಶ್ರೀ ಕಾಶೀ ಕ್ಷೇತ್ರಕ್ಕೆ ಹೋಗಿದ್ದಾರೆ.

ಇನ್ನು ಶ್ರೀ ಗುರುದೇವರು ಮತ್ತು ಬಂದ ಮಹನೀಯರು ಈ ಮಾತುಗಳನ್ನು ಕೇಳಿ "ಇವರ ಪ್ರಾರಬ್ಧವು ಶುಕಯೋಗಿಯಂತಹ ಪ್ರಾರಬ್ಧವು. ಒಬ್ಬರಿಗೂ ದೊರೆಯುವವರಲ್ಲ. ದೇಶಾಟನವನ್ನು ಮಾಡಿ ಅನೇಕ ದೇಶಿಕರನ್ನು ಸಂದರ್ಶಿಸಿ ತಮ್ಮ ಭಾವೀ ಜೀವಿತಕ್ಕೆ ಬೇಕಾದ ವಿದ್ಯಾ ತಪಸ್ಸುಗಳನ್ನು ಆರ್ಜಿಸುತ್ತಿದ್ದಾರೆ. ಒಳ್ಳೇದು ಅವರ ಉದ್ಯಮಕ್ಕೆ ಶ್ರೀ ಮದುಮಾಹೇಶ್ವರ ಗುರುಪೀಠ ಪರಂಪರೆಯ ಮಹಾಶಕ್ತಿ ಬೆಂಬಲವಾಗಿ ಅವರನ್ನು ಕಾಪಾಡಿ ಅಭಿವೃದ್ಧಿಗೊಳಿಸಲಿ" ಹೀಗೆಂದು ಎಲ್ಲರು ಮಾತನಾಡಿಕೊಂಡರು.

# ವಿಶ್ವಾರಾಧ್ಯ ಗುರುಕುಲ- ಜಂಗಮವಾಡಿ ಮಠ

ನಮ್ಮ ಶ್ರೀಗಳವರು ಸಂದ್ಯಾಲಿನಿಂದ ಗಾಡಿಯನ್ನೇರಿ ಬೊಂಬಾಯಿ ಮಾರ್ಗವಾಗಿ 3 ದಿನಗಳಲ್ಲಿ ಕಾಶೀಕ್ಷೇತ್ರ ಶ್ರೀ ವಿಶ್ವಾರಾಧ್ಯ ಗುರುಕುಲ ಜಂಗಮವಾಡಿ ಮಠವನ್ನು ಸೇರಿದರು. ಇಲ್ಲಿ ಜಗದ್ಗುರುಗಳಾಗಿದ್ದ ಶ್ರೀ ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರಿಲ್ಲ. ಶಿವೈಕ್ಯರಾಗಿದ್ದರು. ಆ ಶ್ರೀಗಳವರ ಶಿಷ್ಯರು ಉತ್ತಮ ಪಂಡಿತರು ಶ್ರೀಮಜ್ಜಗದ್ಗುರು ವಿಶ್ವೇಶ್ವರ ಮಹಾಸ್ವಾಮಿಗಳವರು ಜಗದ್ಗುರು ಪೀಠವನ್ನು ಅಲಂಕರಿಸಿದ್ದರು. ನಮ್ಮ ಸ್ವಾಮಿಗಳವರು ಜಗದ್ಗುರು ಮಹಾಸನ್ನಿಧಿಯನ್ನು ಸಂದರ್ಶಿಸಿ ಅವರ ಆಶೀರ್ವಾದವನ್ನು ಪಡೆದರು. ಮೊದಲನೆಯ ಸಾರಿ ನಮ್ಮ ಸ್ವಾಮಿಗಳವರು ಅಲ್ಲಿಗೆ ಹೋದಾಗ ಇವರು ಜಗದ್ಗುರುಗಳ. ಸನ್ನಿಧಿಯಲ್ಲಿದ್ದವರು; ನಮ್ಮ ಸ್ವಾಮಿಗಳನ್ನು ಚೆನ್ನಾಗಿ ತಿಳಿದವರು. ಆದ್ದರಿಂದ ತಾವು ಮೊದಲಿದ್ದ ಏಕಾಂತ ಸ್ಥಾನದಲ್ಲಿ ಇರಬಹುದೆಂದು ಪ್ರೇಮದಿಂದ ಅಪ್ಪಣೆಯನ್ನು ಕೊಡಿಸಿದರು.

ತಮ್ಮ ಏಕಾಂತ ಸ್ಥಾನದಲ್ಲಿರುತ್ತಾ ಅವಿಶ್ರಾಂತವಾದ ನಿತ್ಯ ಕಾರ್ಯಕ್ರಮಗಳನ್ನು ನಡೆಯಿಸಿಕೊಂಡರು. ಗಂಗಾ ಸ್ನಾನ, ವಿಶ್ವೇಶ್ವರ ಸಂದರ್ಶನ, ಎರಡು ವೇಳೆಗಳಲ್ಲಿ ನಿಯಮಿತ ಕಾಲ ಅನುಷ್ಠಾನ, ಗುರುಕುಲದ ಪಂಡಿತ ಶ್ರೀ ಸಿದ್ಧರಾಮ ಶಿವಾಚಾರ್ಯರು, ಶ್ರೀ ಗಂಗಾಧರ ಶರ್ಮ ಮತ್ತಿತರರು ಇವರೊಂದಿಗೆ ಉದಯ 9-00 ಗಂ|| ಯಿಂದ 10-30 ಗಂಟೆಯವರಿಗೂ ಕಾವ್ಯ ವ್ಯಾಕರಣ ವೇದಾಂತ ಸಾಹಿತ್ಯಗಳ ಅಭ್ಯಾಸ; 11-00 ಗಂಟೆಗೆ ಮಠದಲ್ಲಿ ಪ್ರಸಾದ, ದೊಡ್ಡ ದೊಡ್ಡ ವಿದ್ಯಾಲಯಗಳಿಗೆ ಹೋಗಿ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಹೇಳುವ ಉಪನಿಷತ್ಸೂತ್ರ ಭಾಷ್ಯ ಪಾಠಗಳನ್ನು ಶ್ರದ್ಧೆಯಿಂದ ಕೇಳಿ ವಿಷಯಗಳನ್ನು ಗ್ರಹಿಸುವಿಕೆ; ಇನ್ನು ಸಾಯಂಕಾಲ ಅಲ್ಲಲ್ಲಿ ನಡೆಯುವ ಸಭೆಗಳು, ಸಮಾವೇಶಗಳು, ಪಂಡಿತರ ಉಪನ್ಯಾಸಗಳು ಕೇಳುವದು. ಹೆಚ್ಚಾಗಿ ವಾಕ್ಯಾರ್ಥ ಶ್ರವಣ ಮಾಡುವದಕ್ಕೆ, ಗೀತಾ ಮಂದಿರ, ದಕ್ಷಿಣಾಮೂರ್ತಿ ಆಶ್ರಮಕ್ಕೆ ಹೋಗುತ್ತಿದ್ದರು. 7-30 ಗಂ||ಗೆ ಮಠವನ್ನು ಸೇರಿ ನಿತ್ಯಾನುಷ್ಠಾನ ಮುಗಿಸಿಕೊಂಡು 9-00 ಗಂ||ಗೆ ಪ್ರಸಾದ. ಅಲ್ಲಿಂದ 10-30 ಗಂಟೆಯವರೆಗೆ ಪಾಠಗಳ ಅವಲೋಕನೆ ಇತ್ಯಾದಿಯಾಗಿ ಶ್ರೀಗಳವರ ನಿತ್ಯ ಕಾರ್ಯಕ್ರಮ- ಪ್ರಣಾಳಿಕೆ. ಆಗಾಗ ಶ್ರೀ ರಾಮಕೃಷ್ಣ ಮಠಕ್ಕೆ ಹೋಗಿ ಅಲ್ಲಿ ನಡೆಯುವ ಕಾರ್ಯಗಳನ್ನು ಕಾಣುತ್ತಾ ವಿಶ್ರಾಂತಿಯಾಗಿ ಆ ಮೈದಾನದಲ್ಲಿ ಇರುತ್ತಿದ್ದರು. ಈ

ಎಲ್ಲಾ ವಿಷಯಗಳನ್ನು ಪೂಜ್ಯರಾದ ತಮ್ಮ ಗುರುದೇವರಿಗೂ, ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರಿಗೂ, ಇನ್ನಿತರರಿಗೂ ಪತ್ರ ಮೂಲಕ ತಿಳುಹಿಸಿಕೊಂಡರು. ಈ ವಿಷಯವಾಗಿ ಗುರುದೇವರು ಶುಭಾಶೀರ್ವಾದ ಪತ್ರವನ್ನು ಕಳುಹಿದರು. ಇನ್ನಿತರರು ಸಂತೋಷದಿಂದ ತಿಳುಹಿಸಿಕೊಂಡರು. ಶ್ರೀಶೈಲ ಜಗದ್ಗುರು ಮಹಾಸ್ವಾಮಿಗಳವರಿಂದ ಶ್ರೀಮುಖ ಶುಭಾಶೀರ್ವಾದ ಪತ್ರ ಬಂತು,

"ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೇ"

ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳವರು
ಶ್ರೀ ಜಗದ್ಗುರು ಶ್ರೀಶೈಲ "ಸೂರ್ಯಸಿಂಹಾಸನ ಮಠ"

ದಿ. 12-2-1949
ಗುಂತಕಲ್ಲು

"ಸ್ವಸ್ತಿ, ತಮ್ಮ 27-1-1949 ಲೇಖೆಯಿಂದ ಸರ್ವವು ತಿಳಿದು ಪರಮ ಸಂತೋಷವಾಯಿತು. ಶ್ರೀ ಜಗದ್ಗುರು ವಿಶ್ವಾರಾಧ್ಯರ ಆಶ್ರಯದಲ್ಲಿ ತಮ್ಮ ಸಾತ್ವಿಕಾನುಷ್ಠಾನ ಜರುಗುತ್ತಿರುವುದು ಅತ್ಯಂತ ಆನಂದ. ಶ್ರೀ ವಿಶ್ವನಾಥನು ನಿಮ್ಮ ಸದಿಚ್ಛೆಯನ್ನು ಸಫಲಗೊಳಿಸಲಿ. ನಿಮ್ಮ ಅಧ್ಯಯನ ಅನುಷ್ಠಾನಗಳು ಜಗದ್ಧಿತ ಕಾರಕವಾಗಲಿ!............"

ಇತ್ಯಾಶಿಷಃ

ಶ್ರೀಶೈಲ ಶ್ರೀಮಜ್ಜಗದ್ಗುರು ಮಹಾಸ್ವಾಮಿಗಳವರ ಲೇಖೆಯನ್ನು ಅಲ್ಲಿಯ ಜಗದ್ಗುರು ಮಹಾಸ್ವಾಮಿಗಳವರಿಗೆ ತೋರಿಸಲು ಸಂತೋಷಪಟ್ಟರು. ಈ ನಮ್ಮ ಪೂಜ್ಯ ಶ್ರೀಗಳವರು ಸಂಸ್ಕೃತ ಮತ್ತು ಹಿಂದೀ ಪುಸ್ತಕಗಳನ್ನು ಬೇಕಾದಷ್ಟು ಕೊಂಡರು. ಮೊದಲನೆಯದಾಗಿ ಶ್ರೀಗಳವರು ಕೊಂಡದ್ದು ಬ್ರಹ್ಮಸೂತ್ರ ಶಾಂಕರ ಭಾಷ್ಯ ಮೂರು ಭಾಗಗಳನ್ನು ಕೊಂಡರು. ಆ ಗ್ರಂಥಗಳಲ್ಲಿ ಪಂಡಿತರು ಪ್ರೇಮದಿಂದ ಹೀಗೆ ಬರೆದರು :

"ಶ್ರೀ ಶಂಕರಾನಂದ ಯತೀಶ್ವರಸ್ಯ ಶ್ರೀ ಶಂಕರಾಸಕ್ತ ಸುಧೀಶ್ವರಸ್ಯ ।
ಶ್ರೀ ಬ್ರಹ್ಮಸೂತ್ರಸ್ಯ ಸುಭಾಷ್ಯಮೇತತ್ ಕಾಶ್ಯಾಂ ಗೃಹೀತಂ ಶಿವದಂ
ಸದಾಸ್ತು ॥"

ಪ್ರಸ್ಥಾನತ್ರಯ ಭಾಷ್ಯವನ್ನು ಒಂದು ನಿಯಮಿತ ಕಾಲದಲ್ಲಿ ಶ್ರೋತ್ರಿಯ ಬ್ರಹ್ಮನಿಷ್ಠರಾದ ಬ್ರಹ್ಮಶ್ರೀ ವಿಶ್ವನಾಥ ಪ್ರಸಾದ್ ಮುಖರ್ಜಿ ಪಂಡಿತ ಮಹಾಶಯರ ಹತ್ತಿರ ಕ್ರಮಾಂತವಾಗಿ ಶ್ರವಣ ಮಾಡಿ ಭಾಷ್ಯ ಶಾಂತಿಯನ್ನು ಪಡೆದರು ಮತ್ತು ಆ

ಗುರುಕುಲದಲ್ಲಿ 'ವಿದ್ವತ್ಸಂಘವೆನ್ನುವ ಪ್ರೌಢ ವಿದ್ಯಾರ್ಥಿಗಳ ಸಮಾವೇಶ ವಾರಕ್ಕೊಂದು ಸಾರಿ ನಡೆಯುವ ಸಭೆಯಲ್ಲಿ ನಮ್ಮ ಸ್ವಾಮಿಗಳವರು ಸಭೆಯ ಸದಸ್ಯರಾಗಿ ಆಗಾಗ ಉಪನ್ಯಸಿಸುತ್ತಿದ್ದರು.

ಶ್ರೀ ಜಗದ್ಗುರು ಸನ್ನಿಧಿ ಜಂಗಮವಾಡಿ ಮಠದಿಂದ ಹೊರಡುವ 'ವಿಪಂಚಿ' ಎನ್ನುವ ಕನ್ನಡ ಮಾಸಪತ್ರಿಕೆಗೆ ಶ್ರೀಗಳವರು ವ್ಯಾಸಗಳನ್ನು ಬರೆದರು.

ಒಂದು ಸಾರಿ ಶ್ರೀಗಳವರು ವಿದ್ವತ್ಸಂಘದಲ್ಲಿ ಉಪನ್ಯಾಸ ಮಾಡಿದ ಒಂದು ಪ್ರಸಂಗ :

ಯಾವ ಸ್ಥಳವು ಪ್ರಶಾಂತ ವಾತಾವರಣದಿಂದ ನೈಸರ್ಗಿಕ ಪ್ರಕೃತಿ ಸೌಂದರ್ಯಗಳಿಂದ ವಿದ್ಯಾರ್ಥಿಗಳ ವಿದ್ಯಾ ತಪಸ್ಸುಗಳಿಗೆ ಸಾಧನ ಭೂತವಾಗಿರುವದೋ ಆ ಸ್ಥಳವು ಗುರುಕುಲವು. ವಿದ್ಯಾರ್ಥಿಗಳು ಬ್ರಹ್ಮಚರ್ಯ ದೀಕ್ಷೆಯಿಂದ ಗುರುವಿನ ಸಮೀಪದಲ್ಲಿ ಶ್ರದ್ಧಾ ಭಕ್ತಿಗಳೊಡನೆ ಸೇವಾಪರರಾಗಿ, ಆದರ್ಶಮಯ ಜೀವಿಗಳಾಗಿ, ಗುರುಗಳು ಭೋಧಿಸಿದ ಪ್ರಕಾರ ತಪಸ್ಸ್ವಾಧ್ಯಾಯ ಪರರಾಗಿ ಸನ್ನಿಧಿಯಲ್ಲಿರುವದೇ ಗುರುಕುಲವಾಸ. ಅಂಥಹ ಪೂಜ್ಯ ಗುರು ಸನ್ನಿಧಿಯಲ್ಲಿ ನಾವೆಲ್ಲರಿದ್ದೇವೆ. ಧನ್ಯರು !

ನಮ್ಮ ಭಾರತಭೂಮಿ ಗುರುಕುಲ ಸಂಸ್ಕೃತಿಗೆ ಪರಮಕೇಂದ್ರವು,ಹುಟ್ಟಿದ ಮನೆ, ಮಾನವಾಭ್ಯುದಯ ಸಭ್ಯತೆಗೆ ಸತ್ಕ್ರಿಯಾಚಾರ ವಿಚಾರಗಳಿಗೆ ಇದು ಮೂಲಸ್ಥಾನ. ಈ ಮೂಲದಿಂದಲೇನೇ ಜೀವನ ವೃಕ್ಷವು ಶೋಭಾವಂತವಾಗಿ ಅಭಿವೃದ್ಧಿಯನ್ನು ಹೊಂದಿ, ಶಾಂತಿ ಸುಖಗಳೆಂಬ ಹೂವು ಕಾಯಿ ಕಡೆಗೆ ಹಣ್ಣಾಗಿ ಅಖಂಡ ಸುಖವೆಂಬ ಮುಕ್ತಿಫಲವೀಯುತ್ತೆ. ಇಂಥಾ ವಿದ್ಯಾ ವಿನಯಾದಿ ಗುಣಪಾಠವನ್ನು ಕಲಿಸುವ ಕೇಂದ್ರಗಳೇ ಗುರುಕುಲವೆಂದು ಹೇಳುವರು. ಇವು ಉಪನಿಷತ್ಕಾಲದಿಂದಲೂ ಪ್ರಸಿದ್ಧವು. ಪ್ರತಿಯೊಬ್ಬ ಬ್ರಹ್ಮಚಾರಿಯೂ 12 ವರ್ಷ ವಯಸ್ಸಾದ ಮೇಲೆ ಗುರುಕುಲಕ್ಕೆ ಬಂದು 24, 25 ವರ್ಷಗಳವರೆಗೂ ವೇದಾಧ್ಯಯನ ಶೀಲಸಂಪನ್ನನಾಗಿ ವಿದ್ಯೆಯನ್ನು ಪಡೆದು, ಆಮೇಲೆ ಗುರುವಿನಾಜ್ಞೆಯಿಂದ ಗೃಹಸ್ಥನೋ ಅಥವಾ ಸನ್ಯಾಸಿಯೋ ಅವರವರ ಸಂಸ್ಕಾರವನ್ನನುಸರಿಸಿ ಆಗುತ್ತಿದ್ದರು. ಒಳ್ಳೇ ಗುರುಕುಲ ವಿದ್ಯಾಪೀಠಗಳು ಶಾಂತಿಪುರಿ ಮಹಾಕ್ಷೇತ್ರವಾದ ನಲಂದ ಮತ್ತು ಶ್ರೀ ಕ್ಷೇತ್ರಕಾಶೀ, ಇನ್ನು ಅನೇಕವಾದ ಮುಖ್ಯ ಸ್ಥಳಗಳು ಇರುತ್ತವೆ.

ನಾವು ಈ ವಾರಣಾಸಿ (ಕಾಶೀ) ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದಲ್ಲಿದ್ದೇವೆ. ಮಹಾಭಾಗ್ಯ! ಈ ಗುರುಕುಲದಲ್ಲಿ ನೈತಿಕಾಧ್ಯಾತ್ಮಿಕ ಧಾರ್ಮಿಕಗಳಾದ ಶಿಕ್ಷಣ ಕೊಡಲ್ಪಡುತ್ತಿರುವದರಿಂದ ಮಹಾ ಸಂತೋಷ. ಪ್ರಚಂಡವಿಕಟ ತಾಂಡವವಾದ ಈ ಕಾಲದಲ್ಲಿ ಎಷ್ಟು ಒಳ್ಳೆಯವರಾದರೂ ಪ್ರಮತ್ತರಾಗಬಾರದು. ಇಂದಿನ ವಿಶ್ವವಿದ್ಯಾಲಯದ ಕಾಲೇಜು ಚಟ್ಟಗಳನ್ನು ಜಾಗ್ರತೆಯಿಂದ ನೋಡಿ, ಪ್ರಾಚೀನ ಅರ್ವಾಚೀನ ಪದ್ಧತಿಗಳನ್ನು ಆಲೋಚಿಸಿ, ದೇಶ ಕಾಲಾನುಸಾರವಾಗಿ ಧರ್ಮ ವಿರುದ್ಧ

ವಾಗದಂತೆ ನೋಡಿಕೊಂಡು ಯಥೋಚಿತವಾಗಿ ಚರಿಸಬೇಕು. ಈ ವಿದ್ಯಾವಿಧಾನವೇ ನಮ್ಮ ಭಾವಿ ಜೀವನ ವಿಕಾಸಕ್ಕೆ ಮುಖ್ಯಕಾರಣ.

"ಬ್ರಹ್ಮಣಿ ಚರತೀತಿ ಬ್ರಹ್ಮಚಾರೀ" ಬ್ರಹ್ಮ ವಿಷಯಕ (ದೈವಿಕ)ವಾದ ಬುದ್ಧಿ ವೃತ್ತಿಯಿಂದೆ ವರ್ತಿಸುತ್ತಾ, ಅನಾತ್ಮವಿಷಯಗಳ ವೃತ್ತಿಯಿಲ್ಲದೆ ಎಲ್ಲೆಡೆಯೂ ಶಿವ ಭಾವವುಳ್ಳವರಾಗಿ, ತಪ್ಪಿಹೋಗದ ಸತ್ಯವಾದ ಬ್ರಹ್ಮಚರ್ಯದಿಂದ ತಪಸ್ಸ್ವಾಧ್ಯಾಯ ಗಳನ್ನು ಮಾಡಿ ವಿದ್ಯೆಯನ್ನು ಕಲಿಯುವದೇ ನೈಷ್ಟಿಕ ಬ್ರಹ್ಮಚರ್ಯವು. "ಬ್ರಹ್ಮ ಚರ್ಯೇಣ ತಪಸಾದೇವ ಮೃತ್ಯುಮುಪಘ್ನತ." "ಬ್ರಹ್ಮಚರ್ಯೇಣ ವಿದ್ಯಾ ವಿದ್ಯಯಾ ಬ್ರಹ್ಮಲೋಕಂ" ಅಂದರೆ ಬ್ರಹ್ಮಚರ್ಯವೆಂಬ ತಪಸ್ಸಿನಿಂದ ಮೃತ್ಯುವನ್ನು ಜಯಿಸಬಹುದು. ಬ್ರಹ್ಮಚರ್ಯದಿಂದ ಜ್ಞಾನವು ಜ್ಞಾನದಿಂದ ಬ್ರಹ್ಮಪ್ರಾಪ್ತಿಯು ಉಂಟಾಗುವದು. ಇಲ್ಲಿ ಸಂಪಾದಿಸಿಲ್ಪಟ್ಟ ಆತ್ಮ ಬಲವೇ ಬ್ರಹ್ಮಚರ್ಯವೇ ನಮ್ಮ ಜೀವಿತದ ಭದ್ರವಾದ ಬುನಾದಿ. ದೇವರು ಕೊಟ್ಟ ಸಮಯವನ್ನು ಸಂಪದವನ್ನು ಶಕ್ತಿಯನ್ನು ವ್ಯರ್ಥಮಾಡಿಕೊಳ್ಳಬಾರದು. ಹಾಗೆ ಪ್ರಮತ್ತರಾದರೆ ಸೋತು ಹೋಗು ವೆವು. ಆದ್ದರಿಂದ ಅಪ್ರಮತ್ತರಾಗಿ ಶ್ರದ್ಧೆಯಿಂದಿರಬೇಕು.

"ಯದಾ ವೈ ಬಲೀ ಭವತಿ । ಅಥ ಉತ್ಥಿತಾಭವತಿ । ಉತ್ತಿಷ್ಠನ್ ಪರಿಚರಿತಾ ಭವತಿ । ಪರಿಚರನ್ ಉಪಸತ್ತಾ ಭವತಿ । ಉಪಸೀದನ್ ದ್ರಷ್ಟಾ ಭವತಿ । ಶ್ರೋತಾ ಭವತಿ । ಮಂತಾಭವತಿ । ಬೋದ್ಧಾ ಭವತಿ । ಕರ್ತಾಭವತಿ । ವಿಜ್ಞಾತಾಭವತಿ ||" ಬ್ರಹ್ಮಚರ್ಯಾದಿ ರಕ್ಷಣೋಪಾಯಗಳಿಂದ ಯಾವಾಗ ಬಲವಂತನಾಗುವನೋ, ಆಗ ಎದ್ದು ನಿಲ್ಲಲು ಸ್ವತಂತ್ರನಾಗುವನು; ಗುರು ಸೇವೆಯನ್ನು ಮಾಡುವನು; ಗುರು ವನ್ನು ಸಮೀಪಿಸಿ ಅವರು ಹೇಳುವ ರಹಸ್ಯವನ್ನು ಅರಿಯುವನು; ನಿಶ್ಚಯ ಬುದ್ಧಿ ಯಿಂದ ಜ್ಞಾನಿಯಾಗುವನು; ಜ್ಞಾನಾನಂತರ ಕರ್ಮಬಂಧಕವಾಗುವದಿಲ್ಲ; ತನ್ಮೂಲಕ ವಿಜ್ಞಾನಿಯಾಗಿ ಸ್ವಧರ್ಮ ಕರ್ಮಗಳನ್ನು ಯಥಾರೀತಿಯಾಗಿ ಆಚರಿಸಿ ನಿರಂಕುಶ ತೃಪ್ತಿರೂಪ ಕೈವಲ್ಯವನ್ನು ಹೊಂದುವನು. ಉಪನಿಷತ್ಕಾಲದ ವಿಧಾನವಿದು. ವನುಸ್ಸು, ವಾಕ್ಕು, ನೋಟ, ಕೇಳುವ ಕಿವಿ, ಮಾಡುವ ಕರ್ಮ ವೇಷ ಇವೆಲ್ಲವೂ ಆದಷ್ಟು ಮಟ್ಟಿಗೆ ನಿರ್ಮಲವಾಗಿ ಚರಿತ್ರ ಶುದ್ಧಿ ಉಳ್ಳವಗಳಾಗಿರಬೇಕು. ಇಂಥಾ ಉನ್ನತವಾದ ವಿದ್ಯೆಯನ್ನು ಅಭ್ಯಸಿಸಿ ಉತ್ತಮೋತ್ತಮ ಸ್ಥಿತಿಯನ್ನು ಹೊಂದಿ ಅಭಿವೃದ್ಧಿ ಹೊಂದಲು ಪರಶಿವನು ಅನುಗ್ರಹಿಸಲಿ! ಅಂಥಾ ಶ್ರದ್ಧೆಯನ್ನು ನಮಗೆ ದಯಪಾಲಿಸಲೆಂದು ಜಗದ್ಗುರು ಶ್ರೀ ವಿಶ್ವಾರಾಧ್ಯ ಗುರು ಚರಣೋಪಾಂತದಲ್ಲಿ ಭಕ್ತಿ ಯಿಂದ ನಮಸ್ಕರಿಸುತ್ತಲಿದ್ದೇವೆ. ಶ್ರೀ ಜಗದ್ಗುರು ಮಹಾಸನ್ನಿಧಿಯಲ್ಲಿ ಮಾತ ನಾಡಲು ಅಸಮರ್ಥನಾದರೂ ತತ್ಕೃಪಾಲೇಶದಿಂದ ಏನೋ ಮಾತನಾಡುವುದಾಯಿತು. ಅದರಲ್ಲೇನಾದರು ವ್ಯತ್ಯಾಸವಿದ್ದರೆ ಉತ್ತಮ ಪಂಡಿತರಾದ ತಾವುಗಳು ಸವರಣೆ ಮಾಡ ಬೇಕೆಂದು ಶ್ರೀಜಗದ್ಗುರು ಚರಣದಲ್ಲಿ ನಮಿಸುತ್ತಾ ವಿರಮಿಸುತ್ತೇನೆ...." ಓಂ ತತ್ಸತ್.

ಸ್ವಾಮಿಗಳವರು ಏಕಾಂತದಲ್ಲಿ ತಮ್ಮಲ್ಲಿ ತಾವು ಹೀಗೆ ಆಲೋಚಿಸಿಕೊಳ್ಳುತ್ತಾ ನಿಯಮಿಸುತ್ತಿದ್ದರು. ಓ ಮನಸೇ ! ನೀನು ಎಷ್ಟು ದೂರದಿಂದಲೋ ಇಲ್ಲಿಗೆ ಬಂದಿದ್ದೀಯಿ. "ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ" ಅಂದ ಹಾಗೆ ಯಾವ ವಿಧದಿಂದಲೂ ಪ್ರಮತ್ತನಾಗದೆ ಬೇಸರವನ್ನು ಪಡದೆ ಅನಿರ್ವಿಣ್ಣ ಚೇತಸ್ಕನಾಗಿ ಚೆನ್ನಾಗಿ ಪರಿಶ್ರಮಿಸಬೇಕು. ಎಷ್ಟೋ ಜನರು ಭಕ್ತಿಯಿಂದ ಹಣವನ್ನು ಕಳುಹಿಸಿದ್ದಾರೆ. ಅತ್ಯುತ್ತಮವಾದ ಪವಿತ್ರ ಸ್ಥಾನವಿದು. ನೀನು ಹೇಗಿದ್ದರೂ ನಿನಗೆ ಹೇಳುವವರು ಕೇಳುವವರು ಇಲ್ಲಿ ಯಾರೂ ಇಲ್ಲ. ನಿನ್ನಲ್ಲಿ ನೀನೆ ಚನ್ನಾಗಿ ತಿಳಿದು ಪರಿಶ್ರಮಿಸು, ಕೃಷಿಯನ್ನು ಮಾಡು, ಹಾಗಿಲ್ಲದಿದ್ದರೇ ಮೊದಲನೆಯದು ಸಮಯ ನಷ್ಟ, ಎರಡನೆಯದು ಗುರು ಸಾನ್ನಿಧ್ಯ ಸೇವಾ ನಷ್ಟ, ಮೂರನೆಯದು ದ್ರವ್ಯ ನಷ್ಟ, ನಾಲ್ಕನೆಯದು ಆಯುರ್ನಷ್ಟ, ಐದನೆಯದು ಮಾನ ನಷ್ಟ, ಹೀಗಿದೆಯಾದ್ದರಿಂದ ಭದ್ರ. ಈ ಪ್ರಕಾರ ತಮ್ಮಲ್ಲಿ ತಾವು ಶ್ರೀ ಗುರು ಕೃಪೆಯನ್ನು ಸಂಸ್ಮರಿಸುತ್ತಾ ಆನಂದಾಶ್ರುಧಾರ ಪೂರ್ಣರಾಗುತ್ತಿದ್ದರು. "ನಿದ್ರಾಯಾ ಲೋಕವಾರ್ತಾಯಾ ಶಬ್ದಾದೇರಪಿ ವಿಸ್ಮೃತೈಃ ಕ್ವಚಿನ್ನಾವಸರಂ ದತ್ವಾ, ಚಿಂತಯಾತ್ಮಾನಮಾತ್ಮನಿ"ಯೆಂಬ ಶ್ರೀಮದಾಚಾರ್ಯ ಸ್ವಾಮಿಗಳವರ ವಾಕ್ಯವನ್ನು ಸ್ಮರಿಸುತ್ತಿದ್ದರು. ಶ್ರೀಗಳವರ ರೂಮಿನಲ್ಲಿ ಗೋಡೆಯ ಮೇಲೆ ಬರೆದಿಟ್ಟ ಈ ಶ್ಲೋಕ ಇದುವರಿಗೂ ಕಾಣಿಸುತ್ತೆ.

ಒಂದು ಸಲ ಕ್ವಿನ್ಸ್ ಕಾಲೇಜಿನಲ್ಲಿ ಬ್ರಹ್ಮಸೂತ್ರಭಾಷ್ಯ ಪಾಠ ನಡೆಯುವಾಗ, ಅಧ್ಯಾಸ ಅಥವಾ ಮಾಯ, ಅವಿದ್ಯ ಈ ಪದಗಳು ಉಪನಿಷತ್ತುಗಳಲ್ಲಿ ಈ ಶಬ್ದ ಪ್ರಯೋಗವು ನೇರವಾಗೆಲ್ಲಿದೆಂಬುವ ಈ ಮಾತುಗಳ ವಿಷಯವಾಗಿ ಒಂದು ಪ್ರಸಂಗವು ಬಂತು. ಹಾಗೆ ಎಲ್ಲರೂ ಆಲೋಚಿಸುತ್ತಿರಲಾಗಿ ಬಹಳ ಹೊತ್ತಾಯಿತು, ಪಕ್ಕದಲ್ಲಿ ಕೂತು ಕೇಳುತ್ತಿರುವ ನಮ್ಮ ಸ್ವಾಮಿಗಳವರು "ದೂರ ಮೇತೇ ವಿಪರೀತೇ ವಿಷೂಚೀ ಅವಿದ್ಯಾಯಾ ಚ............"ಎಂಬುದಾಗಿ ಕಠ ಶ್ರುತಿಯಲ್ಲಿ ಮತ್ತು ಪ್ರಶ್ನೋಪನಿಷತ್ತಿನಲ್ಲಿಯೂ 'ಮಾಯ' ಅವಿದ್ಯ ಎನ್ನುವ ಪ್ರಯೋಗಗಳಿವೆ ಎನ್ನುವದಾಗಿ ಬದುಲು ಕೊಟ್ಟರು. ಆಗ ಅಧ್ಯಾಪಕರು ವಿದ್ಯಾರ್ಥಿಗಳು ಉಪನಿಷತ್ತುಗಳನ್ನು ತೆಗೆದು ನೋಡುತ್ತಾ 'ಹೌದು ಹೌದೆಂದು' ಸಂತೋಷವನ್ನು ಹೊಂದಿದರು. ಎಲ್ಲರೂ ಸ್ವಾಮಿಗಳನ್ನು ಅತ್ಯಂತ ಪ್ರಿಯವಾಗಿ ತಮ್ಮೊಡನೆ ನೋಡಿದರು.

ಮತ್ತೊಂದು ಸಲ ಗೀತಾ ಪೋಟೀ ಪಠನದಲ್ಲಿ ಸ್ವಾಮಿಗಳವರು ಭಾಗವಹಿಸಿ ಪ್ರಥಮ ಶ್ರೇಣಿಯಲ್ಲಿ ಸಣ್ಣದೊಂದು ಬಂಗಾರದ ನೀರು ಕುಡಿಸಿದ ಪದಕವನ್ನು ಬಹುಮಾನವಾಗಿ ಪಡೆದರು.

ಇನ್ನೊಂದು ಸಮಯದಲ್ಲಿ ಕಾಶೀ ಸನ್ಯಾಸಿ ಕಾಲೇಜಿನಲ್ಲಿ ವಾಗ್ವಿವರ್ದ್ಧನೀ ಸಭೆಯಲ್ಲಿ ತಮಗೆ ಕೊಡಲ್ಪಟ್ಟ ನಿಯಮಿತ ಸಮಯದೊಳಗೆ ಸಂಗ್ರಹವಾಗಿ ಸಂಸ್ಕೃತ ಭಾಷೆಯಲ್ಲಿ ಪಂಡಿತರು ಸಹಾಧ್ಯಾಯಿ ವಿದ್ಯಾರ್ಥಿಗಳಲ್ಲಿ ಹೀಗೆಂದು ಮಾತನಾಡಿದರು.

ಆ ದಿನದ ವಿಷಯು ಕಾನಾಮ ನೀತಿಃ ? ನೀತಿ ಅಂದರೇನು ? "ಅಯಿ ಅಧ್ಯಕ್ಷ ಮಹೋದಯಾಃ" "ಚಿದಂಶ ಭೂತಾಃ "ಸದಸ್ಯಾಶ್ಚ ! ಕಾನಾಮ ನೀತಿಃ" ?" ಇತ್ಯಸ್ಮಿನ್ ವಿಷಯೇ ಕಿಂಚಿದ್ವಿವಕ್ಷುರಹಂ ಆಶಾಸೇಹಂ ತತ್ರಭವನ್ತೋ ಮಹಾನ್ತಃ ಶಾಂತಾಂತರಂಗಾ ಶೃಣ್ವಂತೀತಿ।

ಕಾನಾಮ ನೀತಿಃ ? ನೀಯತೇ ಅನಯಾ ಸರ್ವಲೋಕಃ ಸೌಖ್ಯ ಸ್ಥಾನಮಿತಿ ನೀತಿಃ । ಅರ್ಥಾತ್ ದುಃಖ ಸಂಸಾರ ಸಾಗರಾತ್ ಮಾನವ ಜೀವನಂ ಯದ್ಧಿ ವಚಃ ನಿಯಮೋ ವಾ ಸಮುದ್ಧರತಿ ಸೈವ ನೀತಿರೀತಿ ಅಸ್ಮಾಭಿಃ ಉದ್ಘೋಷ್ಯತೇ । ಪರಂ ಏತಾವತಾ ನೀತಿ ನಿರ್ಧಾರಣಾ ಅತೀವ ಸುಲಭಾ ಇತಿ ನ ಕೈರಪಿ ಸಂಭಾವನೀಯಮ್। ಯತಃ "ಕಿಂಕರ್ಮ ಕಿಮಕರ್ಮೇತಿ ಕವಯೋಪ್ಯತ್ರ ಮೋಹಿತಾಃ" ತಯಾಹಿ । ಲೋಕೇ ಏಕತ್ರಯಾ ನೀತಿಃ ಸೈವ ಅನ್ಯತ್ರ ಅನೀತಿಃ। ಅತ ಏವ ಗಹನಾ ನೀತೇರ್ಗತಿರಿತಿ ಮೇ ಮತಿಃ । ತಥಾ ಚ ಸಾಂಘಿಕ ದೃಷ್ಟ್ಯಾಯಾ ಅನೀತಿಃ ಸೈವ ವ್ಯಕ್ತಿ ದೃಷ್ಟ್ಯಾ ನೀತಿಃ। ಯಾ ಹಿ ವ್ಯಕ್ತಿ ದೃಷ್ಟ್ಯಾ ಅನೀತಿಃ ಸಾಚ ಸಮಾಜ ದೃಷ್ಟ್ಯಾ ನೀತಿಃ ಭವತಿ.

ಅರ್ಜುನಸ್ಯ ದೃಷ್ಟ್ಯಾ ಬಾಂಧವಾದೀನಾಂ ಹನನಂ ಅನೀತಿರಾಸೀತ್। ಅತ ಏವ ಸ ಮಹಾನ್ ಕಥಮಹಂ ಜಾನನ್ನಪಿ ಅನೀತಿ ವರ್ತ್ಮನಿಪಾದಕ್ಷೇಪಂ ಕುರ್ಯಾಮಿತಿ ಶೋಕಾ ಕುಲೋ ಬಭೂವ । ಜಗದುದ್ಧರಣಾರ್ಥಂ ಅವತೀರ್ಣಸ್ಯ ಶ್ರೀ ಕೃಷ್ಣಸ್ಯ ದೃಷ್ಟ್ಯಾತು ಯೇನಯೇನ ಲೋಕರಕ್ಷಣಂ ಧರ್ಮಾಭ್ಯುದಯಶ್ಚ ಸ್ಯಾತ್ ತತ್ಸರ್ವಂ ನೀತಾವಂತರ್ಭ ವತಿ ಸ್ಮ । ಅತಃ ತದ್ದೃಷ್ಟ್ಯಾ ಖಲಾನಾಂ ಕೌರವಾಣಾಂ ಹನನಂ ಶಾಸ್ತ್ರ ಸಜ್ಜನ ಸಮ್ಮತಾ ನೀತಿರೇವಾಸೀತ್ । ಏವಂ ಸ್ಥಿತೇ ನೀತಿ ರಹಸ್ಯೇ ಪಂಡಿತಾ ಭವನ್ತಃ ಸ್ವನೀತಿ ಪಥಂ ಯಥಾ ತಥಂ ನಿರ್ದಾರಯನ್ತು । ಯಯಾಖಲು ಸಮಾಜಸ್ಯ ಲೋಕಸ್ಯ ಅಭ್ಯು ದಯ ನಿಃಶ್ರೇಯ ಸಿದ್ಧಿಃ ಸ್ಯಾತ್ | ತಾಮೇವ ಸಮಷ್ಟಿ ದೃಷ್ಟ್ಯಾ ನೀತಿಂ ಮನ್ವಾನಾಃ ಜೀವನ ಪಥೇ ಅಗ್ರೇಸರಾ ಭವನ್ತು । ವ್ಯಷ್ಟಿ ದೃಷ್ಟಿಂ ಪರಿತ್ಯಜ್ಯ ವಿಶಾಲ ಭಾವನಾ ಭಾವಿತಂ ನೀತಿ ಮಾರ್ಗಮಾಶ್ರಯನ್ತು । ಏವಂಚೇತ್ ವಿಜಯ ಲಕ್ಷ್ಮೀಃ ಯುಷ್ಮಾನ್ ವೃಣೋತಿ ಶೀಘ್ರಮಿತಿ ಶಂ । ಓಂ ತತ್ ಸತ್"

ಓ ಅಧ್ಯಕ್ಷ ಮಹಾಶಯಾ ! ಚಿದಂಶ ಭೂತರಾದ ಸದಸ್ಯರೇ ! ನೀತಿಯೆಂದ ರೇನು ಅನ್ನುವ ವಿಷಯವನ್ನು ಸ್ವಲ್ಪವಾಗಿ ಮಾತನಾಡುವೆನು. ದೊಡ್ಡವರಾದ ತಾವೆ ಲ್ಲರೂ ಶಾಂತಿಯಿಂದ ಆಲಿಸಲು ಬಿನ್ನಹ. ನೀತಿಯೆಂದರೆ ಯಾವ ವಾಕ್ಕು ಅಥವಾ ನಿಯಮು ದುಃಖರೂಪ ಸಂಸಾರ ಸಾಗರದಿಂದ ಉದ್ಧರಿಸಿ, ಮಾನವನನ್ನು ಶಾಶ್ವತ ಸೌಖ್ಯಸ್ಥಾನವನ್ನು ಸೇರಿಸುವದೋ ಅದೇ ನೀತಿಯೆಂದು ಘೋಷಿಸಲ್ಪಡುತ್ತೆ. ನೀತಿ ಯೆಂಬುದು ಎಂಥಾದ್ದೆಂದು ನಿರ್ಧರಿಸುವುದು ಅಷ್ಟು ಸುಲಭವಾದ ವಿಷಯವಲ್ಲ. ಏಕೆಂದರೆ ಕರ್ಮವೆಂದರೇನು ? ಅಕರ್ಮ ಎಂದರೇನು ? ಎಂಬ ವಿಷಯದಲ್ಲಿ ಪಂಡಿ ತರು ಕೂಡ ಮೋಹಿತರಾಗುತ್ತಾರೆ. ಆದ್ದರಿಂದ ಲೋಕದಲ್ಲಿ ಒಬ್ಬರಿಗೆ ಯಾವದು

ನೀತಿಯೋ ಮತ್ತೊಬ್ಬರಿಗೆ ಅನೀತಿಯಾಗುತ್ತದೆ. ಆದ್ದರಿಂದ ನೀತಿಯ ಸ್ವರೂಪ ನಿರ್ಣಯ ಅತಿ ಕಠಿಣವಾದ ಅಭಿಪ್ರಾಯ. ಹಾಗೇ ಸಾಂಘಿಕ ದೃಷ್ಟಿಯಿಂದ ಯಾವದು ಅನೀತಿಯೋ ಅದು ವ್ಯಕ್ತಿ ದೃಷ್ಟಿಯಿಂದ ನೀತಿಯಾಗಿದೆ. ವ್ಯಕ್ತಿ ದೃಷ್ಟಿಯಿಂದ ಯಾವದು ಅನೀತಿಯೋ ಅದು ಸಾಂಘಿಕ ದೃಷ್ಟಿಯಿಂದ ನೀತಿಯಾಗಿದೆ. ಇದಕ್ಕೆ ದೃಷ್ಟಾಂತವು ಮಹಾಭಾರತ ಯುದ್ಧವೇ.

ಅರ್ಜುನನ ದೃಷ್ಟಿಯಿಂದ ಬಂಧು ಬಾಂಧವರನ್ನು ಕೊಲ್ಲುವದು ಅನೀತಿಯಾಗಿತ್ತು. ಆದ್ದರಿಂದಲೇನೇ ಆ ಮಹಾನುಭಾವನು ಇದನ್ನು ತಿಳಿದು ಅನೀತಿ ಮಾರ್ಗದಲ್ಲಿ ನಾನು ಹೇಗೆ ನಡೆಯಲೆಂದು ಶೋಕಾತುರನಾದನು. ಜಗದುದ್ಧರಣಾರ್ಥವಾಗಿ ಅವತರಿಸಿದ ಶ್ರೀ ಕೃಷ್ಣ ಪರಮಾತ್ಮನ ದೃಷ್ಟಿಯಿಂದ ಯಾವುದರಿಂದ ಲೋಕರಕ್ಷಣವು ಮತ್ತು ಧರ್ಮಾಭಿವೃದ್ಧಿಯಾಗುವದೋ ಅದೆಲ್ಲವು ನೀತಿಯಲ್ಲಿ ಅಂತರ್ಭವಿಸುವದು. ಆದಕಾರಣ ಆತನ ದೃಷ್ಟಿಯಿಂದ ದುಷ್ಟರಾದ ಕೌರವಾದಿಗಳನ್ನು ಸಂಹರಿಸುವುದು ಶಾಸ್ತ್ರ, ಸಜ್ಜನ ಸಮ್ಮತವಾದ ನೀತಿಯಾಗಿದೆ. ಪರಿಸ್ಥಿತಿ ಹೀಗಿರಲು ನೀತಿ ಶಾಸ್ತ್ರದಲ್ಲಿ ಪಂಡಿತರಾದ ತಾವು, ತಮ್ಮ ತಮ್ಮ ನೀತಿ ಮಾರ್ಗವನ್ನು ಉದ್ಧರಿಸಬೇಕು. ಯಾವುದರಿಂದಾದರೆ ಸಮಾಜಕ್ಕೆ ಲೋಕಕ್ಕೆ ಅಭ್ಯುದಯ ನಿಃಶ್ರೇಯಸ ಸಿದ್ಧಿಯಾಗುವದೋ ಅದನ್ನೇ ಸಮಷ್ಟಿದೃಷ್ಟಿಯಿಂದ ನೀತಿಯೆಂದು ತಿಳಿಯುತ್ತಾ, ಜೀವನ ಮಾರ್ಗದಲ್ಲಿ ಮುಂದಡಿಯನ್ನು ಹಾಕಬೇಕು. ವ್ಯಕ್ತಿ ದೃಷ್ಟಿಯನ್ನು ಬಿಟ್ಟು ವಿಶಾಲ ಭಾವದಿಂದ ಕೂಡಿದ ನೀತಿ ಮಾರ್ಗವನ್ನು ಆಶ್ರಯಿಸುವಂಥವರಾಗಬೇಕು. ಹೀಗಾದರೆ ವಿಜಯ ಲಕ್ಷ್ಮೀ ಶೀಘ್ರವಾಗಿ ವರಿಸುತ್ತಾಳೆ. ಓಂ ಶಿವಾಯ ಗುರವೇ ನಮಃ

ಶ್ರೀಗಳವರು ಈ ಸನ್ಯಾಸಿ ಕಾಲೇಜಿಗೆ ಆಗಾಗ ಹೋಗುತ್ತಿದ್ದರು. ಅಲ್ಲಿಯ ವಿದ್ಯಾರ್ಥಿ ವೃಂದಕ್ಕೆ ಬಹಳ ಸಂತೋಷ.

ಗೀತಾ ಮಂದಿರದಲ್ಲಿ ಸುಪ್ರಸಿದ್ಧ ಮಹಾ ಮಂಡಲೇಶ್ವರರು ಶ್ರೀ ವಿದ್ಯಾನಂದ ಸ್ವಾಮಿಗಳವರು ದಯಮಾಡಿಸಿದ್ದರು. ಅಧಿಕಾರಿ ವಿಷಯವನ್ನು ಪ್ರಬೋಧಿಸಿ "ತದ್ಬುದ್ಧಯ ಸ್ತದಾತ್ಮಾನ ಸ್ತನ್ನಿಷ್ಠಾ ಸ್ತತ್ಪರಾಯಣಾಃ" ಈ ಶ್ಲೋಕವನ್ನು ವಿವರಿಸುತ್ತಾ ವ್ಯಾಖ್ಯಾನವೆಷ್ಟೋ ಪ್ರಶಸ್ತವಾಗಿ ಮಾಡಿದರು. ಮತ್ತೂ ಟೌನ್ ಹಾಲ್ ಹತ್ತಿರ ಸುಪ್ರಸಿದ್ಧ ಧಾರ್ಮಿಕ ಪ್ರಚಾರಕರಾದ ಶ್ರೀ ಕರಪಾತ್ರಿ ಸ್ವಾಮಿಗಳು ಮೂರುದಿನ ಅದ್ಭುತವಾಗಿ ಉಪನ್ಯಾಸ ಮಾಡಿದರು. ಲಕ್ಷಗಟ್ಟಲೆ ಜನ ಬಂದು ಕೇಳಿದರು. ಇವರ ಸಂಭಾಷಣೆ ಹಂಸ ಗಮನದಂತೆ ಚನ್ನಾಗಿತ್ತು.

"ಆ ಸನಾತನ ಪರತತ್ವವೇ ಜೀವರೂಪದಿಂದ ವ್ಯವಹರಿಸಲ್ಪಡುತ್ತದೆಯೇ ವಿನಾ ಬೇರೆ ಅಲ್ಲ. ನಮ್ಮ ಆತ್ಮವೇ ಪರಬ್ರಹ್ಮ ಅದರಲ್ಲಿಯೇ ಈ ಸರ್ವ ಜಗತ್ತು ಕಲ್ಪಿತವಾಗಿ ಕಾಣುತ್ತಿದೆ. ಇದೇ ಸರ್ವ ಶ್ರುತಿಗಳ ತಾತ್ಪರ್ಯ, ಹೀಗೆಂದು ಉಪಕ್ರಮಿಸಿ

ಅನೇಕ ವಿಷಯಗಳನ್ನು ತಿಳಿಸಿದರು. ತಿಳಿಯದ ಅಜ್ಞರು ವೇದ ಮತವು ಸನಾತನ ಸಿದ್ಧಾಂತವಲ್ಲವೆಂದು ದೂಷಿಸಲು ಯತ್ನಿಸಿದರೆ ಅದು ಕೇವಲ ಬಾಲಕರ ಪ್ರಲಾಪವೇ ಸರಿ. ಅಂಥಾ ಮಾತುಗಳಿಗೆ ಕಿವಿಗೊಟ್ಟು ಸತ್ಯವನ್ನು ಬಿಟ್ಟು ಐಹಿಕ ಭೋಗಲಾಲಸೆಯಿಂದ ನಾವು ಅನಾರ್ಯರಾಗಬಾರದು…………"

ದಶಾಶ್ವಮೇಧ ಘಾಟ್‌ನಲ್ಲಿ ನಡೆಯುವ ತುಲಸೀ ರಾಮಾಯಣವನ್ನು ಕೇಳುತ್ತಿದ್ದರು. ಕೇದಾರ್ ಘಾಟ್‌ನಲ್ಲಿರುವ ಯೋಗಿಗಳ ಅಭಿಪ್ರಾಯಗಳನ್ನು ಅರಿಯುತ್ತಿದ್ದರು. ಚೌಷಷ್ಟಿ ಘಾಟ್‌ನಲ್ಲಿ ಪಂಡಿತರೊಬ್ಬರೊಡನೆ ಆಗಾಗ ಭಾಷ್ಯ, ಗ್ರಂಥಗಳ ಮೂಲ ತತ್ವಾರ್ಥ ವಿಷಯಕವಾದ Research ಮಾಡುವ ಸಭೆಯಲ್ಲಿ ಶ್ರೀಗಳವರು ಕಲೆಯುತ್ತಿದ್ದರು. ಗೋಘಾಟ್‌ನಲ್ಲಿ ಹಿಂದೀ ಪಂಡಿತರ ಹತ್ತಿರ ವಿಚಾರ ಸಾಗರ ಗ್ರಂಥ ಶ್ರವಣವನ್ನು ಮಾಡಿದರು. ಇವರೇ ನಮ್ಮ ಸ್ವಾಮಿಗಳವರಿಗೆ "ಭಾರತೀಯ ದರ್ಶನ" ವೆಂಬ ಹಿಂದೀ ಗ್ರಂಥವನ್ನು ಪ್ರೇಮದಿಂದ ಸಮರ್ಪಿಸಿದರು.

## 5ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ–ಕಾಶೀ ಕ್ಷೇತ್ರ 1949 ಸಂ||

ಶ್ರೀಗಳವರು ಯಥಾವಿಧಿ ಮಹಾವ್ರತವನ್ನು ವಿಧ್ಯುಕ್ತವಾಗಿ ಪ್ರಾರಂಭಿಸಿ ತಮ್ಮ ಏಕಾಂತ ಸ್ಥಾನದಲ್ಲಿ ಕೆಲವು ಗಂಟೆಗಳು ಪರವಶರಾಗಿ ನಿಷ್ಠೆಯಿಂದಿರುತ್ತಿದ್ದರು. ಗಂಗಾಮಾತೆ ತಮ್ಮಗೆ ಪ್ರಸಾದಿಸಿದ ಭಗವದ್ಗೀತಾ ಗ್ರಂಥ ಮೂಲದಿಂದ ಅಷ್ಟೋತ್ತರ ಶತವಾರ ಗೀತಾ ಪುರಶ್ಚರಣೆ ಮಾಡಿಕೊಂಡರು. ಈ ವ್ರತ ಮಧ್ಯ ವಿರೋಧಿ ಶ್ರಾವಣ ಬಹುಳ ಏಕಾದಶಿ 20–8–49 ಶನಿವಾರ ಯಥಾರೀತಿ ನಿಷ್ಠೆಯಲ್ಲಿರುತ್ತಾ "ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂ………… ಈ ಶ್ಲೋಕವು ಅನುಸ್ಮರಣೆಗೆ ಬಂದು,ಯಾವದೋ ಒಂದು ಅಪೂರ್ವವಾದ ಪರಮ ತುಷ್ಟಿ ಸುಖ ಶಾಂತಿ ತನ್ನೊಳಗೆ ಉಂಟಾಗಿ, ಸ್ವಸ್ಥಿತೆಯಿಂದ ವೃತ್ತಿ ನಿಂತು ಹೋಗಿ ಅಂತರ್ಮುಖವಾಯಿತು. ಮಾರನೆಯ ದಿನ ಉದಯ ಪೂಜಾ ಮಂದಿರದಲ್ಲಿ ದೊಡ್ಡದಾಗಿ ಗಂಟೆ ನಗಾರೀ ಶಬ್ದಗಳು ಕೈಲಾಸ ಮಂಟಪದಲ್ಲಿ ಆಗಲು,ಆ ಶಬ್ದದಿಂದ ಸ್ವಾಮಿಗಳವರು ಬಹಿರ್ಮುಖರಾಗಿ ಕಣ್ಣು ಬಿಚ್ಚಿ ನೋಡಿದರು. ಬೀಗ ಕೊಡದೇ ಇದ್ದುದರಿಂದ ಗಡಿಯಾರ ನಿಂತು ಹೋಗಿದೆ. ದೇಹದಲ್ಲಿ ಯಾವ ವಿಧವಾದ ಆಯಾಸವಾಗಲಿ ಅನಾರೋಗ್ಯವಾಗಲಿ ಇಲ್ಲ. ಮಹಾ ಸುಖವಾಗಿತ್ತು.

ಶ್ರೀಗುರು ಪರಮಾತ್ಮನ ಅನುಗ್ರಹವಿದೆಂದು ಭಾವಿಸಿ ಅಲ್ಲಿ ತತ್ತ್ವವಿದರಾದ ಮಹನೀಯರಿಗೆ ಈ ವಿಷಯ ತಿಳುಹಿದರು. ಅದಕ್ಕೆ ಅವರು ಇದು ನಿಷ್ಕಾಮ ಮಹಾ ಪುಣ್ಯದ ಫಲ ಶುಭೋದಯ ಚಿಹ್ನವು. ಆತ್ಮ ವಿಷಯಕವಾದ ನಿಮ್ಮ ಕೃಷಿಯ ಫಲವಾಗಿ ನಿಮ್ಮ ಆಚರಣೆಯೇ ಅಂಥಾ ಒಂದು ಅಪೂರ್ವವಾದ ಸ್ಥಿತಿಯನ್ನು ಅನುಭವ

ಮಾಡಿಕೊಟ್ಟಿದೆ, ಬಹಳ ಸಂತೋಷ. ಬಯಸಿದರೆ ಬರುವದಲ್ಲ ಎಂಬುದಾಗಿ ಹೇಳಿದರು.

ಈ ಪ್ರಕಾರ ಕಾಶೀ ಕ್ಷೇತ್ರ ವಾಸ ಅನುಷ್ಠಾನ ಅಧ್ಯಯನಾದಿಗಳಿಂದ ಅಪೂರ್ವವಾಗಿ 5 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ನಿಯಮ ಸಾಂಗವಾಗಿ ನಡೆದು ಪೂರ್ಣವಾಯಿತು.

ಅನಂತರ ಕೆಲವು ಕಾಲಕ್ಕೆ ಶ್ರೀ ಕಾಳಹಸ್ತಿ ನಿತ್ಯಾನಂದ ಸ್ವಾಮಿಗಳವರು ಮತ್ತಿನ್ನು ಕೆಲವು ಮಹನೀಯರು ಕಾಶಿಗೆ ಬಂದಾಗ ಒತ್ತಾಯದಿಂದ ಪ್ರೇಮ ವಿಶ್ವಾಸ ಪೂರ್ವಕ, ಸ್ವಾಮಿ ! ಇನ್ನು ಸಾಕು ನಮ್ಮ ದೇಶಕ್ಕೆ ಬಂದೇ ಬರಬೇಕು ಎಂಬುವ ಪ್ರೇಮಾಗ್ರಹವಾದ ಅವರ ಭಾವವನ್ನನುಸರಿಸಿ ಮತ್ತು ಇಷ್ಟರಲ್ಲಿ ಗುರುಗಳ ಆಜ್ಞಾನುಸಾರ ಕಾಶೀ ಕ್ಷೇತ್ರದಿಂದ ಸ್ವದೇಶಕ್ಕೆ ಬರಬೇಕಾಯಿತು.

ಈ ವಿಷಯವನ್ನು ಜಗದ್ಗುರು ಮಹಾಸನ್ನಿಧಿಯಲ್ಲಿ, ವಿದ್ವತ್ಸಂಘದಲ್ಲಿ ತಿಳುಹಲು, ಅವರು ಸ್ವಾಮಿಗಳವರ ವಿಯೋಗವನ್ನು ಕುರಿತು ಬಾಧೆಪಟ್ಟರು. ವಿದ್ವತ್ಸಂಘದವತಿ ಶ್ರೀ ಜಗದ್ಗುರು ಸನ್ನಿಧಿಯಲ್ಲಿ ಒಂದು ಪ್ರತ್ಯೇಕ ಸಭೆಯನ್ನು ಮಾಡಿ ತಮ್ಮ ಪ್ರೇಮ ಗೌರವಗಳನ್ನು ತೋರಿಸಿದರು. ಶ್ರೀಮಜ್ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ವಾತ್ಸಲ್ಯದಿಂದ 'ಈ ದಿನ ನಮ್ಮ ಗುರುಕುಲದ ವಿದ್ವತ್ಸಂಘ ಸದಸ್ಯರಲ್ಲಿ ಒಬ್ಬರಾದ ಶ್ರೀ ಶಂಕರಾನಂದಗಿರಿ ಸ್ವಾಮಿಗಳು ನಮ್ಮನ್ನು ಬಿಟ್ಟು ತಮ್ಮ ದೇಶಕ್ಕೆ ಹೋಗುತ್ತಿದ್ದಾರೆಂಬುದಾಗಿ ಒಂದು ಕೊರತೆ. ಇವರು ಪುನಃ ಪುನಃ ಮಹಾಸನ್ನಿಧಿಗೆ ಬಂದು ದರ್ಶಿಸುತ್ತಿರಬೇಕಾಗಿ ಅಪ್ಪಣೆ ಕೊಡಿಸಿದ್ದೇವೆ"ಹೀಗೆಂದು ಶ್ರೀ ಜಗದ್ಗುರುಗಳು ಮಾತನಾಡುತ್ತಾ ತಮ್ಮ ಅಮೃತ ಹಸ್ತದಿಂದ ಆಶೀಃ ಫಲ ಮಂತ್ರಾಕ್ಷತೆಗಳನ್ನು ಪ್ರಸಾದಿಸಿದರು. ವಿದ್ವತ್ಸಂಘದವರಿಂದ ಉಪನ್ಯಾಸಗಳಾಗಿ ಆ ಸಭೆಯನ್ನು ಪೂರ್ಣ ಮಾಡಿದರು. ಸಭಾನಂತರ ಶ್ರೀ ಜಗದ್ಗುರು ಮಹಾಸ್ವಾಮಿಗಳು ವೇದ ಘೋಷದಿಂದ ಕೈಲಾಸ ಮಂಟಪದೊಳಗೆ ದಯಮಾಡಿಸಿದರು. ಜಯ ಜಯ ಧ್ವನಿಗಳಾದವು.

ಶ್ರೀಗಳವರು ವಿಶ್ವನಾಥನನ್ನೂ, ವಿಶಾಲಾಕ್ಷಿಯನ್ನೂ, ಅನ್ನಪೂರ್ಣೇಶ್ವರಿಯನ್ನೂ ಸಂದರ್ಶಿಸಿ, ಅಲ್ಲಿಂದ ಹರಿದ್ವಾರ್ ಹರಿಹರಾನಂದಾಶ್ರಮ ಅನಂತರ ಋಷಿಕೇಶ್ ಶ್ರೀ ಶಿವಾನಂದ ಸರಸ್ವತೀ ಸ್ವಾಮಿಗಳವರ ಆನಂದ ಕುಟೀರಕ್ಕೆ ಬಂದು ಸ್ವಾಮಿಗಳವರನ್ನು ಸಂದರ್ಶಿಸಿ ಅಲ್ಲಿ 4, 6 ದಿನಗಳಿದ್ದು ನೇರವಾಗಿ ನಂದ್ಯಾಲ್, ಆಮೇಲೆ ಗುರುದರ್ಶನಾರ್ಥವಾಗಿ ಗಂಜಿಗುಂಟೆಗೆ ಬಂದು ಗುರುಗಳನ್ನು ಸಂದರ್ಶಿಸಿದರು. ಎಲ್ಲರೂ ಸಂತೋಷಪಟ್ಟರು. ಕಾಶೀ ವಿಶೇಷ ಸಮಾಚಾರಗಳೆಲ್ಲವೂ ಆದವು.

# ಶ್ರೀ ನಿರ್ವಾಣಾಶ್ರಮ ವಾಸ

ಶ್ರೀ ಗುರುಗಳು ನಮ್ಮ ಸ್ವಾಮಿಗಳವರನ್ನು ಕುರಿತು ನಿಮ್ಮ ಕೆಲಸಗಳೆಲ್ಲವೂ ಆದವು. ವಿದ್ಯಾ ತಪಸ್ಸುಗಳಿಗಾಗಿ ಶ್ರಮಿಸಿದಿರಿ. ಇನ್ನು ಸಾಕು ಮೂಲ ಸ್ಥಾನವಾದ ಶ್ರೀ ನಿರ್ವಾಣ ಮಠದಲ್ಲಿ ನೀವಿರಬೇಕೆಂದು ಆಜ್ಞೆಯನ್ನು ಮಾಡಿದರು.

ಗುರುಗಳ ಆಜ್ಞೆಯನ್ನನುಸರಿಸಿ ಸ್ವಾಮಿಗಳವರು ಬುಕ್ಕಾಪುರ ಶ್ರೀ ನಿರ್ವಾಣ ಮಠಕ್ಕೆ ದಯಮಾಡಿಸಿದರು. ಮಹಾ ಶಿವರಾತ್ರಿ ಕಾರ್ಯಕ್ರಮವು ಯಥಾರೀತಿ ವಿಧ್ಯುಕ್ತವಾಗಿ ಮಠದಲ್ಲಿ ನಡೆಯಿತು. ಪರಮ ಪೂಜ್ಯ ಗುರುದೇವರು ಗಂಜಿಗುಂಟೆಯಿಂದ ಅಲ್ಲಿಗೆ ಬಂದರು ಮತ್ತು ಸುರಪುರದ ಬ್ರಹ್ಮಶ್ರೀ ಶಂಕರ ಶಾಸ್ತ್ರಿಗಳವರು ನಿರ್ವಾಣ ಮಠಕ್ಕೆ ಆಗಮಿಸಿದ್ದರು. ಶ್ರೀ ಶಂಕರಶಾಸ್ತ್ರಿ ಸ್ವಾಮಿಗಳವರು ಪ್ರೇಮ ವಾತ್ಸಲ್ಯದಿಂದ ನಮ್ಮ ಶ್ರೀಗಳವರನ್ನು ಕುರಿತು, ಈ ಸ್ವಾಮಿಗಳವರ ಪ್ರಾರಬ್ಧವು ಶುಕನಂಥಾ ಪ್ರಾರಬ್ಧವೆಂದು ಗುರುಗಳಿಗೆ ಹೇಳುತ್ತಾ, ಸಭೆಗೆ ತಿಳಿಸುತ್ತಾ "ಅಭಿನವ ಶುಕಯೋಗಿ" ಎಂದರು. ಯಥಾರೀತಿ ಶ್ರೀಗಳವರು ಆಶ್ರಮದಲ್ಲಿ ನಿತ್ಯ ನಿಯಮ ಪೂಜಾನುಷ್ಠಾನಗಳಿಂದ ಅನುದಿನ ಶಾಸ್ತ್ರ ಶ್ರವಣವು ನಡೆಸುತ್ತಾ ಸುಖವಾಗಿದ್ದರು. ಸದ್ಗುರು ದೇವರು 3 ತಿಂಗಳು ಅಲ್ಲೇ ಇದ್ದರು. ಶ್ರೀ ಗುರುಗಳ ಸನ್ನಿಧಿ ಅವರ ಆಜ್ಞಾನುಸಾರವಾಗಿ ನಮ್ಮ ಶ್ರೀಗಳವರು 3 ತಿಂಗಳು ಪಾತಂಜಲಿ ಯೋಗಶಾಸ್ತ್ರ ಪ್ರವಚನವನ್ನು, ನೈಷ್ಕರ್ಮ್ಯ ಸಿದ್ಧಿ ಗ್ರಂಥ ಪ್ರಸಂಗವು ವಿಪುಲವಾಗಿ ನಡೆಸಿದರು. ಬಂದ ಎಲ್ಲಾ ಭಕ್ತರು ಶ್ರೀ ಗುರು ಮಹಾಸನ್ನಿಧಿ ವಾಕ್ಯಾರ್ಥ ಶ್ರವಣಾದಿಗಳಿಂದ ಆನಂದಪಟ್ಟರು. ಆಗ ಗುರುಗಳು ಶಿಷ್ಯನ ದೃಷ್ಟಿಯುಕ್ತ ಪ್ರಬೋಧನ ಕಳಾಪಟಮೆಯನ್ನು ಕಂಡು ಸಂತೋಷವನ್ನು ಹೊಂದಿದರು.

ಅಪ್ಪಾ ! ನಮಗೆ ಕಾಷಾಯಾಂಬರಗಳನ್ನು ಧರಿಸೆಂದು ಶಿಷ್ಯರಾದ ನಮ್ಮ ಶ್ರೀಗಳವರಿಗೆ ಹೇಳಿದರು. ಆಗ ಶಿಷ್ಯನು ಪರಮ ಭಕ್ತಿಯಿಂದ ತಮ್ಮ ಗುರುಗಳಿಗೆ ಕಾಂಚನ ಚೇಲ-ಕಾಷಾಯಾಂಬರವನ್ನು ಧರಿಸಿ ಪೂಜಿಸಿದರು.

## 6 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ
## ಶ್ರೀ ನಿರ್ವಾಣ ಮಠ–ಬುಕ್ಕಾಪುರ 1950 ಸಂ ||

ಶ್ರೀ ವಿಕೃತ ನಾಮ ಸಂ || ರ ಆಷಾಢ ಶುದ್ಧ ಏಕಾದಶಿ ಸೋಮವಾರ, 6ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತವು ಪರಮ ಪಾವನ ತಾಪಸಾರಣ್ಯ ಉಮಾ

ಮಹೇಶ್ವರ ಗುರುಪೀಠ ಶ್ರೀಗಳವರ ಪರಮ ಗುರುಗಳ ಪುಣ್ಯಾಶ್ರಮ ಸುಕ್ಷೇತ್ರದಲ್ಲಿ, ಈ ಮಹಾ ವ್ರತವು ಯಥಾ ಶಾಸ್ತ್ರ ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟು, ಶಿವ ಪ್ರದವಾಗಿ ನಡೆಯಿತು. ಉಮಾಮಹೇಶ್ವರ ಗುರುಪೀಠ ಭಕ್ತಮಂಡಲಿ ಮೊದಲಾದವರನೇಕರು ಅಲ್ಲಿ ನಡೆಯುವ ಪೂಜಾನುಷ್ಠಾನ ಶಾಸ್ತ್ರ ಶ್ರವಣದಲ್ಲಿ ಭಾಗವಹಿಸಿ ಸೇವೆ ಮಾಡಿದರು.

ಈ ಚಾತುರ್ಮಾಸ್ಯ ಮಹಾವ್ರತವು ಬ್ರಹ್ಮನಿಷ್ಠೆಯಿಂದ ಸಾಂಗ ಮಂಗಳವಾಗಿ ನಡೆದು ಪೂರ್ಣವಾಯಿತು.

## ಮೈಸೂರು ಗೀತಾ ಪ್ರಚಾರಿಣೀ ಸಭೆ

ನಮ್ಮ ಸ್ವಾಮಿಗಳವರು ಪರಮಹಂಸ ಪರಿವ್ರಾಜಕರಾದ ಶ್ರೀ ಶಂಕರಾನಂದ ಭಾರತೀ ಸ್ವಾಮಿಗಳೊಂದಿಗೆ ಗೀತಾ ಪ್ರಚಾರಿಣೀ ಸಭೆಯಲ್ಲಿ ಕೆಲವು ಕಾಲ ನಿತ್ಯಾನಂದವಾಗಿ ತಮ್ಮ ನಿಷ್ಠೆಯಲ್ಲಿದ್ದರು. ಇವರು ಬಹಳ ಸುಪ್ರಸಿದ್ಧ ವಿದ್ವಾಂಸರು; ನೈಷ್ಠಿಕರು. ಇವರ ಸನ್ನಿಧಿಗೆ ಅನೇಕ ಮಹಾತ್ಮರು ಬಂದು ಬ್ರಹ್ಮವಿದ್ಯಾ ಚರ್ಚೆಯನ್ನು ಮಾಡಿ ಹೋಗುತ್ತಿದ್ದರು.

ಬೇಸಿಗೆಯಲ್ಲಿ ಶ್ರೀಗಳವರು ಇಲ್ಲಿಯೇ ನಿಷ್ಠೆಯಿಂದಿರುತ್ತ ಶ್ರೀ ಜಗದ್ಗುರು ಶಂಕರ ಚರಿತ್ರೆಯನ್ನು ಶಾಸ್ತ್ರೀಯವಾಗಿ ರಚಿಸಿದರು. ಆಗಾಗ ಶ್ರೀ ಭಾರತೀ ಸ್ವಾಮಿಗಳವರು ನಮ್ಮ ಸ್ವಾಮಿಗಳವರೊಡನೆ ಮಾತನಾಡಿದ ಮಾತುಗಳು "ಸ್ವಾಮೀ ! ಅದ್ವೈತವು ಮಾತುಗಳಲ್ಲಿಲ್ಲ, ಅದು ಆಚರಣೀಯವಾದ ಅನುಭವ. ಆ ಸ್ಥಿತಿಯನ್ನು ಹೊಂದಿದಾಗ ಆಚರಣೆ ಅನುಷ್ಠಾನವೆಂಬುದು ತನ್ನಷ್ಟಕ್ಕೆ ತಾನೇ ಉಂಟಾಗುತ್ತದೆ. ಶುಷ್ಕವಾದ ಸಾವಿರ ಮಾತುಗಳಿಗಿಂತಲೂ ಅನುಷ್ಠಾನ ಸಂಪನ್ನವಾದ ಅನುಭವದ ಒಂದು ಮಾತು ಸಾಕು. ಅದು ಮಾನವನನ್ನು ಪರಿವರ್ತನೆಗೊಳಿಸುತ್ತೆ; ಹಿತವಾಗುತ್ತೆ.

ಭಕ್ತಿ ಮತವು ಉಪಾಯದಿಂವ ವಿರೋಧವಿಲ್ಲದೆ ಅಪಾಯವನ್ನು ದೂರೀಕರಿಸುತ್ತೆ. ಜ್ಞಾನ ಮತವು ಅಪಾಯವನ್ನು ಎದುರಿಸಿ ವಿಮರ್ಶಿಸಿ ಮತ್ತು ಇನ್ನಾವುದನ್ನು ಇಲ್ಲದಂತೆ ನಿವೃತ್ತಿ ಮಾಡುತ್ತದೆ.

ಸ್ವಾಮೀಜೀ ! ಲೋಕದಲ್ಲಿ ಕೆಲವರು ಆಚಾರಹೀನರು ಅದ್ವೈತವನ್ನು ತಮಗೆ ಬೇಕಾದಂತೆ ಆಚಾರವಿಚಾರಗಳಿಗೆ ಸರಿಮಾಡಿಕೊಳ್ಳುವ ಪದ್ಧತಿಗೆ ಬೋಧೆಗಳನ್ನು ಕಲ್ಪಿಸುತ್ತಾರೆ. ಇಂಥಾ ಮಾತುಗಳನ್ನು ಜಾಗ್ರತೆಯಿಂದ ಕಂಡು ಅವುಗಳ ಸಾಂಗತ್ಯದಿಂದ ದೂರಾಗಬೇಕು. ಇಲ್ಲವಾದರೆ ಆ ಪ್ರಕಾರವಾದ ಒಂದು ಧೈರ್ಯ ಉಂಟಾಗಿ ನಿಜಾದರ್ಶ ಸ್ಥಿತಿಯಿಂದ ದೂರ ಮಾಡುತ್ತೆ.

ಸ್ವಾಮೀಜೀ ! ಸತ್ಯವಸ್ತು ಸಂದರ್ಶನಾನುಭವದ ಬಲದಿಂದ ಇನ್ನಾತನಿಗೆ ಎಂಥಾ ಸಂದರ್ಭದಲ್ಲಿಯೂ ತನ್ನ ಪ್ರಸಾದ ಗುಣವು ಮಾರ್ಪಾಡಾಗುವುದಿಲ್ಲ; ಚಿತ್ತ ಶಾಂತಿ ಶಿಥಿಲವಾಗುವುದಿಲ್ಲ; ಮನಃ ಕಮಲವು ಬಾಡುವುದಿಲ್ಲ; ಇದು ಸತ್ಯ ಸಂದರ್ಶಿಯ ಘನತೆ !

ಶಾಸ್ತ್ರ ಪ್ರವಚನ ಸಮಯದಲ್ಲಿ ಪ್ರವಕ್ತನು ಏನೋ ಉಪಕ್ರಮಿಸಿದ ವಿಷಯವನ್ನು ಬಿಟ್ಟು, ಮತ್ತೇನೋ ಮಾತನಾಡುವ ಪ್ರಸಂಗಗಳು ಕೂಡಾ ಬರುತ್ತವೆ. ಆದ್ದರಿಂದ ಜಾಗ್ರತೆಯಾಗಿ ಆರಂಭದಲ್ಲಿ ತನ್ನ ಇಷ್ಟ ದೈವವಾದ ಗುರುತತ್ವವನ್ನು ಸ್ಮರಿಸಿ ದೈವಮಯ ಭಾವನೆಯಿಂದ ಉಪಕ್ರಮಿಸಬೇಕು. ಉಪನ್ಯಾಸ ವಿಷಯದಲ್ಲಿ ಯಾವ ವಿಧವಾದ ವ್ಯಕ್ತಿಗತ ಭಾವವು, ಇನ್ನಾವುದೋ ಉದ್ದೇಶಗಳನ್ನು ಅಲ್ಲಿ ಸಂಧಿಸಿ ಹೇಳುವದನ್ನು ಮಾಡಬಾರದು. ಅದರಿಂದ ಜನಗಳಲ್ಲಿ ನಿಜವಾದ ಶ್ರದ್ಧೆಯುಂಟಾಗುವದಿಲ್ಲ, ತಾನು ಉಪಕ್ರಮಿಸಿದ ವಿಷಯದಲ್ಲಿಯೇ ಹೋಗಬೇಕು. ಹಾಗಿದ್ದರೆ ವಿಷಯ ಸಂಪೂರ್ಣವಾಗಿರುತ್ತದೆ.

ಶ್ರೀ ಶಂಕರಾನಂದ ಭಾರತೀ ಸ್ವಾಮಿ ಆಶ್ರಮದಲ್ಲಿ ಕೆಲವು ಕಾಲವಿದ್ದು ಅನಂತರ ಚಾತುರ್ಮಾಸ್ಯ ಮಹಾವ್ರತಾಚರಣೆಗಾಗಿ ಪೆನಕಚರ್ಲ ಶ್ರೀ ಚಿದಂಬರಾಶ್ರಮಕ್ಕೆ ಬಂದರು.

## ಶ್ರೀ ಚಿದಂಬರಾಶ್ರಮ
## 7 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ–1951 ಸಂ ||

ಈ ಆಶ್ರಮವು ಮಹಾಸಿದ್ಧ ಪುರುಷರೂ ಬ್ರಹ್ಮನಿಷ್ಠರೂ ಆದ ಶ್ರೀ ಚಿದಂಬರ ಸ್ವಾಮಿಗಳವರ ಅಧಿಷ್ಠಾನವುಳ್ಳ ಪುಣ್ಯಸ್ಥಳ. ಇವರು ಚರಿತ್ರ ಪ್ರಸಿದ್ಧರಾದ ಮಹನೀಯರು. ಶ್ರೀ ನಾರಪ್ಪ ಸ್ವಾಮಿಗಳೆಂಬುವವರು ಇದರ ಜೀರ್ಣೋದ್ಧಾರವನ್ನು ಮಾಡಿ ವ್ಯವಸ್ಥಾಪಕರಾಗಿ ಇಲ್ಲಿದ್ದರು. ನಮ್ಮ ಶ್ರೀಗಳವರಿಗೆ ವ್ರತಾಚರಣೆಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ವ್ಯವಸ್ಥೆಗೊಳಿಸಿದರು. ಇಂಥಾ ಪಾವನವಾದ ಸ್ಥಳದಲ್ಲಿ ಶ್ರೀಗಳವರು ಅನನ್ಯ ಭಕ್ತಿ ಭಾವದಿಂದ 7 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತವನ್ನು ಪಿನಾಕಿನೀ ನದಿಯಲ್ಲಿ ಸ್ನಾನವಾಚರಿಸಿ ಕಲಶ ಸ್ಥಾಪನೆಯನ್ನು ಗೈದು ಯಥಾ ಶಾಸ್ತ್ರವಾಗಿ ಮೊದಲಿನಂತೆ ಶಿವಸಂಕಲ್ಪದಿಂದ ಪ್ರಾರಂಭಿಸಿದರು.

ಈ 4 ತಿಂಗಳು ಮೌನ ಮತ್ತು ಅಪಕ್ವಾಹಾರ ನಿಯಮ ಯಥಾರೀತಿಯಾಗಿತ್ತು. ಅಲ್ಲಿಯ ಭಕ್ತರ ಪ್ರಾರ್ಥನಾನುಸಾರವಾಗಿ ದಿನಕ್ಕೆ 1 ಗಂಟೆ ಹೊತ್ತು ಶಾಸ್ತ್ರ ಪ್ರವಚನ ಮಾಡುವದು ಅನಿವಾರ್ಯವಾಯಿತು. ಇನ್ನು ಮಿಕ್ಕ ಸಮಯಗಳಲ್ಲಿ ಶ್ರೀಗಳವರು ತಮ್ಮಲ್ಲಿ ತಾವಿದ್ದರು. ಆ ವ್ರತದಲ್ಲಿ ಭಾದ್ರಪದ ಶುದ್ಧ ಪಾಡ್ಯಮಿ 12–8–51 ದಿನಾಂಕ ಉಷಃ ಕಾಲದಲ್ಲಿ ಅಜಾನುಬಾಹುವುಳ್ಳ ಜಟಾಮಕುಟಧಾರಿಗಳಾದ ಯೋಗಿ

ಪುಂಗವರು ಸ್ವಾಮಿಗಳವರು ನಿಷ್ಠೆಯಲ್ಲಿದ್ದಾಗ ಮುಂದೆ ನಿಂತಂತೆ ಕಾಣಿಸಿತು. ಅವರನ್ನು ನೋಡಿ ಸ್ವಾಮಿಗಳವರು ನಮಸ್ಕರಿಸಿದರು. ಆ ಯೋಗಿ ಪುಂಗವರು, "ಸಂಗವನ್ನು ಬಿಡಬಹುದು, ಸಂಗ ನಿವೃತ್ತಿ ಸ್ವರೂಪರೇ ನೀವು" ಎಂದು ಅಂದರು. ಮತ್ತೊ ನೋಡಲು ಅಲ್ಲಿ ಯಾರೂ ಇರಲಿಲ್ಲ. ಮತ್ತೊಂದು ದಿನ 2-10-1951 ಮಧ್ಯಾಹ್ನ 1-30 ಸಮಯದಲ್ಲಿ ಸ್ವಾಮಿಗಳವರು ಗ್ರಂಥವನ್ನು ನೋಡುತ್ತಿರಲು, ಭಗವಾನ್ ಶ್ರೀ ರಮಣ ಮಹರ್ಷಿಗಳವರು ಸಹಜವಾಗಿ ತಮ್ಮ ತಲೆಯನ್ನು ಕದಲಿ ಸುತ್ತಾ ಸ್ವಾಮಿಗಳವರ ಮುಂದೆ ನಿಂತಿದ್ದರು. ಸ್ವಾಮಿಗಳವರು ಭಕ್ತಿಯಿಂದ ನಮಸ್ಕಾರ ಮಾಡಿ ಆ-ಊ ಎಂದು ಎದ್ದು ನಿಲ್ಲುವುದರೊಳಗಾಗಿ ಮತ್ತಾರೂ ಅಲ್ಲಿರಲಿಲ್ಲ. ಈ ವಿಧವಾಗಿ ಆ ಸ್ಥಳದಲ್ಲಿ ಇಂಥಾ ಪವಿತ್ರ ಸಂದರ್ಶನಗಳಾದವು. ಉತ್ತಮ ರೀತಿ ಯಿಂದ ಮಹಾವ್ರತವು ಅತ್ಯಂತ ಶಿವಪ್ರದವಾಗಿ ನಡೆದು ಉತ್ಸವದೊಡನೆ ಸಾಂಗ ಮಂಗಳವಾಗಿ ಪೂರ್ಣವಾಯಿತು. ಈ ಮಹಾಕಾರ್ಯದ ಮುಕ್ತಾಯಕ್ಕೆ ಗಂಜಿಗುಂಟೆ ಮಠದಿಂದ ಶ್ರೀಗಳವರ ಪೂಜ್ಯ ಗುರುದೇವರು ಅಲ್ಲಿಗೆ ದಯಮಾಡಿಸಿದ್ದರು.

## ಶ್ರೀಶೈಲ ಜಗದ್ಗುರು ಮಹಾಸನ್ನಿಧಿ

ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾಧೀಶ್ವರರು ೧೦೦೮ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಪಟ್ಟಾಭಿಷೇಕದ ದ್ವಾದಶ ವಾರ್ಷಿಕ ಮೌಕ್ತಿಕೋತ್ಸವ ಸಂದರ್ಭದಲ್ಲಿ, ನಮ್ಮ ಸ್ವಾಮಿಗಳವರನ್ನು ಆ ಕಾರ್ಯಕ್ರಮಕ್ಕೆ, ಶ್ರೀ ಜಗದ್ಗುರುಗಳ ಪೂರ್ವಾಶ್ರಮದ ಸೋದರರಾದ ಶ್ರೀಗುರು ಸಿದ್ಧಸ್ವಾಮಿಗಳು (ಶ್ರೀಗಳವರು ಕಾಶೀ ಕ್ಷೇತ್ರದಲ್ಲಿದ್ದಾಗ ಇವರು ಅಲ್ಲಿಯೇ ಗುರು ಕುಲದಲ್ಲಿದ್ದವರು M.A. ಓದುವ ವಿದ್ಯಾರ್ಥಿಗಳಾಗಿದ್ದರು.) ಗುಂತಕಲ್ಲು ಶ್ರೀ ಜಗದ್ಗುರು ಮಠಕ್ಕೆ ಬರಮಾಡಿಕೊಂಡರು.

ಶ್ರೀಗಳವರಿಗೆ ತಮ್ಮ ಪೂಜಾನುಷ್ಠಾನಗಳಿಗೆ ಅನುಕೂಲವಾಗುವಂತೆ ವಸತಿ ಯನ್ನು ಶ್ರೀ ಗುರುಭಕ್ತಳಾದ ಮೆಟ್ಟುಪಲ್ಲಿ ಮಲ್ಲಮ್ಮನವರ ನೂತನ ಭವನದಲ್ಲಿ ಏರ್ಪಾಟು ಮಾಡಿದರು. ಆ ಅಮ್ಮನವರು ಶ್ರೀ ಸ್ವಾಮಿಗಳವರನ್ನು ಅನನ್ಯ ಭಕ್ತಿ ಶ್ರದ್ಧೆಗಳಿಂದ ಎಲ್ಲಾ ವ್ಯವಸ್ಥೆಗಳನ್ನು ಮಾಡಿ ನೋಡಿಕೊಂಡರು.

ಶ್ರೀ ಜಗದ್ಗುರು ಮಹಾಸನ್ನಿಧಿಯಲ್ಲಿ ಬೃಹದ್ರೂಪವಾದ ಆ ಕಾರ್ಯಕ್ರಮಕ್ಕೆ ಅಸಂಖ್ಯಾತ ಭಕ್ತರೂ, ಪಂಡಿತರೂ, ಪಟ್ಟಭದ್ರರೂ, ಅಧಿಕಾರಿಗಳೂ, ಮಹಾತ್ಮರೂ ನೆರೆದಿದ್ದರು. ಮೂರು ದಿನಗಳು ಅಖಂಡವಾಗಿ ಕಾರ್ಯವು ನಡೆಯಿತು. ಅನೇಕ ಪಂಡಿತರೂ, ಸ್ವಾಮಿಗಳೂ ಉಪನ್ಯಸಿಸಿದರು. ನಮ್ಮ ಶ್ರೀಗಳವರು ಭಕ್ತಿ ಪುಷ್ಪಾಂಜಲಿ ಯೆನ್ನುವ ಸಂದೇಶವನ್ನು ಗುರುತತ್ತ್ವವೆಂಬ ಶೀರ್ಷಿಕೆಯ ಮೇಲೆ ಮಾತನಾಡಿದರು.

ಅನುದಿನವು ಶ್ರೀ ಜಗದ್ಗುರು ಮಹಾಸ್ವಾಮಿಗಳ ಕಡೆಯಲ್ಲಿ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ವೈದುಷ್ಯ ಪ್ರಪೂರ್ಣವಾದ ಧಾರಾ ಪ್ರವಾಹವು ಮಹಾ ಸನ್ನಿಧಿಯವರ ಪ್ರಸಾದವಾಣಿ. "ಗುಂತಕಲ್ಲು, ಆಂಧ್ರ ಕರ್ನಾಟಕಗಳ ಸಂಧಿಪೀಠ ಸೂರ್ಯ ಸಿಂಹಾಸನವು. ಎಲ್ಲಾ ದೇಶಭಾಷೆಗಳಿಗೂ ಮತಾಚಾರಗಳಿಗೂ ಜನಾಂಗ ಗಳಿಗೂ ಸಂಧಿ ಸ್ಥಾನವು. ಸ್ವಯಂ ಪ್ರಕಾಶಮಾನನಾದ ಪಕ್ಷಪಾತ ರಹಿತನಾದ ಸೂರ್ಯಭಗವಾನನು ಹೇಗೆ ಸರ್ವರಿಗೂ ಸಮನಾಗಿ ಪ್ರಕಾಶವನ್ನು ಕೊಡುತ್ತಿ ದ್ದಾನೆಯೋ ಹಾಗೆಯೇ ಶ್ರೀಶೈಲ ಜಗದ್ಗುರು ಸಂಸ್ಥಾನವು ಎಲ್ಲಾ ಜನಗಳಿಗೂ ಸರ್ವ ಸಾಮಾನ್ಯವಾಗಿ ಒಳ್ಳೆಯ ಕ್ರಿಯಾಚಾರ ವಿಚಾರ ವಿಜ್ಞಾನಗಳನ್ನು ಪ್ರಸಾದಿಸುತ್ತಿದೆ.

ದೈವ ಬಲವು ತೆರೆಮರೆಯಲ್ಲಿದ್ದ ಸೂತ್ರಧಾರಿಯಂತೆ ಅದ್ಭುತ ಕಾರ್ಯಗಳನ್ನು ಮಾಡಿಸಿ ಲೋಕಕ್ಕೆ ಆಶ್ಚರ್ಯವನ್ನುಂಟು ಮಾಡುವದು. ಅಂಥಾ ದೈವವನ್ನು ಸದಾ ಕಾಣುವ ಕಣ್ಣನ್ನು ದಯಪಾಲಿಸಲಿ ! ಆದಕ್ಕಾಗಿಯೇ ಈ ಅದ್ಭುತ ಪ್ರದರ್ಶನಗಳು ಕಾರ್ಯಗಳು.

ಈಶ್ವರಾನುಗ್ರಹದಿಂದ ಉನ್ನತಿಯನ್ನು ಪಡೆಯಬೇಕೆಂಬುವ ಯಾವ ವ್ಯಕ್ತಿ ಯನ್ನು ದೂರೀಕರಿಸಬಾರದು. ಆತನ ಅಭ್ಯುದಯಕ್ಕೆ ಅಡ್ಡಿಯಾಗಬಾರದು. ಅಜಾತ ಶತ್ರುವೆಂದೆನಿಸಿಕೊಂಡ ಯಾವ ಮಹನೀಯನು ಜನಿಸಿದಂತಿಲ್ಲ. ಇದು ಮಾಯಾಮಯವಾದ ಜಗದ್ವಿಧಾನ. ಆದ್ದರಿಂದ ಮನುಜನು ಮಾಯಾ ಕಾರ್ಯದಲ್ಲಿ ಭ್ರಮೆ ಹೊಂದದೆ, ಇದರ ಸ್ವಭಾವವನ್ನು ಅರಿತು ಭಗವದ್ಬುದ್ಧಿಯಿಂದ ಆಚರಿಸಿದರೆ, ಮಿಕ್ಕ ಎಲ್ಲವನ್ನು ಶ್ರೀಶೈಲ ಮಲ್ಲಿನಾಥನೇ ನೋಡಿಕೊಳ್ಳುವನು. ಆತನ ಕೃಪೆಯಿಂದ ಎಲ್ಲವೂ ಸುರಕ್ಷಿತವು; ಸಫಲವು. ಆ ಕೃಪೆಯಿಲ್ಲದೊಡೆ ರಕ್ಷಕರು ಯಾರೂ ಆಗರು. ಅಂಥಾ ಸಮರ್ಥರು ಯಾರೂ ಇಲ್ಲ. ಆದ್ದರಿಂದ ದಯಾಘನನಾದ ಪರಮಾತ್ಮನನ್ನು ಸ್ಮರಿಸುತ್ತಾ ನಮ್ಮ ಕರ್ತವ್ಯ ಕರ್ಮಗಳನ್ನು ಪಾಲಿಸಬೇಕು............".

## ಶ್ರೀ ಶಿವಲಿಂಗಾಶ್ರಮ

## ೮ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ 1952 ಸಂ||

ಶ್ರೀಗಳವರಿಗೆ ಅತ್ಯಂತ ಪ್ರೀತಿ ಪಾತ್ರವಾದ ಈ ಆಶ್ರಮದಲ್ಲಿ ಭಕ್ತಾದಿ ಗಳೆಲ್ಲರೂ ಸಂತೋಷವನ್ನು ಹೊಂದಿ ಯಥಾ ವಿಧಿನಿಯಮ ನಿಷ್ಠೆಗಳಿಂದ ಈ ಚಾತು ರ್ಮಾಸ್ಯ ಮಹಾವ್ರತವನ್ನು ನಡೆಯಿಸಿದರು. ಈ 4 ತಿಂಗಳು ಸಂಪೂರ್ಣ ಮೌನ ಮತ್ತು ಅಪಕ್ವಾಹಾರ ನಿಯಮದಿಂದ, ಶ್ರೀಗುರ್ವನುಗ್ರಹದಿಂದ ಮಹಾವ್ರತವು ಸಾಂಗಸಂಗಳವಾಗಿ ನಡೆದು ಪೂರ್ಣವಾಯಿತು. ಶ್ರೀ ಸಂಗಮೇಶ್ವರ ಕ್ಷೇತ್ರಕ್ಕೆ ಯಾತ್ರಾ ರೂಪವಾಗಿ ಎಲ್ಲರೂ ಹೋಗಿ ಬಂದರು. ಅಲ್ಲಿಯೇ ದೀಕ್ಷಾ ವಿರಮಣ ವಾಯಿತು.

# ಬೆಂಗಳೂರು ಬ್ರಹ್ಮ ವಿದ್ಯಾಶ್ರಮ ನಿವಾಸ

ಬ್ರಹ್ಮ ವಿದ್ಯಾಶ್ರಮದ ಅಧ್ಯಕ್ಷರಾದ ಶ್ರೋತ್ರಿಯ ಬ್ರಹ್ಮನಿಷ್ಠರು ಸುರಪುರ ಶ್ರೀ ಶಂಕರಶಾಸ್ತ್ರಿ ಸ್ವಾಮಿಗಳವರು, ನಮ್ಮ ಸ್ವಾಮಿಗಳವರನ್ನು ಬೆಂಗಳೂರಿಗೆ ಬರ ಮಾಡಿಕೊಂಡು, ತಾವು ಇಲ್ಲಿಯೇ ಇದ್ದು ತಮ್ಮ ನಿತ್ಯನಿಯಮಾನುಷ್ಠಾನ ಪೂಜಾದಿ ಗಳೊಂದಿಗೆ ಇಲ್ಲಿಯ ಜನಕ್ಕೆ ಅನುದಿನ ವಾಕ್ಯಾರ್ಥ ಶ್ರವಣಗಳನ್ನು ಮಾಡಿಸಬೇಕು. ಅದರಿಂದ ಇವರಿಗೆ ಶುಭವಾಗುತ್ತೆ. ಇತ್ಯಾದಿಯಾಗಿ ಹೇಳಿ ಶ್ರೀ ಸ್ವಾಮಿಗಳವರು ಅಲ್ಲೇ ಇರುವ ಏರ್ಪಾಡುಗಳನ್ನು ಮಾಡಿದರು. ಆಶ್ರಮದವರು ಎಷ್ಟೋ ಭಕ್ತಿ ಭಾವನೆಗಳಿಂದ ನೋಡಿಕೊಂಡರು. ಅನುದಿನ ನೂರಾರು ಜನ ಭಕ್ತರು ಬಂದು ಗೀತಾ ಭಾಷ್ಯ ಶ್ರವಣವನ್ನು ಮಾಡುತ್ತ ಸಂತೋಷಪಡುತ್ತಿದ್ದರು. ಈ ಆಶ್ರಮದಲ್ಲಿ ಶ್ರೀಗಳವರು ಕನ್ನಡ ಭಾಷೆಯಲ್ಲಿಯೇ ಪ್ರವಚನ ಮಾಡಿದರು. ಆಶ್ರಮದಲ್ಲಿ ಅನೇಕ ಸತ್ಕರ್ಮಾಚರಣೆಗಳನ್ನು ನಡೆಯಿಸಿದರು.

ಪ್ರ : ಬ್ರಹ್ಮಯಜ್ಞವೆಂದರೇನು ?

ಉ : ವೇದೋಪನಿಷತ್ತುಗಳ ಅಧ್ಯಯನ ಅದರ ಅರ್ಥವನ್ನರಿತು ಬೋಧಿಸು ವದು ಬ್ರಹ್ಮಯಜ್ಞವೇ. 'ಸ್ವಾಧ್ಯಾಯ ಪ್ರವಚನೇನ.'

ಪ್ರ : ನಿಷ್ಠೆ ಏಕಾಂತವೆಂದರೇನು ಸ್ವಾಮೀ ?

ಉ : ಸ್ವಸ್ವರೂಪವಾದ ವಸ್ತುದೃಷ್ಟಿಯೇ ಏಕಾಂತ. ಮನಸ್ಸು ವೃತ್ತಿ ರೂಪಾಕೃತಿ ಹೊಂದದೆ ಅದನ್ನು ಒಂದೇ ಸ್ಥಾನದಲ್ಲಿರಿಸುವದು. ಆತ್ಮವು ಬ್ರಹ್ಮವೇ ಎಂಬ ಸ್ಥಿತಿಯೇ ನಿಷ್ಠೆ. ಅಲ್ಲಿ ವೃತ್ತಿಯು ಬಾಧಿಸಲ್ಪಟ್ಟು ನಿಜ ನಿಷ್ಠೆಯಾಗುವುದು, "ನಿಷ್ಠಾ ಜ್ಞಾನಸ್ಯ ಯಾ ಪರಾ"

ಪ್ರ : ಸ್ವಾಮೀ, ವೇದಾಂತ ಸಿದ್ಧಾಂತದಲ್ಲಿ ಅಜಾತವಾದ, ದೃಷ್ಟಿ–ಸೃಷ್ಟಿವಾದ, ಸೃಷ್ಟಿ–ದೃಷ್ಟಿವಾದ ಎನ್ನುತ್ತಾರಲ್ಲಾ, ಏನು ?

ಉ : ವಿದ್ವದನುಭವದಿಂದ ಎಲ್ಲಿ ಯಾವ ದೃಶ್ಯದ ಅಸ್ತಿತ್ವವಿಲ್ಲದೆ ಒಂದೇ ಪರಮಾರ್ಥ ಸತ್ತೆಯು ಅಂಗೀಕೃತವಾಗುವದೋ ಅದು ಅಜಾತವಾದ. ಇನ್ನು ಪಾರಮಾರ್ಥಿಕ ಪ್ರಾತಿಭಾಸಿಕ ಸತ್ತೆಗಳನ್ನು ಎಲ್ಲಿ ಅಂಗೀಕರಿಸುತ್ತಾರೋ, ಅದು ದೃಷ್ಟಿ ಸೃಷ್ಟಿವಾದ. ಪಾರಮಾರ್ಥಿಕ ಪ್ರಾತಿಭಾಸಿಕ ವ್ಯವಹಾರಿಕವೆಂಬ ಸತ್ತಾತ್ರಯ ವೆಲ್ಲಿ ಅಂಗೀಕಾರವಾಗುವುದೋ, ಅದನ್ನು ಸೃಷ್ಟಿ ದೃಷ್ಟಿವಾದ ಎನ್ನುತ್ತಾರೆ. ಇವೆಲ್ಲವೂ ನಿನಗೇಕಪ್ಪಾ. ಒಂದೇ ಸದ್ರೂಪವಾದ ಬ್ರಹ್ಮವೇ ಇದೆ. ಅದು ನೀನಾ ಗಿದ್ದೀಯೆ. ಅಧಿಕಾರಿ ಭೇದದಿಂದ ಹೀಗೆಲ್ಲ ಹೇಳಲ್ಪಟ್ಟಿದೆ.

# 9ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ
# ಬೆಂಗಳೂರು 1953 ಸಂ||

ಶ್ರೀ ವಿಜಯನಾಮ ಸಂ|| ರ ಶ್ರೀ ಚಾತುರ್ಮಾಸ್ಯ ಮಹಾವ್ರತವು, ಬೆಂಗಳೂರು ಬ್ರಹ್ಮವಿದ್ಯಾಶ್ರಮದಲ್ಲಿ ಬ್ರಹ್ಮನಿಷ್ಠಾ ಸಂಪನ್ನವಾಗಿ ಸದಾಚಾರ ವಿಚಾರಗಳೊಡನೆ ವಿಧ್ಯುಕ್ತ ರೀತಿ ಪ್ರಾರಂಭಿಸಲ್ಪಟ್ಟು ಅತ್ಯಂತ ಆನಂದವಾಗಿ ನಡೆಯಿತು. (ಆಯಾ ವರ್ಷದಲ್ಲಿ ಚಾತುರ್ಮಾಸ್ಯ ಬಂದಾಗ ಅಧಿಕ ಮಾಸವಿದ್ದರೆ 5 ತಿಂಗಳು ವ್ರತವಾಗುತ್ತೆಂದು ಗ್ರಹಿಸಬೇಕು.)

ಪ್ರ : ವ್ಯಾಪಕವಾದ ಬ್ರಹ್ಮವು ಸೃಷ್ಟಿಯಲ್ಲಿ ಪ್ರವೇಶಿಸಿತು ಎಂಬುವ ಪ್ರವೇಶ ಶ್ರುತಿಯ ಅರ್ಥವೇನು ಸ್ವಾಮೀ ?

ಉ : ಪ್ರವೇಶವೆಂದರೆ ಪ್ರತಿಬಿಂಬವೆಂತಲೂ ಅಭಿವ್ಯಕ್ತವಾಯಿತೆಂತಲೂ ಮಾತ್ರ ಗ್ರಹಿಸಬೇಕು. ಮನೆಯಲ್ಲೊಬ್ಬನು ಪ್ರವೇಶಿಸಿದನು ಅಂದ ಹಾಗೆ ಪ್ರವೇಶವಾದಂತಲ್ಲ. ಅಲ್ಲಿ ಅಭಿವ್ಯಕ್ತವಾಯಿತು ಎಂದು ಮಾತ್ರ ಗ್ರಹಿಸಬೇಕು. ಅದು ದೇಶ ಕಾಲ ವಸ್ತು ಪರಿಚ್ಛೇದ ರಹಿತವಾದ ಪೂರ್ಣ ವಸ್ತುವಾಗಿದೆ.

ಪ್ರ : ವೃತ್ತಿಯ ಪ್ರಯೋಜನವೇನು ಸ್ವಾಮೀ ?

ಉ : ಆವರಣ ಭಂಗ. ಈ ವಿಷಯವಾಗಿ ಸ್ವಾಮಿಗಳವರು ಬೃಹದ್ರೂಪದಿಂದ 'ವೃತ್ತಿ ರತ್ನಾವಳಿ' ಗ್ರಂಥ ಮೂಲಕ ವ್ಯಾಖ್ಯೆಯನ್ನು ಮಾಡಿದರು.

ಈ ಆಶ್ರಮದಲ್ಲಿ ಶ್ರೀಗಳವರಿದ್ದ ಕಾಲದಲ್ಲಿ ಪ್ರಸ್ಥಾನತ್ರಯದಲ್ಲಿ ಕೆಲವು ಭಾಗಗಳನ್ನು ವಿದಿತಪಡಿಸಿದರು. ನೈಷ್ಕರ್ಮ್ಯಸಿದ್ಧಿ ಗ್ರಂಥವನ್ನು ಶ್ರವಣ ಮಾಡಿಸಿದರು. ಈ ಚಾತುರ್ಮಾಸ್ಯದಲ್ಲಿಯೂ ಶ್ರೀಗಳವರು ಮೌನ ಮತ್ತು ಅಪಕ್ವಾಹಾರಗಳಿಂದಿದ್ದು 2 ಹೊತ್ತು ಪ್ರವಚನವನ್ನು ನಡೆಸಿದರು. ಈ ಸಂದರ್ಭದಲ್ಲಿಯೇ ತಾತ್ವಿಕ ಕವಿತಾ ವಿಶಾರದ ಶ್ರೀ ಸಹಜಾನಂದ ಸ್ವಾಮಿಗಳೆನ್ನುವವರು ಭಕ್ತಿಪೂರ್ವಕವಾಗಿ ಪದ್ಯ ಪಂಚರತ್ನ ಮಾಲೆಯನ್ನು ಸಮರ್ಪಿಸಿಕೊಂಡರು. ಇನ್ನಿತರ ಕವಿಗಳು ಹೀಗೆ ಮಾಡಿದರು :

## ತ್ಯಾಗರಾಜಸ್ವಾಮಿ ಮೂರ್ತಿ ಪ್ರತಿಷ್ಠೆ

ಶ್ರೀಗಳವರು ಬೆಂಗಳೂರು ಆಶ್ರಮದಲ್ಲಿ ಒಂದೆರಡು ವರ್ಷ ಪ್ರಶಾಂತವಾಗಿದ್ದು ಮಹಾವ್ರತ ಪೂರ್ಣಾನಂತರ, ತ್ಯಾಗರಾಜಸ್ವಾಮಿ ಆಲಯದಲ್ಲಿ ಮೂರ್ತಿ ಪ್ರತಿಷ್ಠಾ ಕಾರ್ಯಕ್ರಮಕ್ಕಾಗಿ ನಂದ್ಯಾಲಿಗೆ ಬಂದರು. ಆಗ್ಗೆ ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳವರು ಆ ಕಾರ್ಯಕ್ಕೆ ದಯಮಾಡಿಸಿದ್ದರು. ಇನ್ನಿತರ ಮಹಾತ್ಮರೂ ಬಂದಿದ್ದರು. ಕಾರ್ಯಕ್ರಮವು ಮಹಾತ್ಮರ ಉಪನ್ಯಾಸಗಳೊಡನೆ ಮಹದಾನಂದಪ್ರದವಾಗಿ ನಡೆದು ಪೂರ್ಣವಾಯಿತು. ಶ್ರೀಗಳವರು ಅಲ್ಲೇ ತಮ್ಮ ನಿಯಮನಿಷ್ಠೆಗಳಿಂದ ಪ್ರಶಾಂತವಾಗಿದ್ದರು.

# ಶ್ರೀಗುರು ನಿರ್ಯಾಣ

ಇಷ್ಟರಲ್ಲಿ ಗಂಜಿಗುಂಟೆ ಆಶ್ರಮದಿಂದ ಒಂದು ಪತ್ರ ಬಂತು. ನಮ್ಮ ಚರಿತ್ರ ನಾಯಕರ ಸದ್ಗುರುಗಳು ಪೂಜ್ಯಪಾದ ಶ್ರೀಶ್ರೀಶ್ರೀ ಸದಾನಂದ ಸ್ವಾಮಿಗಳವರು ಕಾರ್ತಿಕ ಬಹುಳ ಏಕಾದಶಿ (1-12-53) ಮಂಗಳವಾರ ಮಹಾ ಸಮಾಧಿಯನ್ನು ಹೊಂದಿದರು. ಶ್ರೋ ॥ಬ್ರ॥ ಸುರಪುರ ಶ್ರೀ ಶಂಕರಾನಂದ ಸ್ವಾಮಿಗಳವರಿಂದ ಶಾಸ್ತ್ರೀಯವಾಗಿ ಮುಂದಿನ ಎಲ್ಲಾ ಕಾರ್ಯಗಳು ನಡೆದವು. ಆ ಸಮಯಕ್ಕೆ ತಮಗೆ ತಿಳುಹಿಸಲು ಅವಕಾಶವಾಗಲಿಲ್ಲವೆಂತಲೂ, ಮುಂದೆ ಮಾರ್ಗಶಿರ ಶುದ್ಧ ಪೂರ್ಣಿಮ ಗುರು ಮಹಾರಾಧನೆ ಮಂಡಲ ಕಾರ್ಯಕ್ರಮವಿದೆಯೆಂತಲೂ, ಅಲ್ಲಿಯ ಎಲ್ಲಾ ಭಕ್ತರೊಡನೆ ತಾವು ಗಂಜಿಗುಂಟೆ ಮಠಕ್ಕೆ ದಯಮಾಡಿಸಬೇಕೆಂದು ಆ ಪತ್ರದಲ್ಲಿ ಬರೆದಿದ್ದರು. ಇದನ್ನು ನೋಡಿದ ಕೂಡಲೇ ಸೂರ್ಯನು ಅಸ್ತಮಿಸಲು ಅಂಧಕಾರ ಆವೃತವಾದಂತೆ, ಶ್ರೀಗಳವರ ಹೃದಯವು ದುಃಖಾವೃತವಾಯಿತು. ಅಶ್ರುಧಾರೆಗಳು ತಮ್ಮಷ್ಟಕ್ಕೆ ತಾವೇ ಪ್ರವಹಿಸಿದವು. ಏನು ಮಾಡಲು ತಿಳಿಯದೆ ಸ್ತಬ್ಧರಾಗಿ ಭಾವ ಸಮಾಧಿಯಿಂದ ಗುರುಮೂರ್ತಿಯನ್ನು ಹೃದಯ ಫಲಕದಲ್ಲಿ ಭಾವಿಸಿ ಪೂಜಿಸಿದರು. ಒಂದು ಗಂಟೆಯಾದ ಮೇಲೆ ಸ್ವಲ್ಪ ಚೇತರಿಸಿಕೊಂಡು ಹೊರಗೆ ನೋಡಿದರು. ಎಲ್ಲವೂ ಶೂನ್ಯವಾಗಿ ಕಾಣಿಸಿತು.

ಮಾರನೆಯ ದಿನ ಸಾಯಂ ಸಮಯಕ್ಕೆ ಎಲ್ಲಾ ಭಕ್ತರು ಶ್ರೀ ತ್ಯಾಗರಾಜ ಕುಟೀರದಲ್ಲಿ ಸೇರಿದರು. ಶ್ರೀಗಳವರು ಬಾಧೆಯಿಂದ ಗುರುಭಕ್ತಿಯುಕ್ತವಾದ ಈ ಕೆಳಗಿನ ವಿಷಯಗಳನ್ನು ಪ್ರವಚಿಸಿದರು.

ಗುರುದೇವರು ಇಷ್ಟರವರೆಗೂ ಒಂದು ರೂಪವಾಗಿ ಕಾಣಿಸುತ್ತಿದ್ದರು. ಈಗ ಅನಂತ ರೂಪಗಳಾಗಿ ಸರ್ವಮಯನಾಗಿ ಭಾಸಿಸುತ್ತಿದ್ದಾರೆ. ಆದರೂ ಆ ಮಹನೀಯ ಮೂರ್ತಿಯ ನಾಮರೂಪಗಳು ಅವ್ಯಕ್ತವಾದವು. ಗುರುಸ್ವರೂಪವು ಅಖಂಡಾದ್ವಿತೀಯವಾಗಿ ಬೆಳಗುತ್ತಲಿದೆಯೆಂದು ಸ್ಮರಿಸುತ್ತಾ, ಧ್ಯಾನಮಗ್ನರಾಗಿ ತೂಷ್ಣೀಂ ಸ್ಥಿತಿಯಿಂದ ಎಲ್ಲರೂ ಅರ್ಧ ಗಂಟೆಯ ಹೊತ್ತು ಸುಮ್ಮನಿದ್ದರು.

"ಮನ್ನಾಥಃ ಶ್ರೀ ಜಗನ್ನಾಥೋ ಮದ್ಗುರುಃ ಶ್ರೀ ಜಗದ್ಗುರುಃ ।
ಸ್ವಾತ್ಮೈವ ಸರ್ವಭೂತಾತ್ಮಾ ತಸ್ಮೈ ಶ್ರೀಗುರವೇ ನಮಃ ॥
ಪತಿಹೀನ ಯಥಾ ನಾರೀ ಮಾತೃಹೀನೋ ಯಥಾ ಶಿಶುಃ ।
ಗುರುಹೀನ ಸ್ತಥಾ ಪ್ರಾಣೀ ತಸ್ಯ ಜನ್ಮ ನಿರರ್ಥಕಮ್ ॥"

ಹೀಗೆಂಬ ಗುರುಗೀತಾ ವಚನವನ್ನು ಉದಹರಿಸುತ್ತಾ ನಮ್ಮ ಗುರುದೇವರೇ ಜಗನ್ನಾಥನು; ಆ ಗುರುವೇ ಜಗದ್ಗುರುವು. ಆತ್ಮ ಸ್ವರೂಪದಿಂದ ಸರ್ವಭೂತಾತ್ಮನಾಗಿರುವ ಶ್ರೀಗುರುವಿಗೆ ನಮಸ್ಕಾರ. ಪತಿಯಿಲ್ಲದ ಸತಿ, ತಾಯಿಯಿಲ್ಲದ ಮಗು, ಗುರುವಿಲ್ಲದ ಮನುಜನ ಜನ್ಮ ನಿರರ್ಥಕವಾದ್ದರಿಂದ, ಆತ್ಮೋನ್ನತಿಯನ್ನು ಪಡೆಯಲಿಚ್ಛಿಸುವ ಮುಮುಕ್ಷುಗಳಿಗೆ ಗುರುವು ಹೆತ್ತ ತಾಯಿ ಎನ್ನಬಹುದು. ತಾಯಿಯ ಹಾಲು ಇಲ್ಲದೆ ಹೋದರೆ ಶಿಶುವಿಗೆ ಬಲ ಉಂಟಾಗದು. ಹಾಗೇ ಗುರುವಿಲ್ಲದ ಮನುಜನ ಆತ್ಮ ವಿಕಸಿಸದು; ಹೃದಯ ಗ್ರಂಥಿಗಳು ಬಿಚ್ಚಿ ಹೋಗವು; ನಿಜಸುಖವು ಬಾರದು; ಉತ್ತಮಾದರ್ಶ ಜೀವನ ದೊರೆಯದು; ಅಜರಾಮರತ್ವ ಸ್ಥಿತಿಯುಂಟಾಗದು. ಆದ್ದರಿಂದ ಎಲ್ಲಾ ವಿಧದಿಂದಲೂ ಪ್ರತಿ ಪ್ರಾಣಿಗೂ ಗುರುವು ಅತ್ಯವಶ್ಯಕ. ಆ ಗುರುದೇವರಿಗೆ ಪುನಃ ಪುನಃ ಭಕ್ತಿಪೂರ್ವಕ ನಮ್ಮ ಪ್ರಣಾಮಗಳು.

"ದುರ್ಲಭೋ ವಿಷಯ ತ್ಯಾಗಃ ದುರ್ಲಭಂ ತತ್ತ್ವದರ್ಶನಮ್ ।
ದುರ್ಲಭಂ ಸಹಜಾವಸ್ಥಾ ಸದ್ಗುರೋಃ ಕರುಣಾಂ ವಿನಾ ॥

ಗುರುದೇವರ ಕರುಣಾಮೃತ ಧಾರೆಗಳು (ಪ್ರಬೋಧೆ) ಇಲ್ಲದೇ ಹೋದರೆ ವಿಷಯ ತ್ಯಾಗವಾಗಲಿ, ತತ್ವದರ್ಶನವಾಗಲಿ, ಜೀವಿತದ ಚರಮ ಲಕ್ಷ್ಯವಾದ ಸಹಜಾವಸ್ಥೆಯಾಗಲಿ ಉಂಟಾಗದು. ಆದ್ದರಿಂದ ಗುರುದೇವರು ಮೊದಲು ತಾಯಿಯಾಗಿ ಆಧ್ಯಾತ್ಮಿಕ ಬಲವನ್ನು ಕೊಡುವನು. ಅನಂತರ 'ನ ಗುರೋಃ ಸದೃಶಃ ಪಿತಾ' ಅಂದ ಹಾಗೆ ಗುರುವಿಗೆ ಸಮನಾದ ತಂದೆ ಇಲ್ಲ. ಕಾರಣ "ಹರಿಯನ್ನು ಸೇರೆಂದು ಹೇಳುವ ತಂದೆಯೇ ತಂದೆ" ಎಂಬುದಾಗಿ ಭಾಗವತೋಕ್ತಿಯಿದೆ.

ಗುರುದೇವರು ಮೊದಲು ತಾಯಿಯಾಗಿದ್ದು ಬಲವನ್ನು ಕೊಟ್ಟು, ಅನಂತರ ತಂದೆಯಾಗಿ ಒಳ್ಳೆಯ ಆಚಾರ ವಿಚಾರಗಳನ್ನು ಕಲಿಸಿ, ಆ ತಂದೆಯಾದವನು ತಾನಾಚರಿಸಿದ ಪದ್ಧತಿಗಳಲ್ಲಿ ಮಗನನ್ನು ಹೇಗೆ ನಿಯಮಿಸುವನೋ, ಹಾಗೆಯೇ ಗುರುದೇವರು ತಾನಾಚರಿಸಿ ಅನುಭವಿಸುವ ಬ್ರಾಹ್ಮೀ ಸ್ಥಿತಿಯನ್ನು ಶಿಷ್ಯನಿಗೆ ಭೋಧಿಸಿ ಆ ಅನುಭವವನ್ನು ಪಡೆದು ಆಚರಿಸುವಂತೆ ಮಾಡುವನು. ಆದ್ದರಿಂದಲೇ

"ಆಚಿನೋತಿ ಹಿ ಶಾಸ್ತ್ರಾಣಿ ಆಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾತಸ್ಮಾದಾಚಾರ್ಯ ಉಚ್ಯತೇ ॥"

ಶಾಸ್ತ್ರಗಳನ್ನು ಅಭ್ಯಸಿಸಿ ತತ್ಪ್ರಕಾರ ತಾನಾಚರಿಸಿ ಇತರರನ್ನು ಕೂಡಾ ತಾನಾಚರಿಸುವಂತೆ ಮಾಡುವಾತನೇ ಆಚಾರ್ಯನೆನ್ನಲ್ಪಡುವನು. ಶಿಷ್ಯನಿಗೆ ಆತ್ಮಾಭ್ಯುದಯ ಶಕ್ತಿಯಿಂದ ಧೈರ್ಯ ಸ್ಥೈರ್ಯ ಸಾಮರ್ಥ್ಯಗಳನ್ನು ಕೊಟ್ಟು ಸರ್ವದಾ ತನ್ನ ಶಿಷ್ಯನು ಚೆನ್ನಾಗಿ ಪರಿಶ್ರಮಿಸಿ ಉತ್ತಮೋತ್ತಮವಾದ ಅನುಭವಗಳನ್ನು ಹೊಂದಿ ಆತ್ಮಧನವನ್ನು ಸಮುಪಾರ್ಜಿಸಿ ಅದನ್ನು ಲೋಕಕ್ಕೆ ಹಂಚಿಕೊಡಲು ತ್ಯಾಗಶೀಲನಾಗಬೇಕೆಂದು ಗುರುದೇವರು ಸದಾ ಸಂಕಲ್ಪಿಸುತ್ತಾ ಶಿಷ್ಯನ ಹಿತವನ್ನು ಬಯಸುವನು,

"ಕುಲಂ ಧನಂ ಬಲಂ ಶಾಸ್ತ್ರಂ ಭಾಂಧವಾಃ ಸೋದರಾ ಇಮೇ ।
ಮರಣೇ ನೋಪಯುಜ್ಯಂತೇ ಗುರುರೇಕೋಹಿ ತಾರಕಃ ॥"

ಅಂದಂತೆ ಐಹಿಕಗಳಾದ ಕುಲ, ಧನ, ಬಲ, ಶಾಸ್ತ್ರ, ಬಂಧು ಸೋದರ ಮುಂತಾದವುಗಳಾವೂ ಮರಣ ಸಮಯದಲ್ಲಿ ಉಪಕರಿಸವು. ಆದರೇ "ಅಹೇತುಕ ದಯಾಸಿಂಧು ಬಂಧುರಾನಮತಾಂ ಸತಾಂ" ಅನ್ನುವ ವಾಕ್ಯಾನುಸಾರ ಗುರುವು ಪರಮ ಬಂಧುವಾಗಿ ಭವಬಂಧನಗಳನ್ನು ಬಿಡಿಸುವನು. ಅನಿತ್ಯವಾದ ಸಂಸಾರಕೂಟ ದಲ್ಲಿ ಬಿದ್ದು ಹಾದಿಯನ್ನು ಕಾಣದೆ ಹೆಚ್ಚು ಕಡಿಮೆಯಾಗಿ ಹೋಗುವ ಸಮಯದಲ್ಲಿ, ಲೌಕಿಕ ವಿಷಯಗಳು ಅನಿತ್ಯಗಳೆಂದು ಹೇತು ದೃಷ್ಟಾಂತಪೂರ್ವಕ ತಿಳಿಯ ಹೇಳಿ, ವಿಷಯಾಸಕ್ತಿಯನ್ನು ಬಿಡಿಸಿ ವೈರಾಗ್ಯವನ್ನುಂಟು ಮಾಡುವ ಪರಮ ಹಿತೈಷಿ, ಮುಖ್ಯ ಬಂಧುವು ಗುರುವು. ಅಜ್ಞಾನಾಂಧಕಾರದಲ್ಲಿ ಬಿದ್ದು ಹಾದಿಯನ್ನು ತಪ್ಪಿದಾಗ ಜ್ಞಾನದೀಪವನ್ನು ಕೊಟ್ಟು ದಾರಿಯನ್ನು ತೋರಿಸುವನು. ಆಚಾರರಹಿತರಾಗಿ ಅಯೋಗ್ಯ ಜೀವನದಲ್ಲಿದ್ದಾಗ ಆದರ್ಶ ಜೀವನ ವಿಧಾನವನ್ನು ಬೋಧಿಸಿ ಅವಿವೇಕತೆಯನ್ನು ದೂರ ಮಾಡಿ ದಿವ್ಯ ಜೀವನವನ್ನು ಕೊಡುವನು. ಅನಾತ್ಮ ಭಾವಗಳಿಂದ ದರಿದ್ರರಾಗಿ ಬಾಧೆಗಳನ್ನು ಅನುಭವಿಸುವಾಗ, ತನ್ನ ಸನ್ನಿಧಿ ಮಾತ್ರದಿಂದ ದರಿದ್ರ ಕಲ್ಪನೆಗಳನ್ನು ದೂರ ಮಾಡಿ ಬ್ರಹ್ಮಭಾವ ಸಂಪತ್ತನ್ನು ಕೊಟ್ಟು ರಕ್ಷಿಸುವನು. ಇದಕ್ಕಿಂತಲು ತನ್ನ ಹಿತವನ್ನು ಬಯಸುವ ಮಹಾ ಬಂಧು ಮೂರು ಲೋಕಗಳಲ್ಲಿಲ್ಲ.

"ಶಿವ ಕ್ರೋಧಾದ್ಗುರುಸ್ತ್ರಾತಾ ಗುರು ಕ್ರೋಧಾಚ್ಛಿವೋ ನ ಹಿ ।
ತಸ್ಮಾತ್ಸರ್ವ ಪ್ರಯತ್ನೇನ ಗುರೋರಾಜ್ಞಾಂ ನ ಲಂಘಯೇತ್ ॥"

ಭಗವಂತನು ಒಂದು ವೇಳೆ ಕೋಪಿಸಿದರು ಗುರುವು ರಕ್ಷಿಸುವನು. ಗುರುವು ಕುಪಿತನಾದರೆ ಹರನು ರಕ್ಷಿಸಲಾರನು. ಅದ್ದರಿಂದಲೇ 'ನ ಗುರೋರಧಿಕಂ' ಎಂದು ಹೇಳಲ್ಪಟ್ಟಿದೆ. ಪರಮ ಶಿವನು ನಿರಾಕಾರನು ಅಪ್ರತ್ಯಕ್ಷನು. ಗುರುದೇವನೆಂದರೆ ಪ್ರತ್ಯಕ್ಷನಾದ ಸಾಕಾರ ಸದಾಶಿವನು. ಇಂಥಾ ಪ್ರತ್ಯಕ್ಷ ಪರಮೇಶ್ವರನನ್ನು ಕಣ್ಣಾರೆ ನೋಡಬಹುದು. ಕಿವಿಯಾರೆ ತೃಪ್ತಿಯಾಗುವ ಪರ್ಯಂತ ಆತನ ಉಪದೇಶ ವಾಕ್ಯಗಳನ್ನು ಕೇಳಬಹುದು. ಆತನ ಸನ್ನಿಧಿಯಲ್ಲಿ ಮನ ಒಪ್ಪಿ ನಡೆದುಕೊಳ್ಳಬಹುದು. ತೃಪ್ತಿಯಾಗಿ ಸೇವಿಸಬಹುದು. ಸಾಕಾರನಾದ ಸದ್ಗುರುವಿನ ಮಹಿಮೆ ಅಪಾರ. ಆದ್ದರಿಂದ ಗುರುದೇವನು ಆದಿದೇವನು, ದೇವದೇವನಾಗಿದ್ದಾನೆ.

ಗುರು ಶಬ್ದದಲ್ಲಿಯೇ ನಿಜವಾಗಿ ಒಂದು ದೊಡ್ಡತನವಿದೆ. ಎಲ್ಲಕ್ಕಿಂತಲೂ ದೊಡ್ಡದೆಂದರ್ಥ. ಅಂಥಾ ದೊಡ್ಡ ಪದಾರ್ಥ ಯಾವದು ಎಂದರೆ ಭೂಮವೇ (ಬ್ರಹ್ಮವೇ). ಆದ್ದರಿಂದ ಗುರುವಿಗಿಂತಲೂ ಬ್ರಹ್ಮವು ಬೇರೆ ಇಲ್ಲ. ಇದೇ ಆತ್ಮ. ಇದೇ ಪರಮಾತ್ಮ. ಇದೇ ನಮ್ಮೆಲ್ಲರ ಸ್ವರೂಪ. ಭಕ್ತಿಯಿಂದ ಸದಾ ನಿಷ್ಠೆಯಿಂದ ನಡೆಯುವುದೇ ನಮ್ಮ ಕರ್ತವ್ಯವೆಂದು ಭಾವಿಸಿ, ಮಾತಾಪಿತೃ ಬಂಧು ದೈವಾತ್ಮ

ಸ್ವರೂಪನಾದ ಯಾವ ಗುರು ಮಹಾನುಭಾವನು, ಭಕ್ತರ ಭಜನಾರ್ಥವಾಗಿ "ಗುರುವೆ ತಾಯಿ ತಂದೆ ದೈವ, ಆ ಗುರುವೇ ಸರ್ವ, ಗುರುವೆ ಆತ್ಮ ಎಂಬುವದಾಗಿ ಸುಸ್ಥಿರ ಭಕ್ತಿಯನ್ನು ಮಾಡು" ಎನ್ನುವ ತತ್ತ್ವವನ್ನು ಬರೆದನೋ ಅಂಥಾ ನನ್ನ ಗುರುಸ್ವಾಮಿ ಈಗ ಅವ್ಯಕ್ತ ರೂಪದಿಂದ ಸರ್ವಮಯನಾಗಿ ಭಾಸಿಸುತ್ತಿದ್ದಾನೆ. ಆ ಮಹನೀಯ ಗುರುಮೂರ್ತಿಗೆ ಅನಂತ ಪ್ರಣಾಮಗಳು.

"ಚಿತ್ತಯಕ್ಷ ದೃಢಾ ಕ್ರಾಂತಂ ನ ಶಾಸ್ತ್ರಾಣಿ ನ ಬಾಂಧವಾಃ ।
ಶಕ್ನುವಂತಿ ಪರಿತ್ರಾತುಂ ಗುರವ್ಯೋ ನ ಚ ಮಾನವಾಃ ॥

ಎಂಬ ವಾಕ್ಯಾನುಸಾರ ಕೇವಲ ಅಧ್ಯಾಸದಿಂದ ಕಲ್ಪಿಸಲ್ಪಟ್ಟ ಚಿತ್ತವೆಂಬುವ ಬೇತಾಳನ (ಮಹಾ ಮಾಯೆಯು) ಬಾಧೆಯಿಂದ, ಶಾಸ್ತ್ರಗಳಾಗಲಿ, ಬಂಧುಗಳಾಗಲಿ, ಮಾನವರಾಗಲಿ ರಕ್ಷಿಸಲಾರರು. ಪರಮೇಶ್ವರ ಸ್ವರೂಪನಾದ ಗುರುವಾದರೋ ಮಾತಿನ ಮಾತ್ರದಲ್ಲಿಯೇ ಹೋಗಲಾಡಿಸಿ, ಜನ್ಮ ಜರಾಮರಣ ಬಂಧ ಮೂಲವಾದ ಆಧ್ಯಾಸಿಕ ಬುದ್ಧಿಯನ್ನು ನಿರ್ಮೂಲ ಮಾಡಿ, ಪರಮ ಶಾಂತಿಮಯವಾದ ಮುಕ್ತಿ ಸುಖವನ್ನುಂಟು ಮಾಡುವನು. ಅಂಥಾ ಮಹನೀಯ ಮೂರ್ತಿಯಾದ ಗುರುದೇವ ನೀಗ ಅವ್ಯಕ್ತ ರೂಪದಿಂದ ಸರ್ವಮಯನಾಗಿ ಬೆಳಗುತ್ತಿದ್ದಾನೆ.

ಮಗು ಮತ್ತೊಂದರ ಆಶ್ರಯದಿಂದ ಮೇಲಕ್ಕೆದ್ದು ನಿಂತು ನಡೆಯಲು ಸಮರ್ಥವಾದಂತೆ, ಯಾವ ಗುರು ಮಹಾಶಯನ ಪಾದಾಶ್ರಯದಿಂದ ಈ ಶಿಷ್ಯನು ಎದ್ದು ನಿಂತನೋ, ಇಂಥವನನ್ನು ನಡೆಸುವುದಕ್ಕಾಗಿ ಬ್ರಹ್ಮನಿಷ್ಠನಾದ ಯಾವ ಸ್ವಾಮಿ, ತನಗೆ ಅಗತ್ಯವಿಲ್ಲದೆ ಹೋದರೂ ಬ್ರಾಹ್ಮ ಮುಹೂರ್ತದಲ್ಲಿ 4 ಗಂಟೆಗೆದ್ದು, ಝಣ ಝಣಾ ಎಂದು ಗಂಟೆಯನ್ನು ಬಾರಿಸಿ ಈ ಚಿಕ್ಕ ಸ್ವಾಮಿಯನ್ನು (ಶಿಷ್ಯನನ್ನು) ಅನುಷ್ಠಾನ ಮಾಡಿಕೊಳ್ಳಯ್ಯಾ ಸ್ವಾಮಿ ಎಂದು ಎಬ್ಬಿಸಿ, ತಮ್ಮೆದುರಿಗೆ ಕುಳ್ಳಿರಿಸಿ ಕೊಳ್ಳುತ್ತಿದ್ದನೋ, ಅಂಥಾ ನನ್ನ ಗುರುಸ್ವರೂಪವು ಈಗ ಅವ್ಯಕ್ತ ರೂಪದಿಂದ ಸರ್ವ ವ್ಯಾಪಕವಾಗಿ ಭಾಸಿಸುತ್ತಿದೆ.

ಯಾವ ಗುರು ಮಹಾನುಭಾವನು ಶ್ರೋತ್ರಿಯ ಬ್ರಹ್ಮನಿಷ್ಠನಾಗಿ ಶ್ರೋತ್ರಿಯತ್ವದಿಂದ ಪ್ರಮಾಣಗತ ಸಂದೇಹಗಳನ್ನು ನಿವಾರಿಸುತ್ತಾ, ಬ್ರಹ್ಮನಿಷ್ಠೆಯಿಂದ ಪ್ರಮೇಯಗತ ಸಂದೇಹಗಳನ್ನು ನೀಗುತ್ತಾ, ಜ್ಞೇಯವಾದ ಬ್ರಹ್ಮವು ನಿನ್ನ ಆತ್ಮವೇ, ಸ್ವಸ್ವರೂಪವೇ, ನಿಜರೂಪವೇ ಎಂದು ಶಿಷ್ಯನಿಗೆ ಪರಮ ಕರುಣೆಯಿಂದ ಬೋಧಿಸಿ ಅನುಭವಿಸುವಂತೆ ಮಾಡಿದನೋ, ಅಂಥಾ ಶ್ರೋತ್ರಿಯ ಬ್ರಹ್ಮನಿಷ್ಠನಾದ ನಮ್ಮ ಗುರುದೇವನು ಈಗ ಅವ್ಯಕ್ತ ರೂಪದಿಂದ ಬೆಳಗುತ್ತಿದ್ದಾನೆ.

ಗುರು ಮುಖದಿಂದ ಸಂಪ್ರಾಪ್ತವಾಗದ ಜ್ಞಾನವು, ಸಾಗರ ಜಲವು ಪಾನ ಯೋಗ್ಯವಾಗದ ಹಾಗೆ ಅಹಂಕಾರ ವಿಶಿಷ್ಟವಾಗಿರುತ್ತೆ. ಗುರುಮುಖತಃ ಸನ್ನಿಧಿ

ಯಿಂದ ಸಂಪ್ರಾಪ್ತವಾದ ವಿದ್ಯೆ ಮೇಘ ಮುಖದಿಂದ ಬಂದ ಪಾವನ ಗಂಗೆಯ ಹಾಗೆ ಯೋಗ್ಯವಾಗಿ, ಅಹಂಕಾರ ಕಾಮಾದಿಗಳನ್ನು ನಿವಾರಿಸುತ್ತದೆ. ಅಷ್ಟೇಕೆ ಸಂಪ್ರದಾಯ ಸಿದ್ಧವಾಗಿ ಗುರುಕೃಪಾಲಬ್ಧವಾಗದ ವಿದ್ಯೆ ಸಾಧುವಲ್ಲ. ಅದು ನಿಜ ಶಾಂತಿಯನ್ನು ಕೊಡಲಾರದು. ಗುರುಕೃಪಾಲಬ್ಧಿಯಿಂದ ಉಂಟಾದ ಜ್ಞಾನ ತನ್ನನ್ನು ತಾರಣ ವಾಗುವಂತೆ ಮಾಡಿ, ತನ್ನನ್ನು ಆಶ್ರಯಿಸಿದವರನ್ನು ಕೂಡ ಧನ್ಯರನ್ನಾಗಿ ಮಾಡಲು ಸಮರ್ಥವಾಗುತ್ತೆ. ಅಂಬಿಗನು ಹಡಗಿನಲ್ಲಿ ಕೂತವರನ್ನು ಹೇಗೆ ಸುಖವಾಗಿ ಆಚೆಯ ದಡ ಸೇರಿಸುವನೋ ಎಂಬುವ ಇತ್ಯಾದಿ ಸುಲಭೋಪಮಾನಗಳಿಂದ, ಬೋಧೆಯನ್ನು ಮಾಡುತ್ತಿದ್ದ ಶ್ರೀ ಉಮಾಮಹೇಶ್ವರ ಗುರುಪೀಠ ಸುಸಂಪನ್ನ ಸಂಪ್ರದಾಯಸಿದ್ಧ ಸದ್ಗುರುವಾದ ಕರ್ಣಧಾರನು ಈಗ ಅವ್ಯಕ್ತ ರೂಪದಿಂದ ಸರ್ವಮಯನಾಗಿ ಪ್ರಕಾಶಿಸುತ್ತಿದ್ದಾನೆ.

ಗುರುವು ಸಂಸಾರ ಮಹಾರೋಗ ಪರಿಹಾರಕನಾದ್ದರಿಂದ ಆತನಿಗೆ ಭವರೋಗ ವೈದ್ಯನೆಂಬ ಬಿರುದಿದೆ. ಲೋಕದಲ್ಲಿ ವಾತ, ಪಿತ್ತ, ಶ್ಲೇಷ್ಮಾದಿ ವ್ಯತ್ಯಾಸಗಳಿಂದ ಉಂಟಾಗುವ ರೋಗಗಳನ್ನು ನಿವಾರಿಸುವುದಕ್ಕೆ ಅನೇಕ ವೈದ್ಯರಿದ್ದಾರೆ. ಆದರೆ ರೋಗಗಳಿಗೆಲ್ಲ ಮೂಲವೆನ್ನಲ್ಪಡುವ ಭವರೋಗ ನಾಡಿಯನ್ನು ಹಿಡಿದು ನೋಡಲು ಆ ವೈದ್ಯರಿಗೆ ಅದು ದೊರೆಯದು. ಇವರ ಔಷಧವು ಉಪಕರಿಸದು. ಆದ್ದರಿಂದ "ಭಿಷಜೇ ಭವರೋಗಿಣಾಮ್" ಇದು ಪರಿಪಕ್ವ ಮನಸ್ಸಾ ಅಪರಿಪಕ್ವ ಮನಸ್ಸಾ ಎಂದು ತಿಳಿದು, 'ತತ್ವಮಸಿ' ಮಹಾವಾಕ್ಯಾರ್ಥವೆಂಬುವ ಔಷಧಿಯನ್ನು ಪ್ರಯೋಗಿ ಸುವ ಭವರೋಗ ವೈದ್ಯನು ಶ್ರೀಗುರುವು.

'ಅದ್ವೈತಂ ಭಾವಯೇನ್ನಿತ್ಯಂ ಸರ್ವಾವಸ್ಥಾಸು ಸರ್ವದಾ ।
ಕದಾಚಿದಪಿ ನೋ ಕುರ್ಯಾತ್ ಅದ್ವೈತಂ ಗುರುಸನ್ನಿದೌ ॥

ಹೃದಯ ತಾಪ ನಿವಾರಕವೂ, ಭವಸಾಗರ ತಾರಕವೂ ಆದ ಶ್ರೀಗುರು ಚರಣ ಸಾನ್ನಿಧ್ಯದಿಂದ ಪಡೆದ ಮಹೋಪಕಾರ ಮರೆಯಬಾರದ್ದು. ಆ ಋಣವು ತೀರದ್ದು. ಆದ್ದರಿಂದ ಸದಾ ಭಕ್ತಿಭಾವಗಳಿಂದ ವರ್ತಿಸುತ್ತಾ ಗುರುವನ್ನು ಪೂಜಿಸಬೇಕು. ಅದ್ವೈತ ವನ್ನು ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಭಾವಿಸುತ್ತಿದ್ದರೂ, ಕೇವಲ ಗುರುಸನ್ನಿಧಿ ಯಲ್ಲಿ ಮಾತ್ರ ಹಾಗಿರಬಾರದು. ತತ್ವಜ್ಞಾನಾರ್ಥವಾಗಿ ನಾವು ಆತನಲ್ಲಿ ಶರಣಾಗತ ರಾಗಿ ಆತನ ಕೃಪೆಯಿಂದ ತತ್ವವನ್ನು ಅರಿತರೂ ಗುರು ಸನ್ನಿಧಿಯಲ್ಲಿ ಸದಾ ಕೃತಜ್ಞ ರಾಗಿರಬೇಕು. ಈ ಶರೀರವಿರುವ ತನಕ ಆತನ ಋಣವು ತೀರದು. ಅವಿಭಾಜ್ಯವಾದ ಆತನ ಕರುಣಾಮಯ ದೃಷ್ಟಿ ಮರೆವಿಗೆ ಬಾರದು. "ಯಾವದಾಯುಸ್ತ್ರಯೋ ವಂದ್ಯಾ ವೇದಾಂತೋ ಗುರುರೀಶ್ವರಃ" ಜೀವಿತವಿರುವ ಪರ್ಯಂತ ಗುರು, ವೇದಾಂತ (ಉಪ ನಿಷತ್ತುಗಳು, ಈಶ್ವರನು ವಂದನಾರ್ಹರು. ಪೂಜ್ಯನೀಯವು. ಈ ನಿಷ್ಠೆಯನ್ನು ಗುರುಭಕ್ತರು ಯಾವಾಗಲು ಬಿಡಬಾರದು.

ಈಕ್ಷಣ ಧ್ಯಾನ ಸಂಸ್ಪರ್ಶೈಃ ಮತ್ಸ್ಯ ಕೂರ್ಮ ವಿಹಂಗಮಾಃ ।
ಪೋಷಯಂತಿ ಸ್ವಕಾನ್ ಪುತ್ರಾನ್ ತದ್ವತ್ಪಂಡಿತ ವೃತ್ತಯಃ ॥"

ನೋಟದಿಂದ ಮತ್ಸ್ಯವು, ಸ್ಮರಣೆಯಿಂದ ಆಮೆ, ಸ್ಪರ್ಶದಿಂದ ಪಕ್ಷಿಯು, ತಮ್ಮ ತಮ್ಮ ಮಕ್ಕಳನ್ನು ಪೋಷಿಸುವಂತೆ, ತತ್ವಜ್ಞಾನಿಯಾದ ಗುರುವು ದೃಷ್ಟಿಯಿಂದಲೂ, ಸ್ಮರಣೆಯಿಂದಲೂ, ಸ್ಪರ್ಶೆಯಿಂದಲೂ, ಮುಕ್ತನನ್ನಾಗಿ ಮಾಡುವನು. ಇಷ್ಟೇ ಅಲ್ಲದೆ ಸೂರ್ಯಚಂದ್ರಾಗ್ನ್ಯಾದಿ ಮಂಡಲಗಳಿಂದಲೂ ನಾಶಮಾಡಲು ಶಕ್ಯವಾಗದ ನಮ್ಮ ಹೃದಯಾಂಧಕಾರವನ್ನು, ತತ್ತ್ವಮಸೀತ್ಯಾದಿ ಮಹಾವಾಕ್ಯ ಪ್ರಬೋಧೆಯೆಂಬ ಬೆಳಕಿನಿಂದ ದೂರ ಮಾಡಿದ ಚಿಜ್ಜ್ಯೋತಿಯೇ ಗುರುದೇವನು, ಯೋಗಿಗಳಿಗೆ ನಿಲುಕದ ತಪಸ್ವಿಗಳಿಗೆ ಸಿಲುಕದ ಆ ಪರತತ್ವವನ್ನು, ಅನಾಯಾಸವಾಗಿ ಅದು ನೀನಾಗಿರುವೆಯೆಂದು ಕೃಪಾಮಯ ದೃಷ್ಟಿಯಿಂದ ಮಾತುಮಾತಿಗೆ ತಿಳುಹುತ್ತಾ, ನನ್ನನ್ನು ಧನ್ಯನನ್ನಾಗಿ ಮಾಡಿದ ಮಹಾ ಸಮರ್ಥನಾದ ದಕ್ಷಿಣಾಮೂರ್ತಿ ನನ್ನ ಗುರುದೇವನು, ಈ ದಿನ ಅವ್ಯಕ್ತ ರೂಪದಿಂದ ಸರ್ವಮಯನಾಗಿ ಪ್ರಕಾಶಿಸುತ್ತಿದ್ದಾನೆ.

ಭಾಗವತದಲ್ಲಿ ಪೋತನಾಮಾತ್ಯನು ಹೇಳಿದಂತೆ, ಭಗವಂತನನ್ನು ಕಾಣುವ ಕಣ್ಣುಗಳೇ ಕಣ್ಣುಗಳು, ಆತನ ಕಥೆಗಳನ್ನು ಕೇಳುವ ಕಿವಿಗಳೇ ಕಿವಿಗಳು, ಆತನನ್ನು ಅರ್ಚಿಸುವ ಕರಗಳೇ ಕರಗಳು ಅಂದಂತೆ, ಶ್ರೀ ಗುರು ಪರಮಾತ್ಮನನ್ನು ದರ್ಶಿಸುವ ನೇತ್ರಗಳೇ ನೇತ್ರಗಳು, ಅವರ ವಚನಗಳನ್ನು ಆಲಿಸುವ ಶ್ರೋತ್ರಗಳೇ ಶ್ರೋತ್ರಗಳು, ಆ ಮಹನೀಯ ಮೂರ್ತಿಯನ್ನು ಸ್ತುತಿಸುವ ಜಿಹ್ವೆಯೇ ಜಿಹ್ವೆ, ಆತನ ಸೇವೆಯನ್ನು ಮಾಡುವ ಕರಗಳೇ ಕರಗಳು (ಹಸ್ತಗಳು), ಆ ಮಹನೀಯನು ಪ್ರಸಾದಿಸಿದ ಮಹಾಮಂತ್ರವನ್ನೂ ಅದರ ತತ್ವವನ್ನೂ ಅನುಸಂಧಾನ ಮಾಡುವ ಮನಸ್ಸೇ ಮನಸ್ಸು, ಆ ಪರಮ ಪೂಜ್ಯನ ಚರಣಾಬ್ಜದಲ್ಲಿ ಶಿರವನ್ನಿಟ್ಟು ನಮಿಸುವ ಶಿರಸ್ಸೇ ಶಿರಸ್ಸು ಅಂಥಾ ಭಕ್ತಜನ ವಂದ್ಯನಾದ ಸದಾ ಸಂಸೇವ್ಯನಾದ ನನ್ನ ಗುರುದೇವನೀಗ ಅವ್ಯಕ್ತರೂಪದಿಂದ ಸರ್ವಮಯನಾಗಿ ಭಾಸಿಸುತ್ತಿದ್ದಾನೆ.

"ಕಾಶೀ ಕ್ಷೇತ್ರಂ ನಿವಾಸಶ್ಚ ಜಾಹ್ನವೀ ಚರಣೋದಕಮ್ ।
ಗುರುರ್ವಿಶ್ವೇಶ್ವರಃ ಸಾಕ್ಷಾತ್ ತಾರಕಂ ಬ್ರಹ್ಮ ನಿಶ್ಚಯಂ ॥

ಶ್ರೀ ಗುರುದೇವರು ನಿವಾಸಿಸುತ್ತಿದ್ದ ಸ್ಥಾನವೇ ಕಾಶೀ ಕ್ಷೇತ್ರ; ಆತನ ಚರಣೋದಕವೇ ಪಾವನ ಗಂಗೆ; ಆತನೇ ಸಾಕ್ಷಾತ್ ವಿಶ್ವೇಶ್ವರನು; ಬ್ರಹ್ಮಾತ್ಮ ಬುದ್ಧಿಯೇ ತಾರಕ. ಅಂಥಾ ಗುರುದೇವರು (ಗುರು ಪರಮಾತ್ಮ) ಅಡಿಯಿಟ್ಟ ಸ್ಥಳಗಳೆಲ್ಲವೂ ಪುಣ್ಯಕ್ಷೇತ್ರಗಳು. ಆತನು ಮುಟ್ಟಿದ ವಸ್ತುಗಳೇ ಪರಮ ಪವಿತ್ರಗಳು. ಆತನ ದೃಷ್ಟಿ ಪ್ರಸಾರವಾದ ಪ್ರಾಣಿಗಳೆಲ್ಲರೂ ಧನ್ಯರೇ. ಸೂರ್ಯ ಕಿರಣಗಳು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿದ್ದರೂ ಕದಗಳನ್ನು ಮುಚ್ಚದಂತೆ ತೆರೆದಿಟ್ಟಿರುವ ಗೃಹದಲ್ಲಿ ಮಾತ್ರವೇ ಆ

ಕಿರಣಗಳು ಪ್ರಸಾರವಾದಂತೆ, ಗುರುಕಟಾಕ್ಷ ವೀಕ್ಷಣವೆಂಬ ಕಿರಣಗಳು ಎಲ್ಲೆಡೆ ಇದ್ದರೂ ಶ್ರದ್ಧಾ ಭಕ್ತಿಗಳಿಂದ, ನೀತಿ ನಿಯಮ ಸದಾಚಾರಗಳಿಂದ ಕೂಡಿ, ಯಾವನ ಮನೋ ದ್ವಾರ ಕವಾಟವು ತೆರೆದಿಡಲಾಗಿದೆಯೋ, ಅಂಥಾ ಉತ್ತಮ ಭಕ್ತರಾದ ಮುಮುಕ್ಷುಗಳ ಹೃದಯಗಳಲ್ಲಿ ಗುರು ಕೃಪಾಕಟಾಕ್ಷ ವೀಕ್ಷಣ ಕಿರಣ ಪ್ರಸಾರವಾಗುವುದು. ಆ ಕೂಡಲೇ ಅಜ್ಞಾನಾಂಧಕಾರವು ಭಗ್ನವಾಗಿ ಅಖಂಡ ಸುಖವೆಂಬ ಜ್ಯೋತಿಯು ಬೆಳಗುವುದು.

ಶ್ರೀಗುರು ಕೃಪೆ ಎಂಬುವದು ಧರ್ಮಮೇಘದಂತಹುದು. ನಿರ್ಮಲಾಂತಃಕರಣ ಕ್ಷೇತ್ರವೆಂಬ ಹಸನಾದ ಸ್ಥಳದಲ್ಲಿ ಬೀಜಗಳನ್ನು ಬಿತ್ತಲು ಗುರುಕರುಣಾಮೃತ ವರ್ಷ ಧಾರೆಗಳಿಂದ ಸಂಪೂರ್ಣ ಫಲವಾಗುವುದು. ಈ ಮಾತುಗಳನ್ನು ಯಾವ ಗುರು ದೇವರು ಸದಾ ತಮ್ಮ ಶಿಷ್ಯಕೋಟಿಗೆ ಹೇಳುತ್ತಿದ್ದರೋ ಅಂಥಾ ಅನುಪಮವಾದ ಶ್ರೀಗುರು ದೇವರು ಈಗ ಅವ್ಯಕ್ತರೂಪದಿಂದ ಸರ್ವಮಯನಾಗಿ ಕಾಣುತ್ತಲಿದ್ದಾನೆ.

"ಧ್ಯಾನ ಮೂಲಂ ಗುರೋರ್ಮೂರ್ತಿಃ ಪೂಜಾ ಮೂಲಂ ಗುರೋಃ ಪದಮ್ ।
ಮಂತ್ರಮೂಲಂ ಗುರೋರ್ವಾಕ್ಯಂ, ಮುಕ್ತಿ ಮೂಲಂ ಗುರೋಃ ಕೃಪಾ ॥"

ಎಲ್ಲಾ ಧ್ಯಾನಗಳಿಗಿಂತಲೂ ಗುರುಧ್ಯಾನವೇ ಶ್ರೇಷ್ಠ; ಎಲ್ಲಾ ಪೂಜೆಗಳಿಗಿಂತಲೂ ಶ್ರೀಗುರು ಪಾದಪೂಜೆಯೇ ಅಧಿಕ; ಸರ್ವ ಮಂತ್ರಗಳಿಗಿಂತಲೂ ಗುರು ಮಹಾ ಮಂತ್ರ-ಗುರು ವಾಕ್ಯವೇ ಶ್ರೇಷ್ಠ; ಶ್ರೀ ಗುರು ಕೃಪೆಯೇ ಮುಕ್ತಿಗೆ ಮೂಲ- ಇತ್ಯಾದಿಯಾಗಿ ಅನೇಕ ವಿಷಯಗಳನ್ನು ಮೈಮರೆತು ಭಕ್ತಿ ಪರವಶರಾಗಿ ಶ್ರೀ ಶಂಕರಾನಂದ ಗಿರಿ ಸ್ವಾಮಿಗಳವರು ಮಾತನಾಡಿದರು. ಶ್ರೀ ಸದ್ಗುರು ಕೃಪಾ ಮಹಿಮೆ ಯನ್ನು ಪುನಃ ಪುನಃ ಸ್ಮರಿಸುತ್ತಾ ಸೋತ ಮನಸ್ಸಿನಿಂದ, ತಾವು ಮತ್ತು ಸಭಿಕರೂ ಎಲ್ಲರೂ ದುಃಖ ಸಮ್ಮಿಶ್ರಿತವಾದ ಆನಂದಾಶ್ರುಗಳಿಂದ ಗುರುಪಾದ ಪದ್ಮಗಳನ್ನು ಹೃದಯದಲ್ಲಿ ಸ್ಮರಿಸುತ್ತಾ ಅಭಿಷೇಕ ಮಾಡಿದರು. ಮತ್ತೊಮ್ಮೆ ಶ್ರದ್ಧೆಯಿಂದ ಅಂಜಲಿ ಬದ್ಧರಾಗಿ ಮೌನವನ್ನು ವಹಿಸಿ ಅನಂತರ ಮಂಗಳವನ್ನು ಹೇಳಿದರು.

### ಶಂಕರಾಭರಣ–ಆಟತಾಳ

ಮಂಗಳಂ ಶ್ರೀ ಸದಾನಂದಾರ್ಯಾ ಪ್ರಜ್ಞಾನಧುರ್ಯಾ ।
ಸಂಗ ರಹಿತಾತ್ಮೈಕ ಧೀಚರ್ಯಾ । ಸದ್ಗುರುವರ್ಯ ॥ಪ॥

ಮಂಗಳಾಂಗ । ಕೃಪಾಂಗ । ದುರಿತ ವಿಭಂಗ । ತ್ರಿಗುಣಾಸಂಗ
ಪರಮ ಪ್ರಸಂಗ। ಆತ್ಮ ಸುಸಂಗ ಬುಧನುತ। ಮಂಗಳಂ ಭಕ್ತಾಂತರಂಗ॥ಅ॥

ವಾಸನಾತ್ಮೈನಾಶಕ ಸದಯ । ನಿರ್ಮಲ ಹೃದಯ । ದೋಷ ತಿಮಿರ ಹರಾಯ । ತತ್ವಮಯ ಪರಚಿಂತನಾಯಾ । ಪೋಷಿತಾಖಿಲ ಸುಜನ ಗಣ । ಭವ ಪಾಶನಾಶ । ಸುಯೋಗ ನಿದ್ರಾವೇಶ । ನಿರತ ನಿಮೀಲಿತಾಕ್ಷಾ । ಶಾಶ್ವತಾನಂದ ಪ್ರಕಾಶ ॥ ॥೧॥

ತಲಪನಷ್ಟಾದಶ ಶತಾಬ್ದಮುಲುನ್ । ಮರಿ ಡೆಬ್ಬದೈ ದೌ ಶಾಲಿವಾಹನ ಶಕಮು ನಂದುನನು । ಲಲಿ ವಿಜಯ ಕಾರ್ತಿಕ ಬಹುಳ ಏಕಾದಶಿ ತಿಥಿಯಂದುನ್ । ವಿಲಸಿತಂಬುಗ ಭೌಮವಾರಂ ಬಲವಡಗ ನಿರ್ವಾಣ ಮೊಂದಿಯು । ಮಲ ರಹಿತ ಬ್ರಹ್ಮಂಬವೈಕಡು ವೆಲಯು ಸಚ್ಚಿತ್ಸುಖ ಸ್ವರೂಪ ॥೨॥

ಮೋದಯುತ ಗಂಜಿಗುಂಟ ನಿವಾಸಾ । ಸದಮಲ ವಿಕಾಸ । ಭೇದ ರಹಿತ । ವಿರಕ್ತ ಸುವಿಲಾಸ ಪ್ರಜ್ಞಾನ ಭಾಷಾ । ಆದಿ ಸಂವಿದ್ಬೋಧಚೇ ಶ್ರೀಸ್ವಾಮಿ ಶಂಕರಾನಂದ ಗಿರಿವರು । ಸಾದರಂಬುನ ಬ್ರೋಚಿತಿವಿ ಶ್ರೀಪಾದ ನಾರಾಯಣ ಕವಿನುತ ॥೩॥

ಓಂ ರಾಜಾಧಿ ರಾಜಾಯ ಪ್ರಸಹ್ಯ ಸಾಹಿನೇ । ನಮೋ ವಯಂ ವೈ ಶ್ರವಣಾಯ ಕುರ್ಮಹೇ | ಸಮೇ ಕಾಮಾನ್ ಕಾಮ ಕಾಮಾಯ ಮಹ್ಯಂ। ಕಾಮೇಶ್ವರೋ ವೈ ಶ್ರವಣೋ ದದಾತು | ಕುಬೇರಾಯ ವೈ ಶ್ರವಣಾಯ ಮಹಾ ರಾಜಾಯ ನಮಃ ||

ಓಂ ಶಾಂತಿಃ ಶಾಂತಿಃ ಶಾಂತಿಃ

# ಶ್ರೀ ಗುರು ಮಹಾರಾಧನೆ

ಶ್ರೀಗಳವರು ಅಲ್ಲಿಯ ಭಕ್ತಾದಿಗಳೊಡನೆ ಗಂಜಿಗುಂಟೆ ಮಠಕ್ಕೆ ಬಂದರು. ಈ ಪ್ರಾಂತದಲ್ಲಿರುವ ಎಲ್ಲಾ ಭಕ್ತಾದಿಗಳು ಮಠಕ್ಕೆ ಬಂದು ಸೇರಿದರು. ವಿಜಯ ||ಸಂ|| ಮಾರ್ಗಶೀರ್ಷ ಶುದ್ಧ ಪೂರ್ಣಿಮ ಶ್ರೀ ಗುರು ಸ್ವಾಮಿಗಳವರ ಮಂಡಲ ಮಹಾ ರಾಧನೆಯ ನಿಮಿತ್ತ ವಿಧ್ಯುಕ್ತವಾಗಿ ಕಾಶೀ ಗಂಗಾಭಿಷೇಕದಿಂದ ಪೂಜೆ ನಡೆಯಿತು. ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರ ಸ್ತೋತ್ರ ಪಾಠಗಳು ವೈದಿಕ ವಿಧಾನ ಗಳಿಂದ ಕಾರ್ಯಕ್ರಮ ನಡೆದು ಮಂತ್ರ ಪುಷ್ಪದೊಡನೆ ಮಂಗಳವಾಯಿತು. ಜಯ ಜಯ ಘೋಷದಿಂದ ಪ್ರದಕ್ಷಿಣ ನಮಸ್ಕಾರಾದಿಗಳು ನಡೆದವು. ಸಾಯಂಕಾಲ ಸಭೆಯು ದೊಡ್ಡದಾಗಿ ನಡೆದು ಶ್ರೀ ಸ್ವಾಮಿಗಳವರಿಂದಲೂ ಮತ್ತು ಬಂದ ಮಹಾತ್ಮರಿಂದಲೂ ಎರಡು ದಿನಗಳು ಅಖಂಡವಾಗಿ ಉಪನ್ಯಾಸ ಕಾರ್ಯಕ್ರಮಗಳು ನಡೆದವು. ಅನ್ನ ಸಂತರ್ಪಣಾದಿಗಳಿಂದ ಗುರುಸ್ವಾಮಿಗಳವರ ಪುಣ್ಯಾರಾಧನೆಯ ಮಹೋತ್ಸವವು ಪೂರ್ಣವಾಯಿತು.

ಅಲ್ಲಿ ನೆರೆದ ಭಕ್ತಾದಿಗಳು ಸ್ವಾಮಿಗಳೊಡನೆ ಹೀಗೆಂದು ಮಾತನಾಡಿದರು. ಶ್ರೀ ಮಹಾಸಮಾಧಿಯ ಮೇಲೆ ಸ್ವರ್ಣ ಚಿಹ್ನೆಗಳಿಂದೊಪ್ಪುವ ಉತ್ತಮ ಶಿಲೆಯನ್ನು ಸ್ಥಾಪಿಸಿ, ಅದರ ಮೇಲೆ ನರ್ಮದಾ ಬಾಣ ಶಿವಲಿಂಗ ಪ್ರತಿಷ್ಠೆ ಮಾಡಿದರೆ ಚನ್ನಾಗಿರು ತ್ತೆಂದು ಸ್ವಾಮಿಗಳವರೊಡನೆ ಕಲೆತು ಮಾತನಾಡಿ ನಿರ್ಣಯಿಸಿದರು. ಆ ಕೆಲಸಕ್ಕಾಗಿ ಪೂಜ್ಯ ಸ್ವಾಮಿಗಳವರು ಬೆಂಗಳೂರು ಬ್ರಹ್ಮ ವಿದ್ಯಾಶ್ರಮಕ್ಕೆ ಹೋಗಿ, ಅಲ್ಲಿ ಒಂದು ಕಾರ್ಖಾನೆಯಲ್ಲಿ ಯಥಾ ಶಾಸ್ತ್ರೀಯವಾಗಿ ಮಾಡಬೇಕಾದ ಅಳತೆಗಳು ಆಕೃತಿ ಮೊದ ಲಾದ ವಿಷಯಗಳನ್ನು ತಿಳುಹಿಸಿ ಆರ್ಡರು ಕೊಟ್ಟರು. ಶ್ರೀ ಸ್ವಾಮಿಗಳವರು ಬ್ರಹ್ಮ ವಿದ್ಯಾಶ್ರಮದಲ್ಲಿಯೇ ತಮ್ಮ ನಿತ್ಯನಿಯಮಾನುಷ್ಠಾನಗಳಿಂದ ಇದ್ದರು.

ಆ ಸಮಯದಲ್ಲಿ ವ್ಯಾಸಾಶ್ರಮ ಸ್ಥಾಪಕರೂ, ಮಹಾನುಭಾವರೂ, ಶುಷ್ಕ ವೇದಾಂತ ತಮೋಭಾಸ್ಕರಾದಿ ಬಹುಗ್ರಂಥ ಕರ್ತರೂ ಆದ, ಶ್ರೀ ಮಲಯಾಳ ಮಹರ್ಷಿಗಳವರು (ಶ್ರೀ ಅಸಂಗಾನಂದಗಿರಿ ಯತಿವರ್ಯರು) ಬೆಂಗಳೂರಿಗೆ ದಯ ಮಾಡಿಸಿ ಕಂಟೋನ್‌ಮೆಂಟ್ ಗೀತಾ ಪ್ರಚಾರ ಮಂಡಲಿಯಲ್ಲಿದ್ದರು.

ನಮ್ಮ ಶ್ರೀಗಳವರು ವ್ಯಾಸಾಶ್ರಮದ ಮಹರ್ಷಿ ಮಲಯಾಳ ಸ್ವಾಮಿಗಳವರು, ಚೆನ್ನಾಗಿ ಪರಿಚಯವುಳ್ಳವರಾದ್ದರಿಂದ ಅಲ್ಲಿಗೆ ಹೋಗಿ ಅವರನ್ನು ಸಂದರ್ಶಿಸಿ ಬ್ರಹ್ಮ

ವಿದ್ಯಾಶ್ರಮಕ್ಕೆ ದಯಮಾಡಿಸಬೇಕೆಂದು ಬಯಸಲು, ಅದಕ್ಕೆ ಅವರು ಹೌದು ಪೂರ್ವದಲ್ಲಿ ಶ್ರೀ ರಾಮಚಂದ್ರ ಮೂರ್ತಿ ಅಡವಿಯಲ್ಲಿ ಪರ್ಯಟಿಸುವಾಗ ಅಲ್ಲಲ್ಲಿರುವ ಪುಣ್ಯಾಶ್ರಮಗಳಿಗೆ ಹೋಗಿ ಆ ಪವಿತ್ರ ವಾತಾವರಣವನ್ನು ಕಂಡು ಸಂತೋಷಗೊಳ್ಳು ತ್ತಿದ್ದರಂತೆ. ಹಾಗೆ ಸವಿನಯ ಸಂಪನ್ನವಾದ ತಮ್ಮ ಸದಿಚ್ಛಾನುಸಾರ ಬರುತ್ತೇವೆಂದು ಹೇಳಿ, ಮಾರನೆಯ ದಿನ ಬ್ರಹ್ಮವಿದ್ಯಾಶ್ರಮಕ್ಕೆ ಬಂದು ಎಲ್ಲರಿಗೂ ದರ್ಶನವನ್ನು ಕೊಟ್ಟು ಪ್ರವಚಿಸಿದರು. ಎಲ್ಲರೂ ಸಂತೋಷದಿಂದ ಸತ್ಕಾರ ಪೂರ್ವಕ ನಮಸ್ಕರಿಸಿ ದರು. ಅನಂತರ ಗೀತಾ ಮಂದಿರಕ್ಕೆ ಮಹರ್ಷಿಗಳು ದಯಮಾಡಿಸಿ ಅಲ್ಲಿ ಕೆಲವು ದಿನ ತಮ್ಮ ಅಪೂರ್ವವಾದ ಪ್ರವಚನವನ್ನು ನಡೆಸಿದರು. ನಮ್ಮ ಸ್ವಾಮಿಗಳವರು ಅನು ದಿನ ಅಲ್ಲಿಗೆ ಹೋಗಿ ಅವರ ಧರ್ಮ ಜ್ಞಾನೋಪದೇಶಗಳನ್ನು ಶ್ರವಣ ಮಾಡುತ್ತಿ ದ್ದರು. ನಮ್ಮ ಶ್ರೀಗಳವರ ಮೇಲೆ ಅವರಿಗೆ ಮೊದಲಿನಿಂದಲೂ ಅತ್ಯಂತ ಪ್ರೇಮ, ವಾತ್ಸಲ್ಯ. ಶ್ರೀಗಳವರನ್ನು ತಮ್ಮ ಮುಂದೆ ಕುಳ್ಳಿರಿಸಿಕೊಂಡು ಪ್ರವಚನವನ್ನು ನಡೆಸುತ್ತಿದ್ದರು ಮತ್ತು ಸ್ವಾಮಿಗಳವರಿಗೆ ವಾತ್ಸಲ್ಯಪೂರ್ವಕವಾಗಿ ಪಾತಂಜಲಿ ಯೋಗ ಸೂತ್ರಗಳನ್ನು ಕೊಟ್ಟರು.

'ಯಥಾರ್ಥಾ ಭಾರತಿ' ಎನ್ನುವ ಮಾಸ ಪತ್ರಿಕೆಯನ್ನು ಕಳುಹಿಸಲು ಏರ್ಪಾಟು ಮಾಡಿದರು. ಮಲಯಾಳ ಯತೀಂದ್ರ ಗೀತೆಯನ್ನು ಕೊಟ್ಟು ಪ್ರೇಮಾಂಬುನಿಧಿ ಯಾದ ಆ ಋಷಿಗಳು ಆಶೀಃ ಪುರಸ್ಸರವಾಗಿ ಅನೇಕ ವಿಷಯಗಳನ್ನು ತಿಳುಹಿದರು. ಸ್ವಾಮಿಗಳು ಮಹಾ ಪ್ರಸಾದವೆಂದು ಕೇಳಿದರು. ಸ್ವಾಮಿ ನಿಮ್ಮ ಸದಾಚಾರ ವಿಚಾರಗಳೆಷ್ಟೋ ಉತ್ತಮೋತ್ತಮವಾದವುಗಳು. ಬಹಳ ಸಂತೋಷ. ರೈಲುಗಾಡಿಗೆ ನೀವು ಒಂದು ಒಳ್ಳೇ ಇಂಜನ್ ಇದ್ದಂತೆ. ಎಷ್ಟು ಪೆಟ್ಟಿಗೆಗಳನ್ನಾದರು ಈ ಇಂಜನ್ ಎಳೆದುಕೊಂಡು ಹೋಗುವುದು. ಸಮರ್ಥವಾದ ದೈವೀ ಶಕ್ತಿ..........." ಅನ್ನುತ್ತ ಸಂತೋಷಿಸುತ್ತಿದ್ದರು.

## ಶ್ರೀ ಗುರು ಮಹಾಸಮಾಧಿ ಶಿವಲಿಂಗ ಸ್ಥಾಪನೆ

ಶ್ರೀಗಳವರು ಬೆಂಗಳೂರು ಬ್ರಹ್ಮ ವಿದ್ಯಾಶ್ರಮದಲ್ಲಿರುತ್ತಾ ಮಹಾಸಮಾಧಿಯ ಶಿಲೆಯನ್ನು ತಯಾರು ಮಾಡಿಸಿದರು. ಆಮೇಲೆ ಅದನ್ನು ಗಂಜಿಗುಂಟೆ ಮಠಕ್ಕೆ ಸಾಗಿಸಿಕೊಂಡು ಬರುವದಕ್ಕೆ ತಕ್ಕ ಏರ್ಪಾಟುಗಳನ್ನು ಮಾಡಿ, ಸ್ವಾಮಿಗಳವರು ಮೊದಲೇ ಗಂಜಿಗುಂಟೆ ಮಠಕ್ಕೆ ಬಂದು ಸೇರಿದರು. ಶಿಲೆಗಳು ಆಶ್ರಮಕ್ಕೆ ಬಂದವು. 90 ಮಣದ ಮೇಲೆ ತೂಕವಿರುವ ಆ ಚೆಂದವಾದ ಶಿಲೆಯನ್ನು ಯಥಾ ಸ್ಥಾನದಲ್ಲಿ ಸೇರಿಸುವದು ಕಷ್ಟವಾಯಿತು. ಅದಕ್ಕೆ ತಕ್ಕ ಸಾಧನಗಳು ಅಲ್ಲಿ ಏನು ದೊರೆಯುವು. 'ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್............' ಅಂದ ಹಾಗೆ ಶ್ರೀಗುರು ಪರಮಾತ್ಮನ ಕೃಪೆಯಿಂದ ಅಲ್ಲಿರುವ ಆ ಪರಿಕರಗಳಿಂದಲೇ ಶಿಲೆಯು

ಯಥಾ ಸ್ಥಾನದಲ್ಲಿ ಸೇರಿತು. ಆಗ ಮಠವೇ ಶೋಭಾಯಮಾನವಾಯಿತು. ಕರ್ತು ಮಕರ್ತುಮನ್ಯಥಾ ಕರ್ತುಂ ಸರ್ವ ಶಕ್ತಿ ಸಂಪನ್ನವಾದ ಶಂಭು ಗುರು ಪರಮಾತ್ಮನಿಗೆ ನಮಸ್ಕಾರ.

ಶ್ರೀಗಳವರು ಆಶ್ರಮದಲ್ಲಿಯೇ ಇರುತ್ತಾ ಮುಂದೆ ಗುರುಕಾರ್ಯ ಶಿವಲಿಂಗ ಪ್ರತಿಷ್ಠಾದಿಗಳಿಗೆ ಬೇಕಾದ ವ್ಯವಸ್ಥೆಗಳನ್ನು ಮಾಡಿದರು. ಶ್ರೀ ಜಯ ॥ಸ॥ ಜ್ಯೇಷ್ಠ ಶುದ್ಧ ಪೌರ್ಣಿಮೆ 16-6-54 ಬುಧವಾರ ಮಹೋತ್ಸವದ ಮುಹೂರ್ತ ನಿರ್ಧರಿಸಲ್ಪಟ್ಟಿತು. ಪತ್ರಿಕೆಗಳನ್ನು ಮುದ್ರಣಗೊಳಿಸಿ ಎಲ್ಲರಿಗೂ ಕಳುಹಿಸುವುದಾಯಿತು. ಈ ಕಾರ್ಯಕ್ರಮಕ್ಕೆ ಆಹೂತರಾದ ಶ್ರೋ ॥ ಬ್ರ ॥ ಶಂಕರಾನಂದ ಸ್ವಾಮಿಗಳು (ಪೂಜ್ಯ ಶ್ರೀ ಶಂಕರ ಶಾಸ್ತ್ರಿ ಸ್ವಾಮಿ) ಸುರುಪುರ, ಪೂಜ್ಯಪಾದ ಶ್ರೀ ಶ್ರೀ ಶ್ರೀ ಶುದ್ಧ ಚೈತನ್ಯ ಸ್ವಾಮಿಗಳವರು ಇನ್ನಿತರ ಮಹಾತ್ಮರೂ, ಭಕ್ತರೂ, ಶ್ರೀ ಉಮಾ ಮಹೇಶ್ವರ ಗುರುಪೀಠದ ಎಲ್ಲಾ ಭಕ್ತಮಂಡಲಿಯವರೂ ಸಕಾಲಕ್ಕೆ ಬಂದರು. ನರ್ಮದಾ ಬಾಣ-ಶಿವಲಿಂಗವನ್ನು ಜಲಾಧಿವಾಸ, ಧಾನ್ಯಾಧಿವಾಸ, ಪುಷ್ಪ, ಶಯ್ಯಾಧಿವಾಸಗಳಿಂದ ತೆಗೆದು ಶ್ರೀ ಸ್ವಾಮಿಗಳವರ ಹಸ್ತದಲ್ಲಿಡಲು, ವೈದಿಕ ವಿಧಿಗಳಿಂದ ಸಕ್ರಮವಾಗಿ ಮಹಾಸಮಾಧಿಯ ಮೇಲೆ ಶಿವಲಿಂಗ ಪ್ರತಿಷ್ಠೆ ಆಯಿತು. ಈ ವೈದಿಕ ಕಾರ್ಯಗಳೆಲ್ಲವೂ ಸಾಂಗವಾಗಿ ವಜ್ರಕರೂರು ವೇದಮೂರ್ತಿ M. ಗಾದಿಲಿಂಗ ಶಾಸ್ತ್ರಿಗಳವರೂ, ಬ್ರಹ್ಮಶ್ರೀ ವಿದ್ವಾನ್ S. ರಾಜಗುಪ್ತ ಪಂಡಿತರೂ ಯಥಾ ವಿಧಿ ನಿರ್ವಹಿಸಿದರು.

ಕೂಡಲೇ ಜಯ ಜಯ ಧ್ವನಿಗಳಿಂದ ಅಖಂಡ ಶಿವ ಪಂಚಾಕ್ಷರ ಮಹಾಮಂತ್ರ ಭಜನೆ ಪ್ರಾರಂಭವಾಯಿತು. ಶ್ರೀ ರುದ್ರಾಭಿಷೇಕ, ಪೂಜಾ, ಪಾರಾಯಣ, ಸಹಸ್ರ ನಾಮಾರ್ಚನಾದಿಗಳು ನಡೆದವು. ಪೂಜ್ಯ ಮಹನೀಯರುಗಳಿಂದ ಉಪನ್ಯಾಸಗಳು ನಡೆದವು.

# ಗುರುಪೀಠ ಸಮಾರೋಹಣ

ಇದೇ ಶ್ರೀ ಜಯ ॥ಸಂ॥ ಜ್ಯೇಷ್ಠ ಶುದ್ಧ ಪೌರ್ಣಿಮ ಪವಿತ್ರ ದಿನ ಮಹನೀಯರೆಲ್ಲರೂ ಉದಯ ಉಪನ್ಯಾಸಗಳಾದ ನಂತರ, ಬ್ರಹ್ಮನಿಷ್ಠರಾದ ಪೂಜ್ಯ ಶ್ರೀ ಶಂಕರ ಶಾಸ್ತ್ರಿ ಸ್ವಾಮಿಗಳವರು, ನಮ್ಮ ಚರಿತ್ರನಾಯಕರಾದ ಶ್ರೀ ಶಂಕರಾನಂದ ಸ್ವಾಮಿಗಳವರನ್ನು ಕುರಿತು "ಸ್ವಾಮೀ ! ಇಷ್ಟರವರಿವಿಗೂ ತಮ್ಮ ಗುರುಗಳಿದ್ದರು. ಇನ್ನು ತಾವು ಎಲ್ಲಾ ವಿಧದಿಂದಲೂ ಯೋಗ್ಯವಾದ ವಿದ್ಯಾ ವಿನಯ ತಪಶ್ಶಮ ದಮಾದಿ ಶಕ್ತಿ ಸಂಪನ್ನರಾದ ಯತೀಶ್ವರರು. ಆದ್ದರಿಂದ ಸಂಪ್ರದಾಯಾನುಸಾರವಾಗಿ ಈ ದಿನ ಗುರುಪೀಠವನ್ನು ಅಧಿಷ್ಠಿಸಿ,ಭಕ್ತರಾದ ಮುಮುಕ್ಷುಗಳಿಗೆ ಶ್ರೀ ಉಮಾ ಮಹೇಶ್ವರ ಗುರುಪೀಠ ಪರಂಪರಾಗತ ಸಾಂಪ್ರದಾಯಿಕವಾಗಿ ಬಂದ ಮಹಾ ಮಂತ್ರವನ್ನು ಉಪದೇಶಿಸಿ, ಶ್ರೀಗುರು ಸಂಪ್ರದಾಯ ಪ್ರವರ್ತಕಾಚಾರ್ಯರಾಗಿ ತಾವಿರಬೇಕೆಂದು ನಮ್ಮ ಸದಿಚ್ಛೆ" ಹೀಗೆಂದು ತಿಳುಹುತ್ತಾ ನಮ್ಮ ಶ್ರೀಗಳವರನ್ನು ಗಾಢವಾಗಿ ಆಲಿಂಗನ ಮಾಡಿಕೊಂಡರು ಮತ್ತು ಪೂಜ್ಯಪಾದ ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು ಸ್ವಾಮೀ ! ಇದಕ್ಕೆ ತಾವು ಅಂಗೀಕರಿಸಿಯೇ ತೀರಬೇಕೆಂದು ಹೇಳುತ್ತಾ, ತಮ್ಮಲ್ಲಿ ಆ ಗುರುತತ್ತ್ವವಿದೆ. ನಿಜವಾಗಿಯೂ ಶ್ರೀ ಶಂಕರಾನಂದ ಗಿರಿ ಗುರು ವರ್ಯರೇ ತಾವು. ಓಂ ತತ್ಸತ್. ಅಂಗೀಕರಿಸಿಯೇ ತೀರಬೇಕು ಎಂದು ಒತ್ತಾಯ ದಿಂದ ನುಡಿದರು.

ಈ ಮಾತುಗಳನ್ನು ಕೇಳಿ ಅಲ್ಲಿದ್ದ ಭಕ್ತರು ಮೊದಲಾದವರೆಲ್ಲರು ಹೌದು ! ಹೌದು ! ಸ್ವಾಮಿಗಳು ಗುರು ಪೀಠಾರೋಹಣವನ್ನು ಮಾಡಿ ಸದ್ಗುರುಗಳಾಗಲು ಅಂಗೀಕರಿಸಲೇಬೇಕೆಂದು ಭಕ್ತಿಯಿಂದ ಏಕಕಂಠವಾಗಿ ಬೇಡಿದರು.

ಅದಕ್ಕೆ ನಮ್ಮ ಸ್ವಾಮಿಗಳವರು "ಇಷ್ಟು ದೊಡ್ಡ ಕೆಲಸವಾ ! ಶಿವ ಶಿವಾ" ! ಎಂದರು. ಅಷ್ಟರಲ್ಲಿಯೇ ಸ್ವಾಮಿಗಳು ಅಲ್ಲಿ ನೆರೆದಿದ್ದ ಭಕ್ತರು ಎಲ್ಲರು "ಅಹುದು ದೊಡ್ಡವರಿಗೆ ದೊಡ್ಡ ಕೆಲಸವೇ ಸರಿಯೆಂದರು."

ಹೀಗೆ ಅನುಲ್ಲಂಘನೀಯವಾದ ಮಹಾತ್ಮರ ವಾಕ್ಯಗಳನ್ನು ಕೇಳಿ ಇದು ಶ್ರೀಗುರುಗಳ ಆಜ್ಞೆ; ಶ್ರೀ ಉಮಾಮಹೇಶ್ವರನ ಸದಿಚ್ಛೆ; ಎಂದು ಭಾವಿಸಿ ಕಾರ್ಯ ಕರ್ತ ಪ್ರಭು ಗುರುದೇವರೇ ಶ್ರೀ ಉಮಾನಾಥನೇ ಎಂದು ನಿಶ್ಚಯಿಸಿ ಮಹಾತ್ಮರಿಗೆ ಸಾಷ್ಟಾಂಗ ದಂಡ ಪ್ರಣಾಮಗಳನ್ನು ಆಚರಿಸಿದರು. ಮುಂದೆ ಸಂಸಿದ್ಧವಾದ ವೈದಿಕ ಕಾರ್ಯಗಳೊಡನೆ ಗುರುಪೀಠಾಲಂಕರಣಾದಿ ವ್ಯವಸ್ಥೆಗಳನ್ನು ಮಾಡಿದರು. ಶ್ರೀಗಳವರಿಗೆ

ಮಂಗಳ ಸ್ನಾನವನ್ನು ಮಾಡಿಸಿದರು. ಮಠದಲ್ಲಿ ಮಹಾಸಮಾಧಿಗೆ (ಗದ್ದುಗೆಗೆ) ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಶಾಸ್ತ್ರೀಯವಾಗಿ ನಿರ್ಮಿಸಲ್ಪಟ್ಟ ಅಲಂಕರಿಸಿದ ಶ್ರೀಗುರು ಪೀಠವನ್ನು ಅಧಿಷ್ಠಿಸಿದರು. ಜಯಜಯ ಧ್ವನಿಗಳಾದವು. ಗುರುಪೀಠ ಲಾಂಛನವಾಗಿ ಮಸ್ತಕದ ಮೇಲೆ ಕಿರೀಟವನ್ನು ಅಂದರೆ ಮಂತ್ರಪೂತವಾದ ರತ್ನ ಸುವರ್ಣ ರುದ್ರಾಕ್ಷಿ ಬಿಲ್ವಗಳಿಂದ ಮುಕುಟವನ್ನಾಗಿ ಮಾಡಿ, ಮಹಾತ್ಮರ ಅಮೃತ ಹಸ್ತಗಳಿಂದ ಶ್ರೀಗಳವರ ಮಸ್ತಕದ ಮೇಲೆ ಧರಿಸಿ ವೇದಘೋಷದಿಂದ ಪುಷ್ಪಾಕ್ಷತೆ ಗಳನ್ನು ಸುರಿಸಿದರು.

ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಮತ್ಪೂಜ್ಯಪಾದ ಶ್ರೀಶ್ರೀಶ್ರೀ ಶಂಕರಾನಂದಗಿರಿ ಗುರುಸ್ವಾಮಿನ್ ಬಹುಪರಾಕ್, ಬಹುಪರಾಕ್ ಎನ್ನುವ ದಾಗಿ ಜಯಜಯ ಧ್ವನಿಗಳಿಂದ ಮಂಗಳ ವಾದ್ಯಗಳು ಮೊಳಗುತ್ತಿರಲು ಮಹಾ ಮಂಗಳವಾಯಿತು. ಈ ಪವಿತ್ರ ದಿನದಿಂದ ಶ್ರೀಗಳವರಿಗೆ **ಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳು** ಎಂದಾಯಿತು. ಗುರು ಸಂಪ್ರದಾಯಿಕವಾಗಿ ಬಂದ ಶ್ರೀಗುರು ಮಹಾಮಂತ್ರವನ್ನು ಉತ್ತಮರಾದ ಭಕ್ತರಿಗೆ ಸ್ವಾಮಿಗಳವರು ವಿಧ್ಯುಕ್ತವಾಗಿ ಉಪ ದೇಶಿಸಿದರು. ಕಾರ್ಯಕ್ರಮವು ಸಾಂಗಮಂಗಳವಾಯಿತು.

ಗಂಜಿಗುಂಟೆ ಶ್ರೀಮಠದಲ್ಲಿ ಮಹಾಸಮಾಧಿ ಪೂಜಾ ವಗೈರಾ ಆಶ್ರಮ ಕಾರ್ಯ ಗಳನ್ನು ನೋಡಿಕೊಳ್ಳುವುದಕ್ಕೆ ಬೇಕಾದ ವ್ಯವಸ್ಥೆಯ ಏರ್ಪಾಟುಗಳನ್ನು ಮಾಡಿದರು. ನಮ್ಮ ಪೂಜ್ಯ ಶ್ರೀಗುರುಗಳು ಅಲ್ಲಿಯೇ ಕೆಲವು ಕಾಲವಿದ್ದು ಕುಂದನಗುರ್ತಿ ಶಿವಲಿಂಗಾ ಶ್ರಮದ ಏಕಾಂತವಾಸಕ್ಕೆ ದಯಮಾಡಿಸಿ ಬ್ರಹ್ಮನಿಷ್ಠೆಯಿಂದಿದ್ದರು.

ಶ್ರೀಮದುಮಾಮಹೇಶ್ವರ ಗುರುಪೀಠ ಪರಂಪರಾಗತ ಪೂಜ್ಯಪಾದ ಶ್ರೀಮತ್ಸ ದಾನಂದ ಸದ್ಗುರು ಸ್ವಾಮಿ ಕರಕಮಲ ಸಂಜಾತ ಶ್ರೀಮತ್ಪರಮಹಂಸ ಪರಿವ್ರಾಜಕಾ ಚಾರ್ಯವರ್ಯ ಶ್ರೀಮತ್ಪೂಜ್ಯಪಾದ ಶ್ರೀಮಚ್ಛಂಕರಾನಂದಗಿರಿ ಗುರುಸ್ವಾಮಿ ವರೇಣ್ಯರು ಸನಕ ಸನತ್ಕುಮಾರಾದಿಗಳಂತೆ ಆಜನ್ಮ ಸಿದ್ಧವಾದ ನಿರ್ಮೋಹ ಜ್ಞಾನೈ ಶ್ವರ್ಯ ಸಂಪನ್ನರಾದ ಮಹಾಪುರುಷರು. ಇವರಿಗೆ ಕಾಂತಾ ಕನಕಗಳಲ್ಲಿ ವೈರಾಗ್ಯ ವೆಂಬುವುದು ಸಾಧನಸಿದ್ಧವಲ್ಲ; ಸಹಜಸಿದ್ಧ. ಶ್ರೀಗಳವರ ಪ್ರಬೋಧೆಗಳಲ್ಲಿ ಪ್ರತಿ ಮಾತು ಭಕ್ತಿಸಿಕ್ತವಾದ ಆತ್ಮಜ್ಞಾನ ಸಂಪುಟೀಕರಣವಾಗಿರುತ್ತೆ. ಸ್ವಾಮಿಗಳ ಜೀವನ ವನ್ನು ಅವಲೋಕಿಸಿದ ಜನರು ಜ್ಞಾನಿಗಳಾಗದೆ ಹೋಗರು. ಸ್ವಾಮಿಗಳವರು ವಿಧ್ಯುಕ್ತವಾಗಿ ಗುರುಸನ್ನಿಧಿಯಲ್ಲಿ ಗುರುಶಿಕ್ಷೆಯನ್ನೊಂದಿ ತ್ರಿಕರಣಗಳಿಂದ ಗುರುಸೇವೆ ಯನ್ನು ಮಾಡಿ ಗುರುಕೃಪೆಗೆ ಪಾತ್ರರಾದವರು. ಶ್ರೀ ಕಾಶೀ ಕ್ಷೇತ್ರದಲ್ಲಿ ಪ್ರಸ್ಥಾನ ತ್ರಯ ಭಾಷ್ಯ ಶಾಂತಿಯನ್ನು ಹೊಂದಿದ ಮಹನೀಯರು. ಶ್ರೀಮದುಮಾಮಹೇಶ್ವರ ಗುರುಪೀಠ ಪರಂಪರಾ ಭಕ್ತರ ಭಕ್ತಿಭಾವಾನುಸಾರ, ಸಂಪ್ರದಾಯಕರಾದ ಮಹನೀ ಯರ ಆಜ್ಞಾನುಸಾರ, ವಿಧ್ಯುಕ್ತವಾಗಿ ಗುರುಪೀಠ ಸಮಾರೋಹಣವನ್ನು ಮಾಡಿ

ದವರು. ಶ್ರೀಗಳವರು ಈಗ ಪ್ರಬೋಧ ರೂಪವಾಗಿ ಗುರು ಸೇವೆಯನ್ನು ಮಾಡು ತ್ತಿದ್ದಾರೆ. ಆ ದಿನ ಶ್ರೀಗಳವರ ಪೂರ್ವಾಶ್ರಮದ ಬಾಲ್ಯದಲ್ಲಿ ಉಪನಯನ (ಅಯ್ಯಾಚಾರ ಸಂಸ್ಕಾರ) ವಾದ ನಂತರ ಉಪದೇಶಕರಾದ ಆ ಕುಲಗುರುಗಳು ನಮ್ಮ ಶ್ರೀಗಳವರನ್ನು ವೀಕ್ಷಿಸುತ್ತಾ "ಮಗೂ ! ನಿನ್ನ ಮುಖಮುದ್ರೆಯನ್ನು ನೋಡಲು ಮುಂದೆ ನೀನು ದೊಡ್ಡ ಗುರುಪೀಠವನ್ನು ಅಧಿಷ್ಠಿಸುವ ಸ್ವಾಮಿಯಾಗುತ್ತೀಯಯ್ಯಾ!" ಎಂದು ನುಡಿದಿದ್ದರಂತೆ. ಆ ಮಹನೀಯರಂದ ಸತ್ಯವಾಕ್ಕು ಸಾರ್ಥಕವಾಯಿತು.

ಶ್ರೀಗಳವರು ಆಂಧ್ರ, ಕರ್ನಾಟಕ, ಸಂಸ್ಕೃತ, ಹಿಂದೀ ಭಾಷೆಗಳಲ್ಲಿ ಅನೇಕ ಪ್ರಮಾಣ ಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿ ಪರಿಶ್ರಮಿಸಿ ಅಖಂಡವಾಗಿ ಕೃಷಿ ಮಾಡಿದವರು. ವಿನಿರ್ಮಲ ಸಾಹಿತ್ಯ ರಸಪ್ರಿಯರು.

ಭಕ್ತಾದಿಗಳ ಇಚ್ಛೆಯಂತೆ ಈ ವರ್ಷ ಶ್ರೀ ಚಾತುರ್ಮಾಸ್ಯ ಮಹಾವ್ರತವು ಶ್ರೀ ಶಿವಲಿಂಗಾಶ್ರಮದಲ್ಲೇ ನಡೆಸಲು ನಿರ್ಧರಿಸಲ್ಪಟ್ಟಿತು.

ಲತ್ತವರ (ರತ್ನಗಿರಿ)ದಿಂದ ಶ್ರೀ K. ಬಂಡೆಯ್ಯಸ್ವಾಮಿ ಎನ್ನುವ ಬ್ರಹ್ಮಚಾರಿ (ಇವರೇ ಮುಂದೆ ಶ್ರೀಗಳವರಿಂದ ತುರೀಯಾಶ್ರಮವನ್ನು ಪಡೆದ ಶ್ರೀ ಶಿವಾನಂದ ಸ್ವಾಮಿಗಳು) ಶ್ರೀಗಳವರನ್ನು ಕರೆದುಕೊಂಡು ಹೋಗಲು ಭಕ್ತಿಯಿಂದ ಕುಂದನಗುರ್ತಿ ಮಠಕ್ಕೆ ಬಂದು, ಸ್ವಾಮಿಗಳವರು ಲತ್ತವರಕ್ಕೆ ದಯಮಾಡಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸಿದರು. ಸ್ವಾಮಿಗಳವರು ಆ ಗ್ರಾಮಕ್ಕೆ ಹೋಗದೆ ಬಹುಕಾಲವಾಗಿತ್ತು. ಊರ ಜನರೆಲ್ಲರೂ ಎಷ್ಟೋ ಭಕ್ತಿಯಿಂದ ಶ್ರೀಗಳವರ ಸ್ವಾಗತವನ್ನು ಬಯಸಿ ಕರೆದು ಕೊಂಡು ಹೋದರು. ಆ ಗ್ರಾಮದ ಶಿವಾಲಯದಲ್ಲಿ ಸನ್ನಿಧಿ ಮಾಡಿಸಿದರು (ಬಿಡದಿ ಯಾಯಿತು). V. ಹನುಮಪ್ಪ, B. ಆಂಜನೇಯ (ಇವರೇ ಬಾಲ್ಯದಲ್ಲಿ ಸ್ವಾಮಿಗಳ ಹಿಂದೆ ಅಡವಿಗೆ ಹೋದವರು) D. ವೀರಭದ್ರಯ್ಯ, K. ಈಶ್ವರಪ್ಪ, B. ಚಂದ್ರಪ್ಪ, P. ವಾಮನಗೌಡ B.A. ಮೊದಲಾದ ಭಕ್ತರು ಭಕ್ತಿಪೂರ್ವಕವಾಗಿ ನೋಡಿ ಕೊಂಡರು. ಸ್ವಾಮಿಗಳವರ ಸಂದರ್ಶನದಿಂದ ಎಲ್ಲರಿಗೂ ಮಹದಾನಂದವಾಯಿತು. ಶ್ರೀಗಳವರ ನಿತ್ಯ ನಿಯಮಾನುಷ್ಠಾನಗಳಿಗೆ ಬೇಕಾದ ಎಲ್ಲಾ ವ್ಯವಸ್ಥೆಗಳು ಶಿವಾಲಯ ದಲ್ಲಿ ಏರ್ಪಾಟು ಮಾಡಿದರು. ಉದಯ ಸಾಯಂಕಾಲಗಳಲ್ಲಿ ಭಕ್ತಿ, ಜ್ಞಾನ, ವೈರಾ ಗ್ಯೋಪೇತವಾದ ಪ್ರವಚನಗಳೂ ಉಪನ್ಯಾಸಗಳೂ ನಡೆದವು. ಸುತ್ತಮುತ್ತಲಿನ ಅನೇಕ ಜನರೊಂದಿಗೆ ಆ ಸಭೆಯು ಬೃಹದ್ರೂಪವಾಗಿತ್ತು.

ಪರಮೇಶ್ವರನನ್ನು ಶರಣು ಹೊಂದಿದವರ ನಡೆ–ನುಡಿಗಳಲ್ಲಿ ಯಾವಾಗಲೂ ತಪ್ಪು ಹೆಜ್ಜೆಗಳಿಡುವುದೆಂಬುದಿರುವುದಿಲ್ಲ.

ವೈರಾಗ್ಯವು ಕಡಿಮೆಯಾಗಿದ್ದ ಮಾನವನಲ್ಲಿ ವಿಷಯಾನಂದಗಳು ಬಲವಾಗಿ ಆಕರ್ಷಿಸಿ ಆಧ್ಯಾತ್ಮಿಕ ಶಕ್ತಿಯನ್ನು ನಿರ್ಬಲಗೊಳಿಸುವವು. ನೀವೆಲ್ಲರು ಆಚಾರ

ವಿಚಾರ ಸಂಪನ್ನರಾಗಿ ಚನ್ನಾಗಿರಬೇಕು. ನಡೆನುಡಿಗಳು ಬಂಗಾರದಂತಿರಲಿ. 'ಸತ್ಯಂ ವದ, ಧರ್ಮಂ ಚರ' ಎಂದು ವೇದವು ಹೇಳುತ್ತಿದೆ.

ಅಭ್ಯಾಸದಿಂದಲೇ ನಿಮ್ಮ ನಡೆ, ನುಡಿ ಬಂದಿದೆ. ಆದ್ದರಿಂದ ಒಳ್ಳೆಯದನ್ನೆ ಅಭ್ಯಸಿಸುತ್ತಾ ಮಾನವ ಪರಮಧರ್ಮವಾದ ದಯ, ಧರ್ಮ, ದಾನ, ಜ್ಞಾನ, ಭಕ್ತಿಗಳನ್ನು ಪಡೆಯಬೇಕು. ದೇವರ ಒಲಿಮೆಯಾಗುತ್ತೆ. ಇಂಥಹ ಮಹನೀಯ ಮೂರ್ತಿ ಭಕ್ತ ಭಂಡಾರಿ ಬಸವೇಶ್ವರ. ಈತನ ಚರಿತ್ರೆ ಅಗಾಧ; ಅವರ ವಚನಗಳು ಅಪೂರ್ವ............

ಬುದ್ಧಿವಂತನು ತಾನು ಮಾಡಿದ ಒಳ್ಳೆಯದನ್ನು, ತನಗೆ ಇತರರಿಂದ ಆದ ಅಪಕಾರ (ಕೆಟ್ಟದ್ದನ್ನು) ಸ್ಮರಿಸಬಾರದು. ತನ್ನ ಒಳ್ಳೆಯದರ ಸ್ಮರಣೆಯಿಂದ ಅಹಂಕಾರವು, ಕೆಟ್ಟದರ ಸ್ಮರಣೆಯಿಂದ ಕೋಪವು ಬರುತ್ತೆ. ಅಪರೋಕ್ಷವಾದ ಆತ್ಮಾನುಭವ, ನಿಜಶಾಂತಿ ಲಭಿಸಬೇಕಾದರೆ ಆತ್ಮ ವಿಷಯಕವಾದ ಅರಿವು ಉಂಟಾಗಬೇಕು.

ಭಕ್ತರೂ ಮುಮುಕ್ಷುಗಳೂ ಆದವರು ಈ ಲೋಕದ ಸ್ತುತಿನಿಂದೆಗಳಿಗೆ ಒಳಗಾಗಬಾರದು. ಅವರೆಷ್ಟು ಸುಲಭವಾಗಿ ಸ್ತುತಿಸುತ್ತಾರೋ ಅಷ್ಟೇ ಸುಲಭವಾಗಿ ನಿಂದಿಸುತ್ತಾರೆ. ನಿಮ್ಮ ಮನಸ್ಸಾಕ್ಷಿ ಒಪ್ಪಿ ಸತ್ಯಶೀಲರಾಗಿ ಜೀವಿಸಬೇಕು.

ಎಲ್ಲರಲ್ಲಿಯೂ ದೇವರಿದ್ದಾನೆ. ಅದು ನಾನು, ಆ ದೇವರು ನನ್ನಲ್ಲಿ ಬೆಳಗುತ್ತಿದ್ದಾನೆಂಬುವ ಪ್ರಜ್ಞೆಯಾಗಬೇಕು. ಭಕ್ತರು ಎಷ್ಟು ಕಡಿಮೆಯಾಗಿ ಮಾತನಾಡಿದರೆ ಅಷ್ಟು ಶುಭ. ಸದಾ ಮನಸ್ಸಿನಲ್ಲಿ ಮಂತ್ರವನ್ನು ನೆನೆಯುತ್ತಲಿರಬೇಕು.

ಅಗ್ನಿಯನ್ನು ತಿಳಿದಾಗಲಿ ತಿಳಿಯದೆ ಆಗಲಿ ಮುಟ್ಟಿದರೆ ಸುಡುವಂತೆ, ಭಗವನ್ನಾಮವು ತಿಳಿದಾಗಲಿ ತಿಳಿಯದಾಗಲಿ ಜಪಿಸಿದರೆ ಪಾಪವು ಸುಟ್ಟು ಹೋಗುತ್ತದೆ. ಪ್ರತಿಬಂಧಗಳು ಅಳಿದು ಹೋಗುತ್ತವೆ.

ಪರಮಾತ್ಮ ಇದ್ದಾನೆಂದು ತಿಳಿಯುವುದು ಪರೋಕ್ಷ ಜ್ಞಾನ; ಆ ಪರಮಾತ್ಮ (ಬ್ರಹ್ಮವಸ್ತು) ನಾನಾಗಿದ್ದೇನೆಂದು ತಿಳಿಯುವುದು ಅಪರೋಕ್ಷ ಜ್ಞಾನ.

ಇಷ್ಟು ಶ್ರದ್ಧಾ ಭಕ್ತಿಗಳಿಂದ ಗುರುದೈವ ಪೂಜ್ಯ ಬುದ್ಧಿಯಿಂದ ವರ್ತಿಸುವ ನೀವು ಅನುದಿನ ನಿಯಮ ನಿಷ್ಠೆಗಳೊಡನೆ ಶ್ರೀಮದ್ಭಗವದ್ಗೀತಾ ಪಾರಾಯಣ, ಶಿವ ಮಹಾಮಂತ್ರದ ಅನುಷ್ಠಾನ, ಮಿತವಾದ ವರ್ತನಶೀಲರಾಗಿ ಒಳ್ಳೆಯವರಾಗಿರಬೇಕು. ದೇವರು ನಿಮಗೆ ಅನಂತ ಶುಭಗಳನ್ನು ಕೊಡುತ್ತಾನೆ. ಹೀಗೆ 3 ದಿನಗಳಲ್ಲಿದ್ದು ಕುಂದನಗುರ್ತಿ ಶ್ರೀ ಶಿವಲಿಂಗಾಶ್ರಮಕ್ಕೆ ದಯಮಾಡಿಸಿದರು.

# ಪ್ರಬೋಧ ಘಟ್ಟ

## ಶ್ರೀ ಶಿವಲಿಂಗಾಶ್ರಮ
## 10ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ 1954 ಸಂ||

ವಿಜಯನಾಮ ಸಂ||ರ ಆಷಾಢ ಶುದ್ಧ ಏಕಾದಶಿ ಬ್ರಹ್ಮ ಮುಹೂರ್ತದಲ್ಲಿ ಯಥಾಶಾಸ್ತ್ರವಾಗಿ ಶ್ರೀ ಉಮಾಮಹೇಶ್ವರ– ಚಂದ್ರಮೌಳೀಶ್ವರ ವ್ಯಾಸ– ಗುರು ಪೂಜಾದಿ ಎಲ್ಲಾ ವೈದಿಕ ಕಾರ್ಯಗಳಿಂದ, ಮಹಾವ್ರತವು ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟು ಉದಯ ಸಾಯಂಕಾಲಗಳಲ್ಲಿ ಶಾಸ್ತ್ರ ಶ್ರವಣಾದಿಗಳಿಂದ ಮಹಾವ್ರತವು ಶಿವಪ್ರದವಾಗಿ ನಡೆಯಿತು. ಈ ವ್ರತ ಮಧ್ಯಕಾಲದಲ್ಲಿ ಅಳ್ಳಗಡ್ಡ ಶ್ರೀ ಶಂಕರಾನಂದ ಸ್ವಾಮಿಗಳವರು, ಗಂಡಿಕ್ಷೇತ್ರ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳವರು ದಯ ಮಾಡಿಸಿದರು. 5 ದಿನಗಳು ಈ ಮಹಾತ್ಮರ ಉಪನ್ಯಾಸಗಳು ಅಪೂರ್ವವಾಗಿ ನಡೆದವು. ಅನೇಕ ಭಕ್ತಾದಿಗಳು ಸೇರಿದರು. ಕಾರ್ಯಕ್ರಮವು ಮಂಗಳಪ್ರದವಾಗಿ ನಡೆದು 10–11–54 ತಾರೀಕು ಪೂರ್ಣವಾಯಿತು. ಸಂಗಮೇಶ್ವರ ಕ್ಷೇತ್ರದಲ್ಲಿ ದೀಕ್ಷಾವಿರಮಣಾದಿ ಕಾರ್ಯಗಳಾದವು. ವ್ರತಾನಂತರ ಶ್ರೀಗಳವರು ಅಲ್ಲಿಯೇ ನಿಷ್ಠೆಯಲ್ಲಿದ್ದರು.

ಗುಂತಕಲ್ಲು ಪಟ್ಟಣ ಶ್ರೀ ಕೋದಂಡರಾಮಸ್ವಾಮಿ ಆಲಯಕ್ಕೆ ಅಲ್ಲಿಯ ಭಕ್ತರು ಭಕ್ತಿಯಿಂದ ಶ್ರೀಗಳವರನ್ನು ಪ್ರವಚನ ಮಾಡಲು ಕರೆದುಕೊಂಡು ಹೋದರು. A. ರಾಮಪ್ಪ, ಗೌರಮ್ಮ ಪುಣ್ಯದಂಪತಿಗಳು ಶ್ರೀ ಸ್ವಾಮಿಗಳಿಗೆ ಪ್ರತ್ಯೇಕ ಏರ್ಪಾಟುಗಳನ್ನು ಮಾಡಿದರು. ಭಕ್ತಿಯಿಂದ ನೋಡಿಕೊಂಡರು. ರಾಮಾಲಯದಲ್ಲಿ ಶ್ರೀ ಸ್ವಾಮಿಗಳವರು ಸರ್ವ ಜನಾನುಮೋದವಾಗಿ ಶ್ರೀಮದ್ರಾಮಾಯಣ ತತ್ತ್ವಾರ್ಥವನ್ನು ಬೋಧಿಸಿದರು. ಅಸಂಖ್ಯಾತ ಜನರು ಸೇರಿ ಶ್ರದ್ಧೆಯಿಂದ ಶ್ರವಣ ಮಾಡಿದರು.

ಶ್ರೀಗುರುಸ್ಮರಣೆ ಗುರುಪೀಠ ಸ್ಮರಣೆಯನ್ನು ಮಾಡಿ "ಆದೌ ರಾಮ ತಪೋವನಾಧಿಗಮನಂ ಹತ್ವಾಮೃಗಂ ಕಾಂಚನಮ್ । ವೈದೇಹೀ ಹರಣಂ । ಜಟಾಯು ಮರಣಂ । ಸುಗ್ರೀವ ಸಂಭಾಷಣಮ್ । ವಾಲೀ ನಿಗ್ರಹಣಂ । ಸಮುದ್ರ ತರಣಂ । ಲಂಕಾಪುರೀ ದಹನಮ್ । ಪಶ್ಚಾದ್ರಾವಣ ಕುಂಭಕರ್ಣ ಹನನಂ । ಏತದ್ಧಿ ರಾಮಾಯಣಮ್" ಎಂಬ ಈ ಏಕ ಶ್ಲೋಕವನ್ನು ಉದಹರಿಸುತ್ತಾ ಸರ್ವಜನಾನಂದಪ್ರದವಾಗಿ ಶ್ರೀ ರಾಮಚರಿತವನ್ನು ಹೇಳಿದರು.

ಶ್ರೀಮದ್ರಾಮಾಯಣವು ಆದಿಕಾವ್ಯವು. ತತ್ಪ್ರತಿಪಾದ್ಯನಾದ ಶ್ರೀ ರಾಮ ಭದ್ರನು ನಿಮ್ಮೆಲ್ಲರ ಹೃದಯೇಶನಾಗಿ ಪ್ರತ್ಯಗಾತ್ಮ ರೂಪನಾಗಿದ್ದಾನೆ. ರಾಮಾಯಣ ವೆಂದರೆ ಸರ್ವರ ಇಚ್ಛೆಗೂ ವಿಷಯವಾದ ಆನಂದ. ಆಯಾನಂದವನ್ನೇ ಬ್ರಹ್ಮ ವೆಂದು ಉಪನಿಷತ್ತುಗಳು ಹೇಳುತ್ತಿವೆ. 'ರಾ' ತತ್ಪದಾರ್ಥ, 'ಮ' ತ್ವಂ ಪದಾರ್ಥ, 'ರಾಮ' ಅಸಿಪದ". ಮಂದ ಮಧ್ಯಮಾಧಿಕಾರಿಗಳಿಗೆ ಆತ್ಮತತ್ವವನ್ನರಿಯಲು ದುರವ ಗಾಹವಾದ್ದರಿಂದ, ಗುಡಾಂಗುಳಿ ನ್ಯಾಯೇನ ಸಾಕ್ಷಾತ್ ವಿಶ್ವಂಭರ ಮೂರ್ತಿಯಾದ ಪರಮೇಶ್ವರನೇ ಶ್ರೀ ರಾಮಚಂದ್ರ ಮೂರ್ತಿ ಎಂಬ ನಾಮದಿಂದ ದಶರಥಾತ್ಮಜನಾಗಿ ಲೋಕದಲ್ಲಿ ಲುಪ್ತವಾದ ಧರ್ಮವನ್ನು ಉದ್ಧರಿಸಲು ಅವತರಿಸಿದ ಮಹಾವತಾರ ವೆಂದು ಕಥೆ.

"ನಾರದೋಪದೇಶದಿಂದ ಬ್ರಹ್ಮದೇವನ ಆಜ್ಞೆಯ ಮೇರೆಗೆ ಶ್ರೀ ವಾಲ್ಮೀಕಿ ಮಹರ್ಷಿ ರಾಮಾಯಣವನ್ನು ರಚಿಸಿದನು ............" ಲೋಕದಲ್ಲಿ ರಾಮಾಯಣ ಗಳನೇಕವಿವೆ. ಆದರೂ ಮೊದಲನೆಯದು ವಾಲ್ಮೀಕಿ ರಾಮಾಯಣವೇ. ಪ್ರಾಯಶಃ ಭಾರತೀಯರಲ್ಲಿ ರಾಮಾಯಣ, ಭಾರತ, ಭಾಗವತ, ಇವುಗಳನ್ನು ತಿಳಿಯದವರು ಯಾರೂ ಇಲ್ಲ. ಇವು ಕಥೆಗಳಾದರೂ ಇವುಗಳಲ್ಲಿ ಭಗವದನುಕಥನ ಪೂರ್ವಕವಾದ ನೈತಿಕ, ಧಾರ್ಮಿಕ, ಆಧ್ಯಾತ್ಮಿಕಾದಿ ಉತ್ತಮ ಪ್ರಬೋಧೆಗಳು ಅಸಂಖ್ಯಾತವಾಗಿರು ವುದರಿಂದ ಎಷ್ಟು ಸಲ ಕೇಳಿದರು ಇವು ಮಧುರವೇ; ಇತ್ಯಾದಿಯಾಗಿ ಉಪಕ್ರಮಿಸಿ ಸಂಗ್ರಹವಾಗಿ ರಾಮಾಯಣದಲ್ಲಿನ ಒಂದೊಂದು ಘಟ್ಟವನ್ನು ಉತ್ತಮ ಉಪಮಾನೋ ಪಮೇಯಗಳಿಂದ ನವರಸ ಭರಿತವಾದ ರಾಮಾಯಣ ತತ್ವಾರ್ಥವನ್ನು, ಆಯಾ ಘಟ್ಟ ಗಳಲ್ಲಿ ಬರುವ ತತ್ತತ್ ಪಾತ್ರಗಳನ್ನು ಚನ್ನಾಗಿ ಪೋಷಿಸುತ್ತಾ, ಕಥೆಯ ರಸವು ಉಕ್ಕೇರಿ ಹರಿದು ಕಾಣಿಸುವಂತೆ ಶಾಸ್ತ್ರೀಯವಾದ ಪ್ರಕ್ರಿಯೆಗಳಿಂದ ಶ್ರುತಿ ಸ್ಮೃತಿ ಗಳನ್ನು ಉದಾಹರಿಸುತ್ತಾ ಶ್ರೀ ರಾಮಚರಿತವನ್ನು ಶ್ರುತಪಡಿಸಿದರು........"

ಲೋಕದಲ್ಲಿ ಎರಡೇ ವಂಶಗಳಿವೆ. ಸೂರ್ಯವಂಶ, ಚಂದ್ರವಂಶ. ಅಂದಾಗ ಸೂರ್ಯ ಚಂದ್ರರನ್ನು ಬಿಟ್ಟು ವರ್ತಿಸುವವರು ಯಾರೂ ಇಲ್ಲ. ಈಗ ಹೇಳುವ ಸೂರ್ಯವಂಶದ ರಾಜರ ಕಥೆಯೇ ರಾಮಾಯಣ. ಇನ್ನು ಚಂದ್ರವಂಶದ ರಾಜರ ಕಥೆ ಮಹಾಭಾರತ. ಪ್ರಸ್ತುತವಾದ ಈ ಸೂರ್ಯವಂಶಾಭಿವರ್ಣನೆಯನ್ನು ಕುರಿತು ಮಹಾಕವಿ ಕಾಳಿದಾಸ ರಘುವಂಶ ಕಾವ್ಯಾರಂಭದಲ್ಲಿ "ಕ್ವಸೂರ್ಯಃ ಪ್ರಭವೋ ವಂಶಃ, ಕ್ವಚಾಲ್ಪ ವಿಷಯಾ ಮತಿಃ, ತಿತೀರ್ಷುರ್ದುಸ್ತರಂ ಮೋಹಾದುಡುಪೇ ನಾಸ್ಮಿ ಸಾಗರಮ್" ಎಂಬುದಾಗಿ ತನ್ನ ನಿರಹಂಕೃತಿಯನ್ನು ತೋರಿಸಿಕೊಂಡಿದ್ದಾನೆ. ಉಮಾ ಮಹೇಶ್ವರ ಸಂವಾದಾತ್ಮಕವಾಗಿ ರಾಮಾಯಣ ರಾಮಪದ ತತ್ವಾರ್ಥವೇ ಶಿವಸ್ವರೂಪ. ಶಿವಕೇಶವ ಭೇದವಿಲ್ಲದ ಅಭೇದಾರ್ಥ ಪ್ರತಿಪಾದನೆಯೇ ಇದರಲ್ಲಿ ಕಾಣುತ್ತೆ.

ದುಷ್ಟರ ಭಾರವನ್ನು ಭರಿಸಲಾರದೆ ಭೂದೇವಿ ಶ್ರೀ ಮಹಾವಿಷ್ಣುವನ್ನು ಕುರಿತು ನುತಿಸಿದಳು............" ಧರ್ಮಾತ್ಮನಾದ ಸೂರ್ಯವಂಶದ ದಶರಥ ಮಹಾರಾಜ ನ್ಯಾಯವಾಗಿ ರಾಜ್ಯಪಾಲನೆ ಮಾಡುತ್ತಾ ಮಕ್ಕಳಿಲ್ಲದ ಕೊರತೆಯಿಂದ ಋಷಿಗಳ ಆಜ್ಞಾನುಸಾರ ಪುತ್ರಕಾಮೇಷ್ಟಿಯಾಗ ಮಾಡಿದನು. ಯಜ್ಞಪ್ರಸಾದ ರೂಪವಾದ ಪಾಯಸವನ್ನು ಪಡೆದು ತನ್ನ ಮೂವರು ಪತ್ನಿಯರಾದ ಕೌಸಲ್ಯ, ಸುಮಿತ್ರ, ಕೈಕೇಯಿಗಳಿಗೆ ಆ ಪ್ರಸಾದವನ್ನು ಕೊಟ್ಟನು. ತನ್ಮೂಲಕ ಕೌಸಲ್ಯಾದೇವಿ ಯಲ್ಲಿ ಶ್ರೀ ರಾಮಚಂದ್ರನು, ಸುಮಿತ್ರಾದೇವಿಯಲ್ಲಿ ಲಕ್ಷ್ಮಣ, ಶತೃಘ್ನರು, ಕೈಕೇಯಿ ಯಲ್ಲಿ ಭರತನು ಪುತ್ರರಾಗಿ ಜನಿಸಿದರು. ತಮ್ಮ ಶೈಶವ ಲೀಲೆಗಳಿಂದ ಬಾಲಕರು ತಾಯಿ ತಂದೆಗಳನ್ನು ಆನಂದಾಬ್ಧಿಯಲ್ಲಿ ಮುಳುಗಿಸುತ್ತಿದ್ದರು. ಈ ಘಟ್ಟವನ್ನು ಶ್ರೀಗಳವರು ಪುತ್ರರೆಂದರೆ ಯಾರು ? ಅದರಿಂದಾಗುವ ಪ್ರಯೋಜನವೇನು? ಸಂತಾನ ಪ್ರಾಪ್ತಿಯನ್ನು ಜನರು ಏಕೆ ಬಯಸುವರು ? 'ಅಪುತ್ರಸ್ಯ ಗತಿರ್ನಾಸ್ತಿ'ಎನ್ನುವ ಇದರ ರ್ಥವೇನು. ಇತ್ಯಾದಿ ವಿಷಯಗಳು ಅತ್ಯಂತ ಹೃದಯಂಗಮವಾಗಿ ವಿವರಿಸಿದರು...."

ಹೀಗೆ ಸಂಪೂರ್ಣ ರಾಮಾಯಣವನ್ನು ಅದರ ಮೂಲವಾದ ತಾತ್ಪರ್ಯಾರ್ಥ ವನ್ನು ಕೆಲವು ದಿನಗಳು ಸಂಗ್ರಹವಾಗಿ ಬೋಧಿಸಿದರು............" ಸರ್ವರಿಗೂ ಮಹ ದಾನಂದವಾಯಿತು. ಹೆಚ್ಚು ವಿಷಯಗಳು ತಿಳಿಸಲು ಸ್ಥಲಾಭಾವದಿಂದ ಬಿಟ್ಟಿದ್ದೇವೆ.

ಅನಂತರ ತಮ್ಮ ಗುರುಗಳ ಪುಣ್ಯಾರಾಧನೆಗಾಗಿ ಗಂಜಿಗುಂಟೆ ಶ್ರೀಮಠಕ್ಕೆ ಸ್ವಾಮಿಗಳವರು ದಯಮಾಡಿಸಿದರು. ಗುರು ಮಹಾಕಾರ್ಯವು ವಿಧ್ಯುಕ್ತವಾಗಿ ಮಹದ್ವೈಭವದಿಂದ ಆನಂದಪ್ರದವಾಗಿ ಮೂರು ದಿನಗಳು ನಡೆಯಿತು. ಈ ಕಾರ್ಯ ಕ್ರಮಕ್ಕೆ ಶ್ರೀ ಶುದ್ಧಚೈತನ್ಯ ಸ್ವಾಮಿಗಳು, ಬ್ರಹ್ಮಶ್ರೀ ಶೇಷಯ್ಯ ಸ್ವಾಮಿ, ಶ್ರೀ ಶಿವ ಪ್ರಕಾಶಾನಂದಸ್ವಾಮಿ ಮುಂತಾದ ಮಹಾತ್ಮರು ಬಂದಿದ್ದರು. ಅನೇಕ ಭಕ್ತಾದಿಗಳು ಸೇರಿದ್ದರು, ಅಪೂರ್ವವಾಗಿ ಶ್ರೀಗುರು ಬ್ರಹ್ಮ ಸಭೆ ನಡೆದು ಪೂರ್ಣವಾಯಿತು.

"ಜೀವೋ ಬ್ರಹ್ಮೈವ ನಾಪರಃ" ಎಂದಂತೆ ಉಪಾಧಿ ನಿಮಿತ್ತ ಭೇದವೇಯಾಗಲಿ ವಸ್ತುತಃ ಭೇದವಿಲ್ಲ. ಸಿದ್ಧವಸ್ತು ಒಂದೇ ಬುದ್ಧಿಯ ಉಪಾಧಿಯಿಂದ ವಿಭಿನ್ನವಾಗಿ ದ್ದಂತೆ ತೋರುತ್ತೆ. ಆದ್ದರಿಂದ ಮುಮುಕ್ಷುಗಳು ಉತ್ತಮವಾದ ಸಂಸ್ಕಾರವನ್ನು ಹೊಂದಿ ಸತ್ಯಾತ್ಮನೇ ನಾನೆಂಬ ದಿವ್ಯಾನುಭೂತಿಯಿಂದ ಭೇದವನ್ನು ಬಾಧಿಸಿ ನಿಜ ನಿಷ್ಠೆಯನ್ನು ಹೊಂದಬೇಕು. ಭೇದ ಭಾವನೆಗೆ ಅವಕಾಶ ಕೊಡಬಾರದು. "ಏಕಂ ಸದ್ವಿಪ್ರಾ ಬಹುಧಾ ವದಂತಿ........."

ಅನಂತರ ನಂದ್ಯಾಲ ಬೊಗ್ಗರಪು ಪುಲ್ಲಯ್ಯ ಶ್ರೇಷ್ಠಿ ಸುಬ್ಬಮ್ಮ ಪುಣ್ಯ ದಂಪತಿ ಗಳ ಓಂಕಾರ ಭವನದಲ್ಲಿ ಶ್ರೀಮದುತ್ತರಾಯಣ ಪುಣ್ಯಕಾಲ ಪರ್ಯಂತವು ಶಾಸ್ತ್ರ ಶ್ರವಣಾದಿಗಳು ಅತ್ಯುತ್ತಮ ರೀತಿಯಿಂದ ನಡೆದವು. ಶ್ರೀ ತ್ಯಾಗರಾಜ ಸ್ವಾಮಿಯ ಉತ್ಸವವು ಯಥಾರೀತಿ ನಡೆಯಿತು.

ದೃಢಾಪರೋಕ್ಷ ಜ್ಞಾನ ನಿಷ್ಠೆಯಾಗುವ ಪರ್ಯಂತ ದೇಶ ಕಾಲ ಸ್ಥಳಗಳ ಸಾನುಕೂಲ್ಯತೆ ಸಾಧಕರಿಗೆ ಅತ್ಯವಶ್ಯಕ.

ಬ್ರಹ್ಮನಿಷ್ಠೆಗೆ ಪ್ರತಿಬಂಧಕವೂ ಆತ್ಮ ವಿಸ್ಮೃತಿಗೆ ಹೇತುವೂ ಆದ ಎಂಥಾ ವಿಷಯವೇ ಆಗಲಿ, ಅದನ್ನು ಮುಮುಕ್ಷುವು ಆದರಿಸಬಾರದು.

ಪ್ರ : ಬಿಂಬ ಪ್ರತಿಬಿಂಬ ನ್ಯಾಯ ದೃಷ್ಟಾಂತ ಹೇಳುತ್ತೀರಲ್ಲಾ, ಆ ಬಿಂಬ ಪ್ರತಿಬಿಂಬವು ಭೇದವಾ ಅಭೇದವಾ ಸ್ವಾಮೀ ?

ಉ : ಅಯ್ಯಾ ಈ ಭೇದಾಭೇದ ತಾದಾತ್ಮ್ಯಗಳು ಅನಿರ್ವಚನೀಯವಾಗಿವೆ. ತತ್ವತಃ ವಿಚಾರಿಸಿ ನೋಡಲು ಉಪಾಧಿಕೃತವಾದ ಭೇದವು ಅನುಭವದಿಂದ ನೋಡಲು ಅದು ಅಭಾವವಾಗಿದೆ. ಹೇಗೆಂದರೆ ತಾನು ಪೂರ್ವಾಭಿಮುಖವಾಗಿ ದರ್ಪಣವನ್ನು ನೋಡಿದಾಗ ಅದು ಪಶ್ಚಿಮ ಮುಖವಾಗಿ ಕಾಣುತ್ತದೆ. ಸೋಪಾಧಿಕ ಭೇದ ಪ್ರತೀತಿಯಾದರೂ ಅನುಭವದಲ್ಲಿ ಭೇದವಿಲ್ಲೆಂದು ತಿಳಿಯುವದು ತಾತ್ಪರ್ಯ. ಗುರು ಮುಖದಿಂದ ಸಂಪ್ರಾಪ್ತವಾಗದ ಕೇವಲ ಪಾಂಡಿತ್ಯ, ಅಭಿಮಾನ ಕಾರಣವಾಗಿ ಅಹಂಕಾರಯುಕ್ತವಾಗುತ್ತೆ. ಆದ್ದರಿಂದ ಬ್ರಹ್ಮಾನುಭವ ರಹಿತವಾದ ಪಾಂಡಿತ್ಯ ನಿಜ ಶಾಂತಿಯನ್ನು ಕೊಡಲಾರದು.

ಆ ಬಳಿಕ ಭಕ್ತರ ಪ್ರಾರ್ಥನಾನುಸಾರ ಬೆಂಗಳೂರು ಬ್ರಹ್ಮವಿದ್ಯಾಶ್ರಮಕ್ಕೆ ಶ್ರೀಗಳವರು ದಯಮಾಡಿಸಿದರು. ಅಲ್ಲಿ ತಮ್ಮ ನಿತ್ಯ ನಿಯಮಾನುಷ್ಠಾನ ಶಾಸ್ತ್ರ ಪ್ರವಚನಗಳಿಂದ ಸುಖವಾಗಿದ್ದರು.

ಇಷ್ಟರಲ್ಲಿ ಪೂಜ್ಯ ಶ್ರೀ ಗುರುದೇವರ ಮಾತೃದೇವಿ ಶಿವಾಧೀನವಾದಂತೆ ತಿಳಿಯಿತು. ಭಕ್ತಿಯಿಂದ ಶ್ರೀ ಸ್ವಾಮಿಗಳವರು ತಾಯಿಗೆ ಪ್ರಣಾಮಗಳನ್ನು ಸಲ್ಲಿಸಿದರು. "ಜನನೀ ನೀನು ಕೊಟ್ಟ ಈ ದೇಹದಿಂದ, ಮತ್ತಿನ್ನು ದೇಹವನ್ನು ಪಡೆಯದ, ಜನ್ಮ ಜರಾಮರಣ ದುಃಖಗಳನ್ನು ಹೊಂದದ, ಆತ್ಮಜ್ಞಾನ ನಿಷ್ಠೆಯನ್ನು ಸದಾ ಕೊಟ್ಟು ಸಂರಕ್ಷಿಸು. ಎಷ್ಟೋ ನಿಷ್ಕಾಮ ಪುಣ್ಯ ತಪಃಫಲವಾದ ಈ ದೇಹವನ್ನು ನನಗೆ ಕೊಟ್ಟಿರುವೆ. ನನ್ನ ಹೆತ್ತ ತಾಯಿಯಾದ ನೀನು ಧನ್ಯಳು. ನನಗೆ ಜನ್ಮವಿಲ್ಲ, ನಿನ್ನ ಮಹೋಪಕಾರ ಜನ್ಮಾವಧಿ ಸಂಸ್ಮರಣೀಯವಮ್ಮಾ !" ಹೀಗೆಂದು ಹೇಳುತ್ತಾ ಅಂತರ್ಮುಖರಾದರು ಮತ್ತು ಅಲ್ಲಿ ಶ್ರೀ ಸ್ವಾಮಿಗಳವರ ಆಸ್ತಿ ಪಾಸ್ತಿ ವಿಷಯವಾಗಿ ಹಲವಾರು ಜನ ಬಂದು ಏನೇನೋ ಹೇಳಿದರು. ಅದಕ್ಕೆ ಶ್ರೀಗಳವರು ನಿರ್ದಾಕ್ಷಿಣ್ಯವಾಗಿ, ಅದು ಮಮಕಾರ ಸ್ಥಾನವು ನಮಗೆ ಬೇಡ. ವಿಶ್ವ ಪ್ರಪಂಚದಲ್ಲಿರುವ ಸರ್ವ ಸಂಪತ್ತುಗಳೂ ನಮ್ಮವೇ. ಇಲ್ಲಿಗೆ ನೀವು ಬರಬಾರದು. ದೂರ ಹೋಗಿರಿ. ಅದನ್ನು ಯಾರಾದರೂ ಅನುಭವಿಸಿಕೊಳ್ಳಲಿ. "ನಿಸ್ಪೃಹಸ್ಯ ತೃಣಂ ಜಗತ್"

ಬೆಂಗಳೂರಿನಿಂದ ಶ್ರೀಗಳವರು ಲತ್ತವರ ಶಿವಾಲಯಕ್ಕೆ ಬಂದರು. ಶ್ರೀ ಶಂಕರ ಜಯಂತಿ ಉತ್ಸವವು ಅತ್ಯಂತಾನಂದಪ್ರದವಾಗಿ ಉಮಾಮಹೇಶ್ವರ ಚಂದ್ರಮೌಳೀ

ಶ್ವರ ಪೂಜಾನುಷ್ಠಾನಗಳು ಪ್ರಸ್ಥಾನತ್ರಯ ಶಾಸ್ತ್ರ ಶ್ರವಣಾದಿಗಳಿಂದ ಕಾರ್ಯ ಕ್ರಮವು ಶಿವಪ್ರದವಾಗಿ ನಡೆಯಿತು. ಇದೇ ಸಮಯದಲ್ಲಿ ಶ್ರೀ ಮನ್ಮಥನಾಮ ಸಂವತ್ಸರ ವೈಶಾಖ ಶುದ್ಧ ಪಂಚಮಿ ದಿನ ಶ್ರೀ K. ಒಂಡೆಯ್ಯ ಸ್ವಾಮಿಗಳೆಂಬುವ ಬ್ರಹ್ಮಚಾರಿಗಳಿಗೆ ಶ್ರೀಗಳವರು ವಿಧ್ಯುಕ್ತವಾಗಿ ತುರೀಯಾಶ್ರಮವನ್ನಿತ್ತು **ಶ್ರೀ ಶಿವಾನಂದ ಸ್ವಾಮಿ** ಎನ್ನುವ ಶುಭನಾಮವನ್ನು ಪ್ರಸಾದಿಸಿದರು. ಅನ್ನ ಸಂತರ್ಪಣೆ ನಡೆಯಿತು.

ಅನಂತರ ಭಕ್ತರ ಭಾವಾನುಸಾರ ಗುಂತಕಲ್ಲು ಶ್ರೀ ರಾಮಾಲಯಕ್ಕೆ ದಯ ಮಾಡಿಸಿ ಹತ್ತು ದಿನಗಳು ಭಾಗವತ ತತ್ವಾರ್ಥವನ್ನು ಪ್ರವಚನ ಮಾಡಿದರು. ಅದೇ ಜ್ಯೇಷ್ಠ ಶುದ್ಧ ಪೂರ್ಣಿಮೆಗೆ ಶ್ರೀಗಳವರು ಗುರುಪೀಠ ಸಮಾರೋಹಣ ಮಾಡಿದ ಪರ್ವದಿನವಾದ್ದರಿಂದ ಗಂಜಿಗುಂಟೆ ಶ್ರೀಮಠದಲ್ಲಿ ಯಥಾರೀತಿ ಪೂಜಾನುಷ್ಠಾನ ಮಹಾ ಸಮಾಧಿ ಪೂಜಾದಿಗಳನ್ನು ಮಾಡಿ ಅಲ್ಲೇ 'ಉಪದೇಶ ಸಾಹಸ್ರಿ' ಗ್ರಂಥ ಶ್ರವಣವನ್ನು ನಡೆಸಿದರು. ಈ ಗ್ರಂಥವು ಶ್ರೀ ಶಂಕರ ಭಗವತ್ಪಾದಾಚಾರ್ಯರ ಕೃತಿ. ವಿವಿಧ ರೀತಿ ಪೂರ್ವಪಕ್ಷ ಸಿದ್ಧಾಂತಗಳೊಡನೆ ಅದ್ವೈತ ಸಿದ್ಧಾಂತವು ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ಇದರಲ್ಲಿ ಸಹಸ್ರೋಪದೇಶಗಳು ಇರುವುದರಿಂದ ಉಪದೇಶ ಸಾಹಸ್ರಿ ಎಂದು ಹೇಳುತ್ತಾರೆ. 22 ಪ್ರಕರಣಗಳಿವೆ. ಅದರಲ್ಲಿ ಮೂರು ಪ್ರಕರಣ ಗಳು ಗದ್ಯಾತ್ಮಕವು. ಮಿಕ್ಕ 19 ಛಂದೋಬದ್ಧವಾದ ಪದ್ಯಗಳು, ಅಂದರೆ ಶ್ಲೋಕ ರೂಪಗಳಾಗಿವೆ. ಮುಮುಕ್ಷುಗಳಿಗೆ ಅತ್ಯಂತ ಉಪಯುಕ್ತವಾದದ್ದು. ಪ್ರಶ್ನೋತ್ತರ ರೂಪವಾಗಿದೆ.

ತತ್ವತಃ ನಿನ್ನ ಸ್ವರೂಪದಲ್ಲಿ ಅಜ್ಞಾನವಿಲ್ಲ. ಅವಿಚಾರ ಸಿದ್ಧವಾಗಿದ್ದಂತೆ ಕಾಣುತ್ತದೆ. ಪ್ರಮಾಣಜನ್ಯ ಜ್ಞಾನವಾಗಲು ಆವರಣ ಭಂಗವಾಗಿ ಸ್ವತಃ ಸಿದ್ಧ ವಾದ ಪರಮಾತ್ಮನೇ ತಾನೆಂಬುವ ಜ್ಞಾನ ಉಂಟಾಗುತ್ತೆ.

ನಿತ್ಯ ಕರ್ಮದಿಂದ ದುರಿತಕ್ಷಯ, ಕಾಮ್ಯಕರ್ಮದಿಂದ ಸ್ವರ್ಗಾದಿ ಫಲ ಭೋಗಾನುಭವ. ಸ್ವರೂಪ ಜ್ಞಾನವನ್ನು ಇವು ನಿವಾರಿಸಲಾರವು. ನಿಷ್ಕಾಮವಾಗಿ ಆಚರಿಸಲ್ಪಟ್ಟರೆ ಮನಶುದ್ಧಿ ಕಾರಕವಾಗಿ ಶುಭೇಚ್ಛಾದಿ ಜ್ಞಾನಭೂಮಿಕೆಗಳಲ್ಲಿ ಪ್ರವೇಶ ಕೊಡುತ್ತೆ. 'ಜ್ಞಾನಾದೇವತು ಕೈವಲ್ಯಮ್'.

ಸ್ಥಾಣುವನ್ನು ಪುರುಷನೆಂದುಕೊಂಡವನು ಭಯವನ್ನು ಹೊಂದುವಂತೆ, ಆತ್ಮ ವಿಷಯಕ ಜ್ಞಾನವಿಲ್ಲದವನು ಅಧ್ಯಾಸ ಮೂಲಕ ಬುದ್ಧ್ಯಾದಿಗಳಲ್ಲಿ ತಾದಾತ್ಮ್ಯವನ್ನು ಹೊಂದಿ, ಅನಾತ್ಮ ಧರ್ಮಗಳಿಂದ ವೃಥಾ ಚಿಂತಾ ವಿಲಾಪಗಳನ್ನು ಪಡೆಯುತ್ತಾನೆ.

ಅಯ್ಯಾ ! ಸೂರ್ಯನಿಗೆ ಕತ್ತಲು ನೀರಿಗೆ ಉಷ್ಣತ್ವ ಹೇಗೆ ಇಲ್ಲವೋ ತದ್ವತ್ (ಅದೇ ರೀತಿ) ಜ್ಞಾನಕ್ಕೆ ಕರ್ಮ ಅಂಗವಲ್ಲ. ವಿಚಾರ ಸಂಪನ್ನನಾಗಿ ಸಾಧನ ಚತುಷ್ಟಯ ಸಂಪತ್ತಿನಿಂದ ಉತ್ತಮ ಸಂಸ್ಕಾರವುಳ್ಳ ಅಧಿಕಾರಿಗೆ ಕರ್ಮೋಪಾಸನೆಗಳು ವಿಧಿ ಯಲ್ಲ. ದಶಮನ ಜ್ಞಾನದಂತೆ ವಾಕ್ಯ ಶ್ರವಣ ಮಾತ್ರದಲ್ಲಿಯೇ ಅಧಿಕಾರಿಗೆ ಅಹಂ

ಬ್ರಹ್ಮಾಸ್ಮಿ ಇತ್ಯಾಕಾರಕ ಅಖಂಡ ಜ್ಞಾನ ಉಂಟಾಗಿ ಧನ್ಯನಾಗುವನು. ಕರ್ಮಗಳು ಪರಂಪರಾ ಸಾಧನೆಗಳು.

ನಿರ್ವಾಣ ಮಠದಲ್ಲಿ ಪರಮಗುರು ಆರಾಧನೆಗೆ ದಯಮಾಡಿಸಿ, ಅನಂತರ ನಂದ್ಯಾಲ-ಶ್ರೀ ಓಂಕಾರ ಭವನಕ್ಕೆ ಬಂದರು.

## 11ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ
## ನಂದ್ಯಾಲ 30-6-55

ಶ್ರೀ ಮನ್ಮಥನಾಮ ॥ಸಂ॥ ಆಷಾಢ ಶುದ್ಧ ಏಕಾದಶಿ ಗುರುವಾರ ಬ್ರಹ್ಮ ಮುಹೂರ್ತದಲ್ಲಿ ಸರ್ವವೈದಿಕ ವಿಧಿಗಳಿಂದ ಶ್ರೀ ಚಾತುರ್ಮಾಸ್ಯ ಮಹಾವ್ರತವು ಓಂಕಾರ ಭವನದಲ್ಲಿ ಪ್ರಾರಂಭವಾಯಿತು. ಆ ದಿನ ಸಾಯಂಕಾಲ ಪಗಿಡಿ ನಾರಾಯಣ ಶ್ರೇಷ್ಠಿ ಚಾಯಮ್ಮನವರ ವಿಶಾಲ ಭವನದಲ್ಲಿ ಸಭೆ ನಡೆಯಿತು. ಆಳ್ಳಗಡ್ಡ ಪೂಜ್ಯ ಶ್ರೀ ಶಂಕರಾನಂದ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ "ಶ್ರೀ ಶಂಕರಾನಂದಗಿರಿ ಗುರುವರ್ಯ ಚರಿತ್ರೆ" ತೆಲುಗು ಮುದ್ರಣ ಪ್ರಥಮ ಭಾಗ ಗ್ರಂಥಾವಿಷ್ಕರಣವು(ಬಿಡುಗಡೆ) ವಿಧ್ಯುಕ್ತ ವಾಗಿ ಬೆಂಗಳೂರು ಬ್ರಹ್ಮಶ್ರೀ S. ರಾಜಗುಪ್ತರವರಿಂದ ಮಂಗಳಪ್ರದವಾಗಿ ನಡೆ ಯಿತು. ಸದ್ಭಕ್ತಾದಿಗಳೆಲ್ಲರಿಗೂ ಶ್ರೀಗುರು ಚರಿತ್ರೆಗಳು ಕೊಡಲಾಯಿತು. ಆಳ್ಳಗಡ್ಡ ಪೂಜ್ಯ ಶ್ರೀ ಶಂಕರಾನಂದ ಸ್ವಾಮಿಗಳವರು, ತಾತ್ವಿಕ ಕವಿ ಶ್ರೀ ಸಹಜಾನಂದ ಸ್ವಾಮಿ ಗಳು, ಶ್ರೀ S. ರಾಜಗುಪ್ತರವರು ಗುರುಚರಿತ್ರೆಯನ್ನು ಪ್ರಶಂಸಿಸುತ್ತ ಉಪನ್ಯಾಸ ಮಾಡಿದರು. ಮಹಾಮಂಗಳವಾಯಿತು.

ಮಾರನೆಯ ದಿನ ಯಥಾರೀತಿ ಓಂಕಾರ ಭವನದಲ್ಲಿಯೇ ಪೂಜಾನುಷ್ಠಾನ ಪಾರಾಯಣಾದಿ ಸರ್ವ ಕಾರ್ಯಗಳೊಡನೆ ಉಪನಿಷತ್ಪ್ರವಚನ. ಇನ್ನು ಸಾಯಂ ಸಮಯ ನಂದ್ಯಾಲ ಪಟ್ಟಣ ಮಹಾನಂದೀಶ್ವರ ದೇವಾಲಯದಲ್ಲಿ 'ಭಾಷ್ಯಂ ಪ್ರಸನ್ನ ಗಂಭೀರಂ' ಎಂಬ ವಚನಾನುಸಾರ ಅತ್ಯುತ್ತಮ ರೀತಿ ಗೀತಾ ಭಾಷ್ಯ ಪ್ರವಚನ ನಡೆ ಯಿತು. ಬ್ರಹ್ಮಶ್ರೀ ತೋಟಪಲ್ಲಿ ವೆಂಕಟಸುಬ್ಬಯ್ಯ ಅಡ್ವೊಕೇಟ್, ಬ್ರಹ್ಮಶ್ರೀ ಮುದ್ದುಲಪಲ್ಲಿ ಸುಬ್ರಹ್ಮಣ್ಯಶಾಸ್ತ್ರಿ ಪಂಡಿತರು ಶ್ರೀಗಳವರನ್ನು ಕುರಿತು ಪ್ರಶಂಸಿಸಿ ದರು. ಶ್ರೀ ವರ್ದಂಶೆಟ್ಟಿ ಜಂಬುಲಯ್ಯ ಮುಂತಾದವರು ಮಹಾನಂದೀಶ್ವರಾಲಯ ದಲ್ಲಿ ಎಲ್ಲಾ ವ್ಯವಸ್ಥೆಗಳನ್ನು ಮಾಡಿಸಿದರು. ಇದರಂತೆ ಉದಯ ಓಂಕಾರಭವನದಲ್ಲಿ ಸಾಯಂಸಮಯ ಮಹಾನಂದೀಶ್ವರಾಲಯದಲ್ಲಿ ಈ ಚಾತುರ್ಮಾಸ್ಯ ಮಹಾವ್ರತವು ನಿರ್ವಿಘ್ನವಾಗಿ ನಡೆದು ಪೂರ್ಣವಾಯಿತು. ಶ್ರೀ ತೋಟಪಲ್ಲಿ ವೆಂಕಟಸುಬ್ಬಯ್ಯ ನವರು, ಶ್ರೀ ಸ್ವಾಮಿಗಳವರ ಪ್ರವಚನ ಪ್ರಸಂಗಗಳನ್ನು ಪ್ರವಚಿಸುತ್ತಾ ವಂದನೆ ಸಮರ್ಪಣೆಗಳನ್ನು ಮಾಡಿದರು. ಮಹಾಮಂಗಳವಾಯಿತು.

ಅನಂತರ ಭಕ್ತಾದಿಗಳೊಡನೆ ಪ್ರಥಮ ನಂದಿಕ್ಷೇತ್ರದಲ್ಲಿ ದೀಕ್ಷಾವಿರಮಣಾದಿ ಕಾರ್ಯಗಳು ಮಂಗಳಪ್ರದವಾಗಿ ನಡೆದವು.

ಪ್ರಮಾತೃ, ಪ್ರಮಾಣ, ಪ್ರಮೇಯವೆಂಬ ತ್ರಿಪುಟಿ ಸಂಬಂಧವಾದ ಈ ಸಮಸ್ತವು ಸ್ವರೂಪತಃ ನಿನ್ನಲ್ಲಿ ಇಲ್ಲದವು. ತ್ರಿಪುಟಿಗೆ ಆಧಾರವಾದ ಸಚ್ಚಿದಾನಂದ ಶಿವರೂಪನು ನೀನು, ಇಂಥಹ ಅರಿವಿಲ್ಲದೇ ಹೋದರೆ ಜೀವನದಲ್ಲಿ ಎಡರು,ತೊಡರು, ದುಃಖಗಳೇ ಇರುತ್ತವೆ. ಅಜ್ಞಾನದ ಬಾಧೆ, ದೇಹೇಂದ್ರಿಯಗಳ ಬಾಧೆ, ಜನನ ಮರಣಗಳ ಬಾಧೆ, ಕರ್ತೃತ್ವ ಭೋಕ್ತೃತ್ವ ಆಧ್ಯಾತ್ಮಿಕಾದಿ ತಾಪ, ಕಾಮ ಕ್ರೋಧ ಗಳು ಇವು ಮುಟ್ಟುತ್ತಿರುತ್ತವೆ. ಈಗಲೇ ಇವುಗಳಿಗೆ ವಿಲಕ್ಷಣವಾದ ಪರಬ್ರಹ್ಮ ವಸ್ತುವು ನಾನೆಂಬ ಪ್ರಜ್ಞೆಯನ್ನು ಪಡೆಯಬೇಕು.

ಗೀತೋಪನಿಷಚ್ಛಾಸ್ತ್ರ ಶ್ರವಣ ಶುಭಸಂಸ್ಕಾರದಿಂದ ಅನುಷ್ಠಾನ ಬಲವನ್ನು ಪಡೆದು ಆತ್ಮವು ಬ್ರಹ್ಮವೇ ಎಂದು ಅರಿಯಬೇಕು. ಗುರುಸಾನ್ನಿಧ್ಯದಿಂದ ದ್ವಿಜತ್ವವು, ವಾಕ್ಯವಿವೇಕದಿಂದ ವಿಪ್ರತ್ವವು, ಬ್ರಹ್ಮಾನುಭೂತಿಯಿಂದ ಬ್ರಾಹ್ಮಣ್ಯವು ಉಂಟಾಗು ವುದೆಂದು ವೇದಮತ ಸಂಪ್ರದಾಯಕನಾದ ಮನು ಪ್ರಜಾಪತಿಯ ವಾಕ್ಯ.

ವಿಶ್ವಪ್ರಪಂಚದಲ್ಲಿ ನೀನು ಕೇವಲ ಕರ್ತೃತ್ವ ಭೋಕ್ತೃತ್ವ ತಾದಾತ್ಮ್ಯಗಳಿಂದ ಏನನ್ನಾದರೂ ಮಾಡಬೇಡ. ಅದು ಭಾರ; ಭಯಕ್ಕೂ ಕಾರಣ. ಕಣ್ಣು ಅನೇಕ ಹೇಯೋಪಾದೇಯ ಪದಾರ್ಥಗಳನ್ನು ಕಂಡರೂ ಅವುಗಳಿಂದ ಅಸಂಗವಾಗಿದ್ದಂತೆ, ಈ ವಿಚಿತ್ರ ಲೀಲೆ ಜಗದ್ವೈಭವವನ್ನು ಸಾಕ್ಷಿಯಾಗಿ ನೋಡುತ್ತಾ ತಾದಾತ್ಮ್ಯ ಭಾವ ವಿಲ್ಲದೇ ವ್ಯವಹರಿಸಬೇಕು. ಆಗ ಎಲ್ಲವೂ ಮಂಗಳಪ್ರದವಾಗಿರುತ್ತೆ.

ಕಾಮ ಕ್ರೋಧಗಳೇ ಜ್ಞಾನಪ್ರತಿಬಂಧಕವಾದ ಮಹಾ ಶತ್ರುಗಳು. ಅವು ಗಳನ್ನು ಬಿಟ್ಟು ಗುರು ಹಿರಿಯರ ಸಂಬಂಧ ಸಾನ್ನಿಧ್ಯವನ್ನು ಪಡೆ, ಧನ್ಯನಾಗುವೆ.

ನಾನು ಚೈತನ್ಯಾತ್ಮನೆಂಬುವ ದೃಢ ವಿಶ್ವಾಸದಿಂದ ಶಿವೋಹಂ ಎಂಬುವ ದೃಷ್ಟಿ ಯುಳ್ಳವನಾಗಿ ಅಸಂಗವಾಗಿ ಸಹನ ಸಂದೀಪ್ತವಾಗಿ ಬಾಳು "ಮಾ ಭೈಷೀಃ"

ಅಸಮವಾಗಿ ಅನುಭವಾಂತ್ಯದಲ್ಲಿ ತೀರದ ದುಃಖವನ್ನು ಕೊಟ್ಟು ಹೋಗು ತ್ತಿರುವ ಅನಾತ್ಮ ವಿಷಯ ಸುಖಗಳು ಸ್ವಪ್ನತುಲ್ಯಗಳು, ಮೋಹದಿಂದ ಅವುಗಳಲ್ಲಿ ಮುಳುಗಿ ಹೋಗಬೇಡ.

ಹೀಗೆ ವ್ರತಾನಂತರ ಗಂಜಿಗುಂಟೆ ಶ್ರೀ ಮಠದಲ್ಲಿ ಗುರುದೇವರ ಪುಣ್ಯಾರಾಧನೆ ವಿಧ್ಯುಕ್ತವಾಗಿ ನಡೆಯಿತು. ಅನೇಕ ಮಹನೀಯರು ದಯಮಾಡಿಸಿದ್ದರು. ಕಾರ್ಯವು 3 ದಿನಗಳು ನಡೆದು ಮಂಗಳವಾಯಿತು.

ಇದೇ ಸಮಯದಲ್ಲಿ ಗುಂತಕಲ್ಲು ಭಕ್ತರನೇಕರು ಮತ್ತು ಶ್ರೀ ಬುಶೆಟ್ಟಿ ಹೊನ್ನಪ್ಪ ನವರು ಗಂಜಿಗುಂಟೆ ಮಠಕ್ಕೆ ಬಂದು ಭಕ್ತಿಯಿಂದ ಶ್ರೀಗಳವರನ್ನು ಸ್ವಾಗತಿಸಿ ತಮ್ಮ

ಹಾಸ್ಟಲ್ ಭವನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಆಧ್ಯಾತ್ಮಿಕ ತತ್ವ ಪ್ರಭೋಧೆ ನಡೆಸಲು ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು. ಶ್ರೀಗಳವರ ಪೂಜಾನುಷ್ಠಾನಾದಿಗಳಿಗೆ ಬೇಕಾದ ವಸತಿಯನ್ನು ಕೊಟ್ಟರು.

ಶ್ರೀಗಳವರು ಆ ಛಾತ್ರಾಲನಿಯದಲ್ಲಿ ಪಠಮ-ತೃಪ್ತಿಯಾಗಿ ವಿವೇಕ ಚೂಡಾಮಣಿ, ಶ್ರೀಮದ್ಭಗವದ್ಗೀತಾ ಶಾಂಕರಭಾಷ್ಯವನ್ನು ಪ್ರವಚನ ಮಾಡಿದ್ದರು. ನೂರಾರು ಭಕ್ತರು ಸೇರಿ ಉದಯ ಸಾಯಂಕಾಲ ಎರಡೂ ವೇಳೆಗಳಲ್ಲಿ ಚೆನ್ನಾಗಿ ಶ್ರವಣ ಮಾಡಿದರು.

ಅನಂತರ ಶ್ರೀಗಳವರನ್ನು ತಾವು ಅಭ್ಯಾಸ ಮಾಡಿದ ಉರವಕೊಂಡೆ ಶ್ರೀ ಕರಿಬಸವಸ್ವಾಮಿ ಬೋರ್ಡ್ ಹೈಸ್ಕೂಲಿಗೆ, ಹೆಡ್ ಮಾಸ್ಟರ್ ಶ್ರೀ ನಾರಾಯಣ ರೆಡ್ಡಿಯವರು ಮತ್ತು ವಿದ್ಯಾರ್ಣವ ಇತ್ಯಾದಿ ಬಿರುದಾಂಕಿತರಾದ ಬ್ರಹ್ಮಶ್ರೀ N. ಪೇರರಾಜು ಪಂಡಿತ ಮಹೋದಯರು ಮುಂತಾದ ಅಧ್ಯಾಪಕರು ಸ್ವಾಮಿಗಳ ಸನ್ನಿಧಿಗೆ ಬಂದು ಭಕ್ತಿ ಪ್ರೇಮಗಳಿಂದ ಕರೆದುಕೊಂಡು ಹೋದರು.

ಅಲ್ಲಿ 'ವೇದವಿದ್ಯೆ' ಎನ್ನುವ ಶೀರ್ಷಿಕೆಯ ಮೇಲೆ ಉಪನ್ಯಾಸ ಮಾಡಿದರು. ಪೇರರಾಜು ಪಂಡಿತ ಮಹೋದಯರು ಶ್ರೀಗಳವರ ಜೀವಿತ ಚರಿತ್ರೆಯ ಪ್ರಸಂಗಗಳನ್ನು ಕುರಿತು ಮಾತನಾಡುತ್ತಾ, ನಮ್ಮ ಹೈಸ್ಕೂಲಿನಲ್ಲಿ ಅಭ್ಯಾಸ ಮಾಡಿದ ಎಷ್ಟೋ ಜನ ವಿದ್ಯಾರ್ಥಿಗಳು ದೊಡ್ಡ ದೊಡ್ಡ ಉದ್ಯೋಗಗಳನ್ನು ಸಂಪಾದಿಸಿಕೊಂಡಿದ್ದಾರೆ. ಆದರೂ ಇವೆಲ್ಲವೂ ಅನಿತ್ಯವಾದ ಹೊಟ್ಟೆಗಾಗಿ ಉಪಕರಿಸುವ ಭೌತಿಕ ವಿದ್ಯೆಗಳು. ಈ ನಮ್ಮ ಶ್ರೀಗಳವರು ಇದೇ ಹೈಸ್ಕೂಲಿನಲ್ಲಿ ಓದಿಕೊಂಡು ಸರ್ವಾಧಾರವಾದ ಭಗವತ್ತತ್ವವನ್ನು ತಿಳಿದು ನಿರತಿಶಯ ಸುಖವನ್ನು ಹೊಂದುತ್ತಿದ್ದಾರೆ ಮತ್ತು ಲೋಕಕ್ಕೆ ಏತದ್ವಿಷಯಗಳನ್ನು ಬೋಧಿಸುತ್ತಾ ಕೀರ್ತಿಯನ್ನು ಪಡೆದಿದ್ದಾರೆ. ಅದು ನಮ್ಮ ಉನ್ನತ ಪಾಠಶಾಲೆಗೆ ಮಹತ್ತರವಾದ ಕೀರ್ತಿ. ಇವರು ವಿದ್ಯಾರ್ಥಿ ದೆಶೆಯಿಂದಲೇ ಇದೇ ಹೈಸ್ಕೂಲಿನಲ್ಲಿ ಮೊದಲು (Head Master) ಮುಖ್ಯೋಪಾಧ್ಯಾಯರಾಗಿದ್ದ ಮಹಾನುಭಾವರಾದ ಶ್ರೀ P. ರಾಘವೇಂದ್ರಾಚಾರ್ಯರ ಸನ್ನಿಧಿಯಲ್ಲಿ ತಮ್ಮ ಆಶ್ರಮ ಜೀವನದ ವಿಷಯಗಳನ್ನೆಲ್ಲಾ ಅರಿಕೆ ಮಾಡಿಕೊಂಡು ಇಲ್ಲಿಂದಲೇ ಹೊರಟು, ವೈಭವೋಪೇತವಾಗಿ ಶೀಲಸಂಪನ್ನವಾದ ಸ್ವಾಮಿತ್ವವನ್ನು ಹೊಂದಿ ಶಾಂತಿ ಸ್ವರೂಪವಾದ ಆತ್ಮತತ್ವವನ್ನು ಪ್ರಚಾರ ಮಾಡುತ್ತಿದ್ದಾರೆ. ಇದೆಲ್ಲರಿಗೂ ಸಾಧ್ಯವಾದ ವಿಷಯವಲ್ಲ. ದೊಡ್ಡ ಪಂಡಿತರಿರಬಹುದು, ಉನ್ನತೋದ್ಯೋಗಿಗಳಾಗಿರಬಹುದು, ಆದರೆ ಈ ಸ್ಥಿತಿ ಅಪೂರ್ವ. 'ಶತಕೋಟಿ ಜನ್ಮ ಸುಕೃತೈಃ ಪುಣ್ಯೈರ್ವಿನಾ ಲಭ್ಯತೇ' ಅಂದ ಹಾಗೆ ಪುಣ್ಯ ಪುಂಜವೇ ಈ ಮೂರ್ತಿ. 'ಚದುವುಲಲೋ ಮರ್ಮಮೆಲ್ಲ ಚದಿವಿತಿ ತಂಡ್ರೀ' ಎಂಬ ಪ್ರಹ್ಲಾದೋಕ್ತಿಯಂತೆ ಶ್ರೀಗಳವರು ಬ್ರಹ್ಮವಿದ್ಯಾ ಶ್ರೀಯುತರಾಗಿದ್ದಾರೆ. ನಾವೆಲ್ಲಾ ಗರ್ವಿಸತಕ್ಕ ವಿಷಯವೆಂದು ವಿಶ್ವಸಿಸು

ತ್ತಿದ್ದೇವೆ........" ಈ ವಿಧವಾಗಿ ಮಾತನಾಡಿ ವಂದನೆ ಸಮರ್ಪಣೆಯೊಡನೆ ಸಭೆಯನ್ನು ಪೂರ್ಣ ಮಾಡಿದರು.

ಈ ಮಧ್ಯದಲ್ಲಿ ಗೀತಾ ಜಯಂತಿ ಕಾರ್ಯಕ್ರಮ ಉತ್ತವರದಲ್ಲಿ ನಡೆಯಿತು. ಆಗ ಬ್ರಹ್ಮಶ್ರೀ ಕರಣಂ ಕೃಷ್ಣಾರಾವ್ ಎಂಬುವವರ ಸತೀಮಣಿ ಶ್ರೀಮತಿ ಜಾನಮ್ಮನವ್ವ ಸ್ವಾಮಿಗಳವರ ಭಕ್ತಳು; ಶತ ವೃದ್ಧಳು. ಗುರುದೇವರ ಹತ್ತಿರಕ್ಕೆ ಬಂದು "ಸ್ವಾಮೀ! ತಮ್ಮ ಸುಕೀರ್ತಿರೂಪ ಬ್ರಹ್ಮವಿದ್ಯಾಪ್ರಾಪ್ತಿ ನನಗೆಷ್ಟೋ ಪರಮಾನಂದ. ಜನ್ಮಾದಿಯಾಗಿ ತಾವು ಹೇಗೆ ಪರಮಶೀಲ ಸಂಪದ್ವಿಶಿಷ್ಟವಾದ ಆಚಾರ ವಿಚಾರಗಳಿಂದಿರುವಿರೋ, ಅದನ್ನು ನಾನು ಇದುವರೆವಿಗೂ ನೋಡುತ್ತಲೇ ಇದ್ದೇನೆ. ಅದೇ ಪ್ರಕಾರ ಈ ನನ್ನ ಗುರುಸ್ವಾಮಿಗಳಿಗೆ ಶೋಭನಾಶೋಭನಾತ್ಮಕವಾದ ಈ ಜಗದ್ರಂಗದಲ್ಲಿ ಯಾವ ವಿಧವಾದ ಕಲಿಮಲಗಳು ಬರದಿರಲೆಂದು ಉಮಾಮಹೇಶ್ವರನನ್ನು ಪ್ರಾರ್ಥಿಸುತ್ತೇನೆ. ಇದನ್ನು ಹೇಳಲು ನಾನು ಅನರ್ಹಳಾದರೂ ನನ್ನ ಸ್ವಾಮಿಯ ಮೇಲಿನ ಭಕ್ತಿಯಿಂದ ಹೇಳುತ್ತಿರುವೆನು. ಆಚಂದ್ರಾರ್ಕವಾಗಿ ಅಕುಂಠಿತವಾದ ಈ ಆದರ್ಶ ಜೀವನ ಹೀಗೇ ಇರಲಿ!" ಈ ಪ್ರಕಾರ ದಿವ್ಯಾವೇಶದಿಂದ ಆ ಮಹಾತಾಯಿ ಹೇಳಿದಳು.

ಈ ಮಾತುಗಳನ್ನು ಕೇಳಿ ಶ್ರೀಗಳವರು ಸಮಾಧಿಸ್ಥಿತರಾಗಿ, "ತಾಯೇ! ದೈವದತ್ತವಾದ ಈ ಉಪಾಧಿಯಲ್ಲಿ ಪ್ರಾಕೃತವಾದ ವಿಷಯ ಮೋಹಕ ದುರ್ಗುಣಗಳಿಗೆ ಸ್ಥಳವಿಲ್ಲವಮ್ಮಾ! ಮಾತೃ ಗರ್ಭದಿಂದ ಹೇಗೆ ಹುಟ್ಟಿರುವೆನೋ ಹಾಗೆಯೇ ಇದ್ದೇನೆ. ಮುಂದೆಯೂ ಹೀಗೆಯೇ ಇರುತ್ತೇನೆ. ನನ್ನ ದೇಹೇಂದ್ರಿಯಗಳು ಪ್ರಾಕೃತ ವಿಷಯ ಸಂಬಂಧಕ್ಕೆ ಯೋಗ್ಯವಿಲ್ಲದಂತೆ ದೇವರು ಹುಟ್ಟಿಸಿದ್ದಾನೆ. ಸಂಶಯವಿಲ್ಲವಮ್ಮಾ ಶಿವಮಸ್ತು! ಮಹಾತ್ಮ ಗಾಂಧೀಜಿಯವರು ತಮ್ಮ ತಾಯಿಯ ಹತ್ತಿರ ಮಾತು ಕೊಟ್ಟಂತೆ ಎಂಬುವ ಉದಾಹರಣೆಯನ್ನು ಹೇಳಿದರು.... ಶ್ರೀಗಳವರು ಚಿಕ್ಕತನದಲ್ಲಿ ಈ ಮಹಾತಾಯಿಯವರ ವಿಶಾಲಭವನದಲ್ಲೇ ಒಂದು ಭಾಗದಲ್ಲಿ ಕುಳಿತು ಓದಿಕೊಳ್ಳುತ್ತಿದ್ದರು. ಪೂಜೆ ಧ್ಯಾನಾದಿಗಳಿಂದಿರುತ್ತಿದ್ದರು.

ಗುಂತಕಲ್ಲು ಶ್ರೀ ಜಗದ್ಗುರು ಪಂಡಿತಾರಾಧ್ಯ High School Head Master ಬ್ರಹ್ಮಶ್ರೀ M. ರಾಮಚಂದ್ರರಾವರವರು ಪ್ರತಿದಿನ ವನ್ನಪ್ಪ ಹಾಸ್ಟೆಲ್ಲಿನಲ್ಲಿ ನಡೆಯುವ ಶಾಸ್ತ್ರಶ್ರವಣಕ್ಕೆ ಬರುತ್ತಿದ್ದರು. ಶ್ರೀಮುಖದಿಂದ ಬರುವ ಸ್ವಾಮಿಗಳವರ ಪ್ರವಚನವನ್ನು ಕೇಳಿ ತನ್ಮಯರಾಗುತ್ತಿದ್ದರು. "ಪೂಜ್ಯ ಸ್ವಾಮೀ! ತಮ್ಮ ಪ್ರಬೋಧೆ Bonafide Teacher (ಬೋನಾಫೈಡ್ ಟೀಚರ್) ಟೀಚಿಂಗಿನಂತೆ ಕೇಳುವವರಿಗೆ ತಮ್ಮ ಶಕ್ತಿಯನ್ನು ಕೊಟ್ಟು ತದ್ರೂಪರನ್ನಾಗಿ ಮಾಡುತ್ತದೆ. ಸರ್ವಕಾಲದಲ್ಲಿ ಈ ಬ್ರಹ್ಮದೃಷ್ಟಿ ನಮಗಿರಲೀ ಇಲ್ಲದೆ ಹೋಗಲಿ, ತಮ್ಮ ಸನ್ನಿಧಿಯಲ್ಲಿದ್ದ ಈ 1-30 ಗಂಟೆಯ ಹೊತ್ತು ಕೇಳಿದಷ್ಟು ಕಾಲವು ಪ್ರತ್ಯಗಭಿನ್ನ ಪರಬ್ರಹ್ಮ ನಾನೆಂಬ ಭಾವ ಉಂಟಾಗುತ್ತದೆ" ಎಂದು ಭಕ್ತಿಯಿಂದ ಮಾತನಾಡುತ್ತಿದ್ದರು.

ಚೈತನ್ಯಾತ್ಮ ನಾನೆಂಬ ದೃಢಮತಿಯುಂಟಾಗುವವರಿಗೂ ಮನಸ್ಸು ಸ್ವಾಸ್ಥ್ಯವನ್ನು ಹೊಂದಲಾರದು. ಆತ್ಮಾಭಿಮುಖವಾದಷ್ಟೆಲ್ಲಾ ಮನಸ್ಸು ಕಾಣಿಸದೆ ಅದೃಶ್ಯವಾಗಿ ಹೋಗುವುದು.

ಗುರುತತ್ತ್ವವು ಆತ್ಮವೇ ಎಂದು ಅರಿಯದಷ್ಟು ಕಾಲ ಗುರು ಮಹಿಮೆ ಅರ್ಥವಾಗದು. ಮಾನವನು ಧನ್ಯನಾಗಲಾರ. "ಗುರು ಏವ ಶಿವಃ, ಶಿವ ಏವ ಗುರುಃ"

ಗುರ ಶಿಷ್ಯರ ಸಂಬಂಧವು ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದ್ದೇಯಾಗಲಿ ಲೌಕಿಕವಲ್ಲ. ಲೌಕಿಕ ದೃಷ್ಟ್ಯಾ ಗ್ರಹಿಸುವಾತನು ನಿಜವನ್ನರಿಯದೇ ಆತ್ಮವಿದ್ಯೆಯಿಂದ ದೂರಾಗುವನು.

ನಿತ್ಯ ಶಾಂತಿಯು ಆಧ್ಯಾತ್ಮಿಕ ಜೀವನದಿಂದ, ನಿಷ್ಕಾಪಟ್ಯ, ನಿರ್ಮಲ ವರ್ತನೆ, ನಿಜ ಗುರುಭಕ್ತಿ, ಉತ್ಕಟೇಚ್ಛೆ ಇವುಗಳಿಂದ ಸಂಪಾದ್ಯವು.

10–3–56 ನಿರ್ವಾಣ ಮಠದಲ್ಲಿ ಶಿವರಾತ್ರಿ ಮಹೋತ್ಸವವು ವಿಧ್ಯುಕ್ತವಾಗಿ ನಡೆಸಿದರು. ಮಹಾತ್ಮರು ದಯಮಾಡಿಸಿದ್ದರು.

ಮನಃಸ್ವಾಸ್ಥ್ಯವನ್ನು ಹೊಂದಿದರೆ ಪ್ರಾಣವು ಸ್ಥಿರವಾಗುವದು. ಸ್ವರೂಪ ವಿಷಯ ಜ್ಞಾನಕ್ಕೆ ಇದೊಂದು ಸಾಧನೆ. ಹೊರ ಒಳಗೆ ಸಂಚರಿಸುವ ಪ್ರಾಣವನ್ನು ನೋಡುತ್ತಿರು. ಸರ್ವವೂ ಶಾಂತಿಯಾಗುವುದು.

ನಿತ್ಯಾನುಷ್ಠಾನವು ಆರಂಭದಲ್ಲಿ ಯಾವಾಗಲಾದರೂ ನಿರುತ್ಸಾಹವಾದರೆ, ಪಟ್ಟು ಬಿಡದೆ ಗುರುಭಕ್ತಿಯಿಂದ ಅನುಷ್ಠಿಸುತ್ತಿರು. ಅದೇ ಶಾಂತಿ, ಸುಖವಾಗುವುದು.

ಭದ್ರವಾದ ಬ್ರಹ್ಮಚರ್ಯ ವ್ರತನಿಷ್ಠೆಯುಳ್ಳವನಾಗಿರು. ಅಂಥಾ ಅನುಷ್ಠಾನ ಸಂಜನಿತವಾದ ಸುಪ್ರಸನ್ನ ಮನಸ್ಸೇ ನಿನ್ನ ಗುರುವು.

ದುರಾಚಾರಗಳು ಮಾನವ ಜೀವನದ ಧ್ವಂಸಕಾರಕಗಳು. ಆಪಾತ ರಮಣೀಯಗಳಾದ ವಿಷಯಗಳಿಗೆ ಒಳಪಡಬೇಡ. 'ನಾವಿರತೋ ದುಶ್ಚರಿತಾತ್' ಅಂದ ಹಾಗೆ ಸರ್ವ ಪ್ರಯತ್ನದಿಂದಲೂ ದುಷ್ಟ ಆಚಾರ ವಿಚಾರಗಳಿಂದ ದೂರವಿರಬೇಕು. ಶೀಲ ಸಂಪನ್ನನಾಗಿರಬೇಕು. ತಪಸ್ಸು ಅತ್ಯವಶ್ಯಕ.

ಪರಿಚ್ಛಿನ್ನವೂ ದುಃಖಭಾಜನವೂ ಆದ ಸಂಪತ್ತನ್ನು ಕೂಡಿ ಹಾಕುವ ಬುದ್ಧಿಯಿಂದ, ಪೂರ್ಣನೂ ನಿತ್ಯಾಪರೋಕ್ಷನೂ ಆದ ಆತ್ಮನನ್ನು ಮರೆತು ಹೋಗಬೇಡಯ್ಯಾ ! ವಿದ್ಯಾತಪಸ್ಸುಗಳು ಅತ್ಯವಸರ.

ದೀಪವನ್ನು ಬೆಳಗಿಸಿದರೆ ಅದು ಒಂದು ವಸ್ತುವನ್ನು ಮಾತ್ರ ಬೆಳಗುವದಿಲ್ಲ. ಅಲ್ಲಿದ್ದ ಸರ್ವ ವಸ್ತುಗಳನ್ನೂ ಪ್ರಕಾಶಿಸುವದಲ್ಲಾ ! ಹಾಗೆಯೇ ಚೈತನ್ಯಾತ್ಮ ಜ್ಯೋತಿ ನಾನೆಂದು ಪ್ರಯತ್ನಪೂರ್ವಕವಾಗಿ ತಿಳಿದರೆ ಸರ್ವವನ್ನು ಪ್ರಕಾಶಿಸುವ ಸಾಕ್ಷಿಯೇ

ನೀನು, ಸಾಕ್ಷಿಯೇ ಪರಮಾತ್ಮನೆಂದು ಅರಿವಾಗುವುದು. ಪುನಃ ಪುನಃ ಸಾಕ್ಷಿತ್ವ ಮನನವೇ ಶರಣ್ಯ.

21-5-೬6 ಸೋಮವಾರ ಲತ್ತವರ ಶಿವಾಲಯಕ್ಕೆ ಬಂದು, ಅಲ್ಲಿಂದ ಗಂಜಿ ಗುಂಟೆ ಶ್ರೀ ಮಠಕ್ಕೆ ಹೋಗಿ ಅಲ್ಲಿರುತ್ತಿರಲು, ಪೂರ್ವಾಶ್ರಮ ಸಂಬಂಧಗಳಾದ ಯಾವದಾಸ್ತಿ ಪಾಸ್ತಿಗಳ ದಸ್ತಾವೇಜು ರಿಜಿಷ್ಟರು ಪತ್ರಗಳು ಮುಂತಾದವುಗಳನ್ನೆಲ್ಲಾ ಹೇಗೊ ಶ್ರೀಗಳವರು ತರಿಸಿ, ಇವುಗಳನ್ನು ನೋಡಿದರೆ ಈ ಜನರು ಮತ್ತೂ ಬರುತ್ತಾ ಹೋಗುತ್ತಿರುತ್ತಾರೆಂದು, ದೊಡ್ಡದಾಗಿ ಬೆಂಕಿಯ ಉರಿಯನ್ನು ಮಾಡಿ ಈ ಕಾಗದ ಪತ್ರಗಳನ್ನೆಲ್ಲಾ ಅದರಲ್ಲಿಟ್ಟು ಅಗ್ನಿದೇವರಿಗರ್ಪಿಸಿ ಆನಂದಪಟ್ಟರು. ಈ ದೃಶ್ಯವನ್ನು ಕಂಡು ಭಕ್ತಾದಿಗಳು ಆಶ್ಚರ್ಯಪಟ್ಟರು.

ವೈಶಾಖ ಶುದ್ಧ ಪೂರ್ಣಿಮೆಯಿಂದ ಕೆಲವು ದಿನಗಳು ವಿಧ್ಯುಕ್ತವಾಗಿ ಶ್ರೀಮದ್ಭಗವದ್ಗೀತೆ 1,108 ಸಾರಿ ಯಾವದ್ಭಕ್ತ ಮಂಡಲಿಯವರೆಲ್ಲ ಕಲೆತು ವ್ರತ ರೂಪದಿಂದ ಗಂಜಿಗುಂಟೆ ಆಶ್ರಮದಲ್ಲಿ ಗೀತಾ ಪುರಶ್ಚರಣೆ ಮಾಡಿದರು. ನೈಷ್ಕರ್ಮ್ಯ ಸಿದ್ಧಿಗ್ರಂಥ ಶಾಸ್ತ್ರ ಶ್ರವಣವನ್ನು ಜರುಗಿಸಿದರು.

ಅಲ್ಲಿಂದ ಗುಂತಕಲ್ಲು ಭಕ್ತರು ಹೊನ್ನಪ್ಪನವರ ಛಾತ್ರನಿಲಯಕ್ಕೆ ಶ್ರೀಗಳವರನ್ನು ಕರೆದುಕೊಂಡು ಬಂದರು. ಈ ವರ್ಷ 12 ನೇ ಚಾತುರ್ಮಾಸ್ಯ ಮಹಾವ್ರತವನ್ನು ಈ ಪಟ್ಟಣದಲ್ಲಿಯೇ ವಿಶಾಲವಾದ ಶ್ರೀ ಕನ್ನಿಕಾಪರಮೇಶ್ವರಾಲಯದಲ್ಲಿಯೇ ನಡೆಸಬೇಕೆಂದು ಭಕ್ತಿಪೂರ್ವಕವಾಗಿ ಬಯಸುತ್ತಾ ಶ್ರೀಗಳವರಿಂದ ಮಂತ್ರಾಕ್ಷತೆಗಳನ್ನು ಪಡೆದರು.

ಗುಂತಕಲ್ಲು ಶ್ರೀ ಕನ್ನಿಕಾಪರಮೇಶ್ವರಿ ದೇವಸ್ಥಾನಕ್ಕೆ ಶ್ರೀಗಳವರ 12 ನೇ ಚಾತುರ್ಮಾಸ್ಯ ವ್ರತಾಚರಣಾರ್ಥವಾಗಿ ದೇವಾಲಯದ ಅಧ್ಯಕ್ಷರು, ಮತ್ತೆಲ್ಲಾ ಸಂಘದವರು. ಪುರಪ್ರಮುಖರು ಶ್ರೀ ಸ್ವಾಮಿಗಳವರನ್ನು ಪೂರ್ಣ ಕುಂಭದಿಂದ ವಿಧ್ಯುಕ್ತವಾಗಿ ಸ್ವಾಗತಿಸಿ, ಶ್ರೀ ಕನ್ನಿಕಾ ಪರಮೇಶ್ವರಿ ದೇವಾಲಯದಲ್ಲಿ ಸನ್ನಿಧಿ ಮಾಡಿಸಿದರು, ಈ ಮಹಾವ್ರತ ಕಾರ್ಯಕ್ರಮ ಕಮೀಟಿಯೊಂದನ್ನು ನಿರ್ಮಿಸಿಕೊಂಡು ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು.

## 12 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಗುಂತಕಲ್ಲು

ಸ್ವಸ್ತಿ ಶ್ರೀ ದುರ್ಮುಖಿನಾಮ ಸಂ|| ಆಷಾಡ ಶುದ್ಧ ಏಕಾದಶಿ ಬ್ರಹ್ಮ ಮುಹೂರ್ತದಲ್ಲಿ, ಪ್ರಭಾತ ಸೇವೆ ಮಂಗಳವಾದ್ಯಗಳಿಂದ ಪಾವನ ಗಂಗಾ ಕಲಶವನ್ನು ತಂದು ವೇದಘೋಷದಿಂದ ಉಷಃಕಾಲದಲ್ಲಿ ಕಲಶ ಸ್ಥಾಪನೆ ಮೊದಲಾದ ಕಾರ್ಯಗಳು ನಡೆದವು. ಗುರು ಪರಂಪರಾಸ್ತೋತ್ರ ಪೂರ್ವಕ ಶ್ರೀ ಉಮಾಮಹೇಶ್ವರ, ಶ್ರೀ ಚಂದ್ರಮೌಳೀಶ್ವರ ಪೂಜಾ, ಶ್ರೀಗುರು ಪೂಜಾದಿಗಳೊಡನೆ ಮಹನ್ಯಾಸ

ಪೂರ್ವಕ ಶ್ರೀ ರುದ್ರಾಭಿಷೇಕ, ಪ್ರಸ್ಥಾನತ್ರಯ ಪಾರಾಯಣ, ಶಿವ ಸಹಸ್ರನಾಮ, ಬಿಲ್ವಾರ್ಚನಾದಿ ಕಾರ್ಯಗಳಿಂದ ಯಥಾವಿಧಿ ವಿಧ್ಯುಕ್ತವಾಗಿ ಉದಯ 9 ಗಂ॥ ವರಿಗೂ ನಡೆದವು.

ಅನಂತರ ಪೂಜ್ಯ ಶ್ರೀಗಳವರು ಈಶಾವಾಸ್ಯೋಪನಿಷದ್ಭಾಷ್ಯ ಪ್ರವಚನ ಪ್ರಾರಂಭ ಮಾಡಿ ಮಂತ್ರ ಪುಷ್ಪ ಮಂಗಳಾರತಿಯಿಂದ ಪ್ರಾತಃಕಾಲ ಕಾರ್ಯ ಪೂರ್ಣ ವಾಯಿತು. ಸಾಯಂಕಾಲ ಪ್ರದೋಷ ಪೂಜಾನುಷ್ಠಾನಾನಂತರ 7 ಗಂ|| ಯಿಂದ 8–30 ಗಂ॥ ವರಿವಿಗೂ ಶ್ರೀಮದ್ಭಗವದ್ಗೀತಾ ಶಾಂಕರಭಾಷ್ಯ ಪ್ರವಚನ ತದ ನಂತರ ಮಂಗಳ. ಅನುದಿನವು ನಿತ್ಯ ನಿಯಮ ವ್ರತಶೀಲ ಸಂಪನ್ನವಾಗಿ 18–7–56 ಮೊದಲು ಕಾರ್ತಿಕ ಶುದ್ಧ ದ್ವಾದಶಿ ಗುರುವಾರ 15–11–56 ವರಿಗೂ 4 ತಿಂಗಳು ಅವಿಚ್ಯುತವಾಗಿ, ಏಕಧಾರೆಯಾಗಿ ಈ ಮಹಾಕಾರ್ಯಕ್ರಮವು ಗುರು ಕರುಣೆಯಿಂದ ನಡೆಯಿತು.

ಈ 3 ತಿಂಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತ ರೇಯ, ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕ ಉಪನಿಷತ್ತುಗಳು, ಬ್ರಹ್ಮ ಸೂತ್ರಗಳು, ಭಗವದ್ಗೀತಾ ಭಾಷ್ಯ ಪ್ರಸಂಗಗಳು ಯಥೋಚಿತವಾಗಿ ಶ್ರುತಿಯ ಯುಕ್ತ್ಯನುಭವಗಳಿಂದ ಸರ್ವ ಜನಾನಂದಕರವಾಗಿ ಪ್ರತಿಪಾದಿಸಲ್ಪಡುತ್ತ, ಶ್ರೋತೃ ಜನಗಳಿಗೆ ಪವಿತ್ರವಾದ ಒಂದು ಆಧ್ಯಾತ್ಮಿಕ ದಿವ್ಯ ಸುಸಂಸ್ಕೃತ ವೃತ್ತಿಯನ್ನುಂಟು ಮಾಡಿದರು. ಅಲ್ಲಿಯ ಆ ಜನರು ಈ 4 ಮಾಸಗಳು ತಮಗೊಂದು ಮಹಾ ದೊಡ್ಡ ಹಬ್ಬವಾಗಿ ಜೀವಿತದಲ್ಲಿಯೇ ಇವು ಅತ್ಯಂತ ಸುದಿನಗಳಾಗಿ ನಡೆದವೆಂದು ಆನಂದವನ್ನು ಹೊಂದುತ್ತಿದ್ದರು.

ಈ ಮಹಾವ್ರತಾಚರಣ ಮಧ್ಯ ಕಾಲದಲ್ಲಿ ಆಹ್ವಾನಿತರಾಗಿ ದಯಮಾಡಿಸಿದ ಪೂಜ್ಯ ಸ್ವಾಮಿಗಳು :–

| | |
|---|---|
| ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು | ಗುಂಟೂರು |
| ಶ್ರೀ ಶಂಕರಾನಂದ ಸ್ವಾಮಿಗಳು | ಆಳ್ಳಗಡ್ಡೆ |
| ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು | ಗಂಡಿಕ್ಷೇತ್ರ |
| ಶ್ರೀ ಭೂಮಾನಂದ ಸ್ವಾಮಿಗಳು | ಕೊತ್ತಚೆರುವು |
| ಶ್ರೀ ಕೇಶವ ತೀರ್ಥ ಸ್ವಾಮಿಗಳು | ಪಿಡುಗುರಾಲ |
| ಶ್ರೋ ॥ ಬ್ರ ॥ ಶ್ರೀ ಶಂಕರಾನಂದ ಸ್ವಾಮಿಗಳು | ಸುರಪುರ |

ಈ ಮಹನೀಯರೆಲ್ಲರು ತಮ್ಮ ಅಮೋಘವಾದ ಆಧ್ಯಾತ್ಮಿಕೋಪನ್ಯಾಸಗಳನ್ನು ಮಾಡಿದರು. ಗುಂತಕಲ್ಲು ಪಟ್ಟಣದಲ್ಲಿ ಮೊಟ್ಟಮೊದಲು ಇಷ್ಟು ದೀರ್ಘವಾಗಿ ನಡೆದ ವೈದಿಕ ಮಹಾಕಾರ್ಯ, ಆಧ್ಯಾತ್ಮಿಕ ಬ್ರಹ್ಮಯಜ್ಞವಿದು ಎಂದು ಬಂದ ಮಹನೀಯರು

ಯಾವತ್ತು ಪ್ರಜೆಗಳು ಅಂದುಕೊಳ್ಳುತ್ತಿದ್ದರು. ಇದೊಂದು ದಿವ್ಯವಾದ ಈಶ್ವರ ಯೋಗ.

ಈ ಆಧ್ಯಾತ್ಮಿಕ ಕಾರ್ಯಕ್ರಮ ಕಾರ್ತಿಕ ಶುದ್ಧ ಏಕಾದಶಿ ಅಖಂಡ ಷೋಡಶ ಭಗವನ್ನಾಮ ಭಜನಪೂರ್ವಕ ದ್ವಾದಶಿ ಪೂರ್ಣಾಹುತಿಯೊಡನೆ ಕಲಶೋದ್ವಾಸನ ವಾಯಿತು. ಭೂರಿ ಅನ್ನ ಸಂತರ್ಪಣೆಯಾಯಿತು. ಆ ದಿನ ಸಾಯಂಕಾಲ ದೊಡ್ಡ ದಾಗಿ ಸಭೆ ನಡೆಯಿತು. ಶ್ರೀ ಉಮಾಮಹೇಶ್ವರ ಪಾಠಶಾಲ ಬೃಂದ ಬಾಲ–ಬಾಲಿ ಕೆಯರಿಂದ ಭಗವದ್ಗೀತಾ ಆಧ್ಯಾತ್ಮಿಕ ಪ್ರಶ್ನೆಗಳ ಪೋಟಿಪಠನ ನಡೆಯಿತು.

ಪೂಜ್ಯ ಬ್ರಹ್ಮಶ್ರೀ ಶಂಕರ ಶಾಸ್ತ್ರಿ ಸ್ವಾಮಿಯವರು 'ಗುಂತಕಲ್' ಶಬ್ದ ನಿರ್ವ ಚನವನ್ನು ಮಾಡುತ್ತಾ, ಶ್ರೀಗಳವರ ಸಾನ್ನಿಧ್ಯದಲ್ಲಿ ಈ ಮಹಾಕಾರ್ಯವು ನಡೆಯಿಸಿ ಕೊಂಡ ನೀವೆಲ್ಲರೆಷ್ಟು ಭಾಗ್ಯವಂತರೋ ! ಲಕ್ಷ್ಯಾವಧಿ ಧನವನ್ನು ವ್ಯಯಮಾಡಿ ವಿಪ ರೀತವಾದ ಪರಿಶ್ರಮ ಮಾಡಿದರೂ, 4 ಮಾಸಗಳು (122 ದಿನಗಳು) ಅವಿಚ್ಯುತ ವಾಗಿ ಈ ಬ್ರಹ್ಮಯಜ್ಞವು ಪ್ರಶಾಂತವಾಗಿ ಜರುಗುವದು ಮಹಾದುಸ್ತರ. ನೀವೆಷ್ಟು ನಿಷ್ಕಾಮ ಪುಣ್ಯವಂತರೋ ಎನ್ನುತ್ತ, ಶ್ರೀಗಳವರನ್ನು ನಾವು ಚಿಕ್ಕತನದಿಂದಲೂ ನೋಡುತ್ತಲಿದ್ದೇವೆ. ಇವರ ತಪಃ ಪ್ರಭಾವದಿಂದ ಇಂಥಾ ಮಹತ್ಕಾರ್ಯವು ನಡೆ ದಿದೆ. 'ಇವರು ಶುಕಯೋಗೀಂದ್ರರು'. 12 ವರುಷಗಳು ಒಂದು ಕಾರ್ಯವು ಅಕುಂಠಿತವಾಗಿ ನಡೆದರೆ ಅದೊಂದು ಪಟ್ಟವಾದಂತೆ ಎಂದು ಅನ್ನುತ್ತಾರೆ. ಇದು 12 ನೇ ವ್ರತವಾಗಿದೆ. ಇದೊಂದು ವಿಶೇಷವೆಂದು ಹೇಳಿದರು. ಅನಂತರ ಮಂತ್ರ ಪುಷ್ಪ ಜಯ ಜಯ ಧ್ವನಿಗಳಿಂದ ಮಂಗಳವಾಯಿತು. ಕಾರ್ಯವು ಸಮಾಪ್ತಿಗೊಂಡಿತು.

ದೀಕ್ಷಾ ವಿರಮಣಕ್ಕಾಗಿ ಶ್ರೀ ಸ್ವಾಮಿಗಳವರು ಅನೇಕ ಭಕ್ತಾದಿಗಳೊಡನೆ ಹಂಪಿ ಮಹಾಕ್ಷೇತ್ರಕ್ಕೆ ದಯಮಾಡಿಸಿದರು. ಕಾರ್ತಿಕ ಶುದ್ಧ ಪೂರ್ಣಿಮ ದೀಕ್ಷಾ ವಿರಮಣ ವಾಯಿತು. ಚಕ್ರತೀರ್ಥ ಸ್ನಾನವನ್ನಾಚರಿಸಿ ಶ್ರೀ ವಿರೂಪಾಕ್ಷೇಶ್ವರ ಸ್ವಾಮಿಗೆ ಮಹ ನ್ಯಾಸ ಪೂರ್ವಕ ರೇದ್ರಾಭಿಷೇಕ ಪೂಜಾದಿಗಳು ಮಾಡಿಸಿದರು. ಸಾಯಂ ಸಮಯ ದಲ್ಲಿ ಉಪನ್ಯಾಸ ಕಾರ್ಯಕ್ರಮ ನಡೆಯಿತು. ಆಗ ತಾತ್ವಿಕ ಕವಿತಾ ವಿಶಾರದರ್ರು ಮತ್ತು ಇತರ ವಿದ್ವಾಂಸರು ಪದ್ಯಗಳು ಮತ್ತು ಉತ್ತಮವಾದ ಹಾಡುಗಳನ್ನು ಆಂಧ್ರ ಭಾಷೆಯಲ್ಲಿ ರಚಿಸಿ ಸ್ವಾಮಿಗಳವರ ಸನ್ನಿಧಿಯಲ್ಲಿ ಹಾಡಿದರು. ಕೆಲವರು ಭಾಷಣ ಮಾಡಿದರು.

ಈ ಚಾತುರ್ಮಾಸ್ಯ ವ್ರತ ಸಮಯದಲ್ಲಿ ಶ್ರೀ ಗಂಗವರಂ ಭೀಮಾಚಾರಿ, ಶ್ರೀ ಜಿ. ವೆಂಕಟಸ್ವಾಮಿ ಎನ್ನುವವರು ಸ್ವಾಮಿಗಳವಠ ಸನ್ನಿಧಿಯಲ್ಲಿ ಅನುಗ್ರಹವನ್ನು ಪಡೆದು ಜಿಜ್ಞಾಸಾಪರರಾಗಿ ಗುರುಕುಲ ವಾಸವನ್ನು ಮಾಡುತ್ತಿರುವರು.

ಈ ಮಹಾವ್ರತದಲ್ಲಿ ನಡೆದ ಉಪನಿಷತ್ತುಗಳು, ಬ್ರಹ್ಮಸೂತ್ರಗಳು, ಭಗವ ದ್ಗೀತೆ, ಪ್ರಸ್ಥಾನತ್ರಯ ವಿಷಯವಾಗಿ ಸ್ವಾಮಿಗಳವರು ಪ್ರಾರಂಭ ದಿನಗಳಲ್ಲಿ ದಿಗ್ದರ್ಶ ನಾತ್ಮಕವಾಗಿ ಮಾತನಾಡಿದ ಸಂಗ್ರಹವಾದ ಪರಿಚಯದ ಮಾತುಗಳ ಉಪನ್ಯಾಸ :—

## ಓಂ ನಮೋ ಭಗವತೇ ಶ್ರೀಮದುಮಾಮಹೇಶ್ವರಾಯ

ಶ್ರೀ ಉಮಾಮಹೇಶ್ವರರಿಗೆ, ಉಮಾಮಹೇಶ್ವರ ಗುರುಪೀಠಕ್ಕೆ, ಗುರುಪೀಠ ಪರಂಪರಾಚಾರ್ಯರಿಗೆ, ಸ್ವಗುರುದೇವರಿಗೆ ಅನಂತ ಪ್ರಣಾಮಗಳನ್ನಾಚರಿಸಿ, ಪವಿತ್ರ ವಾದ ಈ ಪ್ರಾತಃಕಾಲದಲ್ಲಿ ಉಪನಿಷತ್ಪ್ರಸಂಗವನ್ನು ಪ್ರಾರಂಭಿಸೋಣ.

'ಸದೇರ್ಧಾತೋರ್ವಿಶರಣ ಗತ್ಯವಸಾದನಾರ್ಥಸ್ಯ ಉಪನಿ ಪೂರ್ವಕಸ್ಯ ಕ್ವಿಪ್ ಪ್ರತ್ಯಯಾಂತಸ್ಯ ರೂಪಮಿದಂ ಉಪನಿಷತ್.' "ಉಪ, ನಿ," ಎಂಬ ಉಪಸರ್ಗಗಳು "ಷದಲ್" ಧಾತುವಿನೊಡನೆ ಸೇರಿ **ಉಪನಿಷತ್ತು** ಎನ್ನುವುದಾಗಿದೆ. ಉಪ–ಉಪ ಗಮ್ಯ ಗುರೂಪದೇಶದಿಂದ ಗ್ರಹಿಸಿ, ಗ್ರಹಿಸಿದ ಬ್ರಹ್ಮವಿದ್ಯೆಯಲ್ಲಿ, ನಿ–ನಿಶ್ಚಯ ಉಂಟಾಗಿ, ನಿಷ್ಠೆಯಿಂದ ವಿಚಾರಿಸುವ ಮುಮುಕ್ಷುವಿನ ಅವಿದ್ಯಾರೂಪವಾದ ಸಂಸಾರ ಬೀಜವನ್ನು, 'ಷದಲ್ ವಿಶರಣ ಗತ್ಯವಸಾದನೇಷು' – ಷದ್ – ವಿಶರಣ ಎಂದರೆ ಶಿಥಿಲ ಮಾಡುವುದು, ಅವಸಾದನ – ನಾಶ ಮಾಡುವುದು, ಮುಮುಕ್ಷುವನ್ನು, ಗತಿ-ಬ್ರಹ್ಮವನ್ನು ಸೇರಿಸುವಂಥಾದ್ದು, ಅಥವಾ ಶ್ರೀಗುರು ಸನ್ನಿಧಿಯನ್ನು ಸೇರಿಸುವದು ಉಪನಿಷತ್ತೆಂದು ಹೇಳಲ್ಪಡುತ್ತೆ. ವೇದಗಳ ಅಂತ್ಯ ಭಾಗವು ವೇದಾಂತವು, ಉಪ ನಿಷತ್ತುಗಳೆಂದು ಹೇಳುವರು. ಉಪನಿಷತ್ತುಗಳನ್ನು ಅತ್ಯಂತ ಶ್ರದ್ಧೆಯಿಂದ ಶ್ರವಣ ಮಾಡಿದರೆ ಆತ್ಮಜ್ಞಾನ–ಬ್ರಹ್ಮಾನುಭವ ಉಂಟಾಗುತ್ತೆ. ಉಪನಿಷತ್ತುಗಳು 108 ಮತ್ತು ಅವುಗಳಲ್ಲಿ ಸಾರಸರ್ವಸ್ವವಾದವು 10 ಉಪನಿಷತ್ತುಗಳು. ಈ ವ್ರತಾರಂಭ ಪ್ರಾರಂಭದ ದಿನಗಳಲ್ಲಿ ಉಪನಿಷತ್ತುಗಳ ಸಂಗ್ರಹವಾದ ಅರ್ಥವನ್ನು ದಿಗ್ದರ್ಶನಾತ್ಮಕ ವಾಗಿ ಮಾತನಾಡಿಕೊಂಡು 10 ಉಪನಿಷತ್ತುಗಳ ಸಂಕ್ಷಿಪ್ತವಾದ ಅರ್ಥವನ್ನು ವಿವರಿಸಿ ಆಮೇಲೆ ಸಾಂಗವಾಗಿ ಹೇಳೋಣ.

ಮೊದಲನೆಯ ಉಪನಿಷತ್ತು ; **ಈಶಾವಾಸ್ಯೋಪನಿಷತ್ತು.** ಶುಕ್ಲ ಯಜು ರ್ವೇದಾಂತರ್ಗತವಾದದ್ದು. 'ಈಶ' ಎಂಬ ಪದದಿಂದ ಪ್ರಾರಂಭವಾದದ್ದರಿಂದ ಇದನ್ನು ಈಶೋಪನಿಷತ್ತೆಂತಲೂ, ಸಂಹಿತೋಪನಿಷತ್ತೆಂತಲೂ, ವಾಜಸನೇಯ ಸಂಹಿತೋಪ ನಿಷತ್ತೆಂತಲೂ ಹೇಳುವರು. ಇದರಲ್ಲಿ ಕೇವಲ 18 ಮಂತ್ರಗಳು ಮಾತ್ರ ಇವೆ. ಆಯಾ ವೇದಾಂತರ್ಗತವಾದ ಉಪನಿಷತ್ತಿಗೆ ತತ್ತತ್ ಶಾಂತಿ ಮಂತ್ರವನ್ನು ಉಪನಿಷ ದಾರಂಭದಲ್ಲಿ ಅಂತ್ಯದಲ್ಲಿ ಹೇಳುವುದು ಪರಿಪಾಠವೆಂದು ತಿಳಿಯಬೇಕು. ಪೂರ್ಣಮದಃ ಇತಿ ಶಾಂತಿ.

ಇದಂ ವೃತ್ತಿಗೆ ವೇದ್ಯವಾಗುವ ಈ ಸಮಸ್ತವು ಸಚ್ಚಿದಾನಂದ ಸ್ವರೂಪವಾದ ಪರಮಾತ್ಮನೇ. ಇದೆಲ್ಲವೂ ಈಶ್ವರನಿಂದಲೇ ವ್ಯಾಪಿಸಲ್ಪಟ್ಟಿದೆ. ಆತನ ವಾಸ ಸ್ಥಾನವೇ ಇದು ಎಂದು ತಿಳಿದು, ಕರ್ತೃತ್ವ ಮಮತ್ವ ಬುದ್ಧಿಯಿಲ್ಲದೆ ತನಗುಂಟಾದ ಪದಾರ್ಥಗಳನ್ನು, ಭೋಗಗಳನ್ನು ಈಶ್ವರ ಪ್ರಸಾದವೆಂದು ಭಾವಿಸಿ ಭಗವದ್ದೃಷ್ಟಿ

ಯುಳ್ಳವನಾಗಿ ಅನುಭವಿಸಬೇಕು. ಆಸಕ್ತಿಯನ್ನು ಹೊಂದಬಾರದು. ಹೀಗೆ ಕರ್ಮದಲ್ಲಿ ಅನಾಸಕ್ತಿ ಅಸಂಗತ್ವವನ್ನು ಆತ್ಮನ (ಈಶ್ವರನ) ಅಪರೋಕ್ಷತ್ವವನ್ನು ಎರಡು ಮಂತ್ರಗಳಿಂದ ತಿಳುಹಿಸಿ, ಮೂರನೇ ಮಂತ್ರದಲ್ಲಿ ಈ ವಿಧಾನವನ್ನು ಬಿಟ್ಟು ವರ್ತಿಸಿದರೆ, ಅಜ್ಞಾನಮಯವಾದ ಅಂಧಕಾರ ಲೋಕಗಳನ್ನು ಹೊಂದಿ, ಜನನ ಮರಣ ಪ್ರವಾಹಕ್ಕೆ ಸಿಲುಕುವರೆಂದು ಹೇಳಿ, ಬ್ರಹ್ಮತತ್ವ ನಿರೂಪಣೆಯ ಮೂಲಕ ನಿರ್ಮೋಹವಾದ ತನ್ನಿಷ್ಠಾನುಭವಿಯ ದೃಷ್ಟಿಯನ್ನು ವರ್ಣಿಸಿ, ಜ್ಞಾನ ಕರ್ಮ ಸಮುಚ್ಚಯವನ್ನು ಪೂರ್ವಪಕ್ಷ ಮಾಡಿ, ಸೂರ್ಯಾಂತರ್ವರ್ತಿಯಾದ ಪ್ರತ್ಯಕ್ಚೇತನವೇ ನಾನೆಂಬ ದೃಷ್ಟಿಯನ್ನು ಬೇಡುವ ಸೂರ್ಯನ ಪ್ರಾರ್ಥನೆಯಿಂದ ಈ ಉಪನಿಷತ್ತು ಪೂರ್ಣವಾಗಿದೆ.

ಎರಡನೆಯ ಉಪನಿಷತ್ತು **ಕೇನೋಪನಿಷತ್ತು.** ಇದು ಸಾಮವೇದಾಂತರ್ಗತವಾದದ್ದು. ಇದಕ್ಕೆ ತಲವಕಾರೋಪನಿಷತ್ತೆಂತಲು ಹೆಸರು. ಕೇನ ಎಂದು ಮೊದಲ ಮಂತ್ರವು ಪ್ರಾರಂಭವಾಗಿರುವುದರಿಂದ ಇದಕ್ಕೆ ಕೇನೋಪನಿಷತ್ತೆಂದು ಹೆಸರಾಯಿತು.

ಇದರಲ್ಲಿ ನಾಲ್ಕು ಖಂಡಗಳಿವೆ. ಮೊದಲನೆಯ ಖಂಡದಲ್ಲಿ ಸರ್ವೇಂದ್ರಿಯಗಳು ತತ್ತತ್ ಕರ್ಮಗಳನ್ನು ಆಚರಿಸುವದಕ್ಕೆ ಯಾವನ ಪ್ರೇರಣೆಯಿಂದ ಪ್ರೇರೇಪಿಸಲ್ಪಟ್ಟು ಪ್ರವರ್ತನಶೀಲಗಳಾಗುತ್ತವೆ ? ಎನ್ನುವ ಪ್ರಶ್ನೆಯಿಂದ ಪ್ರಾರಂಭವಾಗಿ ಸರ್ವಾತೀತವಾದ ಬ್ರಹ್ಮ ಚೈತನ್ಯಾಶ್ರಯ ಪ್ರೇರಣೆಯಿಂದ ಈ ಸಮಸ್ತ ವ್ಯವಹಾರಗಳು ನಡೆಯಲ್ಪಡುತ್ತವೆಂದು ಹೇಳಲ್ಪಟ್ಟಿದೆ.

2ನೆಯ ಖಂಡದಲ್ಲಿ ನಿರಹಂಕೃತಿಯೂ, ನಿರಭಿಮಾನವೂ ಉಳ್ಳ ಅಧಿಕಾರಿಯಾದ ಮುಮುಕ್ಷುವಿಗೆ ಮಾತ್ರ ಬ್ರಹ್ಮಾನುಭವವಾಗುವುದೆಂದು, ಈ ಮೊದಲಾದ ವಿಷಯಗಳು ಗುರುಶಿಷ್ಯ ಸಂವಾದ ರೂಪೇಣ ಸಂಗ್ರಹವಾಗಿ ಹೇಳಲ್ಪಟ್ಟಿದೆ.

3ನೆಯ ಖಂಡದಲ್ಲಿ ನಾನೆಂದು ಅಹಂಕರಿಸುವದಕ್ಕೆ ಅವಕಾಶವಿಲ್ಲ. ಸರ್ವವ್ಯಾಪಕ ಬ್ರಹ್ಮಚೈತನ್ಯಾಶ್ರಯದಲ್ಲಿದ್ದು, ನಾನೆಂದು ಅಹಂಕರಿಸುವುದು ಅಜ್ಞಾನ. ಇಂದ್ರಾದಿ ದೇವತೆಗಳು ವಿಜಯಗರ್ವದಿಂದಿದ್ದರು. ಅದು ಅಹಂಕಾರದ ಚೇಷ್ಟೆ ಎಂದು ತಿಳಿಸುವದಕ್ಕಾಗಿ, ಯಕ್ಷರೂಪದಿಂದ ಪ್ರತ್ಯಕ್ಷವಾದ ಬ್ರಹ್ಮವಿಷಯಕ ಕಥೆಯೊಂದು ಸಂಗ್ರಹವಾಗಿ ಹೇಳಲ್ಪಟ್ಟಿದೆ.

4ನೆಯ ಖಂಡದಲ್ಲಿ "ಉಮಾಂ ಹೈಮವತೀಂ" ಉಮೆಯು ರೂಪದಿಂದ ಇಂದ್ರನಿಗೆ ಪ್ರತ್ಯಕ್ಷವಾದ ಒಬ್ಬ ಜ್ಞಾನ ಸ್ವರೂಪಿಣಿ ಪರದೇವತೆ, ವಿಜಯಗರ್ವೋಪೇತರಾದ ದೇವತೆಗಳಲ್ಲಿ ಇಂದ್ರನಿಗೆ ಕಾಣಿಸುವದು. ನಿಮ್ಮ ವಿಜಯವು ಬ್ರಹ್ಮದಿಂದಲೇ ಎನ್ನುವ ಯಥಾರ್ಥ ತತ್ವವನ್ನು ಬೋಧಿಸುವ ಏತತ್ಸಾಧನೆಗಳು ಇತ್ಯಾದಿಯಾಗಿ ಹೇಳಲ್ಪ

ಟ್ಟಿದೆ. ಈ ಉಪನಿಷತ್ತನ್ನು ಚನ್ನಾಗಿ ಗುರುಮುಖದಿಂದ ಶ್ರವಣ ಮಾಡಿದರೆ ಇದರಲ್ಲಿ ಶ್ರುತಿ ಷಡ್ಲಿಂಗ ತಾತ್ಪರ್ಯಾರ್ಥವು ಅವಗಾಹನವಾಗುವದು.

ಮೂರನೆಯ ಉಪನಿಷತ್ತು **ಕಠೋಪನಿಷತ್ತು.** ಈ ಉಪನಿಷತ್ತು ಕೃಷ್ಣ ಯಜುರ್ವೇದಾಂತರ್ಗತ, ಯಮ ನಚಿಕೇತ ಸಂವಾದಾತ್ಮಕವಾಗಿ, ಗುರುಶಿಷ್ಯನ್ಯಾಯೇನ ಪ್ರಶ್ನೋತ್ತರ ರೂಪವಾದ, ಅಪೂರ್ವ ಆಧ್ಯಾತ್ಮಿಕ ತತ್ವೋಪದೇಶಗಳುಳ್ಳ ಅತ್ಯುತ್ತಮವಾದ ಉಪನಿಷತ್ತು. ಇದರಲ್ಲಿ ಮೂರು ಅಧ್ಯಾಯಗಳು ಆರು ವಲ್ಲಿಗಳು (ಪ್ರಕರಣಗಳು) ಇವೆ. ವಾಜಸ್ರವಸ್ಸೆಂಬುವ ಋಷಿ ವಿಶ್ವಜಿದ್ ಯಾಗವನ್ನು ಮಾಡಿ ನಿರ್ವೀರ್ಯವಾದ ದಾನವನ್ನು ನೀಡುತ್ತಿರುವಾಗ, ತನ್ನ ಪುತ್ರನಾದ ನಚಿಕೇತನ ಸಂಭಾಷಣೆ. ತತ್ಪರಿಣಾಮದಿಂದ ನಚಿಕೇತನು ಯಮನ ಹತ್ತಿರಕ್ಕೆ ಹೋಗಿ ಆತನಿಂದ ಮೂರು ವರಗಳನ್ನು ಪಡೆದನು. ಅದರಲ್ಲಿ ಒಂದು ಆತ್ಮವಿದ್ಯೆಯನ್ನು ಕುರಿತ ವಿಷಯವಾಗಿದೆ. ಉತ್ತಮ ವಿವೇಕ ವೈರಾಗ್ಯಗಳಿಂದ ಕೂಡಿದ ಬ್ರಹ್ಮತತ್ವ ಪ್ರತಿಪಾದನಾತ್ಮಕ ಮಹಾವಾಕ್ಯಗಳನ್ನು ಅಧಿಕಾರಿಯಾದ ಆತನಿಗೆ ಬೋಧಿಸಿದ, ಅಪರೋಕ್ಷ ಬ್ರಹ್ಮ ಸಾಕ್ಷಾತ್ಕಾರ ಸಾಧನವಾದ ಸಾರತರ ಉಪನಿಷತ್ತು. ಇದರಲ್ಲಿ ಉತ್ತಮವಾದ ಉಪಮಾನೋಪಮೇಯಗಳು, ರೂಪಕಾಲಂಕಾರವರ್ಣನಾತ್ಮಕವಾದ ಮಹೋಪದೇಶಗಳಿವೆ. ಒಳ್ಳೆಯ ರುಚಿಕಟ್ಟಾದ ವಿಷಯಗಳು. ಶ್ರೀ ಶಂಕರಾಚಾರ್ಯರು ನಿರ್ದುಷ್ಟರಾದ ಈ ಗುರುಶಿಷ್ಯರಿಗೆ ನಮಸ್ಕರಿಸಿ ತಮ್ಮ ಭಾಷ್ಯವನ್ನು ಆರಂಭಿಸಿದಂತೆ ಈ ಉಪನಿಷದ್ಭಾಷ್ಯಾರಂಭ ಪೀಠಿಕೆಯಲ್ಲಿ ತಿಳಿಸಿದ್ದಾರೆ. ಅಷ್ಟು ಪೂಜ್ಯರಾದ ಗುರುಶಿಷ್ಯರೆಂಬ ಅರ್ಥದ್ಯೋತಕವಾಗುತ್ತೆ, ಇದೊಂದು ಅಪೂರ್ವ.

ನಾಲ್ಕನೆಯ ಉಪನಿಷತ್ತು **ಪ್ರಶ್ನೋಪನಿಷತ್ತು.** ಇದು ಅಥರ್ವಣ ವೇದಾಂತ ರ್ಗತವಾದ ಉಪನಿಷತ್ತು. ಸುಕೇಶಾದಿ ಆರು ಜನ ಋಷಿಗಳು, ಪಿಪ್ಪಲಾದ ಮುನಿಯ ಹತ್ತಿರಕ್ಕೆ ಸಮಿತ್ಪಾಣಿಗಳಾಗಿ ಬಂದು, ತಪವನ್ನಾಚರಿಸಿ ಬ್ರಹ್ಮತತ್ವವನ್ನು ಕೇಳಿದಂತೆ ಇದರಲ್ಲಿ 6 ಪ್ರಶ್ನೆಗಳು. ಅವುಗಳ ಪ್ರತ್ಯುತ್ತರವೇ ಈ ಉಪನಿಷತ್ತು. ಕೆಲವು ಸೃಷ್ಟಿ ಕರ್ಮ ಪರವಾಗಿಯೂ, ಔಪಾಸನಾ ಪರವಾಗಿಯೂ, ಜ್ಞಾನ ಪರವಾಗಿಯೂ, ಪ್ರಣವಾರ್ಥ ಪ್ರತಿಪಾದನಾತ್ಮಕವಾಗಿಯೂ ಬೋಧಿಸಿದೆ. ಮುಮುಕ್ಷುಗಳಿಗೆ ಉಪಾದೇಯವಾದವುಗಳು (ಉಪಯೋಗಕರವಾದವುಗಳು.)

ಐದನೆಯ ಉಪನಿಷತ್ತು **ಮುಂಡಕೋಪನಿಷತ್ತು.** ಇದು ಅಥರ್ವಣ ವೇದಾಂತರ್ಗತವಾದ ಉಪನಿಷತ್ತು. ಇದರಲ್ಲಿ 3 ಮುಂಡಕ (ಭಾಗ)ಗಳಿವೆ; ಆರು ಖಂಡ (ಪ್ರಕರಣ)ಗಳು ಇವೆ. ಪರಾ, ಅಪರಾ ಎಂಬ ಎರಡು ವಿದ್ಯೆಗಳು ಹೇಳಲ್ಪಟ್ಟಿವೆ. ಸೃಷ್ಟಿ ವಿಷಯ ಅದರ ತಾತ್ಪರ್ಯ, ಹೃದಯ ಗ್ರಂಥಿ ಭೇದನ, ಬ್ರಹ್ಮ ಜ್ಞಾನ ನಿಷ್ಠೆ ಅದರ ಸಾಧನೆ, ಅಷ್ಟೇ ಅಲ್ಲದೆ ಉತ್ತಮವಾದ ಉಪಮಾನೋಪಮೇಯಗಳು, ರೂಪಕಾಲಂಕಾರದಿಂದ ಬ್ರಹ್ಮ ವಿಷಯ ವರ್ಣನೆ ಇದರಲ್ಲಿದೆ.

ಆರನೆಯ ಉಪನಿಷತ್ತು **ಮಾಂಡೂಕ್ಯೋಪನಿಷತ್ತು.** ಇದು ಅಥರ್ವಣ ವೇದಾಂತರ್ಗತವಾದದ್ದು. ಇದರಲ್ಲಿ 12 ಮಂತ್ರಗಳಿರುತ್ತವೆ. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದೆಂದಂತೆ "ಮಾಂಡೂಕ್ಯಮೇಕಮೇವಾಲಂ ಮುಮುಕ್ಷೂಣಾಂ ವಿಮುಕ್ತಯೇ" ಎಂದು 108 ಉಪನಿಷತ್ತುಗಳಲ್ಲಿ ಕಡೆಯದಾದ ಮುಕ್ತಿಕೋಪನಿಷತ್ತಿನಲ್ಲಿ ಶ್ರೀ ರಾಮಚಂದ್ರಮೂರ್ತಿ ಆಂಜನೇಯಸ್ವಾಮಿಗೆ ಹೇಳಿದಂತೆ, ಮುಕ್ತಿಗೆ ಮುಖ್ಯೋಪಾದೇಯವಾದ ಈ ಮಾಂಡೂಕ್ಯೋಪನಿಷತ್ತು ಒಂದೇ ಸಾಕೆಂದು ಹೇಳಲ್ಪಟ್ಟಿದೆ.

ಇಂಥಹ ಮಹದರ್ಥ ಪ್ರತಿಪಾದಕವಾದ ಉಪನಿಷತ್ತು, ಮೊದಲು ಓಂಕಾರವೇ ಈ ಸರ್ವ ಸ್ವರೂಪವೆಂದು ತಿಳುಹುತ್ತಾ, ಅದೇ ಪರಬ್ರಹ್ಮವು, ಅಪರೋಕ್ಷವಾಗಿ ಶ್ರದನುಭವ ಸ್ಥಾನ ಅವಸ್ಥಾತ್ರಯ ಸಾಕ್ಷಿಯಾದ ತುರೀಯನಾದ ಈ ಆತ್ಮನೇ ಬ್ರಹ್ಮವೆಂದು, ವಿವರಣಪೂರ್ವಕವಾಗಿ ಆತ್ಮನಿಗೂ ಪ್ರಣವಕ್ಕೂ ಪಾದಗಳನ್ನು ಕಲ್ಪಿಸಿ, ಲಯ ಕ್ರಮದಿಂದ ತುರೀಯವಾದ ಆತ್ಮನಲ್ಲಿ ಪೂರ್ಣವಾಗುವದು. ಈ ಆತ್ಮ ಬ್ರಹ್ಮವೇ 'ಅಯಮಾತ್ಮಾ ಬ್ರಹ್ಮ' ವೆನ್ನುವ ಮಹಾ ವಾಕ್ಯಾರ್ಥವನ್ನು ಬೋಧಿಸಿದೆ. ಪರಂತು ಸಾಧನ ಸಾಧ್ಯ. ವಿಷಯ ಪ್ರತಿಪಾದನ ಮಾತ್ರವೇನಲ್ಲ. ಕೇವಲ ಸಿದ್ಧ ವಸ್ತು ಬೋಧಕವಾಗಿದೆ.

ಈ ಉಪನಿಷತ್ತಿಗೆ ಶ್ರೀ ಗೌಡಪಾದಾಚಾರ್ಯರು 215 ಕಾರಿಕೆಗಳಿಂದ ಇದನ್ನು ವಿವರಿಸಿದ್ದಾರೆ. ಇವು 4 ಪ್ರಕರಣಗಳು : ಆಗಮ ಪ್ರಕರಣ, ವೈತಥ್ಯ ಪ್ರಕರಣ, ಅದ್ವೈತ ಪ್ರಕರಣ, ಅಲಾತ ಶಾಂತಿ ಪ್ರಕರಣ. ಇದನ್ನು ಗುರುಮುಖದಿಂದ ಶ್ರವಣ ಮಾಡಿ ಅನುಭವವನ್ನು ಪಡೆಯಬೇಕಾದ ಉಪನಿಷದ್ರಾಜವಿದು.

ಏಳನೆಯ ಉಪನಿಷತ್ತು **ತೈತ್ತಿರಿಯೋಪನಿಷತ್ತು.** ಇದು ಕೃಷ್ಣ ಯಜುರ್ವೇದಾಂತರ್ಗತವಾದದ್ದು. ಇದರಲ್ಲಿ ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿಯೆಂಬುದಾಗಿ ಒಂದೊಂದು ವಲ್ಲಿ (ಅಧ್ಯಾಯ) ಯಲ್ಲಿ ಅನುವಾಕಗಳೆಂಬ ಹೆಸರಿನಿಂದ ಅಪೂರ್ವ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಮೊದಲು ಗುರುಕುಲದಲ್ಲಿ ಆಚಾರ್ಯ ಸನ್ನಿಧಿ ವಿದ್ಯಾರ್ಥಿಗೆ ತಕ್ಕ ಶಿಕ್ಷೆಯನ್ನು ಕುರಿತು ಸುಪ್ರಣವ ಬ್ರಹ್ಮಚರ್ಯವೆಂಬ ಉತ್ತಮ ನೈತಿಕ ಧಾರ್ಮಿಕಾದಿ ವೇದಸಾರವಾದ ಪ್ರಬೋಧೆಗಳಿವೆ.

ಆನಂದವಲ್ಲಿಯಲ್ಲಿ ಪಂಚಕೋಶ ವಿಚಾರ ಪೂರ್ವಕ, ಆನಂದಮಯ ಕೋಶಾಂತರ್ಗತವಾಗಿ ಭಾಸಿಸುವ ಬ್ರಹ್ಮ ಚೈತನ್ಯವು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿ ವಾಕ್ಯಗಳಿಂದ ಬ್ರಹ್ಮತತ್ವ ಪ್ರತಿಪಾದನೆ; ಮತ್ತು ನಿಷ್ಕಾಮಿಯಾದ ಬ್ರಹ್ಮಾನುಭವಿಯ ಆನಂದದಲ್ಲಿ ಇನ್ನಿತರ ಸರ್ವಾನಂದಗಳು ಲೇಶಮಾತ್ರಗಳೂ ಏಕದೇಶೀಯಗಳೂ ಎನ್ನುವ ಈ ಮೊದಲಾದ ವಿಷಯಗಳೂ ಇವೆ.

ಭೃಗುವಲ್ಲಿಯಲ್ಲಿ ವರುಣನು ತಂದೆ (ಗುರು) ಯಾದ ಭೃಗುವಿನ ಹತ್ತಿರ, ಶಿಷ್ಯ ವೃತ್ತಿಯಿಂದ ಕ್ರಮವಾಗಿ ಅನ್ನ, ಪ್ರಾಣ, ಚಕ್ಷು, ಶ್ರೋತ್ರಾದಿಗಳು ಬ್ರಹ್ಮವನ್ನು ತಿಳಿಯಲು ಮಾರ್ಗವೆಂದು, ಇವೆಲ್ಲವೂ ಯಾವದರಿಂದ ಉಂಟಾದವೋ, ಯಾವದರಲ್ಲಿರುವವೋ, ಯಾವದರಲ್ಲಿ ಲಯವಾಗುವವೋ ಅದು ಬ್ರಹ್ಮವೆಂದು, ಈ ವಿಷಯಗಳ ವಿಪುಲತೆ ತಿಳುಹಿಸಲ್ಪಟ್ಟಿದೆ. ಈ ತೈತ್ತರೀಯೋಪನಿಷತ್ತನ್ನು ಶಿರೋರತ್ನವೆಂದೆನ್ನುತ್ತಾರೆ.ಸಮಗ್ರವಾಗಿ ಪೂರ್ವಾರ್ಥ ಉತ್ತರಾರ್ಥಗಳು ಇದರಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ಎಂಟನೆಯ ಉಪನಿಷತ್ತು ಐತರೇಯೋಪನಿಷತ್ತು. ಇದು ಋಗ್ವೇದಾಂತರ್ಗತವಾದದ್ದು. ಇದರಲ್ಲಿ 'ಪ್ರಜ್ಞಾನಂ ಬ್ರಹ್ಮ'ವೆಂಬ ಮಹಾವಾಕ್ಯವಿದೆ. ಸೃಷ್ಟಿಗೆ ಪೂರ್ವದಲ್ಲಿ ಅದ್ವಿತೀಯವಾದ ಬ್ರಹ್ಮವೇ (ಆತ್ಮ) ಇತ್ತು ಮತ್ತು ಅದರಿಂದ ಈ ಸೃಷ್ಟಿ ಆಯಿತು. ಮೊದಲು ಗೋವನ್ನು ಆಮೇಲೆ ಅಶ್ವವನ್ನೂ ಅನಂತರ ಮಾನವ ಶರೀರವನ್ನು ಉಂಟುಮಾಡಿ, ಮಾನವ ಶರೀರದಲ್ಲಿ ದೇವತೆಗಳ ಪ್ರವೇಶ, ಸೃಷ್ಟಿಕ್ರಮ ಜೀವನ ಅವಸ್ಥಾವಿಷಯ ಪ್ರತಿಪಾದನೆ ಇತ್ಯಾದಿಗಳು ತಿಳಿಸಿ, ಈ ಸರ್ವವನ್ನು ನೇತ್ರಾದಿ ಇಂದ್ರಿಯಗಳಿಂದ ಅರಿಯುವ ಜ್ಞಾತ ಪ್ರಜ್ಞಾಮಾತ್ರನು, ಆ ಪ್ರಜ್ಞಾನವೇ ನಿರುಪಾಧಿಕ ಬ್ರಹ್ಮವು, ಎಂಬ ಮೊದಲಾದ ವಿಷಯಗಳನ್ನು ಈ ಉಪನಿಷತ್ತು ತಿಳುಹುತ್ತೆ.

ಒಂಭತ್ತನೆಯ ಉಪನಿಷತ್ತು ಛಾಂದೋಗ್ಯೋಪನಿಷತ್ತು. ಇದು ಸಾಮವೇದಾಂತರ್ಗತವಾದದ್ದು. ಈ ಉಪನಿಷತ್ತಿನಲ್ಲಿ 8 ಪ್ರಪಾಠಕ (ಅಧ್ಯಾಯ) ಗಳಿವೆ. ಇದರಲ್ಲಿ ಖಂಡಗಳೆಂಬ ಹೆಸರಿನಿಂದ ಪ್ರಕರಣ ವಿಭಾಗಗಳು ಅನೇಕವುಂಟು. ಮೊದಲು 4.5 ಪ್ರಪಾಠಕಗಳಲ್ಲಿ ಪ್ರಣವವು, ಪ್ರಣವೋಪಾಸನೆ, ಪ್ರಾಣ, ಪ್ರಾಣದ ಮಹಿಮೆ ಮೊದಲಾದ ಅನೇಕ ವಿಷಯಗಳು ಹೇಳಲ್ಪಟ್ಟಿವೆ. ಈ ವಿಷಯವಾಗಿ ಅಲ್ಲಲ್ಲಿ ಕೆಲವು ಕಥೆಗಳಿವೆ. 6 ನೇ ಪ್ರಪಾಠಕದಲ್ಲಿ 'ತತ್ತ್ವಮಸಿ' ಮಹಾ ವಾಕ್ಯವನ್ನು ಕುರಿತ ಶ್ರುತಿ ಷಡ್ಲಿಂಗ ತಾತ್ಪರ್ಯ ನಿರ್ಣಾಯಕವಾದ, ಬ್ರಹ್ಮಾದ್ವಿತೀಯ ಅಭೇದ ಜ್ಞಾನ ಪ್ರಬೋಧೆಯಿದೆ. ಸೃಷ್ಟಿ ತ್ರಿವೃತ್ಕರಣವನ್ನು ತಿಳುಹುತ್ತ, ಶ್ವೇತಕೇತು ಉದ್ದಾಲಕ ಸಂವಾದಾತ್ಮಕವಾಗಿ 'ತತ್ತ್ವಮಸಿ' ಆ ಸದ್ರೂಪ ಬ್ರಹ್ಮವಸ್ತು ನೀನಾಗಿದ್ದೀಯೆ ಎಂಬ ವಿಷಯ, ಉಪಮಾನೋಪಮೇಯಗಳಿಂದ 9 ಸಲ ಉಪದೇಶಿಸಲ್ಪಟ್ಟಿದೆ. ಮುಮುಕ್ಷುಗಳಿಗಿದು ಮುಖ್ಯ ವಿಚಾರಾರ್ಹವಾದ ಭಾಗ.

'ತರತಿ ಶೋಕಮಾತ್ಮವಿತ್' ಎಂದು 7 ನೇ ಪ್ರಪಾಠಕದಲ್ಲಿ ನಾರದ ಸನತ್ಕುಮಾರ ಸಂವಾದಾತ್ಮಕವಾಗಿ, ಕ್ರಮದಿಂದ ನಾಮರೂಪಗಳು ಮೊದಲು ಮನಸ್ಸು, ಚಿತ್ತ, ಚಿಂತೆ, ಆಶೆ ಮೊದಲಾದವುಗಳನ್ನು ತಿಳುಹಿ ಅವುಗಳನ್ನು ಒಂದೊಂದಾಗಿ ಬಿಟ್ಟು ಕಡೆಗೆ ಅದ್ವಿತೀಯವಾದ ಭೂಮ, ಬ್ರಹ್ಮೋಪದೇಶ ತತ್ತ್ವವನ್ನು ತಿಳುಹುವುದಾಗಿದೆ.

8 ನೇ ಪ್ರಪಾಠಕ ನಿತ್ಯ ಸತ್ಯವಾದ ಪರಮ ಸೂಕ್ಷ್ಮ ಬ್ರಹ್ಮತತ್ತ್ವವು, ಬ್ರಹ್ಮಪುರವೆನ್ನಲ್ಪಡುವ ಈ ದೇಹದ ದಹರಾಕಾಶದಲ್ಲಿ ಬಹಿರಂತರವೆಂಬ ವ್ಯವಧಾನವಿಲ್ಲದೆ

ಸ್ವಯವಾಗಿ ಬೆಳಗುತ್ತಿದೆ; ಎನ್ನುವ ಮುಂತಾದ ಉತ್ತಮ ವಿಷಯ ವ್ಯಾಖ್ಯೆಗಳಿಂದ ಕೂಡಿ ಬ್ರಹ್ಮಚರ್ಯದ ಮಹಿಮಾಭಿವರ್ಣನಪೂರ್ವಕ ಪೂರ್ಣವಾಗುತ್ತೆ. ಮುಖ್ಯ ವಾಗಿ ಈ ಉಪನಿಷತ್ತು ದೊಡ್ಡದಾದ್ದರಿಂದ, ಈ ಮಹಾವ್ರತದಲ್ಲಿ ನಮ್ಮಗೆ ದೇವರು ಕೊಟ್ಟ ಸಮಯದಲ್ಲಿ ಬೇಕಾದ ಅತ್ಯುತ್ತಮ ವಿಷಯಗಳನ್ನು ಮಾತ್ರ ವಿಚಾರ ಮಾಡೋಣ. ಒಟ್ಟಿನಲ್ಲಿ ಈ ಉಪನಿಷತ್ತಿನೊಳಗೆ ಪ್ರಾಣ, ಪ್ರಣವಾರ್ಥ, 'ತತ್ತ್ವ ಮಸಿ' ಮಹಾವಾಕ್ಯಾರ್ಥ ಪ್ರಧಾನವಾಗಿದೆಯೆಂದು ಗ್ರಹಿಸಬೇಕು.

ಹತ್ತನೆಯ ಉಪನಿಷತ್ತು **ಬೃಹದಾರಣ್ಯಕೋಪನಿಷತ್ತು.** ಇದು ಶುಕ್ಲ ಯಜುರ್ವೇದಾಂತರ್ಗತವಾದದ್ದು. ಇದಕ್ಕೆ ಬ್ರಾಹ್ಮಣೋಪನಿಷತ್ತೆಂದು ಕೂಡ ನಾಮ ವುಂಟು. ಇದರಲ್ಲಿ 8 ಅಧ್ಯಾಯಗಳಿವೆ. ಮೊದಲು 2 ಅಧ್ಯಾಯಗಳು ಅಶ್ವಮೇಧ ವನ್ನು ಕುರಿತು ಪ್ರಸಂಗಗಳು. ಆ ವಿವರಣವು ಅಷ್ಟು ಬೇಕಾಗಿಲ್ಲ. ಅಶ್ವಮೇಧಾಶ್ವವು ನಿರಾತಂಕವಾಗಿ ಗಮ್ಯಸ್ಥಾನವನ್ನು ಸೇರಿ ವಿಜಯ ಹೊಂದಿದಂತೆ, ಈ ಶರೀರವೆಂಬ ಜೀವಾಶ್ವವು ಪರಮಾತ್ಮ (ಅಹಂಬ್ರಹ್ಮಾಸ್ಮಿ) ಎಂಬ ಗಮ್ಯವನ್ನು ಅಂದರೆ ಅನುಭವ ವನ್ನು ಯಾವ ಕಾಮಾದಿ ಅನಾತ್ಮ ಶತ್ರುವರ್ಗದ ಆತಂಕವಿಲ್ಲದೆ ಗಮ್ಯವಾದ ಬ್ರಹ್ಮ ಸ್ಥಿತಿಯನ್ನು ಹೊಂದುವದು.......... ಇತ್ಯಾದಿಯಾಗಿರುವ ಈ ಭಾಗವನ್ನು ಬಿಟ್ಟು ನಾವೀಗ ಈ ಉಪನಿಷತ್ತನ್ನು 6 ಅಧ್ಯಾಯಗಳಾಗಿ ಪರಿಗಣಿಸಿಕೊಂಡು ಶ್ರವಣ ಮಾಡೋಣ. ಇದರಲ್ಲಿನ ವಿಭಾಗಗಳಿಗೆ ಬ್ರಾಹ್ಮಣಗಳೆಂದು ಹೆಸರು. ಅನೇಕ ಕರ್ಮೋಪಾಸನೆಯ ವಿಷಯಗಳು ಮತ್ತು ಉತ್ತಮವಾದ ಬ್ರಹ್ಮತತ್ತ್ವಜ್ಞಾನವು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

ಯಾಜ್ಞವಲ್ಕ್ಯನ ಸಭಾ ವಿಜಯ ಪ್ರಸಂಗದಲ್ಲಿಯು ಮತ್ತು ಯಾಜ್ಞವಲ್ಕ್ಯ ಜನಕ ಸಂವಾದಾತ್ಮಕವಾದ ಉತ್ತಮ ಬ್ರಹ್ಮಬೋಧೆ ವಿಷಯಗಳು ಮತ್ತು ಯಾಜ್ಞ ವಲ್ಕ್ಯ–ಮೈತ್ರೇಯಿ ಸಂವಾದ, ದೇವದಾನವ, ಮಾನವರಿಗೆ ಬ್ರಹ್ಮೋಪದೇಶ ಮೊದಲಾದ ಅನೇಕ ಮುಖ್ಯ ವಿಷಯಗಳಿವೆ.

## ಬ್ರಹ್ಮ ಸೂತ್ರಗಳು

ಪೂರ್ವಾಪರದ ಮಾತುಗಳು :– ಇವು (ಬ್ರಹ್ಮ ಸೂತ್ರಗಳು) ಶ್ರೀವೇದ ವ್ಯಾಸ ಮಹರ್ಷಿಗಳಿಂದ ಪ್ರಣೀತವಾದವು. ಸರ್ವೋಪನಿಷತ್ಸಾರಭೂತವಾದ ಅದ್ವೈತ ಸಿದ್ಧಾಂತವನ್ನು ನಿರ್ಣಯಿಸುವ ನ್ಯಾಯ ಪ್ರಸ್ಥಾನವೆಂತಲೂ, ವೈಯಾಸಿಕೀ ಶಾರೀರಕ ಮೀಮಾಂಸಾ ಬ್ರಹ್ಮ ಸೂತ್ರಗಳೆಂತಲೂ ನಾಮವು, ಸೂತ್ರವೆಂದರೆ ಅಲ್ಪಾಕ್ಷರ ಗಳುಳ್ಳದ್ದಾಗಿ ಅಸಂದಿಗ್ಧಾರ್ಥ ಬೋಧಕವಾಗಿದ ಸಾರವು, ಶಾಸ್ತ್ರಾರ್ಥಗಳಲ್ಲಿ ಎಲ್ಲೆಡೆ ಯಲ್ಲಿಯೂ ವರ್ತಿಸುವಂಥಾದ್ದಾಗಿ, ವ್ಯರ್ಥ ಪದರಹಿತವೂ, ನಿರ್ದೋಷವೂ ಆಗಿರುವ, ವಾಕ್ಯವೆಂದರ್ಥ. ಇದರಲ್ಲಿ 4 ಅಧ್ಯಾಯಗಳಿವೆ; ಪ್ರತಿ ಅಧ್ಯಾಯಕ್ಕೂ 4 ಪಾದಗಳು. 192 ಅಧಿಕರಣಗಳಿಂದ 555 ಸೂತ್ರಗಳಿಂದ ಒಪ್ಪುತ್ತಿದೆ.

1 ನೇ ಅಧ್ಯಾಯ 4 ಪಾದಗಳಲ್ಲಿಯ ಸಂಕ್ಷಿಪ್ತವಾದ ತಾತ್ಪರ್ಯ

## ಜಿಜ್ಞಾಸಾಧಿಕರಣ

'ಅಥಾತೋ ಬ್ರಹ್ಮ ಜಿಜ್ಞಾಸಾ !' ಎಂದು ಮೊದಲನೆಯ ಸೂತ್ರ. ಇದರಲ್ಲಿ ಅಥ ಶಬ್ದಕ್ಕೆ ಪ್ರಾರಂಭ, ಮಂಗಳ, ಸಮಸ್ತ, ಅನಂತರ, ಎಂಬ ಅರ್ಥಗಳಿವೆ. ಇವುಗಳಲ್ಲಿ ಸಾಧನ ಚತುಷ್ಟಯ ಸಂಪತ್ಯನಂತರ, ಅಧಿಕಾರಿಗೆ ಬ್ರಹ್ಮಜಿಜ್ಞಾಸ ಕರ್ತವ್ಯವೆಂದು ಅಥ ಶಬ್ದಕ್ಕೆ ಇಲ್ಲಿ ಆನಂತರ್ಯಾರ್ಥವು ಗ್ರಹಿಸಬೇಕು. ಈ ಪೂರ್ವಾಪರ ಅರ್ಥದೊಡನೆ 4 ಸೂತ್ರಗಳಲ್ಲಿ ವಿಪುಲವಾದ ವಿಷಯ ಪ್ರತಿಪಾದನೆ ಇದೆ. ಆನಂದ ಸ್ವರೂಪವಾದ ಬ್ರಹ್ಮ ವಿಷಯದಲ್ಲಿ ಅನೇಕರು ಅನೇಕ ರೀತಿಯಾಗಿ ಅರ್ಥಗಳು ಹೇಳುತ್ತಾರೆ. ಆದ್ದರಿಂದ ಬ್ರಹ್ಮವಸ್ತು ಆನಂದ ಸ್ವರೂಪವು. ಅದು ತಾನೆ (ನೀನೆ) ಯೆಂದು ತಿಳಿಯುವದರಲ್ಲಿ ಜಿಜ್ಞಾಸೆ ಅವಸರ. ಬ್ರಹ್ಮ ಸೂತ್ರಗಳನ್ನು ಶ್ರವಣ ಮಾಡಬೇಕಾದರೆ ಬುದ್ಧಿ ಭದ್ರವಾಗಿರಬೇಕು. ಮೊದಲು ಉಪನಿಷತ್ತುಗಳನ್ನು ಶ್ರವಣ ಮಾಡಿರಬೇಕು; ತಿಳಿದಿರಬೇಕು. ಅದರ ಸಮನ್ವಯ ನ್ಯಾಯ ಪ್ರಸ್ಥಾನವೇ ಬ್ರಹ್ಮ ಸೂತ್ರಗಳು.

1 ನೇ ಅಧ್ಯಾಯ. ಮೊದಲನೆಯ ಪಾದದಲ್ಲಿ ಉಪನಿಷತ್ತುಗಳೆಲ್ಲವೂ ಪರಮ ತಾತ್ಪರ್ಯ ದೃಷ್ಟಿಯಿಂದ ಬ್ರಹ್ಮತತ್ತ್ವವನ್ನೇ ಬೋಧಿಸುವವು ಎಂಬ ವಿಷಯ; 2 ನೆಯ ಪಾದದಲ್ಲಿ ಬ್ರಹ್ಮೋಪಾಸನಾ ವಿಷಯಕ ವಿವರಣೆ; 3 ನೇ ಪಾದದಲ್ಲಿ ಬ್ರಹ್ಮಾಸ್ತಿತ್ವವನ್ನು ಕುರಿತ ಪ್ರಸಂಗ; 4 ನೇ ಪಾದದಲ್ಲಿ ಸರ್ವವೂ ಬ್ರಹ್ಮಬೋಧಕ ವಾಕ್ಯಗಳೇಯಾದ ಪಕ್ಷದಲ್ಲಿ ಇನ್ನು ಪ್ರಧಾನಾದಿ ಬೋಧಕ ವಾಕ್ಯಗಳೇನೂ ಇಲ್ಲವೇ ? ಎಂದರೆ ಇಲ್ಲವೆಂತಲೂ, ಚಿದ್ವಿವರ್ತವೇ ಈ ಜಗತ್ತೆಂತಲು, ಪ್ರಧಾನಾದಿಗಳು ಕಾರಣವಲ್ಲವೆಂಬ ಅನೇಕ ವಿಷಯಗಳನ್ನು ತಿಳಿಸುವಿಕೆ.

ಎರಡನೇಯ ಅಧ್ಯಾಯ. ಪ್ರಥಮ ಪಾದದಲ್ಲಿ ಮತಮತಾಂತರಗಳಿಗೆ ಸಮಾಧಾನ; ಎರಡನೇ ಪಾದದಲ್ಲಿ ಸಾಂಖ್ಯಾದಿ ಮತಗಳು ಖಂಡನಾರ್ಹವೆಂತಲೂ, ಪ್ರಧಾನಾದಿಗಳು ಜಗದುತ್ಪತ್ತಿ ಕಾರಣವಲ್ಲವೆಂತಲೂ, ವಿಸ್ಪಷ್ಟವಾಗಿ ಹೇತು ದೃಷ್ಟಾಂತಗಳಿಂದ ತಿಳುಹಿಸಿ, ವೇದಬಾಹ್ಯವಾದ ವಿಮತ ಮತಗಳನ್ನೆಲ್ಲ ಖಂಡಿಸಿ, ವೇದಾಂತವು ನಿತ್ಯ ನಿರ್ದುಷ್ಟವೆಂದು ನಿರೂಪಿಸಲ್ಪಟ್ಟಿದೆ. ಮೂರನೇ ಪಾದದಲ್ಲಿ ವೇದ ವಾಕ್ಯಗಳಲ್ಲಿರುವ ಪರಸ್ಪರ ವಿರೋಧಗಳನ್ನು ದೂರಮಾಡಿ ಸಿದ್ಧಾಂತವನ್ನು ದೃಢ ಪಡಿಸುವಿಕೆ ಮೊದಲಾದ ವಿಷಯಗಳು, ನಾಲ್ಕನೇ ಪಾದದಲ್ಲಿ ಸೂಕ್ಷ್ಮ ಶರೀರ ಸಂಬಂಧವಾದ ಶ್ರುತಿಗಳ ಪರಸ್ಪರ ವಿರೋಧಾಭಾಸವನ್ನು ತಿಳುಹುತ್ತಾ ಬ್ರಹ್ಮತತ್ತ್ವ ನಿರೂಪಣೆ ಇತ್ಯಾದಿ ವಿಷಯಗಳ ವಿವರಣೆಯಿದೆ.

ಮೂರನೇಯ ಅಧ್ಯಾಯ. ಮೊದಲನೆಯ ಪಾದದಲ್ಲಿ ಲೋಕ ಲೋಕಾಂತರ ಪ್ರಾಪ್ತಿಯನ್ನುಂಟು ಮಾಡುವ ಸಂಸಾರ ತಾದಾತ್ಮ್ಯವನ್ನು ಬಿಡಿಸುವಂಥಹ, ಜ್ಞಾನ ಸಾಧನವಾದ ವೈರಾಗ್ಯ ಬೋಧಕ ವಾಕ್ಯಗಳು ವಿವರಿಸಲ್ಪಟ್ಟಿವೆ. ಎರಡನೆಯ ಪಾದ

ದಲ್ಲಿ ತತ್, ತ್ವಂ, ಪದಗಳ ವಿಚಾರ ಪೂರ್ವಕ, ಜೀವಾವಸ್ಥೆಗಳು ಅನಿತ್ಯಗಳು ಎನ್ನುವ, ಈ ಮೊದಲಾದ ಜೀವೇಶ್ವರ ವಿಚಾರ ವಿವರಿಸಲ್ಪಟ್ಟಿದೆ. ಮೂರನೆಯ ಪಾದದಲ್ಲಿ ಸಗುಣ ನಿರ್ಗುಣ ವಿದ್ಯೆಗಳ ವಿಷಯ, ನಾಲ್ಕನೆಯ ಪಾದದಲ್ಲಿ ಬ್ರಹ್ಮ ಜ್ಞಾನವು ಅಸಹಾಯ ಶೂರನಂತೆ ಮೋಕ್ಷ ಪ್ರದವಾದದ್ದು. ಕರ್ಮೋಪಾಸನಾದ್ಯಂಗ ವಾದದ್ದಲ್ಲ. 'ಬ್ರಹ್ಮವಿದ್ಬ್ರಹ್ಮೈವ ಭವತಿ' 'ತರತಿ ಶೋಕಮಾತ್ಮವಿತ್' ಇತ್ಯಾದಿ ಶ್ರುತಿ ಸಿದ್ಧವಾದ ತತ್ತ್ವಸ್ವರೂಪಾನುಭವವೇ ಮೋಕ್ಷವೆಂಬ ಈ ಮೊದಲಾದ ವಿಷಯ ಗಳ ವಿವರವು.

ನಾಲ್ಕನೆಯ ಅಧ್ಯಾಯ ಮೊದಲನೇ ಪಾದದಲ್ಲಿ ಜೀವನ್ಮುಕ್ತಿ ವಿಷಯ. ಎರಡನೇ ಪಾದದಲ್ಲಿ ಉತ್ತರಾಯಣ ದಕ್ಷಿಣಾಯಣ ಮಾರ್ಗಗಳನ್ನು ಕುರಿತ ವಿಷಯ, ಮೂರನೇ ಪಾದದಲ್ಲಿ ಸಗುಣೋಪಾಸಕರಿಗೆ ಬ್ರಹ್ಮಲೋಕ ಪ್ರಾಪ್ತಿ, ನಾಲ್ಕನೇ ಪಾದ ದಲ್ಲಿ ನಿರ್ಗುಣ ಬ್ರಹ್ಮಾನುಭವಿಗಳಾದ ಜ್ಞಾನಿಗಳಿಗೆ ವಿದೇಹ ಮುಕ್ತಿ, ಎನ್ನುವ ಇತ್ಯಾದಿ ವಿಷಯಗಳಿವೆ ಎಂಬುದಾಗಿ, ಪೂಜ್ಯ ಶ್ರೀ ಗುರುದೇವರು ಆನಂದವಾಗಿ ಬ್ರಹ್ಮ ಸೂತ್ರಗಳ ಸಂಗ್ರಹಾರ್ಥವಾದ ಪೂರ್ವಾಪರಗಳನ್ನು ತಿಳುಹಿಸಿ ಮತ್ತು ಕ್ರಮ ವಾಗಿ ಸೂತ್ರಾರ್ಥಗಳನ್ನು ವಿವರಿಸಿ ವ್ಯಾಖ್ಯಾನ ಮಾಡಿ ಹೇಳುತ್ತಾ, ಅಲ್ಲಲ್ಲಿ ಕೆಲವು ಜಟಿಲವಾದವುಗಳರ್ಥವನ್ನು ಗುರುಗಳು ತಾಳ್ಮೆಯಿಂದ ಹೇಳಿದ ವಿಷಯವನ್ನೇ ಮತ್ತು ಆ ಪೂರ್ವಪಕ್ಷ ಸಿದ್ಧಾಂತಾದಿ ಸಂದರ್ಭಗಳನ್ನು ಸಾವಧಾನದಿಂದ ಅರ್ಥವಾಗುವಂತೆ ಮತ್ತೆ ಮತ್ತೆ ವ್ಯಾಖ್ಯಾನ ಮಾಡಿದರು.

## ಶ್ರೀಮದ್ಭಗವದ್ಗೀತಾ

ಶ್ರೀಮದ್ಭಗವದ್ಗೀತೆ ಮಹಾಭಾರತ ಮಧ್ಯದಲ್ಲಿ ವಿದ್ಯೋತಮಾನವಾದ ಮಧು ವಿದ್ಯೆ ಅಥವಾ ಬ್ರಹ್ಮವಿದ್ಯೆ ಎನ್ನುವರು. ಚತುರ್ವೇದಗಳ ಸಾರಸರ್ವಸ್ವವೇ ಉಪ ನಿಷತ್ತುಗಳು. ಅವುಗಳ ಸಮನ್ವಯ ಸಿದ್ಧಾಂತವೇ ಬ್ರಹ್ಮಸೂತ್ರಗಳು. ಈ ಎರಡು ಪ್ರಸ್ಥಾನಗಳ ಅರ್ಥಕ್ಕೆ ದೂರವಾಗದೆ ಸರ್ವರೂ ಆ ಸತ್ಯ ತತ್ತ್ವವನ್ನು ಗ್ರಹಿಸಿ, ಧನ್ಯ ರಾಗಲೆಂಬ ಮಹಾ ಸಿದ್ಧ ಸಂಕಲ್ಪದಿಂದ, ಗೀತೆ ಮಹಾಭಾರತವೆಂಬ ಸುಂದರೋದ್ಯಾನ ಮುಮುಕ್ಷು ಜನ ಮದುಪಗಳಿಂದ ಆಸ್ವಾದಿಸಲ್ಪಡುತ್ತಾ, ಅಕ್ಷಯವಾಗಿ ಅಖಂಡ ಸುಖ ವನ್ನು ಕೊಡುವ, ಸರ್ವೋಪನಿಷತ್ತುಗಳ ಸಾರ ಸರ್ವಸ್ವವೇ ಈ ಶ್ರೀಮದ್ಭಗವದ್ಗೀತೆ, "ತದಿದಂ ಗೀತಾ ಶಾಸ್ತ್ರಂ ಸಮಸ್ತ ವೇದಾರ್ಥಸಾರ ಸಂಗ್ರಹ ಭೂತಂ". "ತಸ್ಯಾಸ್ಯ ಗೀತಾ ಶಾಸ್ತ್ರಸ್ಯ ಸಂಕ್ಷೇಪತಃ ಪ್ರಯೋಜನಂ ಪರಂ ನಿಃಶ್ರೇಯಸಂ ಸಹೇತು ಕಸ್ಯ ಸಂಸಾರಸ್ಯ ಅತ್ಯಂತೋ ಪರಮ ಲಕ್ಷಣಮ್" ಎಂಬುದಾಗಿ ಶ್ರೀ ಶಂಕರ ಭಗವತ್ಪಾ ದರು ಭಾಷ್ಯದಲ್ಲಿ ತಿಳಿಸಿದಂತೆ, ಅಧಿಕಾರಿಯಾಗಿ ವಿಷಯವನ್ನರಿತರೆ ಅದ್ವಿತೀಯವಾದ ಬ್ರಹ್ಮವು ನಾನಾಗಿದ್ದೇನೆ'ನಷ್ಟೋ ಮೋಹಸ್ಮೃತಿರ್ಲಬ್ಧಾ'ಮೋಹವು ನಷ್ಟವಾಯಿತು, ಸ್ವಸ್ವರೂಪ ಸ್ಮೃತಿಯುಂಟಾಯಿತು, ಎಂದು ಅಂದಂತೆ ತಿಳಿದು ಮುಕ್ತನಾಗುವನು.

**ಮೊದಲನೆಯ ಅಧ್ಯಾಯ :** ಅರ್ಜುನ ವಿಷಾದ ಯೋಗ. ಭಾರತೀಯ ಸಮಸ್ತ ದರ್ಶನಗಳು ವಿಷಾದದಿಂದಲೇ ಉಂಟಾಗಿ ಸರ್ವದುಃಖೋಪಶಮವಾದ ಬ್ರಹ್ಮಾತ್ಮನಾ ಸಂಸ್ಥಿತಿರೂಪ ನಿಜಸ್ಥಿತಿಯಲ್ಲಿ ಪೂರ್ಣವಾಗುವವು. ದುಃಖವೂ, ದುಃಖ ಕಾರಣವೂ ಅವಿವೇಕದಿಂದ ಯುಕ್ತವಾದ ನಿಜ ಸ್ವರೂಪಾಜ್ಞಾನವೇ; ಅಥವಾ ಅಹಂಕಾರ ಮಮಕಾರಗಳೆಂದರ್ಥ. ಈ ಎರಡು ವಿಷಯಗಳನ್ನು ಕುರಿತ ವ್ಯಾಖ್ಯೆ ಅರ್ಥಾತ್ ಪೂರ್ವ ಮೀಮಾಂಸ ಶಾಸ್ತ್ರ ಪ್ರಕ್ರಿಯೆ ಈ ಮೊದಲನೆಯ ಅಧ್ಯಾಯವು ಮಹಾಭಾರತದ ಕಥೆ.

**ಎರಡನೆಯ ಅಧ್ಯಾಯ :** ಗುರೂಪಸದನ. ಹನ್ನೊಂದನೆಯ ಶ್ಲೋಕದಿಂದ ಗೀತೋಪದೇಶ ಪ್ರಾರಂಭ. ಜ್ಞಾನ, ಜ್ಞಾನ ಸಾಧನ (ಬುದ್ಧಿಯೋಗ), ಏತನ್ಮಹಿಮೆ, ತ್ರಿಕಾಲಾಬಾಧಿತವಾದ ಜ್ಞಾನಾತ್ಮ ಸ್ವರೂಪನೇ ನೀನು ಎಂಬ ಅಮರೋಪದೇಶ. ಕರ್ತವ್ಯ ಕರ್ಮನಿಷ್ಠೆ, ತದನುಭವಿಯಾದ ಸ್ಥಿತ ಪ್ರಜ್ಞನ ವರ್ಣನೆ, ಸಾಧಕನಿಗೆ ಅವು ಸಾಧನ ಸಾಧ್ಯಗಳು, ಸಿದ್ಧನಾದ ಸ್ಥಿತ ಪ್ರಜ್ಞನಿಗೆ ಸಹಜ, ಇಂಥಾ ಸಹಜ ಸ್ಥಿತಿಯನ್ನು ಹೊಂದುವದೇ ಸಂಪೂರ್ಣವಾದ ಮಾನವತ್ವ, ಇತ್ಯಾದಿ ಅಪೂರ್ವ ವಿಷಯಗಳು ಪ್ರತಿ ಪಾದಿಸಲ್ಪಟ್ಟಿವೆ.

**ಮೂರನೆಯ ಅಧ್ಯಾಯ :** ಅಜ್ಞ ದೃಷ್ಟಿಯಿಂದ ಸೃಷ್ಟಿ ಕರ್ಮ ವಿಷಯಕ ವಾದ ನಿಯಮವರ್ಣನೆ. ಸೃಷ್ಟಿ ಉಪಕ್ರಮ, ಜ್ಞಾನಿಯ ಅಸಂಗಾನುಭವ, ಅಸಂಗಾತ್ಮ (ಅನಾಸಕ್ತಿ) ಬುದ್ಧಿಯಿಂದ ಲೋಕ ಹಿತಕ್ಕಾಗಿ ಕರ್ತವ್ಯವನ್ನಾಚರಿಸು, ಅದಕ್ಕೆ ಅಡ್ಡವಾಗಿ ಬರುವ ರಜೋಗುಣಸಮುದ್ಭಿತವಾದ ಕಾಮನನ್ನು, ಪರವಾದ ಆತ್ಮ ಬುದ್ಧಿಯಿಂದ ಸಂಹರಿಸು,ಧೀಸಾಕ್ಷಿಯಾದ ಚಿದಾತ್ಮನೇ ನಾನೆಂದು ತಿಳಿ.ಇತ್ಯಾದಿ ವಿಷಯಗಳು.

**ನಾಲ್ಕನೆಯ ಅಧ್ಯಾಯ :** ಬ್ರಹ್ಮವಿದ್ಯಾ ಗುರುಪರಂಪರಾಭಿವರ್ಣನೆ, ಅವತಾರ ಅವತಾರೋದ್ದೇಶ, ತತ್ತತ್ ಕರ್ಮ ಧರ್ಮಾದಿ ನಿಮಿತ್ತ ಮಾತ್ರಗಳಾದ ಅಕರ್ಮ ದೃಷ್ಟಿಪೂರ್ವಕ ವ್ಯವಹಾರ. ಹನ್ನೆರಡು ಯಜ್ಞಗಳು, ಗುರುಸಾನ್ನಿಧ್ಯ, ಅಲ್ಲಿ ಶ್ರದ್ಧೆಯಿಂದ ಸಂಪ್ರಾಪ್ತವಾಗುವ ಆತ್ಮಜ್ಞಾನ, ಏತನ್ಮಹಿಮೆ, ಅಸಂಗಾತ್ಮ ಬುದ್ಧಿಯಿಂದ ಕರ್ತವ್ಯ ಕರ್ಮವನ್ನಾಚರಿಸು ಎಂಬುವ ಆದೇಶ ಮೊದಲಾದ ವಿಷಯಗಳು.

**ಐದನೆಯ ಅಧ್ಯಾಯ :** ರಾಗದ್ವೇಷ ರಹಿತವಾದ ಜೀವಿತವೇ ಸನ್ಯಾಸವೆಂತಲೂ, ಸನ್ಯಾಸವೆಂದರೆ ಯಥಾರ್ಥ ಜ್ಞಾನವೆಂತಲೂ, ಸಾಂಖ್ಯ ಮತ್ತು ಯೋಗ ಎನ್ನುವವು ಎರಡಲ್ಲ, ಒಂದೇ. ಅಧಿಷ್ಠಾನ ಜ್ಞಾನ ಬೋಧಕಗಳಾದ ಸಾಧನ ಸಿದ್ಧ ಸಾಧ್ಯಗಳೆಷ್ಟೇಯಾಗಲಿ, ವಿಭಿನ್ನವಲ್ಲವೆಂದು ತಿಳಿಸುತ್ತಾ, ಜ್ಞಾನಾನುಭವಿಯ ಅಸಂಗಾನುಭವ ಪೂರ್ಣದೃಷ್ಟಿಯನ್ನು ವರ್ಣಿಸಿ, ಇಲ್ಲಿಯೇ ಇಂದ್ರಿಯೋದ್ರಿಕತೆ ಎನ್ನುವದು ಉಪಶಮವಾಗಬೇಕು. ಸಾಧಕನ ಅನುಷ್ಠಾನ ಪದ್ಧತಿಯನ್ನು ಸಂಗ್ರಹವಾಗಿ ವಿವರಿಸುತ್ತಾ ಈ ಅಧ್ಯಾಯವು ಮುಗಿಯುವುದು.

**ಆರನೆಯ ಅಧ್ಯಾಯ :** ಇದು ಧ್ಯಾನಯೋಗ. ಮನಸ್ಸಂಯಮಾತ್ಮಕವಾದ ಯೋಗ ಪ್ರಕ್ರಿಯೆಗಳನ್ನು ವರ್ಣಿಸಿ ಆಹಾರ, ವಿಹಾರ, ವ್ಯವಹಾರ ಪದ್ಧತಿಗಳಿಂದ ಆಸನಾದ್ಯನುಷ್ಠಾನ ನಿಯಮಗಳನ್ನು ತಿಳಿಸಿ, ಅಪರೋಕ್ಷಾನುಭವಿಯಾದ ಜ್ಞಾನಿಯ ದೃಷ್ಟಿ, ಸಕಾಮಿ ಮತ್ತು ನಿಷ್ಕಾಮಿಯಾದ ಯೋಗಭ್ರಷ್ಟರ ಗತಿ ವರ್ಣನಪೂರ್ವಕ, ನಿರಾವರಣ ವೃತ್ತಿ ಸಹಿತ ಬ್ರಾಹ್ಮೀ ಸಂಬಂಧವಾದ ಪರಮ ಶ್ರದ್ಧೆಯನ್ನು ಕುರಿತು ಬೋಧಿಸುತ್ತಾ ಇದು ಪರಮ ಶ್ರೇಷ್ಠವೆಂದು ಹೇಳಲ್ಪಟ್ಟಿದೆ.

**ಏಳನೆಯ ಅಧ್ಯಾಯ :** ನನ್ನಲ್ಲೇ ಆಸಕ್ತಿ, ನನ್ನನೇ ಆಶ್ರಯಿಸಿದವನು, ನನ್ನಲ್ಲಿ ಇಡಲ್ಪಟ್ಟ ಮನೋ ವಾಕ್ಕಾಯ ಕರ್ಮಗಳುಳ್ಳ ನನ್ನ ಭಕ್ತನು, ದುರ್ಘಟ ಅಷ್ಟ ಪ್ರಕೃತ್ಯಾತ್ಮಕವಾದ ನನ್ನ ಮಾಯೆಯನ್ನು ದಾಟುವನು. ನಾನೇ ಸರ್ವತ್ರ ವ್ಯಾಪಿಸಿರುವೆನು. ನನ್ನಲ್ಲಿಯೇ ಈ ಸರ್ವಸ್ವವು ಓತಪ್ರೋತ ಭಾವದಿಂದ ಪೋಣಿಸಲ್ಪಟ್ಟಿದೆ. ಇತ್ಯಾದಿ ವಿಷಯವನ್ನು ಬೋಧಿಸುತ್ತಾ, ಸಂಗ್ರಹವಾಗಿ ಭಗವದ್ವಿಭೂತಿಗಳನ್ನು ವರ್ಣಿಸಿ, ತ್ರಿಗುಣಾತ್ಮಕವು ದಾಟಲಶಕ್ಯವಾದ ನನ್ನ ಮಾಯೆಯನ್ನು, ನನ್ನನೇ ತನ್ನನ್ನಾಗಿ ತಿಳಿದು ಯಾರು ಅನನ್ಯ ಶರಣಾಗತರಾಗುವರೋ, ಅವರು ಅನಾಯಾಸವಾಗಿ (ಈ ನನ್ನ ಮಾಯೆಯನ್ನು) ದಾಟುವರೆಂತಲೂ, ಮೋಹವನ್ನು ಹೊಂದುವದಿಲ್ಲವೆಂತಲೂ ವರ್ಣಿಸಿ, ಅಜ್ಞರು ಇದನ್ನು ಅರಿಯರೆಂದು ಹೇಳಿ, ನನ್ನನ್ನು ಸೇವಿಸುವ ಭಕ್ತರು ನಾಲ್ಕು ಪ್ರಕಾರವೆಂದು ತಿಳಿಸುತ್ತಾ, ಅದರಲ್ಲಿ ಜ್ಞಾನಿ-ಭಕ್ತನು ನಾನೇ ಎಂದು ಹೇಳಿ, ಅಂಥಹ ದೃಢಾನುಭವವನ್ನು ಹೊಂದಿದ ಮಹಾತ್ಮರು ದುರ್ಲಭರು. ಈ ಮೊದಲಾದ ವಿಷಯಗಳನ್ನು ಬೋಧಿಸಿ, ನನ್ನ ವಿಷಯಕವಾದ ಅಧಿಭೂತ, ಅಧಿದೈವ, ಅಕ್ಷರಾತ್ಮ ಜ್ಞಾನವನ್ನು ಹೊಂದಿ, ಜನ್ಮ ಜರಾಮರ್ಣ ನಿವೃತ್ತಿಯನ್ನೊಂದುವರು. ಇತ್ಯಾದಿ ಪ್ರಶ್ನೆ ಬೀಜದಿಂದ ಈ ಅಧ್ಯಾಯವು ಪೂರ್ಣವಾಗುವದು.

**ಎಂಟನೆಯ ಅಧ್ಯಾಯ :** ಹಿಂದಿನ ಪ್ರಶ್ನ ಬೀಜದ ಆಧಾರದಿಂದ ಅರ್ಜುನನು 'ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ' ಎಂಬಿತ್ಯಾದಿಯಾಗಿ ಏಳು ಪ್ರಶ್ನೆಗಳನ್ನು ಕೇಳುವಿಕೆ, ಅವಕ್ಕೆ ಕ್ರಮವಾಗಿ ಭಗವಂತನು ಅಕ್ಷರವಾದ (ನಾಶರಹಿತವಾದ) ಬ್ರಹ್ಮವೇ ನಾನೆಂದು ಅರ್ಥಾತ್ ಪರವಾದ ಪರಮಾತ್ಮನೇ ಅಧ್ಯಾತ್ಮವೆಂತಲೂ, ಇದರಂತೆ ಪ್ರತಿ ಪ್ರಶ್ನಾರ್ಥದಲ್ಲಿಯೂ ಬ್ರಹ್ಮತ್ವ ಸಂಪುಟೀಕರಣಪೂರ್ವಕವಾಗಿ ಪ್ರತಿಪಾದಿಸುತ್ತಾ, ಸಂತತವು ತದನುಸ್ಮರಣೆಯುಳ್ಳವರು ನನ್ನನ್ನೇ ಹೊಂದುವರು, ಅನ್ಯಭಾವನೆಯಿಲ್ಲದೆ ತದ್ಭಾವನಾ ಭಾವಿತರು ನನ್ನನ್ನು ಸೇರುವರು (ನನ್ನನ್ನು ತನ್ನನ್ನಾಗಿ ಅರಿಯುವರು), ಅನಂತರ ಸ್ಮರಣಾರ್ಹವಾದ ಜ್ಞೇಯ ಪರಬ್ರಹ್ಮ ಸ್ವರೂಪವನ್ನು ವರ್ಣಿಸುತ್ತಾ ಓಂಕಾರವೇ ತದಾವಲಂಬನ ಎಂದು ತಿಳಿಸುವಿಕೆ. ಇನ್ನು ಕಾಲಕ್ಕೊಳಪಟ್ಟ ಲೋಕ, ಲೋಕಾಂತರ ಪ್ರಾಪ್ತಿ, ಅನಿತ್ಯತಾ ನಿರೂಪಣ ಪೂರ್ವಕ ಶುಕ್ಲ ಕೃಷ್ಣ ಗತಿಗಳನ್ನು

ವರ್ಣಿಸಿ. ಈ ಎರಡು ಗತಿಗಳನ್ನು ತಿಳಿದ ನಿಷ್ಕಾಮ ಜ್ಞಾನಯೋಗಿ, ವೇದಾಧ್ಯಯನ ಯಜ್ಞದಾನ ತಪಸ್ಸುಗಳಿದುಂಟಾಗುವ ಪುಣ್ಯ ಫಲವನ್ನು ಕೂಡ ಅತಿಕ್ರಮಿಸಿ, ಪುಣ್ಯ ಪಾಪಗಳಲ್ಲದ ಮಹಾಪುಣ್ಯ ಆದ್ಯವಾದ ನನ್ನ ಪರಮಪದವಿಯನ್ನು ಮೋಕ್ಷವನ್ನು ಹೊಂದುವನೆಂದು ಹೇಳಲ್ಪಟ್ಟಿದೆ.

**ಒಂಭತ್ತನೆಯ ಅಧ್ಯಾಯ :** ಅಪರೋಕ್ಷ ಬೋಧಕವಾದ ರಾಜ ವಿದ್ಯಾ ರಾಜಗುಹ್ಯ ಯೋಗವೆಂಬ ನಾಮದಿಂದ ಅತಿ ಗೋಪ್ಯವಾದ ಭೂಮ ವಿದ್ಯೆ ಹೇಳಲ್ಪಟ್ಟಿದೆ. ಅಂದರೆ ಪ್ರತ್ಯಕ್ಷಾದಿ ಪ್ರಮಾಣ ವೇದ್ಯವಾಗದ ಉಪನಿಷತ್ಪ್ರಮಾಣ ಪ್ರತಿಪಾದಿತವಾದ, ವ್ಯಾಪಕ ಪರಬ್ರಹ್ಮವು ಮೇಯ ಪದಾರ್ಥವಲ್ಲ, ಅದು ತಾನೇ ಅನುಭವೈಕ ಗಮ್ಯವಾದ ಗುಹ್ಯತಮವಾದ್ದು ಯೋಗವೆಂದು ಗಣಿಸಲ್ಪಟ್ಟಿದೆ. ಅಶ್ರದ್ಧಾಳುವುಗಳಾದ ರಾಕ್ಷಸ ಸಂಪತ್ತುಳ್ಳ ಅಸಂತೃಪ್ತ ಮಾತ್ರವೇ–ಹೊಟ್ಟೆಯನ್ನು ತುಂಬಿಕೊಳ್ಳುವದೇ ಕೆಲಸವಾಗಿರುವ, ಅಸುರೀ ಸಂಪದ್ಯುಕ್ತ ಜನಸಾಮಾನ್ಯರಿಗೆ ಅಲಭ್ಯವೆಂತಲೂ, ನನ್ನನ್ನು ದೇಹ ಮಾತ್ರಾವಿಶಿಷ್ಟನನ್ನಾಗಿ ದರ್ಶಿಸಿ, ನಾನಾ ವಿಧವಾಗಿ ಭಾವಿಸಿ ನನ್ನಿಂದ ಜಾರಿ ಹೋಗುವರೆಂದು ತಿಳಿಸಿ, ಜ್ಞಾನ ಮಹಿಮೆಯನ್ನು ವರ್ಣಿಸುತ್ತಾ ಶ್ರದ್ಧಾಳುಗಳಿಗೆ ಜ್ಞಾನಿಗಳಿಗೆ ಸ್ವಸ್ವರೂಪ ಭೂತವೇ ಎಂದು ನಿರ್ಧರಿಸಿ, ಕೆಲವು ವಿಭೂತಿಗಳನ್ನು ತಿಳಿಸಿದ್ದಾರೆ. ಅನನ್ಯವಾದ ಭಕ್ತಿಯಿಂದ ನನ್ನನ್ನು ಭಜಿಸುವವರ ಯೋಗಕ್ಷೇಮಗಳನ್ನು ನಾನೇ ವಹಿಸಿಕೊಳ್ಳುತ್ತೇನೆಂಬ ಭಗವದಾದೇಶ "ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ" ಅಂದ ಹಾಗೆ ಎಲ್ಲರೂ ನನ್ನನ್ನು ಭಕ್ತಿಯಿಂದ ಭಜಿಸಿ ಸೇವಿಸಿ ತಮ್ಮ ಆತ್ಮ ಸ್ವರೂಪವಾಗಿ ತಿಳಿದು ಧನ್ಯರಾಗುವರು. ಅಂದಾಗ ಇನ್ನು ಉತ್ತಮರಿಗೆ ಹೇಳಬೇಕಾದ್ದೇನಿದೆ. 'ಕೈಮುತಿಕ ನ್ಯಾಯೇನ' ನನ್ನ ಭಕ್ತನು ಕೆಡುವದಿಲ್ಲವೆಂಬ ಪ್ರತಿಜ್ಞೆ ಇತ್ಯಾದಿ ವಿಷಯಗಳು ಹೇಳಲ್ಪಟ್ಟಿವೆ.

**ಹತ್ತನೆಯ ಅಧ್ಯಾಯ :** ಪುನರಪಿ ಭಕ್ತಿಪೂರ್ವಕವಾದ ಅರ್ಜುನನ ಪ್ರಾರ್ಥನೆಯನ್ನು ಮನ್ನಿಸಿ ಭಗವನ್ಮಹಿಮೆ ವರ್ಣಿತವಾಗಿದೆ. ನೀನು ಯಾವರೂಪದಿಂದ್ದೀಯಿ ? ನಿನ್ನ ಆ ವಿಭೂತಿಗಳು ಯಾವ್ಯಾವಾಗಿರುವವು ? ಎಂಬುವ ಅರ್ಜುನನ ಭಕ್ತಿಪೂರ್ವಕವಾದ ಪ್ರಶ್ನೆಯನ್ನು ಪುರಸ್ಕರಿಸಿಕೊಂಡು, ನನ್ನ ವಿಭೂತಿಗಳು ಆದ್ಯಂತರಹಿತವೆಂದು ಹೇಳಿ ಆಮೇಲೆ ನೀನು ಕೇಳಿದುದಕ್ಕಾಗಿ ಹೇಳುವೆನೆಂದು ಎಪತ್ತೆರೆಡು ವಿಭೂತಿಗಳನ್ನು ವಿಸ್ತರಿಸಿ ಹೇಳಿ, ಕಡೆಗೆ ಅಯ್ಯಾ ! ಈ ನನ್ನ ವಿಭೂತಿಗಳಿಗೆ ಆದ್ಯಂತವಿಲ್ಲ. ಏಕದೇಶೀಯವಾಗಿ ಕೆಲವನ್ನು ಮಾತ್ರ ನಿನಗೆ ಹೇಳಿದ್ದೇನಷ್ಟೆ, ಈ ಸಮಸ್ತವು ನನ್ನ ಒಂದು ಪಾದದಲ್ಲಿ ಸ್ಥಿತಿಯನ್ನೊಂದಿದೆ. ಎಂದು ತಿಳಿಸಿ, ಎಲ್ಲೆಲ್ಲಿ ಸಂಪತ್ಕರವಾದ ಏಳಿಗೆ ಅಭಿವೃದ್ಧ್ಯಾದಿಗಳು ಇರುವವೋ ಅವು ನನ್ನ ಅಂಶವೇ ಇತ್ಯಾದಿಯಾಗಿ ಬೋಧಿಸಲ್ಪಟ್ಟಿದೆ.

**ಹನ್ನೊಂದನೆಯ ಅಧ್ಯಾಯ :** ಪರಮೇಶ್ವರಾ ! ನಿನ್ನ ಅನುಗ್ರಹದಿಂದ ನನ್ನ ಭ್ರಮೆಯು ದೂರವಾಯಿತು. ಈ ನಿನ್ನ ಅನಂತ ವಿಭೂತಿಗಳನ್ನು ಸಾಕ್ಷಾತ್ತಾಗಿ ನಿನ್ನಲ್ಲಿ ದರ್ಶಿಸಲು ಇಚ್ಛಿಸುತ್ತಿದ್ದೇನೆ. ಅದಕ್ಕೆ ನಾನು ತಕ್ಕವನಾದರೆ ದಯೆಯಿಂದ ತೋರಿಸು ಎಂದು ಅರ್ಜುನನು ಕೇಳಿದನು. ಕರುಣಾಮಯನಾದ ಭಗವಂತನು. ತನ್ನ ವಿಭೂತಿಗಳನ್ನೆಲ್ಲಾ ಏಕತ್ರಿತವಾಗಿ ವಿಶ್ವರೂಪದಲ್ಲಿ ಸಂದರ್ಶಿಸಲು ಸಮರ್ಥವಾದ, ತನ್ನ ಯೌಗಿಕ ದಿವ್ಯನೇತ್ರವನ್ನು ಅರ್ಜುನನಿಗೆ ಪ್ರಸಾದಿಸಿ, ಭೂತ ಭವಿಷ್ಯದ್ವರ್ತಮಾನಗಳಲ್ಲಿ ಆಗಿಹೋದ, ಆಗುತ್ತಿರುವ, ಆಗುವ ಈ ಸರ್ವವನ್ನು ನನ್ನ ಆಧಾರದಲ್ಲಿ ಇದ್ದವುಗಳನ್ನಾಗಿ ನೋಡು ಹೀಗೆಂದು ದಿವ್ಯವೂ ವಿಸ್ಮಯಾತ್ಮಕವೂ ಅಪೂರ್ವವೂ ಆದ ವಿಶ್ವರೂಪವನ್ನು ಪ್ರದರ್ಶಿಸಿದನು. ಆಗ ಅರ್ಜುನನು ಭಗವಂತನಲ್ಲಿ ಸರ್ವವನ್ನು ಕಂಡು ತನ್ನ ಅಂತರಂಗದಲ್ಲಿದ್ದ ಕರ್ತೃತ್ವವು ಭೀಷ್ಮದ್ರೋಣಾದಿ ಈ ಅಜೇಯರನ್ನು ಹೇಗೆ ಸಂಹರಿಸಲಿ ಎಂಬ ಮೊದಲಾದ ಈ ಸರ್ವ ಸಂದೇಹಗಳನ್ನು ಬಿಟ್ಟನು.

ಓ ದೇವಾ ! ಪರಮೇಶ್ವರನಾದ ನಿನ್ನನ್ನು ಇದುವರೆಗೆ ವ್ಯಕ್ತಿಮಯ ದೃಷ್ಟಿಯಿಂದ ನೋಡುತ್ತಾ, ತಿಳಿಯದೆ ಅಜ್ಞತೆಯಿಂದ ಎಷ್ಟೋ ಸಮಯಗಳಲ್ಲಿ ಸಾಮಾನ್ಯವಾದ ಸಣ್ಣದೃಷ್ಟಿಯಿಂದ ನೋಡಿದೆನು. ಆ ನನ್ನ ತಪ್ಪುಗಳನ್ನೆಲ್ಲಾ ಕ್ಷಮಿಸೆಂದು ಪ್ರಾರ್ಥಿಸುತ್ತಾ ಅನೇಕ ಪ್ರಕಾರವಾಗಿ ಸ್ವಾಮಿಯನ್ನು ಕೀರ್ತಿಸುವಿಕೆ.

ಮತ್ತು ಅರ್ಜುನಾ ! ಸಂದೇಹವನ್ನು ಬಿಟ್ಟು ನಿಮಿತ್ತ ಮಾತ್ರನಾಗಿ ಯುದ್ಧವನ್ನು ಮಾಡು. ನಾನೇ ಕಾಲನು. ವಿಜಯವು ನಿನ್ನದೇ ಎಂದು ತಿಳಿಸಿದನು. ಆಗ ಅರ್ಜನನು ಸ್ವಾಮೀ ನಿನ್ನ ಮೊದಲನೆಯ ರೂಪದಿಂದ ನನಗೆ ಪ್ರಸನ್ನನಾಗು. ಇದನ್ನೆಲ್ಲ ನೋಡಿ ನಾನು ಭ್ರಾಂತನಾಗಿದ್ದೇನೆಂದು ಪ್ರಾರ್ಥಿಸಲು, ಸ್ವಾಮಿಯು ತನ್ನ ಪೂರ್ವರೂಪದಿಂದ ಪ್ರಸನ್ನನಾಗಿ ಅರ್ಜುನನನ್ನು ಆಶ್ವಾಸನೆಗೊಳಿಸಿದನು. (ಸ್ವಾಸ್ಥೀ ಗೊಳಿಸಿದನು). ಅಯ್ಯಾ ! ಈ ವಿಶ್ವರೂಪವು ಪುಣ್ಯ ಪುರುಷನಾದ ನಿನಗೆ ವಿನಾ ಮತ್ತಾರಿಗೂ ಸಂದರ್ಶಿಸಲ್ಪಟ್ಟಿದ್ದಲ್ಲವೆಂದು ತಿಳುಹಿದನು. ಈ ಮಾತುಗಳಿಂದ ಆ ಸಾಕಾರ ಮೂರ್ತಿಯಲ್ಲಿ ಅರ್ಜುನನಿಗೆ ಉಂಟಾದ ಭಕ್ತಿ ಪ್ರವೃತ್ತಿಗಳ ವರ್ಣನೆ, ನಿಷ್ಕಾಮ ಕರ್ಮದ ಅಪೂರ್ವತೆಯನ್ನು ಪ್ರತಿಪಾದಿಸುತ್ತಾ ನನ್ನನ್ನು ಚೆನ್ನಾಗಿ ತಿಳಿ. ಅನುಭವವನ್ನು ಹೊಂದು ಎಂಬಿತ್ಯಾದಿ ವಿಷಯಗಳು ಹೇಳಲ್ಪಟ್ಟಿವೆ.

**ಹನ್ನೆರಡನೆ ಅಧ್ಯಾಯ :** ಅರ್ಜುನನು ಓ ಭಗವಂತಾ ! ಈ ಪ್ರಕಾರವಾದ ಸಗುಣ, ನಿರ್ಗುಣಾತ್ಮಕ ನಿನ್ನ ಸ್ವರೂಪೋಪಾಸಕರಲ್ಲಿ ಯಾರು ಶ್ರೇಷ್ಠರೆಂದು ಪ್ರಶ್ನಿಸಲು, ಭಗವಂತನು ಒಂದು ಮಾತಿನಿಂದ ನಾನೇ ಎಂದು ಹೇಳಿ, ನನ್ನ ಸ್ವರೂಪವೇ ದೊಡ್ಡದೆಂದು, ಅವ್ಯಕ್ತಾಕ್ಷರ ಶಬ್ದ ವಾಚ್ಯನಾದ ನನ್ನನ್ನು ದೇಹಾತ್ಮ ಬುದ್ಧಿಯಿದ್ದವರು ತಿಳಿಯುವುದು ಕಷ್ಟವೆಂದು, ಕ್ರಮಮುಕ್ತಿಯ ಸೋಪಾನಗಳನ್ನು ಹೇಳುತ್ತಾ ಅದ್ವೇಷ್ಟೃತ್ವಾದಿ ಗುಣ ಸಂಪನ್ನರಾದ ನನ್ನ ಭಕ್ತರು ಕ್ರಮವಾಗಿ ನನ್ನನ್ನು ತನ್ನನ್ನಾಗಿ

ತಿಳಿಯುವರು. ಈ ಗುಣ ಸಂಪತ್ತು ಮುಮುಕ್ಷುವಿಗೆ ಅಭ್ಯಾಸದಿಂದ ಉಂಟಾಗುತ್ತದೆ. ಮುಕ್ತನಿಗೆ ಸಹಜವಾಗಿರುತ್ತೆ. ಆದ್ದರಿಂದ ಅಮೃತವೆಂದು ಹೇಳಲ್ಪಡುವ ಈ ಪರಮ ಧರ್ಮಾಮೃತವನ್ನು ಶ್ರದ್ಧಾಯುಕ್ತರಾಗಿ ಸೇವಿಸುವ ಮುಮುಕ್ಷುಗಳು ಧನ್ಯರು. ನನಗೆ ಪ್ರೀತಿ ಪಾತ್ರರೆಂದು ತಿಳಿಸಿದನು.

**ಹದಿಮೂರನೆಯ ಅಧ್ಯಾಯ :** ಈ ಅಧ್ಯಾಯ ಶಿರೋರತ್ನದಂಥಾದ್ದು. ಎರಡನೆಯ ಅಧ್ಯಾಯ ಸಂಕ್ಷಿಪ್ತ ಗೀತೆಯಾದರೆ ಇದು ತದನುಭವ ಸ್ಥಾನೀಯವಾಗಿ ಅಪರೋಕ್ಷ ಗೀತೆಯಾಗಿದೆ. ಕ್ಷೇತ್ರ ಕ್ಷೇತ್ರಜ್ಞವೆಂಬ ಉಭಯ ಪರಿಕಲ್ಪನೆಗಳನ್ನು ಹೋಗಲಾಡಿಸಿ ಉಪಹಿತವಾದ ವ್ಯಾಪಕ ಚೈತನ್ಯ ಬ್ರಹ್ಮವೇ ನಾನೆಂದು ತಿಳಿಯುವದು. ಒಂದು ಬಾಧಾಸಾಮಾನಾಧಿಕರಣ ಸಂಬಂಧವು, ಮತ್ತೊಂದು ಮುಖ್ಯಸಾಮಾನಾಧಿಕರಣ ಸಂಬಂಧ ಎಂಬುವ ಈ ಪ್ರಕ್ರಿಯೆಯಿಂದ, ಅತ್ಯಂತ ವಿಪುಲವಾಗಿ ಯುಕ್ತಿ ಅನುಭವ ಸಿದ್ಧಾಂತಗಳಿಂದ, ಇದರಲ್ಲಿ ವಿಷಯವು ವಿವರಿಸಲ್ಪಟ್ಟಿದೆ. ಅಧಿಕಾರಿಗಳನ್ನು ಹಿಡಿದು ವಿಷಯಗಳು ಅಪೂರ್ವಾರ್ಥ ದ್ಯೋತಕಗಳು.

ಇದಕ್ಕೆ ತಕ್ಕ ಅಧಿಕಾರಿಯ ಸಂಪತ್ತನ್ನು ಇಪ್ಪತ್ತು ಗುಣಗಳು ಪರಂಪರಾ ಸಾಧನವಾಗಿ ವಿವರಿಸಲ್ಪಟ್ಟಿವೆ. ಸಾಧಕರು ಗ್ರಹಿಸಿ ಆಚರಿಸಬೇಕಾದವು.

ಜ್ಞೇಯವಾದ ಪರಮಾತ್ಮ (ಬ್ರಹ್ಮವು) ನಾನಾಗಿದ್ದೇನೆಂಬ ಈ ವಿಷಯವನ್ನು ತಟಸ್ಥ ಲಕ್ಷಣದಿಂದ ಮೊದಲು ಪ್ರತಿಪಾದಿಸಿ ಅರ್ಥಾತ್ ಅಧ್ಯಾರೋಪಾಪವಾದ ದೃಷ್ಟಿಯಿಂದ ತಿಳುಹಿ, ಆಮೇಲೆ ಪ್ರತಿಪಾದ್ಯವಾದ ಪರಬ್ರಹ್ಮವು ದೂರವಲ್ಲ ಸಮೀಪವಲ್ಲ, ಅದು ತಾನೇ ಎಂದು ಸ್ವರೂಪ ಲಕ್ಷಣದಿಂದ ಆಜ್ಞೇಯವು ಕ್ಷೇತ್ರಜ್ಞಾಭಿನ್ನ ಪರಬ್ರಹ್ಮವೇ ಎಂಬ ಉತ್ತಮ ವ್ಯಾಖ್ಯೆ ಇದರಲ್ಲಿದೆ.

ಮತ್ತು ಪುರುಷ ಪ್ರಕೃತಿ ವಿವೇಚನಾ ಪೂರ್ವಕವಾಗಿ ಅಸತ್ಯವಾದ ಪ್ರಕೃತಿ ಸಂಗ ವಿಮುಕ್ತಿ, ಪರಮ ಪುರುಷನೇ ನೀನೆಂಬ ಜ್ಞೇಯ ತತ್ವ ಸ್ವರೂಪ ಪ್ರತಿಪಾದನೆ, ಅಷ್ಟೇ ಅಲ್ಲದೇ ಈ ವಿಷಯದಲ್ಲಿ ನನ್ನನ್ನು ಅನೇಕರು ಧ್ಯಾನಾದಿ ನಾನಾ ಸಾಧನಗಳಿಂದಲೂ ಶ್ರವಣದಿಂದಲೂ ತಿಳಿಯಲು ಪ್ರಯತ್ನಿಸುವರು. ಇದೂ ವೃತ್ತಿ ವೇದ್ಯವಾದ ಸರ್ವ ಪದಾರ್ಥಗಳಲ್ಲಿ ನಾನು ಅವಿನಾಶಿಯಾಗಿದ್ದೇನೆಂದು ಯಾರು ತಮ್ಮನ್ನು ತಾವು ತಿಳಿಯುವರೋ ಅವರು ಧನ್ಯರೆಂದು, ನಿರವಯವವಾದ ಆಕಾಶೋಪಮಾನವನ್ನು ಕೊಟ್ಟು ಬೋಧಮಯ ಚಕ್ಷುಸ್ಸು 'ಶಾಸ್ತ್ರಾಚಾರ್ಯೋಪದೇಶ ಜನಿತಮ್ ಆತ್ಮ ಪ್ರತ್ಯಯಿಕಂ ಜ್ಞಾನಂ ಚಕ್ಷುಃ' ಅಂದರೆ ಶಾಸ್ತ್ರಾಚಾರ್ಯೋಪದೇಶಗಳಿಂದುಂಟಾಗುವ ಅನುಭವ ಜ್ಞಾನವೆಂಬ ಚಕ್ಷುವಿನಿಂದ (ದೃಷ್ಟಿಯಿಂದ) ಭೂತ ಪ್ರಕೃತಿಗಳ ಬಿಡುಗಡೆಯನ್ನು ಹೊಂದಿ ಮುಕ್ತರಾಗುವರು. ಇತ್ಯಾದಿ ಅಪೂರ್ವ ವಿಷಯಗಳು.

**ಹದಿನಾಲ್ಕನೆಯ ಅಧ್ಯಾಯ :** ಅರ್ಜುನನು ಕೇಳದಲೇ ಮತ್ತು ಆದರ ಬುದ್ಧಿಯಿಂದ ಭಗವಂತನು ಮೇಲೆ ಹೇಳಲ್ಪಟ್ಟ ಬ್ರಹ್ಮಾನುಭವವು ಪ್ರಕೃತಿ ಗುಣ ವಿವ

-ರ್ಜಿತವಾದ ಪವಿತ್ರ ಪಾತ್ರೆಯಲ್ಲೇ ಅಧಿಕಾರಿಗೆ ತುರೀಯಾನುಭವವಾಗುವದೆಂದು, ಅವ್ಯಯನು ಅಸಂಗನಾದ ಆತ್ಮನನ್ನು ಗುಣಗಳು ಬಂಧಿಸಿದಂತೆ ಕಾಣುವ ವಿಧಾನವನ್ನು ತಿಳುಹಿ, ಉತ್ತಮ ರೀತಿ ಸತ್ವ, ರಜ, ತಮೋಗುಣ ಕಾರ್ಯ ಕರಣ ಧರ್ಮ ಕರ್ಮ ವ್ಯವಹಾರ ಲಕ್ಷಣಗಳನ್ನು ನಿರೂಪಿಸುತ್ತ, ತದ್ಗುಣಾತೀತನಾದ ಮಹಾ ಪುರುಷನನ್ನು ವರ್ಣಿಸಿ, ಅನನ್ಯ ಭಕ್ತಿಯನ್ನು ತಿಳುಹಿಸಿ, ಪರಮ ಧರ್ಮವು ಸಮಸ್ತ ಗುಣ ಗಣ ವರಿಷ್ಠವಾದ ಸರ್ವ ಸುಖ ಸಂಪದ್ರೂಪವಾದ ಬ್ರಹ್ಮಾಭಿವ್ಯಕ್ತ ಸ್ಥಾನವು (ಪ್ರತಿಷ್ಠೆ) ಆಹಮೇ ಅಂದರೆ, ಪ್ರತ್ಯಗಾತ್ಮನಾದ ನಾನೇ (ಸ್ವಯಂ) ತಾನೇ ಪರಮಾತ್ಮನೆಂಬುವ ಇತ್ಯಾದಿ ವಿಷಯಗಳು.

ಹದಿನೈದನೆಯ ಅಧ್ಯಾಯ : ಅಶ್ವತ್ಥವೆಂಬ ಹೆಸರಿನ ಮೇಲೆ ಸಂಸಾರ ವೃಕ್ಷ ವರ್ಣನೆ. ಅಂದರೆ ಅನಿತ್ಯವಾದ ಸಂಸಾರಕ್ಕೆ ಅವ್ಯಕ್ತಾತ್ಪರವಾದ ಆಧಾರ-ಅಧಿಷ್ಠಾನ ಬ್ರಹ್ಮತತ್ತ್ವವೇ ಊರ್ಧ್ವವೆಂದು ತಿಳಿಸುತ್ತಾ, ಸಂಸಾರ ವಿಷಯ ಅನಾಸಕ್ತಿಯನ್ನು ಬೋಧಿಸಿ, ತತ್ಪದ ಲಕ್ಷ್ಯವಾದ ಪರಮಾತ್ಮಾನುಭವವನ್ನು ಹೊಂದುವುದೇ ಜೀವನ ಪರಮಲಾಭವೆಂದು ಹೇಳಲ್ಪಟ್ಟಿದೆ ಮತ್ತು ಸೂರ್ಯ, ಚಂದ್ರಾಗ್ನಿ ಮಂಡಲ ತ್ರಯವು ಯಾವ ಪರಬ್ರಹ್ಮ ಚೈತನ್ಯವನ್ನು ಪ್ರಕಾಶಿಸಲಾರವೋ ಮತ್ತು ತಿರುಗಿ ಬಾರದ ಆ ಪರಮ ಪ್ರಕಾಶ ಸ್ವರೂಪವೇ ನಿನ್ನ ಆತ್ಮವೆಂದು ಬೋಧಿಸುತ್ತಾ, ಔಪಾಧಿಕವಾದ ಜೀವತ್ವ ಬುದ್ಧಿಯನ್ನು ಬಿಟ್ಟರೆ ಈ ಜೀವನು ಪರಮಾತ್ಮನೇ ಎನ್ನುವ ತತ್ತ್ವ ವಿವರಿಸಲ್ಪಟ್ಟು, ಇಲ್ಲಿಯೂ ಕೆಲವು ವಿಭೂತಿಗಳನ್ನು ಹೇಳಿ ಕ್ಷರಾಕ್ಷರ ವಿಲಕ್ಷಣವಾದ ಪುರುಷೋತ್ತಮ ತತ್ತ್ವವೇ ಆತ್ಮ (ಬ್ರಹ್ಮ) ವೆಂದು, ಇದು ಅನುಭವ ರೂಪವಾದ ಗುಹ್ಯತಮ ಶಾಸ್ತ್ರವೆಂಬುದಾಗಿ, ಇತಿ ಎನ್ನುವ ನಿಗಮನ ವಾಕ್ಯದಿಂದ ಈ ಅಧ್ಯಾಯ ಪೂರ್ಣವಾಗಿದೆ.

ಹದಿನಾರನೆಯ ಅಧ್ಯಾಯ : ಈ ಅಧ್ಯಾಯದಲ್ಲಿ ದೈವೀ ಸಂಪದ ಇಪ್ಪತ್ತೇಳು ಗುಣಗಳು ಬೋಧಿಸಿ ಡಂಭ ದರ್ಪಾದ್ಯಹಂಕಾರ ಯುಕ್ತವಾದ, ಅಜ್ಞಾನ ಗುಣ ಕರ್ಮ ಧರ್ಮ ವ್ಯವಹಾರಗಳಾದ ಅಸುರೀ ಸಂಪತ್ತನ್ನು ವರ್ಣಿಸಿ, ಮುಮುಕ್ಷುವಾದವನು ದೈವೀ ಸಂಪದ್ವಿಭೂಷಿತನಾಗಿರಬೇಕು; ಅದು ಮೋಕ್ಷ ಸಾಧನವು. ರಾಕ್ಷಸೀ (ಅಸುರೀ) ಸಂಪತ್ತು ಬಂಧಪ್ರದವು, ಇತ್ಯಾದಿ ವಿಷಯಗಳನ್ನು ವಿವರಿಸುತ್ತಾ, ಮಾನವನಿಗೆ ಕಾರ್ಯಾಕಾರ್ಯ ವಿಚಕ್ಷಣ ಜ್ಞಾನದಲ್ಲಿ ಶಾಸ್ತ್ರವೇ ಪ್ರಮಾಣವೆನ್ನುವ ಆದೇಶಪೂರ್ವಕ ವಾಕ್ಯದಿಂದ ಈ ಅಧ್ಯಾಯವು ಮುಗಿದಿದೆ.

ಹದಿನೇಳನೆಯ ಅಧ್ಯಾಯ : ಇದರಲ್ಲಿ ಸತ್ವರಜಸ್ತಮೋಗುಣಾತ್ಮಕವಾದ ಮೂರು ವಿಧವಾದ ಶ್ರದ್ಧೆಯನ್ನು ಕುರಿತು ಮತ್ತು ಗುಣಗಳನ್ನನುಸರಿಸಿ ಯಜ್ಞ ದಾನ ತಪಃ ಕರ್ಮಾದಿಗಳನ್ನು ವಿವರಿಸಿ, ಸಾತ್ವಿಕವಾದ ಶ್ರದ್ಧೆ, ಯಜ್ಞ, ದಾನ, ತಪಃ

ಕರ್ಮಗಳು ವಿಹಿತವೆಂದು, ಓಂ–ತತ್–ಸತ್ ಪದಗಳ ಅರ್ಥವನ್ನು ತಿಳುಹುತ್ತಾ, ಈ ಪವಿತ್ರಾನುಸ್ಮರಣ ಪೂರ್ವಕವಾಗಿ ಆಚರಿಸಲ್ಪಡುವ ಯಜ್ಞ ದಾನತಪಃ ಕರ್ಮಗಳೇ 'ಸತ್' ಎಂದು ಹೇಳಲ್ಪಡುವವು. ಹಾಗಲ್ಲದೆ ಅಶ್ರದ್ಧೆಯಿಂದ ಆಚರಿಸಲ್ಪಡುವವು 'ಅಸತ್'–ಅಯೋಗ್ಯವೆನಿಸುತ್ತವೆ. ಆದ್ದರಿಂದ ಮುಮುಕ್ಷುವು ಸತ್ವ ಸಂಶುದ್ಧನಾಗಿರ ಬೇಕೆಂಬುವ ವಿಷಯವು ಇದರಲ್ಲಿ ತಿಳಿಸಲ್ಪಟ್ಟಿದೆ;

**ಹದಿನೆಂಟನೆಯ ಅಧ್ಯಾಯ :** ಈ ಅಧ್ಯಾಯವು ಸನ್ಯಾಸ, ತ್ಯಾಗವೆಂದ ರೇನು ? ಎಂಬುವ ಅರ್ಜುನನ ಪ್ರಶ್ನೆಯಿಂದ ಪ್ರಾರಂಭವಾಗಿ ಅದಕ್ಕೆ ತಕ್ಕ ವಿಹಿತ ವಾದ ಅರ್ಥವು ಭಗವತ್ ಶ್ರೀ ಮುಖದಿಂದ ವಿವರಿಸಲ್ಪಟ್ಟಿದೆ. ಮತ್ತು ಪೂರ್ವಾ ಪರ ಸಂದರ್ಭಗಳಿಂದ ಯುಕ್ತವಾದ ಹಿಂದಿನ ಅಧ್ಯಾಯಗಳಲ್ಲಿನ ವಿಷಯಗಳು ಸಂಕ್ಷಿಪ್ತ ವಾಗಿ ಇದರಲ್ಲಿ ಬಂದಿವೆ, ಕಡೆಗೆ 'ಸರ್ವಧರ್ಮಾನ್ ಪರಿತ್ಯಜ' ಎನ್ನುವದಾದ ಅದ್ವೈತ ಸಿದ್ಧಾಂತ ಚರಮ ಶ್ಲೋಕದಿಂದ ಪೂರ್ಣವಾಗುತ್ತಾ, ಕಥಾ ಸಂದರ್ಭವಾದ ಸಂಜ ಯನ ವಾಕ್ಯಗಳಿಂದ ಪರಿಶಿಷ್ಟಾಧ್ಯಾಯವೆಂದು ಹೇಳಲ್ಪಡುವ ಈ ಅಧ್ಯಾಯ ಸಮಾಪ್ತ ವಾಗುವದು. ಈ ರೀತಿಯಾಗಿ ಮೊದಲ ದಿನಗಳಲ್ಲಿ ಪೂಜ್ಯ ಗುರುದೇವರು ಸಂಗ್ರಹ ವಾಗಿ ಗೀತೆಯ ಸಂಪೂರ್ಣಾರ್ಥವನ್ನು ಬೋಧಿಸಿ, ಈ ನಾಲ್ಕು ತಿಂಗಳಲ್ಲಿ ಕ್ರಮ ವಾಗಿ ಭಾಷ್ಯಾನುಸಾರ ಅತಿ ದೀರ್ಘವೂ ಆಗದೆ ಅತ್ಯಂತ ಸ್ವಲ್ಪವೂ ಆಗದೆ ಉಚಿತ ರೀತಿಯಿಂದ ಬೋಧಿಸಿದರು.

ಈ ಪ್ರಕಾರವಾಗಿ ಹನ್ನೆರಡನೇ ಶ್ರೀ ಚಾತುರ್ಮಾಸ್ಯ ಮಹಾವ್ರತವು ಸಾಂಗ ಮಂಗಳವಾಗಿ ಪೂರ್ಣವಾದ ನಂತರ ಗಂಜಿಗುಂಟೆ ಶ್ರೀ ಮಠಕ್ಕೆ ಪೂಜ್ಯ ಶ್ರೀಗುರುಗಳು 23–11–56 ತಮ್ಮ ಗುರುಗಳ ಪುಣ್ಯಾರಾಧನೆಯ ಕಾರ್ಯಕ್ರಮಕ್ಕಾಗಿ ಗುಂತಕಲ್ಲಿ ನಿಂದ ದಯಮಾಡಿಸಿದರು. 27, 28, 29 ಮೂರು ದಿನಗಳು ಶ್ರೀಗುರು ಪುಣ್ಯಾ ರಾಧನ ಕಾರ್ಯಕ್ರಮವು ನಡೆಯಿತು, ಮಹಾತ್ಮರು ಮತ್ತು ಭಕ್ತಾದಿಗಳು ಬಂದಿ ದ್ದರು. ಆಗ ಅಲ್ಲಿರುವ ಸ್ಥಳ–ಮಠದ ವಸತಿ ಕಡಿಮೆಯಾದದ್ದು ನೋಡಿ, ಭಕ್ತಾದಿ ಗಳು ಮುಂದೆ ಬರುವ ಆರಾಧನೆಯೊಳಗೆ ದೊಡ್ಡದಾಗಿ ಉಪನ್ಯಾಸ ಹಾಲನ್ನು ನಿರ್ಮಾಣ ಮಾಡುವ ವಿಧಾನವನ್ನು ಮಾತನಾಡಿಕೊಂಡು ನಿರ್ಣಯಿಸಿದರು.

ಗಂಜಿಗುಂಟೆ ಶ್ರೀ ಮಠದಿಂದ ಭಕ್ತರ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಗಳವರು ಗುತ್ತಿ ಶ್ರೀ ಕನ್ನಿಕಾಪರಮೇಶ್ವರಿ ದೇವಸ್ಥಾನಕ್ಕೆ ದಯಮಾಡಿಸಿ ಪೂಜಾನುಷ್ಠಾನಾದಿ ಗಳೊಂದಿಗೆ ಗೀತಾ ಶಾಸ್ತ್ರ ಪ್ರವಚನವನ್ನು ಮಾಡಿದರು. ಉದಯ "ಆತ್ಮಬೋಧ" ಎನ್ನುವ ಪ್ರಕರಣವನ್ನು ನಡೆಸಿದರು. ಕೆಲವು ದಿನಗಳ ನಂತರ ಬೆಂಗಳೂರು ಬ್ರಹ್ಮ ವಿದ್ಯಾಶ್ರಮ ಕಾರ್ಯಕ್ರಮಕ್ಕೆ ಹೋಗಿ ಅಲ್ಲಿಂದ ಶ್ರೀ ನಿರ್ವಾಣ ಮಠಕ್ಕೆ ಆಗಮಿಸಿದರು.

ಈ ಕಾರ್ಯಕ್ಕೆ ಶ್ರೋ॥ ಬ್ರ॥ ಶ್ರೀ ಶಂಕರ ಶಾಸ್ತ್ರಿಗಳು ದಯಮಾಡಿಸಿದರು. ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು ಬಂದರು. ಮೂರುದಿನಗಳು ಅಖಂಡವಾಗಿ ಶಾಸ್ತ್ರ ಶ್ರವಣ ಪೂಜಾನುಷ್ಠಾನಗಳು ನಡೆದವು.

ಅನಂತರ ನಮ್ಮ ಪೂಜ್ಯ ಶ್ರೀಗುರುದೇವರು, ಪೂಜ್ಯ ಶ್ರೀ ಶಂಕರ ಶಾಸ್ತ್ರಿ ಸ್ವಾಮಿಗಳವರು, ಶ್ರೀ ಶಿವಪ್ರಕಾಶ ಸ್ವಾಮಿಗಳು, ಪೆದ್ದಕೊಟ್ಟಾಲ ಗ್ರಾಮಕ್ಕೆ ದಯ ಮಾಡಿಸಿ, ಅಲ್ಲಿ ಶ್ರೀ ಸೀತಾರಾಮಚಂದ್ರಮೂರ್ತಿ ಪ್ರತಿಷ್ಠಾ ಮಹೋತ್ಸವವನ್ನು ಯಥಾ ಶಾಸ್ತ್ರವಾಗಿ ಶ್ರೀಗಳವರ ಅಮೃತ ಹಸ್ತದಿಂದಲೇ ನಡೆಯಿಸಿದರು. ಉಪನ್ಯಾಸ ಕಾರ್ಯಕ್ರಮವಾಯಿತು. ಅನ್ನ ಸಂತರ್ಪಣಾದಿಗಳಿಂದ ಶ್ರೀ ಸೀತಾರಾಮಚಂದ್ರ ಮೂರ್ತಿ ಗ್ರಾಮೋತ್ಸವವು ನಡೆಯಿತು. ಆಮೇಲೆ ಎಲ್ಲರೂ ನಂದ್ಯಾಲಿಗೆ ಬಂದರು. ಆದವಾನಿ ಪುರಪ್ರಮುಖರು ಭಕ್ತರಾದ ಇವರ ಪ್ರಾರ್ಥನಾನುಸಾರ ಸ್ವಾಮಿಗಳು ಕರ್ನೂಲಿನಿಂದ ಆದವಾನಿಗೆ ಹೋಗಿ, ಭಕ್ತರಾದ ಹನುಮಂತರಾಯ ಶ್ರೇಷ್ಠಿಯವರ ಮಹಡಿಯಲ್ಲಿ ಪೂಜಾನುಷ್ಠಾನ ವಸತಿ, ನಗರೇಶ್ವರಸ್ವಾಮಿ ದೇವಾಲಯದಲ್ಲಿ ಪ್ರವಚನ ಆರಂಭವಾಗಿ ಉದಯ ಸಾಯಂಕಾಲಗಳಲ್ಲಿ ಉಪನಿಷದ್ಭಾಷ್ಯ ಗೀತಾ ಶಂಕರ ಭಾಷ್ಯ ಹದಿಮೂರನೇ ಅಧ್ಯಾಯ ಪ್ರವಚನ ನಡೆಯಿತು. ಪುರ ಪ್ರಮುಖರು ಮತ್ತು ಎಲ್ಲಾ ಜನರು ಸೇರಿ ಬಹು ಸಂತೋಷಪೂರ್ವಕ ಇಪ್ಪತ್ತು ದಿನಗಳು ಅಖಂಡವಾಗಿ ಕಾರ್ಯಕ್ರಮವನ್ನು ನಡೆಯಿಸಿದರು.

ಪೂಜ್ಯ ಶ್ರೀಗಳವರು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಈ ವರುಷ 13 ನೇ ಶ್ರೀ ಚಾತುರ್ಮಾಸ್ಯ ಮಹಾವ್ರತ ಇಲ್ಲಿಯೇ ಮಾಡಬೇಕೆಂದು ಶ್ರೀ ಗೌರಾ ಕೃಷ್ಣಮೂರ್ತಿ, T. G. L. ಕೃಷ್ಣಮೂರ್ತಿ, ತಿಮ್ಮಯ್ಯ, ಗೌರಾ ಶ್ರೀ ರಾಮಯ್ಯ ಪಾಡಗಲ್ಲು ಗಿರೆಪ್ಪ, A ಆನದಂ, ಅಮೃತಲಾಲ್ ಮೊದಲಾದವರೆಲ್ಲರೂ ಭಕ್ತಿ ಪೂರ್ವಕವಾಗಿ ಬಿನ್ನವಿಸಿಕೊಂಡರು. ಇವರ ಭಕ್ತಿ ವಿಶ್ವಾಸಗಳನ್ನು ನೋಡಿ ಪೂಜ್ಯ ಗುರುಗಳು ಅಂಗೀಕರಿಸದೆ ತಪ್ಪಲಿಲ್ಲ. ಒಳ್ಳೆಯದು ಆಗಲೆಂದರು.

ಮುಖ್ಯವಾಗಿ ಈ ವ್ರತಾಚರಣೆಗೆ ದೊಡ್ಡದಾದ ಅವಕಾಶವುಳ್ಳ ಭವನವನ್ನು ಶ್ರೀಮಂತ ಎಲೇ ಮಲ್ಲೇಶಪ್ಪನವರು - ಭಕ್ತಿಯಿಂದ, ಶ್ರೀ ಚಾತುರ್ಮಾಸ್ಯ ಮಹಾ ವ್ರತಕ್ಕೆ ತಮ್ಮ ಒಂದು ಪ್ರತ್ಯೇಕವಾದ ಭವನವನ್ನು ಕೊಡುತ್ತೇವೆಯೆಂದು ಹೇಳಿ, ಅಲ್ಲಿ ಎಲ್ಲಾ ವ್ಯವಸ್ಥೆಯನ್ನು ಮಾಡಿಸಿದರು. ಇದಕ್ಕೆಲ್ಲರೂ ಪರಮ ಸಂತೋಷವನ್ನು ಹೊಂದಿ, 13 ನೆಯ ಚಾತುರ್ಮಾಸ್ಯ ಮಹಾವ್ರತ ಕಾರ್ಯಕ್ರಮ ಕಮೀಟಿಯೊಂದನ್ನು ನಿರ್ಧರಿಸಿಕೊಂಡು, ಆ ಭವನಕ್ಕೆ ಶ್ರೀ ಚಾತುರ್ಮಾಸ್ಯ ಮಹಾವ್ರತಾಶ್ರಮವೆಂದು ಹೆಸರಿಟ್ಟು ಬೋರ್ಡು ಹಾಕಿಸಿದರು.

ಪ್ರ : ಸ್ವಾಮಿ ಋಷಿಗಳೆಂದರೆ ಅರ್ಥವೇನು ?

ಉ : ವೇದದಲ್ಲಿರುವ ಮಂತ್ರಗಳನ್ನು ಅರಿತು ಅನುಷ್ಠಿಸಿ ತಿಳಿದವರು ಅದನ್ನು ತಿಳಿಸುವವರು. 'ಋಷಯಃ ಮಂತ್ರದ್ರಷ್ಟಾಃ'

ಪ್ರ : ಸ್ವಾಮೀ ! ದೇವ, ಪಿತೃಋಣಗಳೆಂದಿರಲ್ಲಾ ಅವು ಯಾವು ? ಆ ಋಣಗಳು ಹೇಗೆ ನಿವೃತ್ತಿಯಾಗುವವು ?

ಉ : ಋಷಿಋಣ, ದೈವಋಣ, ತಂದೆತಾಯಿಗಳ ಋಣ, ಗುರು ಋಣ, ಹೀಗೆ ನಾಲ್ಕು ಪ್ರಕಾರ.

ಬ್ರಹ್ಮಚರ್ಯ ವ್ರತಾಚರಣಪೂರ್ವಕ ವೇದಶಾಸ್ತ್ರ ಅಧ್ಯಯನದಿಂದ ಋಷಿ ಋಣ ವಿಮುಕ್ತಿ, ಯಜ್ಞಾದಿ ಸತ್ಕರ್ಮಗಳಿಂದ ದೈವ ಋಣ ವಿಮುಕ್ತಿ, ತಾಯಿ ತಂದೆಯರನ್ನು ಸೇವಿಸುತ್ತಾ, ಸತ್ಸಂತತಿಯನ್ನು ಪಡೆಯುವದರಿಂದ ಪಿತೃಋಣ ವಿಮುಕ್ತಿ, ಗುರುಗಳು ಹೇಳಿದಂತೆ ಪ್ರತ್ಯಗಭಿನ್ನ ಪರಬ್ರಹ್ಮ ವಸ್ತುವೇ ನಾನೆಂಬ ಧೃಡಪ್ರಜ್ಞೆಯಿಂದ ಗುರುಋಣ ವಿಮುಕ್ತಿ, ಗುರುಋಣ ವಿಮುಕ್ತಿಯಲ್ಲಿ ಎಲ್ಲಾ ಋಣಗಳು ವಿಮುಕ್ತಿಯಾಗುವವು.

ಪ್ರ : ಸ್ವಾಮೀ ಪಂಚಯಜ್ಞಗಳು ಎನ್ನುವರಲ್ಲಾ ಅವು ಯಾವು ?

ಉ : "ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ

ನೃಯಜ್ಞಂ ಪಿತೃಯಜ್ಞಂ ಚ ಯಥಾ ಶಕ್ತಿನಹಾಪಯೇತ್ !

1) ವೇದಪಠನ ಪಾಠನ ಮತ್ತು ಸಂಧ್ಯೋಪಾಸನಾದಿ ಕರ್ಮಗಳು ಋಷಿ ಯಜ್ಞ.

2) ಅಗ್ನಿಹೋತ್ರಾದಿ ಕರ್ಮಗಳು ದೇವಯಜ್ಞ.

3) ಬಲಿ, ವೈಶ್ವದೇವ ಅಂದರೆ ಸಮಯಕ್ಕೆ ಆಕಸ್ಮಿಕವಾಗಿ ಬಂದ ಆತಿಥಿ ಭೋಜನಾದಿ ಪ್ರಾಣಿ ಸತ್ಕಾರ ಭೂತಯಜ್ಞ,

4) ಮನೆಗೆ ಬಂದ ಅತಿಥಿಗೆ ಅನ್ನಪಾನಾದಿಗಳನ್ನು ಕೊಟ್ಟು ಸಂತೋಷ ಪಡಿಸುವದು ನೃಯಜ್ಞ (ಮನುಷ್ಯ ಯಜ್ಞ).

5) ಶ್ರಾದ್ಧ ತರ್ಪಣಾದಿ ಕಾರ್ಯಗಳು ಪಿತೃಯಜ್ಞ.

ಇವನ್ನು ಪಂಚ ಯಜ್ಞಗಳೆನ್ನುತ್ತಾರೆ.

'ತಪೋ ಹಿ ಮಹತಾಂ ಧನಮ್' ಎಂದರೆ ಅನುಷ್ಠಾನಪರರಾದ ಸಾಧಕರಿಗೆ ತಪಸ್ಸೇ ಮಹಾಧನ. ತಪಸ್ಸೆಂದರೆ ತನ್ನ ವೃತ್ತಿಯನ್ನು ಸುಮ್ಮನೇ ಶಿವನಾಗಿರಿಸುವುದು.

ಅಯ್ಯಾ ! 'ನಾನೃತಾತ್ಪಾತಕಂ ಪರಮ್' ಅನ್ನುವ ವೇದವಚನಾನುಸಾರವಾಗಿ ಅಸತ್ಯವಾಡುವದಕ್ಕಿಂತಲೂ ಮಹಾಪಾತಕವಿಲ್ಲ 'ಸತ್ಯಾನ್ನಾಸ್ತಿ ಪರೋಧರ್ಮಃ' ಸತ್ಯಕ್ಕಿಂತಲೂ ಬೇರೆಯಾದ ಧರ್ಮವಿಲ್ಲ. 'ವಿದ್ವಾನ್ನಬಿಭೇತಿ ಕುತಶ್ಚನ' ಅಂದ ಹಾಗೆ

ಸತ್ಯಧರ್ಮನಿಷ್ಟನಾದವನು ಆತ್ಮವಿದ್ಯೆಯನ್ನು ಅನುಭವವನ್ನು ಪಡೆದು ಯಾವುದಕ್ಕೂ ಭಯ ಭೀತನಾಗದೆ ಶಾಂತಿಯಿಂದ ಸುಖವಾಗಿರುತ್ತಾನೆ.

ಅಯ್ಯಾ ! ಅನುಷ್ಠಾನಪರನಿಗೆ (ಯೋಗಿಗೆ) ಶರೀರ ಸಣ್ಣಗಿರುತ್ತೆ, ಮುಖ ಪ್ರಸನ್ನವಾಗಿರುತ್ತೆ, ಮಾತು ಪ್ರಸ್ಫುಟ, ನೇತ್ರಗಳು ಪ್ರಕಾಶ, ಆರೋಗ್ಯ, ಅಸ್ಖಲಿತ ಬ್ರಹ್ಮಚರ್ಯ, ಉತ್ತಮ ಜಠರಾಗ್ನಿ, ನಾಡೀ ವಿಶುದ್ಧಿ ಇರುತ್ತೆ.

ಶ್ಲೋ ॥ ವಪು ಃ ಕೃಶತ್ವಂ; ವದನೇ ಪ್ರಸನ್ನತಾ;
ನಾದ ಸ್ಫುಟತ್ವಂ; ನಯನೇ ಸ.ನಿರ್ಮಲೇ;
ಅರೋಗತಾ; ಬಿಂದು ಜಯೋಗ್ನಿ ದೀಪನಂ;
ನಾಡೀ ವಿಶುದ್ಧಿರ್ಹಠಯೋಗ ಲಕ್ಷಣಮ್ ॥

ಲತ್ತವರದಲ್ಲಿ ಶ್ರೀ ಶಂಕರ ಜಯಂತಿ ಮಹೋತ್ಸವ 10 ದಿನಗಳು ನಡೆಯಿಸಿದರು. ಶ್ರೀ ಶಂಕರ ವಿಜಯ, ಮಾಂಡೂಕ್ಯೋಪನಿಷತ್ತುಗಳ ಪ್ರವಚನವಾಯಿತು.

1-7-57 ಶ್ರೀ ಗುರುದೇವರನ್ನು ಆಹ್ವಾನಿಸುವದಕ್ಕಾಗಿ ಆದವಾನಿಯವರು ಒಂದು ಸ್ವಾಮಿಗಳನ್ನು ಕರೆದುಕೊಂಡು ಹೋಗಿ ಶ್ರೀ ಚಾತುರ್ಮಾಸ್ಯ ಮಹಾವ್ರತಾ ಶ್ರಮದಲ್ಲಿ (ಶ್ರೀ ಯಲೇಮಲ್ಲೇಶಪ್ಪನವರ ಭವನದಲ್ಲಿ) ಸನ್ನಿಧಿ ಮಾಡಿಸಿದರು. ಆಸ್ಥಳವು ವ್ರತಾಚರಣೆಗೆ ತಕ್ಕರೀತಿ ಯೋಗ್ಯವಾಗಿತ್ತು.

## 13ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಆದವಾನಿ ಪಟ್ಟಣ 7-7-1957

ಶ್ರೀ ಹೇವಿಳಂಬಿ ನಾಮ ॥ಸಂ॥ ಆಷಾಢ ಶುದ್ಧ ಏಕಾದಶಿ ಭಾನುವಾರ ಬ್ರಹ್ಮ ಮುಹೂರ್ತದಲ್ಲಿ ಯಥಾರೀತಿ ವೈದಿಕ ಕಾರ್ಯಕಲಾಪಗಳೆಲ್ಲವೂ ನಡೆದು ಕಲಶ ಸ್ಥಾಪನ, ಉಮಾಮಹೇಶ್ವರ ಶ್ರೀ ಚಂದ್ರಮೌಳೀಶ್ವರ ಪೂಜಾದಿ ಕಾರ್ಯಗಳು ಪ್ರಸ್ಥಾನತ್ರಯ ಪಾರಾಯಣೇತ್ಯಾದಿ ಎಲ್ಲಾ ವ್ರತನಿಯಮಾಚಾರಗಳಿಂದ ಕಲ್ಪೋಕ್ತ ಪ್ರಕಾರ 9 ಗಂಟೆಯವರಿಗು ಕಾರ್ಯಗಳು ನಡೆದು, ಈಶಾವಾಸ್ಯೋಪ ನಿಷತ್ತು ಶ್ರೀಗುರು ಮಂಗಳಾಚರಣಪೂರ್ವಕ ಪ್ರಾರಂಭವಾಗಿ ಮಂತ್ರಪುಷ್ಪ, ಮಹಾಮಂಗಳದಿಂದ ಪೂರ್ಣವಾಯಿತು.

ಸಾಯಂಕಾಲ ಪ್ರದೋಷ ಪೂಜಾದಿಗಳು ವಿಧ್ಯುಕ್ತವಾಗಿ ನಡೆದ ಮೇಲೆ 7 ಗಂ॥ ಇಂದ 8 ಗಂ॥ ವರಿಗೂ ಗೀತಾಭಾಷ್ಯ ಪ್ರವಚನ ಮಂತ್ರ ಪುಷ್ಪ ಮಹಾ ಮಂಗಳ, ಇದೇ ವಿಧವಾಗಿ ನಿಯಮ ಶೀಲಸಂಪನ್ನತೆಯಿಂದ ಅವಿಚ್ಯುತವಾಗಿ 7-7-57 ಮೊದಲು 4-11-57 ಕಾರ್ತಿಕ ಶುದ್ಧ ದ್ವಾದಶಿ ಸೋಮವಾರದ

ವರಿಗೂ ಶ್ರೀ ಉಮಾನಾಥನ ಕರುಣೆಯಿಂದ ಅಕುಂಠಿತವಾಗಿ ನಡೆದು ಪೂರ್ಣವಾಯಿತು. ಆ ಪಟ್ಟಣದವರು ಸುತ್ತುಮುತ್ತಲಿನ ಪ್ರಾಂತದವರು ಆ ಕಾರ್ಯದಲ್ಲಿ ಭಾಗವಹಿಸಿ ಧನ್ಯರಾದರು. ಅನುದಿನ ಶ್ರೀಗಳವರ ಸನ್ನಿಧಿ ಭಕ್ತರು ಬಂದು ಸಿದ್ಧಗೀತೆ ಅಂದರೆ ವೇದಾಂತ ವಿಷಯಗಳನ್ನು ಚರ್ಚಿಸಿ ತಿಳಿದುಕೊಂಡರು. ಈ ಕಾರ್ಯಕ್ರಮಕ್ಕೆ ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು, ಶ್ರೀ ಶಂಕರಾನಂದ ಸ್ವಾಮಿಗಳು, ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಪ್ರಭೃತರು ದಯಮಾಡಿಸಿದ್ದರು. ಕಡೇ ದಿನ ಸಭೆಯಲ್ಲಿ ಮಕ್ಕಳಿಂದ ಗೀತಾ ಪೋಟೀ ನಡೆಯಿತು. ವಿಶೇಷವಾಗಿ ಅನ್ನಸಂತರ್ಪಣೆ ಮಾಡಿದರು. ಎಲ್ಲಾ ಭಕ್ತರೊಡನೆ ಶ್ರೀಗಳವರು ಪಂಪಾಕ್ಷೇತ್ರಕ್ಕೆ ದೀಕ್ಷಾವಿರಮಣೆಗಾಗಿ ದಯಮಾಡಿಸಿ ಶ್ರೀ ವಿರುಪಾಕ್ಷೇಶ್ವರ ಸ್ವಾಮಿಗೆ ಮಹನ್ಯಾಸಪೂರ್ವಕವಾಗಿ ರುದ್ರಾಭಿಷೇಕ ಪೂಜೆಯನ್ನು ಸಲ್ಲಿಸಿ ಧನ್ಯರಾದರು.

ಇದೇ ಸುಸಮಯದಲ್ಲಿ 7-11-57 ಕಾರ್ತಿಕ ಶುದ್ಧ ಪೂರ್ಣಿಮ ಗುರುವಾರ ಪಂಪಾಕ್ಷೇತ್ರದಲ್ಲಿ, ಶ್ರೀ ಪಾಡಾಗಲ್ ಗಿರೆಪ್ಪ ಶ್ರೇಷ್ಠಿಯವರ ಸುಪುತ್ರರು ಶ್ರೀ ಸತ್ಯನಾರಾಯಣ ಶೆಟ್ಟಿ ಅನ್ನುವವರಿಗೆ ಉಮಾಮಹೇಶ್ವರ ಗುರುಪೀಠ ಪರಂಪರಾ ಸಂಪ್ರದಾಯಸಿದ್ಧವಾದ ಗುರುಮಹಾಮಂತ್ರವನ್ನು ಉಪದೇಶಿಸಿದರು.

ಮಹಾಕ್ಷೇತ್ರದಲ್ಲಿ ಸಾಯಂಕಾಲ ಸಭೆಯಲ್ಲಿ ಈಶಾವಾಸ್ಯೋಪನಿಷದ್ ವಿಷಯವನ್ನು ವ್ಯಾಖ್ಯಾನಿಸುತ್ತಾ ಉಪನ್ಯಸಿಸಿದರು. (ಹೆಚ್ಚಾಗುತ್ತವೆಂದು ಆ ವಿಷಯಗಳನ್ನು ಬರೆಯಲಿಲ್ಲ.)

ಪರಿಪಕ್ವವಾದ ಫಲವು ಗಾಳಿಯು ಸೋಕಿದ ಕೂಡಲೇ ಗಿಡದಿಂದ ಕೆಳಗೆ ಬಿದ್ದುಹೋಗುವ ರೀತಿ, ಗುರುದೈವ ಭಕ್ತಿ ಶ್ರದ್ಧೆಗಳಿಂದ ಶ್ರವಣ ಮನನ ನಿದಿಧ್ಯಾಸಾನುಷ್ಠಾನಗಳನ್ನು ಮಾಡುವ ಪರಿಪಕ್ವಹೆವಾದ ಮುಮುಕ್ಷುವು, ಗುರ್ವನುಗ್ರಹದಿಂದ ಸರ್ವದ್ವಂದ್ವ ದೋಷ ನಿವೃತ್ತನಾಗಿ, ಸರ್ವಸಂಶಯರಹಿತನಾಗಿ, ಬ್ರಹ್ಮನಿಷ್ಠೆಯನ್ನು ಹೊಂದಿ ಧನ್ಯನಾಗುವನು. ಸರ್ವಭೂತಗಳಲ್ಲಿ ಆತ್ಮನನ್ನು, ಆತ್ಮನಾದ ತನ್ನಲ್ಲಿ ಸರ್ವಭೂತಗಳನ್ನು ಕಾಣುವಾತನು ಭಯರಹಿತನು ; ಜಿಗುಪ್ಸಾರಹಿತನಾಗುವನು.

ಆದವಾನಿಯಿಂದ ಶ್ರೀ ಗುರುಗಳು ಗಂಜಿಗುಂಟೆ ಮಠಕ್ಕೆ ತಮ್ಮ ಗುರುದೇವರ ಪುಣ್ಯಾರಾಧನೆ ಕಾರ್ಯಕ್ರಮಕ್ಕಾಗಿ ಬಂದರು. ಆಗ್ಗೆ ಅಲ್ಲಿ ಹೋದವರ್ಷ ಅಂದು ಕೊಂಡ ಪ್ರಕಾರ ಗುಂತಕಲ್ಲು, ಆದವಾನಿ, ನಂದ್ಯಾಲ, ಮೊದಲಾದ ಎಲ್ಲಾ ಭಕ್ತರ ಭಕ್ತಿಪೂರ್ವಕ ಸಹಾಯ ಸೇವಾದಿಗಳಿಂದ ದಿವ್ಯವಾದ ಒಂದು ಭವನವು (ಹಾಲು) ತಯಾರು ಮಾಡಿದ್ದರು. ಗಂಜಿಗುಂಟೆ ಭಕ್ತರು ವಿಶೇಷವಾಗಿ ಸೇವೆ ಮಾಡಿದರು. ವಿಧ್ಯುಕ್ತವಾಗಿ ಮೂರು ದಿನಗಳು ಆಶ್ರಮದಲ್ಲಿ ಶ್ರೀಗಳವರ ಅಧ್ಯಕ್ಷತೆಯಲ್ಲಿ

ಕಾರ್ಯಕ್ರಮವು ವೈಭವೋಪೇತವಾಗಿ ಮಹಾತ್ಮರ ಉಪನ್ಯಾಸಗಳು ಆನಂದಪ್ರದವಾಗಿ ನಡೆದವು. ಸರ್ವವು ಸುಸಂಪನ್ನವು.

ಅನಂತರ ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳವರ ಆಹ್ವಾನವನ್ನು ಅನುಸರಿಸಿ ಕಡಪ ಜಿಲ್ಲೆಯ ಶ್ರೀ ಗಂಡಿಕ್ಷೇತ್ರ ಭೂಮಾನಂದಾಶ್ರಮಕ್ಕೆ ದಯ ಮಾಡಿಸಿದರು. ಮಹಾತ್ಮರೊಡನೆ ಅಲ್ಲಿ ಕಾರ್ಯಕ್ರಮವು ಆನಂದವಾಗಿ ನಡೆದು ಪೂರ್ಣವಾಯಿತು. ಆಮೇಲೆ ಶ್ರೀ ಶಂಕರ ಜಯಂತಿ ಕಾರ್ಯಕ್ರಮ ಯಥಾವಿಧಿ ಲತ್ತವರದಲ್ಲಿ ಆಚರಿಸಿಕೊಂಡು ಬ್ರಹ್ಮನಿಷ್ಠೆಯಿಂದಿರುತ್ತಿರಲು, 14 ನೇ ಚಾತುರ್ಮಾಸ್ಯ ಮಹಾವ್ರತವು ಗುಂತಕಲ್ಲಿನಲ್ಲಿ ನಡಸಲು ಶ್ರೀ V. ರಾಮಕೃಷ್ಣಯ್ಯನವರ ವಿಶಾಲ ವಾದ ಮಹಡಿಯಲ್ಲಿ ಚೆನ್ನಾಗಿದೆ ; ಈ ಸಾರಿ ಅಲ್ಲಿಯೇ ನಡೆಸಬೇಕೆಂದು ಫಲ ಮಂತ್ರಾಕ್ಷತೆಯನ್ನು ಪಡೆದು ಆಮೇಲೆ ಗುಂತಕಲ್ಲು ಭಕ್ತಾದಿಗಳು ಶ್ರೀಗುರು ಗಳನ್ನು ಅಲ್ಲಿಗೆ ಕರೆದುಕೊಂಡು ಹೋದರು.

## 14ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುಂತಕಲ್ಲು ಪಟ್ಟಣ 27-6-58

ಪವಿತ್ರವಾದ ಚತುರ್ದಶ ಶ್ರೀ ಚಾತುರ್ಮಾಸ್ಯ ಮಹಾವ್ರತವು ಶ್ರೀ ವಿಳಂಬಿ ನಾಮ ||ಸಂ|| ಆಷಾಢ ಶುದ್ಧ ಏಕಾದಶಿ ಶುಕ್ರವಾರ ಬ್ರಹ್ಮ ಮೂಹರ್ತದಲ್ಲಿ ಯಥಾ ಪ್ರಕಾರ ಪೂರ್ವೋಕ್ತ ವ್ರತಾಚರಣಗಳಂತೆ ಶಿವಪ್ರದವಾಗಿ ಪ್ರಾರಂಭವಾಯಿತು. ಶ್ರೀ ವೇದಾಂತ ಪಂಚದಶಿ ಗ್ರಂಥ ಪ್ರವಚನ ಉದಯ ಒಂಬತ್ತು ಗಂ||ಗೆ ಪ್ರಾತಃ ಕಾಲದ ಕಾರ್ಯವು ಪೂರ್ಣಗೊಂಡಿತು. ಇನ್ನು ಸಾಯಂಕಾಲ ಪೂಜಾನುಷ್ಠಾನ ನಂತರ ಏಳು ಗಂ||ಇಂದ ಎಂಟು ಗಂಟೆವರಿವಿಗೂ ಶ್ರೀಮದ್ಭಗವದ್ಗೀತಾ ಬಾಷ್ಯಗಳಾಹ ಪ್ರವಚನ ಮಂಗಳ. ಅಧಿಕ ಶ್ರಾವಣ ಸಹಿತ ಐದು ಮಾಸಗಳು 27-6-58 ಮೊದಲು 22-11-58 ವರಿಗೂ ಶ್ರೀಗುರು ಕೃಪೆಯಿಂದ ಸಾಂಗಮಂಗಳವಾಗಿ ಮಹಾಕಾರ್ಯ ನಡೆಯಿತು.

ಈ ಮಹಾವ್ರತವನ್ನು ಎರಡು ತಿಂಗಳು ವೇದಾಂತ ಪಂಚದಶಿ, ಮೂರು ತಿಂಗಳು ನೈಷ್ಕರ್ಮಸಿದ್ಧಿ ಮಹಾಗ್ರಂಥ ಪ್ರಾತಃಕಾಲ ಸಮಯದಲ್ಲಿ ಪ್ರವಚನವಾಗಿ, ಸಾಯಂ ಸಮಯ ಭಗವದ್ಗೀತೆ ಮತ್ತು ಈ ಮದ್ಯಕಾಲದಲ್ಲಿ 1,108 ಸಲ ಭಗವ ದ್ಗೀತಾ ಪುರಶ್ಚರಣೆ, ಈ ವ್ರತಕಾಲದಲ್ಲಿಯೇ ಜ್ಞಾನ ಶತಕ ಅಂದರೆ ಜ್ಞಾನ ಸುಧ ಎಂಬ ಉತ್ತಮ ಆಧ್ಯಾತ್ಮಿಕ ತತ್ತ್ವಜ್ಞಾನ ಗ್ರಂಥವನ್ನು ಪೂಜ್ಯ ಶ್ರೀಗುರು ದೇವರು ಆಂಧ್ರಾನುವಾದ ಮಾಡಿ ಮುದ್ರಣ ಮಾಡಿಸಿದರು. ವ್ರತಪೂರ್ಣ ಸಮಯ

ದಲ್ಲಿ ಷೋಡಶಾಕ್ಷರ ಮಹಾಪ್ರತ್ರ ಅಖಂಡ ಭಗವನ್ನಾಮ ಭಜನೆಯಾಯಿತು. ಜ್ಞಾನ ಸುಧ ಗ್ರಂಥಾವಿಷ್ಕರಣೆಯಾಗಿ ಎಲ್ಲರಿಗು ಪ್ರಸಾದಿಸಲ್ಪಟ್ಟಿತು.

ಪುಣ್ಯಾತ್ಮರಾದ ವಂಕದಾರು ಶ್ರೀರಾಮಕೃಷ್ಣಯ್ಯ ಶ್ರೇಷ್ಠಿಯವರಿಗೆ ಗುರು ದೇವರು "ಸುಧೀವರ" ಎಂದು ಅನ್ವರ್ಥವಾದ ಬಿರುದನ್ನು–ಸರ್ಟಿಫಿಕೇಟ್ ಆಫ್ ಮೆರಿಟ್ ಪ್ರಸಾದಿಸಿದರು. ಶ್ರೀ ಶುದ್ಧಚೈತನ್ಯಸ್ವಾಮಿಗಳು, ಶ್ರೀರಾಮಕೃಷ್ಣಾನಂದ ಸ್ವಾಮಿಗಳು, ಆಳ್ಳಗಡ್ಡೆ ಶ್ರೀ ಶಂಕರಾನಂದ ಸ್ವಾಮಿಗಳು, ಸುರುಪುರ ಶ್ರೀ ಶಂಕರಶಾಸ್ತ್ರಿಗಳು ಮೊದಲಾದ ಮಹನೀಯರು ಈ ಕಾರ್ಯಕ್ರಮಕ್ಕೆ ದಯಮಾಡಿಸಿ ಉಪನ್ಯಾಸಗಳನ್ನು ಮಾಡಿದರು.

ಶ್ರೀಶೈಲ ಮಹಾಕ್ಷೇತ್ರಕ್ಕೆ ಭಕ್ತರೊಡನೆ ಶ್ರೀಗಳವರು ದಯಮಾಡಿಸಿ ದೀಕ್ಷಾ ವಿರಮಣವನ್ನು ಮಾಡಿ ಭ್ರಮರಾಂಭ ಸಹಿತ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಜ್ಯೋತಿರ್ಲಿಂಗಕ್ಕೆ ಮಹನ್ಯಾಸಪೂರ್ವಕ ಶ್ರೀ ರುದ್ರಾಭಿಷೇಕ, ಕುಂಕುಮಾರ್ಚನಾದಿ ಪೂಜೆಗಳು ಮಾಡಿಸಿದರು.

ಮಹಾವ್ರತಾರಂಭದಲ್ಲಿ ಶ್ರೀಗಳವರು ಪ್ರಾರಂಭ ಮಾಡಿದ ಪಂಚದಶಿ ಮಹಾ ಗ್ರಂಥ ದಿಗ್ದರ್ಶನ :– ಶ್ರೀ ವಿದ್ಯಾರಣ್ಯ ಸ್ವಾಮಿಗಳು ಅನೇಕ ಗ್ರಂಥಕರ್ತರು; ಅವತಾರ ಪುರುಷರು. ಅವರ ವೈದುಷ್ಯವು ಅಪಾರವಾದುದರಿಂದ ವಿದ್ಯಾರಣ್ಯ ಸ್ವಾಮಿ ಎನ್ನುವದಾಗಿ ಅನ್ನುತ್ತಿದ್ದರಂತೆ. ಈ ವೇದಾಂತ ಪಂಚದಶಿಯಲ್ಲಿ ಮುಮುಕ್ಷುಗಳಿಗೆ ಬೇಕಾದ ಎಲ್ಲಾ ಪ್ರಕ್ರಿಯೆಗಳು ಸಂಪೂರ್ಣವಾಗಿವೆ ಎನ್ನಬಹುದು. ಇದು ಹದಿನೈದು ಪ್ರಕರಣಗಳುಳ್ಳ ಮಹಾಗ್ರಂಥವಾದ್ದರಿಂದ ಪಂಚದಶಿ ಎನ್ನುತ್ತಾರೆ. ಮೊದಲನೆಯ ಐದು ಪ್ರಕರಣಗಳು : ದ್ವೈತ ವಿವೇಕ, ಪ್ರತ್ಯಕ್ತತ್ವ ವಿವೇಕ, ಪಂಚಭೂತ ವಿವೇಕ, ಪಂಚಕೋಶ ವಿವೇಕ, ಮಹಾವಾಕ್ಯ ವಿವೇಕ.

1. ಪ್ರತ್ಯಗಾತ್ಮ ಸರ್ವ ವಿಲಕ್ಷಣವಾದ ಸಚ್ಚಿದಾನಂದ ಸ್ವರೂಪ ಪರಮಾತ್ಮನೇ ಎಂದು ತಿಳಿಸುವಿಕೆ........."

2. ಸರ್ವಾಧಾರವಾದ ನಿರ್ಗುಣ ಅದ್ವಿತೀಯ ಪರಮಾರ್ಥ ತತ್ತ್ವವನ್ನು, ತತ್ಕಾರ್ಯಗಳಾದ ಪಂಚಭೂತಗಳನ್ನು ಪ್ರಪಂಚಿಸಿ, ಕಾರಣವಾದ ಅದಿಷ್ಠಾನ ಬ್ರಹ್ಮ ತತ್ತ್ವವನ್ನು ಬೋಧಿಸಿದೆ..........."

3. "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್" ಎನ್ನುವ ತೈತ್ತರೀಯೋಪನಿಷತ್ ಶ್ರುತಿ ಮೂಲಕ ಚೆನ್ನಾಗಿ ಪಂಚಕೋಶಗಳನ್ನು ವಿವರಿಸಿ–ವಿಭಜಿಸಿ ಸರ್ವ ವಿಲಕ್ಷಣ ಸಾಕ್ಷಿ ಪ್ರತ್ಯಗಾತ್ಮ ವಿಷಯವನ್ನು ತಿಳಿಸಿದೆ.

4. ಶ್ವೇತಾಶ್ವತರ, ಐತರೇಯಾದಿ ಉಪನಿಷದರ್ಥಾಧಾರದ ಮೇಲೆ ಸೃಷ್ಟಿ ವಿಷಯಗಳನ್ನು ತಿಳಿಸುತ್ತಾ, ಈಶ್ವರ ಸೃಷ್ಟಿ ಬಂಧಪ್ರದವಲ್ಲ, ಜೀವ ಸೃಷ್ಟಿಯಾದ

ಮಾನಸಿಕ ಪ್ರಪಂಚ ಬಂಧಪ್ರದ. ಅದನ್ನು ಬಿಡುವುದೇ ಮುಕ್ತಿ ಎನ್ನುವ ಇತ್ಯಾದಿ ವಿಷಯಗಳು ಹೇಳಲ್ಪಟ್ಟಿವೆ..........."

5, ಇದರಲ್ಲಿ ಋಗ್ವೇದಾಂತರ್ಗತ ಐತರೀಯ ಶ್ರುತಿ 'ಪ್ರಜ್ಞಾನಂ ಬ್ರಹ್ಮ' ಎನ್ನುವ ಮಹಾವಾಕ್ಯವು, ಶುಕ್ಲಯಜುರ್ವೇದಾಂತರ್ಗತ ಶ್ರುತಿ 'ಅಹಂ ಬ್ರಹ್ಮಾಸ್ಮಿ' ಎನ್ನುವ ಮಹಾಕಾವ್ಯವು, ಸಾಮವೇದಾಂತರ್ಗತ ಛಾಂದೋಗ್ಯ ಶ್ರುತಿ 'ತತ್ತ್ವಮಸಿ' ಎನ್ನುವ ಮಹಾವಾಕ್ಯವು, ಅಥರ್ವಣವೇದಾಂತರ್ಗತ ಮಾಂಡೂಕ್ಯ ಶ್ರುತಿ 'ಅಯಮಾತ್ಮಾ ಬ್ರಹ್ಮ' ಎನ್ನುವ ಮಹಾವಾಕ್ಯಗಳ ಅರ್ಥವು ಹೇಳಲ್ಪಟ್ಟಿದೆ.

**ದೀಪಕ ಪಂಚಕ :** ಚಿತ್ರದೀಪಿಕೆ, ತೃಪ್ತಿದೀಪಿಕೆ, ಕೂಟಸ್ಥದೀಪಿಕೆ, ಧ್ಯಾನ ದೀಪಿಕೆ, ನಾಟಕದೀಪಿಕೆ.

**1.** ಚಿತ್ರದೀಪಿಕೆಯಲ್ಲಿ ಅಧ್ಯಾರೋಪಾಪವಾದ ದೃಷ್ಟಿಯಿಂದ ನಿಷ್ಪ್ರಪಂಚವಾದ ಪರಮಾತ್ಮ ತತ್ತ್ವವನ್ನು ಚಿತ್ರಪಟೋದಾಹರಣ ಪೂರ್ವಕವಾಗಿ ಚಿತ್ತು ಚತುಷ್ಟಯ ವರ್ಣನೆ.

ಮಾಯಾ ತತ್ಕಾರ್ಯ ಸಂಬಂಧವಿಲ್ಲದ ಪರಮಾತ್ಮ ಚಿತ್ತೆಂತಲು, ಮಾಯಾ ವಿಶಿಷ್ಟನು ಅಂತರ್ಯಾಮಿ ಎಂತಲೂ. ಸಮಷ್ಟಿ ಸೂಕ್ಷ್ಮ ಶರೀರೋಪಾಧಿಯುಳ್ಳ ಆತ್ಮ ಸೂತ್ರಾತ್ಮನೆಂತಲೂ, ಪಂಚೀಕೃತ ಪಂಚಮಹಾಭೂತ ಸಮಷ್ಟಿ ಸ್ಥೂಲ ಶರೀರೋಪಾಧಿ ಸಂಬಂಧ ಉಳ್ಳ ಪರಮಾತ್ಮ ವಿರಾಟ್ ಎಂತಲೂ, ಹೀಗೆ ಏಕಮೇವಾದ್ವಿತೀಯವಾದ ಪರಬ್ರಹ್ಮದಲ್ಲಿ ಅಧ್ಯಾಸ (ಅಜ್ಞಾನ) ಮೂಲಕ ಔಪಾಧಿಕ ಧರ್ಮವು ಉಂಟಾಗಿದೆಯೇ ವಿನಾ ಅನ್ಯಥಾ ಸ್ವಯಂ ಸಿದ್ಧಗಳಲ್ಲ.

ಇಂಥಾ ಅದ್ವಿತೀಯಾರ್ಥ ಪ್ರತಿಪಾದನಾರ್ಥವಾಗಿ ವ್ಯವಹಾರ ದೆಶೆಯಲ್ಲಿ ಕಾಣಿಸುವ ಚೈತನ್ಯ ಭೇದವನ್ನು ಘಟಾಕಾಶ, ಮಹಾಕಾಶ, ಜಲಾಕಾಶ, ಮೇಘಾಕಾಶಗಳೆಂಬ ಉಪಮಾನಗಳಿಂದ ಉಪಮೇಯವಾದ ಉಪಹಿತ ಚೈತನ್ಯವು ಏಕವೆಂತಲೂ ಕೂಟಸ್ಥನು, ಬ್ರಹ್ಮವು, ಜೀವನು, ಈಶ್ವರನು ಎಂಬ ಈ ಪ್ರಕಾರ ವಿಭಾಗದಲ್ಲಿ ಕೂಟಸ್ಥ, ಬ್ರಹ್ಮರಿಗೆ ಮುಖ್ಯ ಸಾಮಾನಾಧಿಕರಣ ಸಂಬಂಧ, ಜೀವೇಶ್ವರರಿಗೆ ಭಾದಾ ಸಾಮಾನಾಧಿಕರಣ ಸಂಬಂಧದಿಂದ ಅಭೇದವು, ಇತ್ಯಾದಿ ವಿಷಯಗಳು ಮತ್ತು ಅನೇಕ ಮತಮತಾಂತರ ಅಭಿಪ್ರಾಯಗಳನ್ನು ಹೇಳುತ್ತಾ, ಒಂದೇ ಚಿತ್ತು ನಾಲ್ಕು ಪ್ರಕಾರಗಳಾಗಿ ಉಪಾಧಿವಶದಿಂದ ವಸ್ತ್ರದಲ್ಲಿ ಧೌತವು, ಘಟ್ಟಿತನವು, ಲಾಂಛಿತವು; ರಂಜಿತವು, ಹೀಗೆಂದು ವಸ್ತ್ರಾಧಾರದಲ್ಲಿನ ಚಿತ್ರದಂತೆ ಚೈತನ್ಯಾತ್ಮನಲ್ಲಿ ಜಗತ್ಕಲ್ಪನೆಯಾಗಿದೆ, ಈ ಮೊದಲಾದ ವಿಷಯಗಳು.

**2. ತೃಪ್ತಿದೀಪಿಕೆ :** "ಆತ್ಮಾನಂಚೇದ್ವಿಜಾನೀಯಾ ದಯಮಸ್ಮೀತಿ ಪೂರುಷಃ । ಕಿಮಿಚ್ಛನ್ ಕಸ್ಯ ಕಾಮಾಯ ಶರೀರ ಮನು ಸಂಜ್ವರೇತ್ ||" ಎನ್ನುವ ಬೃಹದಾರಣ್ಯಕ ಶ್ರುತಿ ಮೂಲದಿಂದ,ಆತ್ಮ ಸಚ್ಚಿದಾನಂದ ನಿತ್ಯ ಪೂರ್ಣನೆಂದು ಅದೇ ನಾನೆಂದು ಅಪರೋಕ್ಷವಾಗಿ ಅರಿತ ಬ್ರಹ್ಮಾನುಭವಿ ತಾನೇನು ಮಾಡುವುದಿಲ್ಲ,ಮಾಡಿಸುವುದಿಲ್ಲ, ಯಾವುದನ್ನು ಕುರಿತು ವ್ಯಥೆಪಡುವುದಿಲ್ಲ. ಈ ವಿಷಯ ಆಧಾರದಿಂದ ಚಿದಾಭಾಸನಿಗೆ ಅಜ್ಞಾನಾದಿ ಸಪ್ತಾವಸ್ಥೆಗಳನ್ನು ನಿರೂಪಿಸುತ್ತಾ, ಚೈತನ್ಯಾತ್ಮನಲ್ಲಿ ಅವು ವಸ್ತುತಃ ಇಲ್ಲವೆಂದು ಕೇವಲ ಅಧ್ಯಾಸ ಮಾತ್ರವೆಂದು ಸಕಾರಣವಾಗಿ ಅನೇಕ ವಿಷಯಗಳನ್ನು ತಿಳುಹುತ್ತಾ, ಜ್ಞಾನಿಯ ಸ್ವರೂಪ ಲಕ್ಷಣಗಳು ಆತನ ಅಭಯತ್ವವನ್ನು ಅರುಹುತ್ತಾ, ಶ್ರೀ ವಿದ್ಯಾರಣ್ಯ ಸ್ವಾಮಿಗಳು ಈ ಒಂದು ಶ್ಲೋಕದ (ಮಂತ್ರದ) ಆಧಾರದ ಮೇಲೆ 298 ಶ್ಲೋಕಗಳನ್ನು ರಚಿಸಿದ್ದಾರೆ. ಇದರಲ್ಲಿನ ವಿಷಯವು ಅಧಿಕಾರಿಗಳ ಪೂರ್ವಾಪರ ಸಂದರ್ಭಗಳನ್ನು ಅನುಸರಿಸಿ ಸವ್ಯವಾಗಿ ಗ್ರಹಿಸಿಕೊಂಡು ಧನ್ಯರಾಗಬೇಕು.

**3. ಕೂಟಸ್ಥದೀಪಿಕೆ :** ಇದರಲ್ಲಿ ಬ್ರಹ್ಮಾತ್ಮಾಭೇದ ಜ್ಞಾನಕ್ಕೆ ಪರಮ ಸಾಧನವಾದ ತ್ವಂ ಪದ ಶೋಧನೆ ಅಂದರೆ ಪ್ರತ್ಯಗಾತ್ಮನ ನಿಜ ಸ್ವರೂಪ ಬೋಧೆ ವಿವರಿಸಲ್ಪಟ್ಟಿದೆ. ಇದರಲ್ಲಿನ ವಿಷಯಗಳು, ಪರಿಭಾಷೆ ಸ್ವಲ್ಪ ಜಟಿಲವಾಗಿಯೇ ಇರುತ್ತೆ. ಏಕಾಗ್ರ ಚಿತ್ತವುಳ್ಳವರಾಗಿ ನೀವು ಗ್ರಹಿಸಬೇಕು.

**4. ಧ್ಯಾನ ದೀಪಿಕೆ :** ಮಂದ ಮಧ್ಯಮಾಧಿಕಾರಿಗಳು ಕೂಡ ಧನ್ಯರಾಗಬೇಕೆಂಬುವ ಉದ್ದೇಶದಿಂದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ಈ ಧ್ಯಾನ ದೀಪಿಕೆಯಲ್ಲಿ ಸಂವಾದಿ, ವಿಸಂವಾದಿ ಎನ್ನುವ ಉಪಮಾನೋಪಮೇಯಗಳಿಂದ ಮೋಕ್ಷೋಪಾಯಗಳನ್ನು ತಿಳುಹಿಸುತ್ತಾ,ನಿರ್ಗುಣೋಪಾಸನೆಯ ದೊಡ್ಡತನವನ್ನು ತೋರುತ್ತಾ,ಮುಖ್ಯವಾಗಿ ನಿರ್ಗುಣೋಪಾಸನೆಯ ವಿಧೇಯ ವಿಶೇಷಣಗಳನ್ನು ತಿಳಿಸಿ, ಆ ಮೂಲಕ ಅಮೃತತ್ವಾನುಭವವನ್ನು ಪಡೆಯಬೇಕೆಂಬ ಇತ್ಯಾದಿ ವಿಷಯಗಳು, ಜ್ಞಾನವು ವಸ್ತುತಂತ್ರವು, ಉಪಾಸನೆ ಕರ್ತೃ ತಂತ್ರವೆಂಬುವ ಅನೇಕ ವಿಷಯಗಳು ಹೇಳಲ್ಪಟ್ಟಿವೆ.

**5. ನಾಟಕ ದೀಪಿಕೆ :** ಆತ್ಮನಲ್ಲಿ ಜಗದಾಧ್ಯಾರೋಪಾಪವಾದವನ್ನು ಸಂಕ್ಷಿಪ್ತವಾಗಿ ನಿರೂಪಿಸುತ್ತಾ ಪ್ರಪಂಚೋಪಶಮವಾದ ಆತ್ಮತತ್ತ್ವವನ್ನು ಒಳ್ಳೆಯ ವಿವರಣೆಯಿಂದ ವರ್ಣಿಸಿ, ಸರ್ವರಿಗೂ ಅರ್ಥವಾಗುವಂತೆ ನಾಟಕವೆಂಬ ರೂಪಕಲಂಕಾರದಿಂದ ವರ್ಣಿತವಾಗಿದೆ. ಅಹಂಕಾರವೇ ಪ್ರಭು, ಶಬ್ದಾದಿ ವಿಷಯಗಳು ಸಭೆಯಲ್ಲಿರುವ ಪ್ರಜೆಗಳು, ಬುದ್ಧಿಯೇ ನಾಟ್ಯ ಮಾಡುವ ಸ್ತ್ರೀ, ಶ್ರೋತ್ರಾದಿ ಇಂದ್ರಿಯಗಳೇ ತಾಳ, ಮೇಳ, ಮದ್ದಲಿಗಳನ್ನು ಧರಿಸಿದವರೆಂತಲು ಮತ್ತು ಸಭಾಂಗಣದಲ್ಲಿ ಸರ್ವ ಭಾವಾಭಾವಗಳನ್ನು ಪ್ರಕಾಶಿಸುತ್ತಿರುವ ದೀಪವೇ ಸಾಕ್ಷಿ ಎಂತಲೂ ಅಂದರೆ

ಅಹಂಕಾರಾದಿ ಸರ್ವೇಂದ್ರಿಯ ವ್ಯಾಪಾರಗಳಿಗೆ ಆತ್ಮ ವಿಲಕ್ಷಣವಾಗಿ, ದೀಪದಂತೆ ನಿತ್ಯ ಪ್ರಕಾಶ ಸ್ವರೂಪನಾಗಿ, ಅಸಂಗ ಕೂಟಸ್ಥ ಸಾಕ್ಷಿಯಾಗಿದ್ದಾನೆಂಬ ಇತ್ಯಾದಿ ವಿಷಯಗಳು.

1. ಆನಂದಾಷ್ಟಕ ಎಂದರೆ ಈ ಮಿಕ್ಕ ಐದು ಅಧ್ಯಾಯಗಳಲ್ಲಿ ಅಷ್ಟವಿಧಾನಂದಗಳ ವಿವರಣೆ. ಇವುಗಳಲ್ಲಿ ಬ್ರಹ್ಮಾನಂದ, ವಾಸನಾನಂದ, ಯೋಗಾನಂದ ಎನ್ನುವ ಮೂರನ್ನು ಈ ಮೊದಲನೆಯ ಪ್ರಕರಣದಲ್ಲಿ ಪ್ರತಿಪಾದಿಸುತ್ತಾ ಛಾಂದೋಗ್ಯ ಶ್ರುತಿಯನ್ನನುಸರಿಸಿ ಸುಷುಪ್ತ್ಯಾವಸ್ಥೆಯಲ್ಲಿ (ತೋರುವ) ಇರುವ ಸುಖ ಬ್ರಹ್ಮಾನಂದವೆಂತಲೂ, ತದಾದಿ ಅಂತ್ಯಗಳಲ್ಲಿ ಭಾಸವಾಗುವ ಆನಂದ ವಾಸನಾನಂದವೆಂತಲೂ, ಚಿತ್ತಚಾಂಚಲ್ಯವನ್ನು ನೀಗುವುದು ಯೋಗಾನಂದವೆಂತಲೂ, ಹೀಗೆ ಬ್ರಹ್ಮಾನಂದ, ವಾಸನಾನಂದ, ಯೋಗಾನಂದ ವಿಷಯಗಳು ಈ ಪ್ರಕರಣದಲ್ಲಿ ಉತ್ತಮ ರೀತಿಯಿಂದ ವಿವರಿಸಲ್ಪಟ್ಟಿವೆ.

2. ಯಾಜ್ಞವಲ್ಕ್ಯ ಮೈತ್ರೇಯಿ ಸಂವಾದಾತ್ಮಕವಾದ ಬೃಹದಾರಣ್ಯಕ ಶ್ರುತಿ ಆಧಾರದ ಮೇಲೆ ಪರಮ ಪ್ರೇಮಾಸ್ಪದನು ಆತ್ಮನೇ, ಮಿಕ್ಕವೆಲ್ಲವೂ ಗೌಣವೆಂದು ಬ್ರಹ್ಮಾನಂದವೆಂಬ ಈ ಪ್ರಕರಣದಿಂದ ವಿವಿಧ ವಿಷಯಗಳನ್ನು ನಿರೂಪಿಸಿದ್ದಾರೆ.

3. ದ್ವೈತಭಾವವಿಲ್ಲದ ಸ್ಥಿತಿ ಅದ್ವೈತಾನಂದವೆಂದು ನಿರೂಪಿಸಿ, ನಾನಾ ಮತ ಮತಾಂತರಗಳನ್ನು ಖಂಡಿಸಿ ವಿಶೇಷವಾಗಿ ಘಟೋಪಮಾನವನ್ನು ಉದಹರಿಸುತ್ತಾ, ವಿವರ್ತವಾದವನ್ನು ಕುರಿತು ಅಪೂರ್ವವಾದ ಸಚ್ಚಿದಾನಂದ ಪರಬ್ರಹ್ಮವೇ ನಾನಾಗಿದ್ದೇನೆಂಬ ನಿರುಪಾಧಿಕ ಸ್ಥಿತಿಯಲ್ಲಿರುವುದೇ ನಿಜಾನಂದವು ಅನ್ನುವುದಾಗಿ ಈ ಪ್ರಕರಣದಲ್ಲಿ ವಿಸ್ತೃತ ವ್ಯಾಖ್ಯೆ ಇದೆ. ನಿಜವಾಗಿಯೂ ಈ ಅಧ್ಯಾಯದ ವಿಷಯಗಳನ್ನು ನೀವು ಏಕಾಗ್ರಚಿತ್ತದಿಂದ ಶ್ರವಣ ಮಾಡಿದರೆ ಅದ್ವಿತೀಯವಾದ ದಿವ್ಯಾನುಭೂತಿಯೂ, ತನ್ನಿಷ್ಠೆಯೂ ತಪ್ಪದೆ ಉಂಟಾಗುತ್ತದೆ.

4. ವಿದ್ಯಾನಂದವು ಶುದ್ಧ ಬುದ್ಧಿಗೆ ಸುಸಂವೇದ್ಯ ಸಾಕ್ಷಾನ್ಮೋಕ್ಷ ಪ್ರದ. ಇದು ನಾಲ್ಕು ವಿಧ. 1. ದುಃಖಾಭಾವ. 2. ಸರ್ವ ಕಾಮಾವಾಪ್ತಿ. 3. ಕೃತಕೃತ್ಯತೆ, 4. ಪ್ರಾಪ್ತವ್ಯ, ಈ ಜ್ಞಾನ ಫಲ ವಿಷಯಗಳನ್ನು ಈ ಪ್ರಕರಣದಲ್ಲಿ ಕೂಲಂಕುಷವಾಗಿ ಚರ್ಚಿಸಿದ್ದಾರೆ. ಇದು ಮೂರ್ತಿ ಸಣ್ಣದಾದರು ಕೀರ್ತಿ ದೊಡ್ಡದಾದಂತೆ, ಪ್ರಕರಣ ಚಿಕ್ಕದಾದರೂ ಶ್ರದ್ಧೆಯಿಂದ ಶ್ರವಣ ಮಾಡುವ ಶ್ರೋತೃಗಳಿಗೆ, ಮಹಾ ಫಲವರ್ಣನೆಯಿಂದ ಅಪೂರ್ವವಾದ ದೃಷ್ಟಿಯನ್ನು ಪ್ರತಿಪಾದಿಸುತ್ತೆ. ಈ ಪ್ರಕರಣದಲ್ಲಿ ಶ್ರೀ ವಿದ್ಯಾರಣ್ಯ ಸ್ವಾಮಿಗಳು ತಮಗಾದ ಆನಂದಾತಿಶಯವನ್ನು "ಅಹೋ ಗುರು ಅಹೋ ಶಾಸ್ತ್ರ" ಎಂಬುದಾಗಿ ಸ್ವರೂಪಾನಂದೋದ್ಗಾರದಿಂದ ಪ್ರಕರಣಾಂತ್ಯದಲ್ಲಿ ಹಾಡಿ ಹೊಗಳಿದ್ದಾರೆ.

5) ಸ್ವಸ್ವರೂಪವಾದ ಬ್ರಹ್ಮಾನಂದದ ಲವಲೇಶವಾದ ವಿಷಯಾನಂದ ವನ್ನು ಕುರಿತು, ಈ ಕಡೆಯ ಪ್ರಕರಣವಲ್ಲಿ ವಿವರಿಸಲ್ಪಟ್ಟಿದೆ. ಕೇವಲ ಸಾತ್ವಿಕ ವೃತ್ತಿ ಯಲ್ಲಿ ಆತ್ಮನ ಸಚ್ಚಿದಾನಂದಗಳು ಭಾಸವಾಗುವವೆಂತಲೂ, ರಾಜಸ ವೃತ್ತಿಯಿಂದ ಸತ್ತು ಚಿತ್ತುಗಳು ಮಾತ್ರವೇ ಭಾಸವಾಗುವವು, ತಾಮಸವೃತ್ತಿಯಿಂದ ಮೃಚ್ಛಿಲಾದಿ ಗಳಂತೆ ಕೇವಲ ಅಸ್ತಿತ್ವವು ಮಾತ್ರ ಗೋಚರಿಸುತ್ತದೆಂತಲೂ ನಿರೂಪಿಸಲ್ಪಟ್ಟಿದೆ. ಹೀಗೆ ಇಂದ್ರಿಯ ವಿಷಯ ಸನ್ನಿಕರ್ಷಜನ್ಯ ಜ್ಞಾನದಿಂದುಂಟಾಗುವ ಪ್ರಿಯ,ಮೋದ, ಪ್ರಮೋದವಾದದ್ದು ವಿಷಯಾನಂದವೆಂದು ಹೇಳಲ್ಪಡುವುದು. ಈ ಪ್ರಕಾರ ಪೂಜ್ಯ ಶ್ರೀಯವರು ಪಂಚದಶಿ ಮಹಾಗ್ರಂಥ ಸಂಗ್ರಹಾರ್ಥವನ್ನು ಪ್ರಥಮದಲ್ಲಿ ಭಕ್ತರಿಗೆ ತಿಳುಹಿ, ಆಮೇಲೆ ಕ್ರಮವಾಗಿ ಗ್ರಂಥವನ್ನು ಶ್ರುತಿಯುಕ್ತ್ಯನುಭವಗಳಿಂದ ಶ್ರೋತೃಜನಾನಂದಕರವಾಗಿ ಪ್ರವಚಿಸುತ್ತಾ, ಉತ್ತಮ ಭಕ್ತರಿಗೆ ಬ್ರಾಹ್ಮೀ ವೃತ್ತಿ ಸ್ಫೂರ್ತಿಯನ್ನುಂಟು ಮಾಡಿದರು. ಇದೊಂದು ಅಪೂರ್ವ ಸನ್ನಿವೇಶವಾಗಿತ್ತು.

ಈ ಮಹಾವ್ರತಾನಂತರ ಗಂಜಿಗುಂಟೆ ಶ್ರೀ ಮಠದಲ್ಲಿ ತಮ್ಮ ಗುರುಗಳ ಪುಣ್ಯಾರಾಧನೆ ಮಹೋತ್ಸವವು ಯಥಾರೀತಿ ಮೂರು ದಿನಗಳು ಆನಂದಪ್ರದವಾಗಿ ನಡೆಯಿತು. ಮಹಾತ್ಮರೆಲ್ಲರೂ ಬಂದಿದ್ದರು. ಅವರೆಲ್ಲರನ್ನು ಒಂದೇ ವೇದಿಕೆಯ ಮೇಲೆ ಕುಳ್ಳಿರಿಸಿ ಪೂಜಿಸಿದರು. ಅದು ಸಪ್ತ ಋಷಿಗಳ ಪೂಜೆಯಂತೆ ಪರಮ ಪೂಜ್ಯವಾಗಿತ್ತು.

ಶ್ರೀಸ್ವಾಮಿಗಳವರ ಭಕ್ತರು ಹಾಲಪರ್ವಿಯ ಕೋಗಿಲತೋಟ ಜಾಗೀರದಾರ ಸಿದ್ದಮ್ಮ, ಭಾಗ್ಯಮ್ಮ, ಟಿ. ಶಿವಾರೆಡ್ಡಿ ಎನ್ನುವವರು ಬಂದು ತಮ್ಮ ಗ್ರಾಮಕ್ಕೆ ಕರೆದುಕೊಂಡು ಹೋದರು. ಗುರುಗಳ ಶುಭಾಗಮನದಿಂದ ಊರಿಗೆಲ್ಲಾ ಮಹ ದಾನಂದವಾಯಿತು. ಶ್ರೀಗಳವರು ನಿತ್ಯನಿಯಮ ಪೂಜಾನುಷ್ಠಾನಗಳಿಂದ ಅಲ್ಲಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕಾದಿ ಉತ್ತಮ ಪ್ರಸಂಗಗಳನ್ನು ಬೋಧಿಸಿದರು. ಎಲ್ಲರಿಗೂ ಪರಮ ಸಂತೋಷವಾಯಿತು. ಕೆಲವು ದಿನಗಳು ಇಲ್ಲಿಯೇ ಇದ್ದರು. ಶ್ರೀಗಳವರಿಂದ ಅನುಗ್ರಹಿತರಾದ ಶ್ರೀ ಶಾಂತಾನಂದಸ್ವಾಮಿಗಳೆಂಬ ಯತಿಗಳನ್ನು ಅಲ್ಲೇ ಇರುವಂತೆ ನಿಯಮಿಸಿ, ಅಲ್ಲಿಂದ ವಿಶ್ವ ಹಿಂದೂ ಪರಿಷತ್ತಿನ ಧರ್ಮ ಪ್ರಚಾರ ದವರ ಸದಿಚ್ಛಾನುಸಾರ ಸ್ವಾಮಿಗಳವರು ನಂದ್ಯಾಲ ಮಹಾನಂದೀಶ್ವರ ದೇವಾ ಲಯಕ್ಕೆ ದಯಮಾಡಿಸಿ 11 ದಿನಗಳು ಪ್ರವಚನಾದಿ ಕಾರ್ಯಗಳನ್ನು ನಡೆಸಿದರು. ಶುಭಪ್ರದವಾಗಿ ನಡೆದು ಮಂಗಳವಾಯಿತು.

ಶ್ರೀಗುರುದೇವರು ಕಾಶೀಕ್ಷೇತ್ರದಲ್ಲಿ ಅಧ್ಯಯನ ಮಾಡುವಾಗ ಅಲ್ಲಿ ಉತ್ತಮ ಅಧ್ಯಾಪಕರು ಶ್ರೋತ್ರಿಯ ಬ್ರಹ್ಮನಿಷ್ಠರಾದ ಪಂಡಿತ ಬ್ರಹ್ಮಶ್ರೀ ವಿಶ್ವನಾಥ ಪ್ರಸಾದ ಮುಖರ್ಜಿ ಅವರಿಂದ ಪ್ರೇಮಪೂರ್ವಕವಾಗಿ ನಮ್ಮ ಸ್ವಾಮಿಗಳವರಿಗೆ

ಒಂದು ಪತ್ರ ಬಂತು. ಕಾಶೀ ಕ್ಷೇತ್ರದಲ್ಲಿ ಪಂಡಿತ ಸಭೆ (ಸದಸ್ಸು) 7 ದಿನಗಳು ಪರ್ಯಂತ ನಡೆಯುತ್ತೆ: ತಾವು ತಪ್ಪದೆ ಬರಬೇಕೆಂದು ತಿಳಿಸಿದ್ದರು. ಆದ್ದರಿಂದ ಶ್ರೀಗಳವರು ಪ್ರಿಯವಾದ ಇವರ ಆಹ್ವಾನವನ್ನು ಅಂಗೀಕರಿಸಿ 12–2–59 ಪ್ರಾತಃ ಕಾಲ ಕಾಶೀಕ್ಷೇತ್ರಕ್ಕೆ ಪ್ರಯಾಣವಾಗಿ ಗುಂತಕಲ್ಲಿನಿಂದ ದಯಮಾಡಿಸಿದರು.

ಕಾಶೀಕ್ಷೇತ್ರ ವಿಶ್ವಾರಾಧ್ಯ ಜ್ಞಾನ ಸಿಂಹಾಸನ ಮಠದಲ್ಲಿ ಮೊದಲು ತಾವಿಷ್ಟ ಸ್ಥಳದಲ್ಲಿರುತ್ತಾ, ಶ್ರೀಜಗದ್ಗುರುಗಳನ್ನೂ ವಿಶ್ವೇಶ್ವರನನ್ನೂ ಸಂದರ್ಶಿಸಿ ವಿಶ್ವನಾಥ ಪ್ರಸಾದ ಮುಖರ್ಜಿ ಪಂಡಿತ ಮಹೋದಯರ ಮನೆಗೆ ಹೋಗಿ ಅವರನ್ನು ಸಂದರ್ಶಿಸಿದರು. ಶ್ರೀಗಳವರನ್ನು ಕಂಡು ಅವರು ಮಹದಾನಂದವನ್ನೊಂದಿ ಆಮೇಲೆ ಮಹಾಸಭೆಗೆ ಶ್ರೀಗಳವರನ್ನು ಮಾರನೆಯ ದಿನ ಕರೆದುಕೊಂಡು ಹೋದರು.

10 ಗಂಟೆಗೆ ಸಭೆ ಪ್ರಾರಂಭವಾಯಿತು. ಉದ್ದಂಡ ಮಹಾಪಂಡಿತರಿಂದ ಸಮಾವೇಶವಾದ ಆ ಸಭೆಯು ನೋಡುವದಕ್ಕೆ ಎಷ್ಟೋ ವೈಭವವಾಗಿತ್ತು. ನಮ್ಮ ಶ್ರೀಗಳವರನ್ನು ಕುರಿತು ಅಲ್ಲಿದ್ದ ಪಂಡಿತರಿಗೆ ಪರಿಚಯ ಮಾಡಿದರು. ಶಾಂತಿ ಪಾಠಗಳೊಡನೆ ಸಭೆ ಪ್ರಾರಂಭವಾಯಿತು. ಅಲ್ಲಿ ನಡೆದ ಗೀರ್ವಾಣ ಭಾಷಾಮಯ ವಾದ ಪಂಡಿತ ಸಭೆಯಲ್ಲಿ 'ವಿದ್ಯೆ ಮತ್ತು ಸಂಸ್ಕೃತ. ಸಂಸ್ಕೃತಿ' ಎನ್ನುವ ಈ ಶೀರ್ಷಿಕೆಯ ಮೇಲೆ ಚರ್ಚೆಯು ನಡೆಯಿತು.

ವಿದ್ಯಾಧಿದೇವತೆಯಾದ ಸರಸ್ವತಿ ಸಾಕ್ಷಾತ್ತಾಗಿ ಅಲ್ಲಿ ತೋರುತ್ತಿದ್ದಳು. ಹೀಗೆ ಸಾಂಗವಾಗಿ ಅನೇಕ ವಿಷಯಗಳನ್ನು ತಮ್ಮ ತಮ್ಮ ಪಾಂಡಿತ್ಯ ಪ್ರಕರ್ಷದೊಡನೆ 7 ದಿನಗಳು ಅದ್ಭುತವಾಗಿ ನಡೆದು ಸಮಾಪ್ತವಾಯಿತು. ಆ ಸಮಯದಲ್ಲಿ ನಮ್ಮ ಶ್ರೀಗಳವರಿಗೆ ಅಷ್ಟೋತ್ತರ ಶತೋಪನಿಷತ್ತುಗಳ ಸಂಸ್ಕೃತ ಮೂಲ ಗ್ರಂಥವನ್ನು ಸಮರ್ಪಿಸಿದರು. ಇದೆಲ್ಲವು ಶ್ರೀ ವಿಶ್ವನಾಥ ಪ್ರಸಾದ ಮುಖರ್ಜಿ ಪಂಡಿತರ ಪೂರ್ಣಾಭಿಮಾನವೇ, ಅವರ ಪ್ರೇಮವೇ ಕಾರಣ.

ಕೆಲವು ದಿನಗಳು ಶ್ರೀ ಗುರುಗಳು ಕಾಶಿಯಲ್ಲಿಯೇ ಇದ್ದು. ಅನಂತರ ತಮ್ಮ ಪಂಡಿತರು ಹೇಳಿದಂತೆ ಶ್ರೀಗಳವರು ಬೊಂಬಾಯಿ ಮೇಲೆ ಬರುತ್ತಾ, ಮಹಾ ಮಂಡಲೇಶ್ವರರು ವಿದ್ಯಾಪ್ರಪೂರ್ಣರಾದ ಮಹೇಶ್ವರಾನಂದ ಸ್ವಾಮಿಗಳನ್ನು ದರ್ಶಿಸಿ, ಅಲ್ಲಿಂದ ನೇರವಾಗಿ ಗುಂತಕಲ್ಲಿಗೆ ದಯಮಾಡಿಸಿ, ಕಾಶೀ ತೀರ್ಥ ಪ್ರಸಾದ ಗಳನ್ನು ಭಕ್ತರಿಗೆ ವಿನಿಯೋಗಗೊಳಿಸಿ ಯಥಾರೀತಿ ಶಾಸ್ತ್ರಶ್ರವಣ ಪೂಜಾನುಷ್ಠಾನ ಗಳಲ್ಲಿದ್ದರು.

# ಬ್ರಹ್ಮಬೋಧೆ

ದ್ವೈತವಸ್ತು ಅದರ ಪ್ರತೀತಿ ಅವಿಚಾರ ಸಿದ್ಧವೇಯಾಗಲಿ ತತ್ತ್ವತಃ ವಿಚಾರಿಸಿದರೆ ಪರಮಾರ್ಥ ಸತ್ಯವಲ್ಲ. ಪ್ರತೀತಿ ಮಾತ್ರವೇ.

ತತ್ತ್ವಮಸಿ ಮಹಾವಾಕ್ಯಾರ್ಥಜನ್ಯವಾದ ಪ್ರತ್ಯಗಭಿನ್ನ ಪರಮಾತ್ಮ ಜ್ಞಾನವೇ ಸರ್ವಾನರ್ಥ ನಿರ್ಮೂಲನ ಕಾರಣ.

ಬುದ್ಧಿ ಸಾಕ್ಷಿಯಾದ ಪ್ರತ್ಯಗಾತ್ಮ ವ್ಯಾಪಕ ಬ್ರಹ್ಮವೇ ಎಂಬುವ ಶ್ರುತ್ಯಾಚಾರ್ಯ ವಚನವೇ ಪ್ರಮಾಣ. ಏತನ್ಮೂಲಕವಾಗಿ ಅಖಂಡಾದ್ವಿತೀಯ ಜ್ಞಾನವನ್ನು ಹೊಂದುವನು.

ಆಕಾಶದಲ್ಲಿ ಮೇಘಗಳು ಉತ್ಪನ್ನವಾಗಿ ಅಡಗಿದರೂ ಆಕಾಶವು ನಿರ್ಲಿಪ್ತವೂ ಅಸಂಗವಾಗಿಯೂ ಇರುವಂತೆ ಚಿದಾನಂದ ಸ್ವರೂಪನಾದ ನಿನ್ನಲ್ಲಿ ಬುದ್ಧ್ಯಾದಿ ದ್ವೈತ ಭೇದ ವಿಸ್ತಾರವು ಕಂಡರೂ ವಸ್ತುತಃ ಇಲ್ಲ. ನೀನು ಅಸಂಗನು.

ಅಯ್ಯಾ ! ಮಹಾವಾಕ್ಯವು ನಿನ್ನನ್ನು ಬ್ರಹ್ಮವಾಗಿ ಬೋಧಿಸುವ ವಿಷಯದಲ್ಲಿ ಅದು ರುಚ್ಯುತ್ಪಾದಕ ವಾಕ್ಯವಲ್ಲ ಮತ್ತು ಔಪಾಸನಾಪರವಲ್ಲ, ಗೌಣವಲ್ಲ, ಜಾತಿ ವ್ಯಕ್ತಿ ಪರವಲ್ಲ, ಅಖಂಡಾದ್ವಿತೀಯಾರ್ಥವನ್ನೇ ತಿಳಿಸುವದೆಂದು ವಿವೇಕದಿಂದ ವಿಶ್ವಾಸವಿಡು ; ಸಂಶಯಪಡಬೇಡ.

ಇಂಥಾ ಅದ್ವಿತೀಯವಾದ ದೃಷ್ಟಿ ನಿನಗೆ ಉಂಟಾಗಲಿಲ್ಲವೆಂದರೆ ಅದು ಶಾಸ್ತ್ರಾಚಾರ್ಯರ ಲೋಪವಲ್ಲ; ಅಧಿಕಾರ ಲೋಪವೇ. ಕುರುಡನು, ಸೂರ್ಯನು ಕಾಣಿಸಲಿಲ್ಲ. ಆತನು ಇಲ್ಲವೇ ಇಲ್ಲವೆಂದಾಗ ಅದು ಸೂರ್ಯನ ತಪ್ಪಲ್ಲ. ನಿನ್ನ ದೃಷ್ಟಿ ಲೋಪವೆಂದು ತಿಳಿದು ದೃಷ್ಟಿಯನ್ನು ಸರಿಪಡಿಸಿಕೊಳ್ಳಬೇಕು.

ಬ್ರಹ್ಮಾನುಭವಿಯಾದ ಜ್ಞಾನಿಯ ಜೀವಿತವನ್ನು ಆತನ ಪ್ರಾರಬ್ಧರೂಪವಾದ ಸೇವಕನು ನೋಡಿಕೊಳ್ಳುವನು. ಆತನು ಅಸಂಗಾನುಭವಿ; ನಿತ್ಯಾನಂದರೂಪನು.

ಅನಂತರ ಪ್ರತಿವರ್ಷದಂತೆ ಲತ್ತವರದಲ್ಲಿ ಶ್ರೀ ಶಂಕರ ಜಯಂತಿ ಅತ್ಯುತ್ತಮ ರೀತಿ ಪೂಜಾನುಷ್ಠಾನುಗಳೊಂದಿಗೆ ಹತ್ತು ದಿನಗಳು ವಾಕ್ಯಾರ್ಥ ಶ್ರವಣಗಳು ನಡೆದು ಸಂಪೂರ್ಣವಾಯಿತು.

ಅಲ್ಲಿಂದ ಬಳ್ಳಾರಿ ಹತ್ತಿರ ವೇಣೀವೀರಾಪುರದ (ಕರ್ನಾಟಕ) ಭಕ್ತರ ಅಭೀಷ್ಟವನ್ನು ಮನ್ನಿಸಿ ಸ್ವಾಮಿಗಳವರು ಆ ಗ್ರಾಮಕ್ಕೆ ದಯಮಾಡಿಸಿದರು. ಶ್ರೀ M. ದೊಡ್ಡಬಸಪ್ಪ, ಶ್ರೀ K. ಹನುಮಂತಪ್ಪ ಮೊದಲಾದ ಭಕ್ತರು ಚೆನ್ನಾಗಿ ವ್ಯವಸ್ಥೆಗಳನ್ನು ಮಾಡಿ ಶ್ರೀಗಳವರಿಂದ ಸಾರ್ವಜನಿಕ ತತ್ತ್ವೋಪದೇಶಗಳನ್ನು ಶ್ರವಣ ಮಾಡಿದರು.

ಆಮೇಲೆ ಅನನ್ಯವಾದ ಭಕ್ತಿಯಿಂದ ನಂದ್ಯಾಲ ಪಟ್ಟಣದ ಭಕ್ತರು ಈ ವರ್ಷ 15 ನೆಯ ಚಾತುರ್ಮಾಸ್ಯ ಮಹಾವ್ರತ ನಂದ್ಯಾಲದಲ್ಲೇ ನಡೆಯಬೇಕೆಂದು ಒಂದು ಉತ್ತಮವಾದ ಸ್ಥಾನವನ್ನು ನಿರ್ಣಯಿಸಿ, ಆ ಭವನಕ್ಕೆ ಶ್ರೀ ಚಾತುರ್ಮಾಸ್ಯ ಮಹಾವ್ರತಾಶ್ರಮವೆಂಬ ಶುಭನಾಮವನ್ನಿಟ್ಟು ಅಲ್ಲಿ ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು. ಗುರುದೇವರು ತಮ್ಮ ಪರಮ ಗುರುಗಳ ಆರಾಧನೆಯನ್ನು ನಿರ್ವಾಣ ಮಠದಲ್ಲಿ ವಿಧ್ಯುಕ್ತವಾಗಿ ಮಾಡಿಕೊಂಡು ನಂದ್ಯಾಲಕ್ಕೆ ಬಂದರು.

ನಂದ್ಯಾಲ ಪಟ್ಟಣದ ಎಲ್ಲಾ ಭಕ್ತರು ಅತ್ಯಂತ ಭಕ್ತಿಯಿಂದ ಪೂಜ್ಯ ಶ್ರೀಗುರುಗಳಿಗೆ 40 ವರ್ಷಗಳು ಆಗಿವೆಯಾದ್ದರಿಂದ, ಶಾಸ್ತ್ರೀಯವಾಗಿ ಶ್ರೀಗುರುದೇವರ ಜಯಂತ್ಯುತ್ಸವ–ಜನ್ಮದಿನೋತ್ಸವ ವಿಶೇಷವಾಗಿ ಮಾಡಿಯೇತೀರಬೇಕೆಂಬ ಭಕ್ತಿ ಶ್ರದ್ಧೆಗಳಿಂದ ಆ ಕಾರ್ಯವನ್ನು ವೈಭವದಿಂದ ಮಾಡಿ ಆನಂದಿಸಿದರು.

## ಹದಿನೈದನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ನಂದ್ಯಾಲ ಪಟ್ಟಣ 16–7–59

ಸ್ವಸ್ತಿ ಶ್ರೀ ವಿಕಾರಿ ನಾಮ ॥ಸಂ॥ ಆಷಾಢ ಶುದ್ಧ ಏಕಾದಶಿ ಗುರುವಾರ ಉಷಃಕಾಲದಲ್ಲಿ ಪ್ರಭಾತ ಸೇವಾನಂತರ ಯಥಾರೀತಿ ಪ್ರತಿವರ್ಷದಂತೆ ಸರ್ವ ವೈದಿಕ ಕಾರ್ಯಗಳೂ ನಡೆದು ಈಶಾವಾಸ್ಯೋಪನಿಷತ್ ಪ್ರವಚನ ಪ್ರಾರಂಭ ಪೂರ್ವಕ ಉದಯ 9 ಗಂ॥ ಮಂತ್ರ ಪುಷ್ಪ ಮಹಾಮಂಗಳವಾಯಿತು. ಸಾಯಂ ಸಮಯ ಪೂಜಾನುಷ್ಠಾನಾದಿಗಳಾದನಂತರ ಭಗವದ್ಗೀತೆ ಶ್ರೀ ಶಾಂಕರಭಾಷ್ಯ 2 ನೇ ಅಧ್ಯಾಯ 11 ನೆಯ ಶ್ಲೋಕದಿಂದ ಆರಂಭವಾಗಿ ಅವಿಚ್ಛಿನ್ನವಾದ ನಿಯಮಗಳಿಂದ ಈ ಬ್ರಹ್ಮಯಜ್ಞವು 16–7–59 ಮೊದಲು 12–11–59 ವರಿವಿಗೂ ಶಿವಪ್ರದವಾಗಿ ನಡೆದು, ಮಹಾನಂದಿಕ್ಷೇತ್ರದಲ್ಲಿ ದೀಕ್ಷಾವಿರಮಣಾದಿ ಕಾರ್ಯಗಳಿಂದ ಪೂರ್ಣವಾಯಿತು.

ಈ ವ್ರತ ಮಧ್ಯ ಕಾಲದಲ್ಲಿ ಪ್ರಸ್ಥಾನತ್ರಯ ಮಹಾಗ್ರಂಥ ರಚನಾತ್ಮಕವಾದ ಅಖಂಡ ಕೃಷಿಯು ನಡೆಯಿತು ಮತ್ತು ಜ್ಞಾನದರ್ಪಣ ಗ್ರಂಥ ರಚನೆ, ಶ್ರೀ ಜಗದ್ಗುರು ಶಂಕರ ಚರಿತ್ರೆಯನ್ನು ಪ್ರಸ್ಥಾನತ್ರಯ ಮಹಾಗ್ರಂಥಕ್ಕೆ ಮಂಗಳಾಚರಣಾತ್ಮಕವಾಗಿ ಮೊದಲು ಮುದ್ರಣಗೊಳಿಸುವಂತೆ ಮಾಡಿದರು. ಶ್ರೀಪೂಲಾಬಾಲ ಸುಬ್ಬಯ್ಯ ಶೆಟ್ಟಿ ಪುಣ್ಯದಂಪತಿಗಳು ಭಕ್ತಿಯಿಂದ ಮುದ್ರಣ ಮಾಡಿಸಿದರು. ಜ್ಞಾನದರ್ಪಣ ಗ್ರಂಥವೂ ಮುದ್ರಣವಾಯಿತು.

ಈ ಕಾರ್ಯಕ್ರಮದಲ್ಲಿ ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು, ಶ್ರೋ॥ ಬ್ರ॥ ಶಂಕರ ಶಾಸ್ತ್ರಿಗಳು; ಶ್ರೀ ನಿತ್ಯಾನಂದ ಸ್ವಾಮಿಗಳವರು ಕಾಳಹಸ್ತಿ, ಶ್ರೀ ಶಂಕರಾ

ನಂದ ಸ್ವಾಮಿಗಳು ಅಳ್ಳಗಡ್ಡೆ. ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು ಗಂಡಿಕ್ಷೇತ್ರ, ಶ್ರೀ ವಿದ್ಯಾನಂದ ಸ್ವಾಮಿಗಳು ಋಷೀಕೇಶ್, ಶ್ರೀ ಯೋಗಾನಂದ ಸ್ವಾಮಿಗಳು ಮೊದಲಾದ ಮಹಾತ್ಮರು ಇಲ್ಲಿಗೆ ದಯಮಾಡಿಸಿ ಆಧ್ಯಾತ್ಮಿಕ ಉಪದೇಶಗಳನ್ನು ಮಾಡಿದರು.

ಈ ಸಮಯದಲ್ಲಿಯೇ ಲತ್ತವಡದ ದೇಸಾಯಿ ಚಿರಂಜೀವಿ ವೀರಭದ್ರಪ್ಪ ಎನ್ನುವ ವಟುವಿಗೆ **ಶ್ರೀ ಜ್ಞಾನಾನಂದ** ಸ್ವಾಮಿಗಳೆನ್ನುವ ನಾಮವನ್ನು ಶ್ರೀಗಳವರು ಪ್ರಸಾದಿಸಿದರು.

ಈ ಪಂಚದಶ ಮಹಾವ್ರತಾಂತ್ಯದಲ್ಲಿ ಭಕ್ತ ಮಂಡಲಿಯ ಪರವಾಗಿ ಪೂಜ್ಯ ಗುರುಸನ್ನಿಧಿಗೆ ಸಮರ್ಪಿಸಿಕೊಂಡ ನಮೋ ವಾಕ್ಕುಸುಮಗಳು,

**ಆಧ್ಯಾತ್ಮಿಕ ಚಕ್ರವರ್ತಿೀ !** ತಾವು ಸಂದ್ಯಾಲ ಪೌರರ ಪೂರ್ವ ಜನ್ಮ ಸುಕೃತದಿಂದ ನಾಲ್ಕು ಮಾಸಗಳು ಬ್ರಹ್ಮಯಜ್ಞವನ್ನು ಜಯಪ್ರದವಾಗಿ ನಡೆಸಿದಿರಿ. ಶ್ರೀಮದ್ಭಗವದ್ಗೀತೆ ಉಪನಿಷತ್ತುಗಳಲ್ಲಿರುವ ಪರಮ ರಹಸ್ಯಗಳನ್ನು ಸವಿಮರ್ಶೆಯಾಗಿ ತಿಳಿಸಿ, ನಮ್ಮ ಅಜ್ಞಾನ ತಿಮಿರವನ್ನು ಹೋಗಲಾಡಿಸಿದಿರಿ. ಚಂದ್ರನು ಬೆಳದಿಂಗಳನ್ನು ಹೇಗೆ ಸಮವಾಗಿ ಕೊಡುವನೋ, ಅದೇ ವಿಧವಾಗಿ ಆತ್ಮಾಧಾರದಲ್ಲಿ ಈ ಸಮಸ್ತ ಭೂತಗಳು ಧರಿಸಲ್ಪಟ್ಟಿವೆ ಎಂದು ಕನಸು, ನಿದ್ರೆ, ಎಚ್ಚರಗಳನ್ನು ಅರಿಯುವಂಥಾ ತ್ರಿಗುಣಾತೀತ ವ್ಯಾಪಕ ಪರಬ್ರಹ್ಮಸ್ವರೂಪರೇ ನೀವೆಂದು ಶ್ರೋತೃಗಳಿಗೆ ದೃಷ್ಟಿಯನ್ನು ಕೊಟ್ಟು ಕೇಳುವಂತೆ ಮಾಡಿ ದೃಗಾತ್ಮಾನುಭವವನ್ನುಂಟು ಮಾಡಿದಿರಿ. ಅಸ್ಮದಾದಿಗಳು ಗ್ರಹಿಸಲು ಬಹು ಕ್ಲಿಷ್ಟವಾದರೂ ಅದನ್ನು ದ್ರಾಕ್ಷಾಪಾಕದಂತೆ ಶೋಧಿಸಿ ಜ್ಞಾನಸುಧೆಯನ್ನು ನಮ್ಮಗೆ ಸುರಿದುಕೊಳ್ಳುವಂತೆ ಮಾಡಿ, ನಿಜ ತೃಪ್ತಿಯನ್ನುಂಟು ಮಾಡಿದಿರಿ.

**ಓ ಅಪರ ಶುಕಯೋಗೀ !**

ಪರೀಕ್ಷಿನ್ಮಹಾರಾಜನು ಶಾಪಗ್ರಸ್ತನಾಗಿ 7 ದಿನಗಳಲ್ಲಿ ನಾನು ಸತ್ತು ಹೋಗುತ್ತೇನೆಂಬ ಮರಣ ಭಯದಿಂದ ದುಃಖ ಸಮುದ್ರದಲ್ಲಿ ಮುಳುಗಿದ್ದಾಗ, ಶುಕಯೋಗೀಂದ್ರರು ಅಲ್ಲಿಗೆ ದಯಮಾಡಿಸಿ ಭಾಗವತವನ್ನು ಸಾಂಗೋಪಾಂಗವಾಗಿ ವಿವರಿಸಿ ಆ ರಾಜನು '**ನಾನು ಸಾಯುವವನಲ್ಲ**' ಎನ್ನುವ ಅನುಭವವನ್ನು ಹೊಂದುವಂತೆ ಮಾಡಿದನೋ ಹಾಗೆಯೇ ತಾವು ಮೊದಲು 7 ದಿನಗಳಲ್ಲಿ ಅಂದರೆ ಈ ವ್ರತದಲ್ಲಿ 3 ಮಾಸಗಳವರೆಗೂ 'ಅಶೋಚ್ಯಾನನ್ವಶೋಚಸ್ತ್ವಂ'..........ನಾನುಶೋಚಂತಿ ಪಂಡಿತಾಃ' ಎಂಬುವ ಒಂದೇ ಶ್ಲೋಕವನ್ನು ಅತ್ಯದ್ಭುತವಾಗಿಯೂ ಅಪೂರ್ವವಾದ ಶ್ರುತಿ ಯುಕ್ತಿ ಅನುಭವಗಳಿಂದ ವಿವರಿಸುತ್ತಾ, ನಿತ್ಯ ಮುಕ್ತರಾದ ಅಮರ ಆತ್ಮಸ್ವರೂಪಿಗಳು ನೀವೆಂಬುವ ಜ್ಞಾನವನ್ನು ಕೊಟ್ಟಿರಿ. ಆ ಒಂದು ಶ್ಲೋಕದಿಂದಲೇ ಅವಿಚ್ಛಿನ್ನವಾಗಿ ಮೂರು ತಿಂಗಳು ಭಾಷ್ಯಾರ್ಥವನ್ನು

ಬೋಧಿಸಿದಿರೆಂದಾಗ, ತಮಗಿಂತಲೂ ಅನ್ಯವಾಗಿ ಶುಕಯೋಗೀಂದ್ರರು ಬೇರೆಲ್ಲಿರುವರು ? ಅಸಂಗಾನುಭವವಾದ ಆ ಜ್ಞಾನಾನುಭವ ಉಳ್ಳ ತಾವೇ ಅಪರ ಶುಕಯೋಗಿಗಳೆಂದರೆ ಅತಿಶಯೋಕ್ತಿಯಾಗಲಾರದು. ತಮ್ಮ ಮಹೋಪಕಾರವನ್ನು ಮರೆಯಲಾರೆವು. ಇವೇ ನಮ್ಮ ಅನಂತ ನಮೋ ವಾಕ್ಯಗಳು.

ಜ್ಞಾನಯೋಗೀಂದ್ರಾ ! ಈ ನವಯುಗದಲ್ಲಿ ಸಾಮಾನ್ಯ ಮಾನವನು ಅನುಭವಿಸುವ ಸುಖಗಳನ್ನು ಪೂರ್ವದ ರಾಜರು ಕೂಡಾ ಅನುಭವಿಸಲಿಲ್ಲವೆಂದು ಹೇಳುವವಕೆ ಈಗಿನ ವಿಜ್ಞಾನ ಶಾಸ್ತ್ರವೇ ತಾರ್ಕಾಣವು (ಸಾಕ್ಷಿ). ಇಂಥಾ ಪೀಡಿತ ಸಮಯದಲ್ಲಿ ಆನಂದವು ಅನ್ಯ ವಸ್ತುಗಳಲ್ಲಿಯೇ ಇದೆ ಎಂದು ಅಲ್ಲಾಡುತ್ತಾ ಅಪರ್ನಿಶೆಗಳು ಭ್ರಮಿಸುತ್ತಿರುವ ಸಮಗೆ, ಅವುಗಳಿಂದ ಲಭಿಸುವ ಆನಂದವು ನಶ್ವರವೆಂತಲೂ, ದುಃಖಭಾಜನವೆಂತಲೂ, ಅನಾತ್ಮ ವಿಷಯಗಳನ್ನು ಸರಿಮಾಡಿಕೊಳ್ಳುವುದೆಂಬುದು ಸಾಧ್ಯವಿಲ್ಲವೆಂತಲೂ, ಸಮವಾದ ಆತ್ಮನನ್ನು ತಾನೆಂದು ತಿಳಿಯುವದೇ ಇದರ ತತ್ತ್ವಾರ್ಥವೆಂತಲೂ, ಉತ್ತಮವಾದ ಉಪಮಾನೋಪಮೇಯಗಳಿಂದ ನಿರೂಪಿಸುತ್ತಾ, ಆತ್ಮಾಭಾಸವಾದ ಈ ಸುಖಗಳನ್ನು ಸುಖವೆಂದು ಭಾವಿಸಬೇಡವೆಂದೂ, ಸ್ವರೂಪವೇ ಸುಖ ನಿಲಯವೆಂದೂ ಅನುಭವಗಳಿಂದ ವಿಷಯವನ್ನು ಒಂದೇ ಸಮವಾಗಿ ದಾರದಲ್ಲಿ ಪೋಣಿಸಿದ ಮಣಿ ಮಾಲೆಯಂತೆ ಬೋಧಿಸಿದಿರಿ.

ಅದ್ವೈತ ಮತ ಪ್ರಬೋಧಕಾಚಾರ್ಯವರ್ಯಾ! ಆತ್ಮ ಸತ್ಯವು. ಅವಿನಾಶಿ, ವ್ಯಾಪಕ ; ಅದರಲ್ಲಿ ಈ ಜಗತ್ತು ರಜ್ಜು ಸರ್ಪ ಭ್ರಾಂತಿಯಂತ, ಇಂದ್ರಜಾಲದಂತೆ. ವ್ಯವಹಾರ ದೃಷ್ಟಿ ಗೋಚರವಾದ ಇದು ವಸ್ತುತಃ ಇಲ್ಲದ್ದು. ಸುವಿಚಾರ ಲೋಪ ಮಾತ್ರಾಸ್ತಿತ್ವದಿಂದ ಉಳ್ಳದ್ದಾಗಿ ನಿನ್ನನ್ನು ಮೋಸಗೊಳಿಸುತ್ತದೆಂದು. ಜಗನ್ಮಿಥ್ಯತ್ವ ನಿರೂಪಣೆಯ ಪೂರ್ವಕ ಬ್ರಹ್ಮ ಸತ್ಯವೆನ್ನುವ ಮಾತನ್ನು ಅನುಭವದಿಂದ ತಿಳಿಸುತ್ತಾ ಅಂತರ್ದೃಷ್ಟಿಯನ್ನು ಕೊಟ್ಟಿರಿ. ಅಷ್ಟೇ ಅಲ್ಲ ಕುಲ, ಮತ, ಕರ್ಮ, ಕ್ಷೇತ್ರ, ಅವತಾರ ಮೊದಲಾದುವು ಆತ್ಮನಲ್ಲಿ ಕಲ್ಪಿತಗಳಾಗಿ ತೋರುವವು. ಕರ್ಮ, ಭಕ್ತಿ, ಜ್ಞಾನಗಳು ಬೇರೆ ಬೇರೆಯಲ್ಲವೆಂತಲೂ, ಜ್ಞೇಯವಾದ ಪರಬ್ರಹ್ಮವೇ ನೀನೆಂದು ಬೋಧಿಸುವದಕ್ಕೋಸ್ಕರ ಉಂಟಾದ ಉತ್ತಮ ಕ್ರಮಗಳೇ ಇವಾಗಿವೆ ಎಂದು ಶ್ರುತಿ ಸಮ್ಮತವಾಗಿ ಬೋಧಿಸಿ, ಶ್ರೀ ಶಂಕರಾಚಾರ್ಯರು ನಡೆದ ಹಾದಿಯನ್ನನುಸರಿಸಿ ಅದ್ವೈತಮತ ಸಿದ್ಧಾಂತ ರಹಸ್ಯಗಳನ್ನು ನಮಗೆ ಬೋಧಿಸಿದಿರಿ. ಇವು ಬ್ರಹ್ಮಾನುಭವ ಇಲ್ಲದವರಿಗೆ ಮಾತನಾಡಲು ಬಾರದ ಅಪೂರ್ವ ವಿಷಯಗಳು. ಮೂರ್ತೀಭವಿಸಿದ ಜ್ಞೇಯ ಪರಬ್ರಹ್ಮ ಮೂರ್ತೀ ! ನಿಮಗೆ ವಂದನೆಗಳು.

ಗುರುದೇವಾ !

ತಮ್ಮ ಪ್ರಬೋಧೆಗಳು ಪಂಡಿತ ಪಾಮರರೆಲ್ಲರಿಗೂ ಬೇಕಾದ ಉತ್ತಮೋತ್ತಮ ತಾತ್ವಿಕ ಪ್ರಸಂಗಗಳು. ತಮ್ಮ ಉಪನ್ಯಾಸಗಳನ್ನು ಯಾರು ಶ್ರದ್ಧೆಯಿಂದ ಒಂದೆರಡು ಸಲ ಕೇಳುವರೋ ಅವರಿನ್ನು ಅನುದಿನ ಸನ್ನಿಧಿಗೆ ಶ್ರವಣಕ್ಕೆ ಬರುವುವನ್ನು ಬಿಡುವದಿಲ್ಲ. ತಮ್ಮ ವಾಕ್ಕುಗಳು ಸರ್ವಜನ ಸಮ್ಮತವಾದವುಗಳು. ನಿಷ್ಕಾಮ ಕರ್ಮ. ಭಕ್ತಿ. ಜ್ಞಾನ. ವೈರಾಗ್ಯ ವಿಷಯಗಳಿಂದ ಕೂಡಿ ಜ್ಞಾನವೇ ಪರಮಾವಧಿಯಾಗಿ ಬೆಳಗುತ್ತಿರುವವು. ಇಂಥಾ ಮಹಾನುಭಾವರಾದ ತಮ್ಮ ಕೃಪೆಗೆ ಪಾತ್ರರಾದ ನಂದ್ಯಾಲ ಪುರಭಕ್ತರಾದ ನಾವೆಲ್ಲರೂ ಧನ್ಯರೆಂದು ಬಿನ್ನವಿಸಿಕೊಳ್ಳುತ್ತಾ 15ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಭಕ್ತಮಂಡಲಿಯೆಲ್ಲರ ಪರವಾಗಿ ಈ ವಾಕ್ಕುಸುಮಗಳನ್ನು ಶ್ರೀ ಗುರುದೇವರ ಪಾದ ಪದ್ಮಗಳಲ್ಲಿ ಸಮರ್ಪಿಸುತ್ತಿದ್ದೇನೆ.

ಹೀಗೆ ಪುರಪಾಲಕೋನ್ನತ ಪಾಠಶಾಲಾಂಧ್ರ ಪಂಡಿತ
(ಸಂ) ಎ. ಭೋಗಿರೆಡ್ಡಿ.

ಶ್ರೀಗಳವರು ನಂದ್ಯಾಲಿನಿಂದ ಗಂಜಿಗುಂಟೆ ಶ್ರೀ ಮಠಕ್ಕೆ ತಮ್ಮ ಗುರುಗಳ ಪುಣ್ಯಾರಾಧನೆ ಕಾರ್ಯಕ್ರಮಕ್ಕಾಗಿ ದಯಮಾಡಿಸಿದರು. ಇಲ್ಲಿ ಗುರು ಕಾರ್ಯವು ಪ್ರತಿವರ್ಷದಂತೆ ಶಿವಪ್ರದವಾಗಿ ನಡೆದು ಪೂರ್ಣವಾಯಿತು. ಪ್ರತಿವರ್ಷದಂತೆ ಮಹಾತ್ಮರೆಲ್ಲರು ದಯಮಾಡಿಸಿದ್ದರು.

ಈ ಕಾರ್ಯಕ್ರಮವಾದ ನಂತರ ಶ್ರೀಗಳವರು ಬ್ರಹ್ಮನಿಷ್ಠೆಯಿಂದ ಇಲ್ಲಿಯೇ ಇದ್ದರು. ಬೇರೆ ಬೇರೆ ಪ್ರಾಂತಗಳಿಂದ ಕೆಲವರು ಭಕ್ತಾದಿಗಳು ಬಂದರು. ಅವರಿಷ್ಟ ಪ್ರಕಾರ ಶ್ರೀಗಳವರು ನಿಯಮವಾಗಿ ಪಾತಂಜಲಿ ಯೋಗಸೂತ್ರಗಳನ್ನು ಬೋಧಿಸಿದರು.

ಅಯ್ಯಗಳಿರಾ ! ಈ ಪಾತಂಜಲಿ ಯೋಗಶಾಸ್ತ್ರವು ಅಭ್ಯಾಸಿಗಳಾದ ಮುಮುಕ್ಷುಗಳಿಗೆ ಪವಿತ್ರ ಚಿತ್ತ ಸಂಸ್ಕೃತಿಯನ್ನು ಕೊಟ್ಟು ಜ್ಞಾನಕ್ಕೆ ಅಧಿಕಾರಿಗಳನ್ನಾಗಿ ಮಾಡುವುದು. ಆದಿಶೇಷಾವತಾರನಾದ ಶ್ರೀ ಪತಂಜಲಿ ಮಹರ್ಷಿ,ಲೋಕಕಲ್ಯಾಣಾರ್ಥವಾಗಿ ಮಾನವರಿಗೆ ಮನೋವಾಕ್ಕಾಯಗಳ ಶುದ್ಧ್ಯರ್ಥವಾಗಿ.

ಶ್ಲೋ॥ "ಯೋಗೇನ ಚಿತ್ತಸ್ಯ. ಪದೇನ ವಾಚಾಂ.
ಮಲಂ ಶರೀರಸ್ಯ ಚ ವೈದ್ಯಕೇನ ।
ಯೋಪಾಕರೋತ್ತಂ ಪ್ರವರಂ ಮುನೀನಾಂ
ಪತಂಜಲಿಂ ಪ್ರಾಂಜಲಿ ರಾನತೋಸ್ಮಿ ॥

ಹೀಗೆಂದು ಮನಶುದ್ಧಿಗೆ ಯೋಗಸೂತ್ರಗಳು, ವಾಕ್ಶುದ್ಧಿಗೆ ವ್ಯಾಕರಣ ಸೂತ್ರಗಳು, ಶರೀರ ಶುದ್ಧಿಗೆ ವೈದ್ಯಶಾಸ್ತ್ರ ಇವುಗಳನ್ನು ರಚಿಸಿದರು. ಇವುಗಳಲ್ಲಿ ಯೋಗ ಸೂತ್ರಗಳು 195 ಇರುವವು. ಮೊದಲನೆಯ ಪಾದ ಸಮಾಧಿ ಪಾದ, 51 ಸೂತ್ರ; 2 ನೆಯದು ಸಾಧನೆ ಪಾದ, 55 ಸೂತ್ರ; 3 ನೆಯದು ವಿಭೂತಿ

ಪಾದ, 56 ಸೂತ್ರ; 4 ನೆಯದು ಕೈವಲ್ಯ ಪಾದ, 33 ಸೂತ್ರ; ಒಟ್ಟು 195 ಸೂತ್ರಗಳು; 4 ಅಧ್ಯಾಯಗಳಾಗಿದೆ. ಈ ಯೋಗ ಮತಕ್ಕೆ ಮೂಲ ಸಾಂಖ್ಯ ಮತ.

**ಒಂದನೆಯದು ಸಮಾಧಿ ಪಾದ :** ಇದರಲ್ಲಿ ಚಿತ್ತ ನಿಶ್ಚಲತೆ, ಚಿತ್ತದ ಪಂಚ ಭೂಮಿಕೆಗಳು, ತದ್ವಿಕಾರಗಳು, ತನ್ನಿವೃತ್ತ್ಯುಪಾಯ, ಓಂಕಾರ, ತಜ್ಜಪ, ಧ್ಯಾನ, ಧಾರಣ, ಸಮಾಧಿ ಮುಂತಾದ ಚಿತ್ತಾಲಂಬನಪೂರ್ವಕವಾದ ಆಧ್ಯಾತ್ಮಿಕ ಸಾಧನೋಪಾಯಗಳು ಅನೇಕ ವಿಷಯಗಳು ಈ ಮೊದಲನೆಯ ಪಾದದಲ್ಲಿರುತ್ತವೆ.

**ಎರಡನೆಯದು ಸಾಧನ ಪಾದ :** ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನಾದಿ ಕ್ರಿಯಾಯೋಗಗಳು ವಿಸ್ಪಷ್ಟವಾಗಿ ವರ್ಣಿಸಲ್ಪಟ್ಟಿವೆ. ಅದರ ಅಭ್ಯಾಸವನ್ನು ತಿಳುಹಿ ಕಾಮ, ರಾಗ, ದ್ವೇಷಗಳಿಗೆ ಕಾರಣ ಅಜ್ಞಾನವೆಂತಲೂ ದೃಗ್ ದೃಶ್ಯ ವಿವೇಕಪೂರ್ವಕ ದ್ರಷ್ಟೃಜ್ಞಾನದಿಂದ ಅತತ್ತದ್ಬುದ್ಧಿ ದೂರವಾಗುವು ದೆಂತಲೂ ಈ ಅಭ್ಯಾಸ ಪಾಟವದಿಂದ ಸಾಧಕನು ಸತ್ಯ ಪ್ರತಿಷ್ಠನಾಗುವನೆಂಬ ಇತ್ಯಾದಿ ವಿಷಯಗಳು.

**ಮೂರನೆಯದು ವಿಭೂತಿ ಪಾದ :** ಚಿತ್ತವು ಧ್ಯೇಯವಾದ ಯಾವದೋ ಒಂದು ಪವಿತ್ರಾವಲಂಬನೆಯಿಂದ ನಿಲುಗಡೆಯನ್ಹೊಂದಲು ಯೋಗ ಸಿದ್ಧಿಗಳಾಗುವ ವೆನ್ನುವ ವಿಷಯಗಳು.

**ನಾಲ್ಕನೆಯದು ಕೈವಲ್ಯ ಪಾದ :** ಮಂತ್ರ ಔಷಧಿಗಳಿಂದಾಗಲಿ, ಜನ್ಮ ದಿಂದಾಗಲಿ, ತಪಸ್ಸಿನಿಂದಾಗಲಿ ಸಿದ್ಧಿಗಳು ಉಂಟಾಗುವುವೆಂಬುವ ಈ ಮೊದಲಾದ ಚಿತ್ತಭೂಮಿಕೆಗಳಲ್ಲಿಯ ವೈಚಿತ್ರ್ಯವನ್ನು ತಿಳಿಸುತ್ತಾ, ಸಮಾಧಿಯಿಂದ ಜ್ಞಾನವನ್ನು ಹೊಂದಬಹುದೆನ್ನುವ ವಿಷಯಗಳು ಹೇಳಲ್ಪಟ್ಟಿವೆ..." ಈ ಶಾಸ್ತ್ರವನ್ನು ಶ್ರೀಗಳ ವರು ಕ್ರಮವಾಗಿ ಕೆಲವು ಕಾಲ ಶ್ರವಣ ಮಾಡಿಸಿದರು. ಇದಕ್ಕೆ ಶ್ರೀ ವಿವೇಕಾನಂದ ಸ್ವಾಮಿಗಳು 'ರಾಜಯೋಗ'ವೆಂಬ ಹೆಸರಿನಿಂದ ಉತ್ತಮವಾದ ವಿವರವನ್ನು ಬರೆದಿರುತ್ತಾರೆ.

ಶ್ರೀಗಳವರು ಶ್ರೀ ಗೀತಾಜಯಂತಿಗೆ ನಂದ್ಯಾಲ ಶ್ರೀ ಚಾತುರ್ಮಾಸ್ಯ ಮಹಾವ್ರತಾಶ್ರಮಕ್ಕೆ ದಯಮಾಡಿಸಿ, ಅಲ್ಲಿ ವಿಚಾರಸಾಗರ ಗ್ರಂಥ ಪ್ರವಚನವನ್ನು ನಡೆಸುತ್ತಾ; ಪ್ರಸ್ಥಾನತ್ರಯ ಮಹಾಗ್ರಂಥ ರಚನಾಕಾರ್ಯದಲ್ಲಿ ಮಗ್ನರಾಗಿದ್ದರು. ಅಲ್ಲಿಗೆ ರಾಮದುರ್ಗದ ಡಾಕ್ಟರ ಬ್ರಹ್ಮಶ್ರೀ ಹನುಮಂತರಾಯರು 12–1–60 ನಂದ್ಯಾಲಿನಲ್ಲಿ ಶ್ರೀಗಳವರ ಸನ್ನಿಧಿಗೆ ಬಂದು, ಪ್ರೇಮದಿಂದ ಅಲ್ಲಿಯೇ ಇರುತ್ತಾ ಸ್ವಾಮೀ ! ತಾವು ಹೇಗೆ ಹುಟ್ಟಿದಿರೋ ಹಾಗೆ ಸಂಪೂಜ್ಯವಾಗಿದ್ದೀರಿ. ಇಲ್ಲಿಗೆ

40 ವರ್ಷಗಳಾದವು. ಅವಿಶ್ರಾಂತವಾಗಿ ನಿತ್ಯ ಪ್ರವಚನಾದಿ ಕಾರ್ಯಗಳಿಂದ ನಿಮ್ಮ ದೇಹವು ಏನೊಂದು ಕುಂದುಕೊರತೆಗಳಿಲ್ಲದೆ ಪ್ರಕಾಶಿಸುತ್ತಿದೆ. ನಿಮ್ಮಲ್ಲಿ ಸಾತ್ವಿಕ ಮಹಾಬಲವನ್ನು ಪರಮೇಶ್ವರನು ಸದಾ ಕೊಟ್ಟು ಕಾಪಾಡಲೆಂದು ಮತ್ತೂ ಮತ್ತೂ ಈಶ್ವರನನ್ನು ಪ್ರಾರ್ಥಿಸುತ್ತೇನೆ. ನಿಮ್ಮಿಂದ ಲೋಕ ಕಲ್ಯಾಣವಾಗಲೆಂದು ಹಾರೈಸಿ ಆ ಯಜಮಾನರು ಮುಂದೆ ದಯಮಾಡಿದರು.

ಅನಂತರ ಬೆಂಗಳೂರು, ಕರ್ನೂಲು, ಪ್ರೊದ್ದುಟೂರು, ಜಮ್ಮಲಮಡುಗು, ಹಾಲರ್ವಿ, ಚಿಂತಕುಂಟಿ, ಸಿರುಗಾಪುರ, ಆಲೂರು, ಬೆಳಗುಪ್ಪೆ, ಅನಕನ ಹಾಳು, ಗಂಗವರ, ಹನುಮಾಪುರ, ಸೊಲ್ಲಾಪುರ, ನಿಂಬಗಲ್ಲು, ಮೊಲಗವಲ್ಲಿ ಕಲ್ಯಾಣದುರ್ಗ ಮುಂತಾದ ಸ್ಥಾನಗಳಿಗೆ ಭಕ್ತರ ಭಾವಾನುಸಾರ ದಯಮಾಡಿಸಿ ಭಕ್ತಿ, ಜ್ಞಾನ, ವೈರಾಗ್ಯ ಪ್ರಬೋಧೆಗಳನ್ನು ಮಾಡಿದರು. ಮಹಾಶಿವರಾತ್ರಿಗೆ ನಿರ್ವಾಣ ಮಠಕ್ಕೆ ಬಂದರು.

## ಉಪದೇಶಾಮೃತ

ಮೋಕ್ಷ ಕಾರಣವಾದ ಅಜ್ಞಾನವು ಆತ್ಮಜ್ಞಾನ ಮಾತ್ರದಿಂದ ನಿವೃತ್ತಿಯಾಗುತ್ತೆ. ಆತ್ಮಜ್ಞಾನ ವಾಕ್ಯಾರ್ಥ ಪ್ರಬೋಧೆಯಿಂದ ಆಗುತ್ತೆ. ಆ ಪ್ರಬೋಧೆ ಯಾವರೋ ಕಾಮ, ರಾಗ, ದ್ವೇಷಗಳ ನಿಗ್ರಹಾಯತ್ತ ಚಿತ್ತಶುದ್ಧಿಯಿಂದುಂಟಾಗುವದು. ಚಿತ್ತ ಶುದ್ಧಿಯಾದರೋ ಕರಣತ್ರಯದಿಂದ ಆತನವಲಂಬಿಸಿದ ಶೀಲದ ಮಟ್ಟವ ನ್ನನುಸರಿಸಿ ಆತನನ್ನು ಅಧಿಕಾರಿಯನ್ನಾಗಿ ಮಾಡುವುದು.

ಕೇವಲ ಕಾಂತಾಕನಕ ವಸ್ತುವಾಹನಾದಿ ವಿಷಯ ಭೋಗಾನುಭವಗಳೇ ಜೀವಿತವ ಸಾರ ಸರ್ವಸ್ವವೆಂದಿದ್ದವರ ಧೈರ್ಯ, ವೀರ್ಯ, ಪ್ರಜ್ಞೆ, ತೇಜಸ್ಸು, ಸುಖ, ಶಾಂತಿ, ಯಶಸ್ಸು, ಸಡಲಿ ಹೋಗುವವು.

ಸದ್ಭಕ್ತಿ ಭಾವನೆಯುಳ್ಳ ನಿಜವಾದ ಸಾಧಕನ ಕಾರ್ಯಗಳನ್ನು ಮಾಯೋಪಾಧಿಕನಾದ ಈಶ್ವರನು ನೋಡಿಕೊಳ್ಳುವನು. ಗುರುವು ಜ್ಞಾನವನ್ನೀಯುವನು. ಮುಮುಕ್ಷು ಭಕ್ತನು ಧನ್ಯನಾಗುವನು.

ಬ್ರಹ್ಮಚರ್ಯವೆಂದರೆ ಸರ್ವಾಂಗಗಳಲ್ಲಿಯೂ ಅದು ಪ್ರತಿಷ್ಠಿತವಾಗಿದೆ. ಆದ್ದರಿಂದ ಸರ್ವೇಂದ್ರಿಯಗಳಿಂದಲೂ ಸತ್ಯವನ್ನು ಆರಾಧಿಸಬೇಕು. ಸತ್ಯವೇ ಭಗವಂತನ ರೂಪ, ಧರ್ಮವೇ ಆತನ ಅಂಗಾಂಗಗಳು. ಶೀಲವೇ ಪುರುಷಾರ್ಥದ ಮೂಲ. ಧರ್ಮ, ಶ್ರುತಿಯನ್ನು ಯಾವಾಗಲೂ ಮೀರಬಾರದು.

ವಸ್ತುತಃ ಮುಕ್ತಿಯೆಂಬುವದು ನಿನಗೆ ಬರುವದಲ್ಲ ; ಬಂಧವು ನಿನಗಿಲ್ಲ. ಭ್ರಮೆಯಿಂದ ಹಾಗೆ ಭಾವಿಸಿದ್ದೀಯಿ, ವಿಚಾರಿಸಿ ನಿಷ್ಠೆಯಿಂದ ನಿಂತು ನೋಡು,

ನೀನೆ ನಿತ್ಯ ಮುಕ್ತನು. ಪರಶಿವನಾಗಿರುವೆ. ಮನೋ ದೌರ್ಬಲ್ಯವನ್ನು ಬಿಡು: ಸದ್ಗುರು ಸಚ್ಛಾಸ್ತ್ರಗಳ ಶಿಕ್ಷಣೆಯನ್ನು ಚೆನ್ನಾಗಿ ಹೊಂದು. ನಿನಗೆ ಮುಕ್ತಿ ಚಿರಸಿದ್ಧ ವಾಗಿದೆ.

ಆತ್ಮಜ್ಞಾನಾರ್ಥವಾಗಿ ಜೀವಿಸು. ನಿನ್ನ ಸಮಸ್ತ ಕಾರ್ಯಗಳನ್ನು ನಾನೇ ನೋಡಿಕೊಳ್ಳುವೆನು. ಐಹಿಕ ವಾಂಛಾ ಮಧುಪಾನ ಮತ್ತನಾಗಬೇಡ. ನೀನು ಹುಟ್ಟುವುದಕ್ಕೆ ಮುಂಚೆಯೇ ಸರ್ವವೂ ಸಿದ್ಧವಾಗಿದೆ: ಚಿಂತಿಸಬೇಡ. ಸದಾ ಶಿವನಾಗಿರು.

ಆತ್ಮಾನುಭವ ದೃಷ್ಟಿಯನ್ನು ನೀನು ಪಡೆದರೆ ಪಂಚಭೂತಗಳೇ ನಿನ್ನ ಸೇವೆ ಯನ್ನು ಮಾಡುವವು, ನೀನು ದೇವರಾಗಿದ್ದು ದೇವರಾಗುವೆ.

ಸರ್ವಕ್ಷೇತ್ರಗಳಲ್ಲಿರುವ ಕ್ಷೇತ್ರಜ್ಞ ಪರಮಾತ್ಮ ಏಕ ಅದ್ವಿತೀಯ. ಆದರೇನು ಈ ಕ್ಷೇತ್ರಾಧ್ಯಾಸವನ್ನು ಬಿಡು. ಸರ್ವಕ್ಷೇತ್ರಾಧಿ ವಾಸನಾದ ಪರಮಾತ್ಮನೇ ನೀನು.

ಸತ್ಯ ಪಥದಲ್ಲಿ ಎಷ್ಟು ಆತಂಕಗಳು ಬಂದರೂ ಹೆದರದೆ ನಿರ್ವೈರ ಬುದ್ಧಿ ಯಿಂದ ಚರಿಸು. ಒಳ್ಳೆಯವನಾದ ನಿನಗೆ ಕಾಲ ಪ್ರಭಾವದಿಂದ ಪ್ರಾರಬ್ಧ ಕರ್ಮ ಕ್ಷಯಾರ್ಥವಾಗಿ ಕಷ್ಟಗಳು ಬರುತ್ತವೆ. ಅವುಗಳನ್ನು ಈಶ ಪ್ರಸಾದವಾಗಿ ಭಾವಿಸು. ಪ್ರತೀಕಾರ ಬುದ್ಧಿಯನ್ನು ಮಾಡಬೇಡ. "ಮಾಭೀಃ" "ಅಮೃತಸ್ಯ ಪುತ್ರಾಃ"

ದೇಹಾತ್ಮ ಬುದ್ಧಿಯನ್ನು ದೂರೀಕರಿಸಲು ಸಂಪೂರ್ಣ ಗುರು ಬಲ ಬರುತ್ತೆ. ಮುಂದೆ ಬರುವದನ್ನು ಚಿಂತಿಸದೆ. ಹಿಂದೆ ಆಗಿಹೋದದ್ದನ್ನು ಆಲೋಚಿಸದೆ. ವರ್ತಮಾನವನ್ನು ಅನಾಯಾಸವಾಗಿ ಶಿವಪ್ರಸಾದವೆಂದು ಅನುಭವಿಸು. ತಪ್ಪದೆ ನಿನಗೆ ನಿಜಶಾಂತಿಯಾಗುವದು. "ಭೂತಂ ಭವಿಷ್ಯದಭಜದ್ಯಾತಿ..."

ಶ್ರೀಗಳವರು ಆಶ್ರಮದಲ್ಲಿ ನಿಜನಿಷ್ಠೆಯಿಂದಿರುತ್ತಿರಲು ಭಕ್ತಾಗ್ರೇಸರರು. ರಾಮಾಯುಕ್ತ ಚಿತ್ತರು, ಅನೇಕ ಧರ್ಮ ಸಂಸ್ಥೆಗಳನ್ನು ಸ್ಥಾಪಿಸಿದ, ಗುರುದೈವ ಭಕ್ತಿ ಯುಳ್ಳ ಶ್ರೀ ಸೇಗು ಕೃಷ್ಣದಾಸು ಸ್ವಾಮಿಗಳವರಿಂದ ಪತ್ರ ಬಂತು. 'ಪೂಜ್ಯ ಸ್ವಾಮೀ ! ಅಗರಂ ಶ್ರೀನಿವಾಸಾಶ್ರಮದಲ್ಲಿ 3-3-60 ರಿಂದ 9-3-60 ವರೆವಿಗೂ ಸಪ್ತಋಷಿಗಳ ಪೂಜೆ ಜರುಗುವಂತೆ ನಿರ್ಧರಿಸಿ ಮಹಾತ್ಮರಾದ ಗುರುಗಳನ್ನು ಆಹ್ವಾನಿಸಿ ಸಪ್ತಋಷಿಗಳ ನಾಮದಿಂದ ಪೂಜಿಸಬೇಕೆಂಬುದಾದ ನಮ್ಮ ಸದ್ಭಾವನೆ ಭಕ್ತಿ. ಆದ್ದರಿಂದ ಸಪ್ತಋಷಿಗಳಲ್ಲಿ ತಮ್ಮನ್ನು ಒಬ್ಬ ಋಷಿಗಳಾಗಿ ಭಾವಿಸಿದ್ದೇವೆ. ತಪ್ಪದೆ ದಯಮಾಡಿಸಬೇಕೆಂಬುದಾಗಿ ಪ್ರಾರ್ಥನೆ' ಎಂದು ಬರೆಯಲ್ಪಟ್ಟಿತ್ತು. ಆದ್ದರಿಂದ ಪೂಜ್ಯ ಶ್ರೀಗಳವರು ಆದವಾನಿಗೆ ದಯಮಾಡಿಸಿ ಅಲ್ಲಿಂದ ಭಕ್ತಾದಿ ಗಳೊಡನೆ ಕೂಡಿ ಅಗರಂ ಶ್ರೀನಿವಾಸಾಶ್ರಮ ಸೇರಿದರು.

ಯಥಾವಿಧಿ ಸಪ್ತಋಷಿಗಳ ಪೂಜೆಗೆ ಮಹರ್ಷಿ ಶ್ರೀಮಲಯಾಳ ಸ್ವಾಮಿಗಳು ಬಂದಿದ್ದರು. ಅವರೇ ವಶಿಷ್ಠ ಮಹರ್ಷಿ ಎಂಬುದಾಗಿ ಮಹಾತ್ಮರಾದ ಗುರುಗಳ ಪೂಜೆ ಮತ್ತು ಅವರ ಪ್ರಬೋಧೆಗಳು ಅಪೂರ್ವವಾಗಿ ವೈಭವೋಪೇತವಾಗಿ ನಡೆಯಿತು. ಭಕ್ತಾದಿಗಳು ಅಸಂಖ್ಯಾತವಾಗಿ ನೆರೆದಿದ್ದರು. ಕಾರ್ಯವು ಮಂಗಳ ಪ್ರದವಾಗಿ ನಡೆದು ಪೂರ್ಣವಾಯಿತು. ನಮ್ಮ ಶ್ರೀಗಳವರು ಆದವಾನಿ ಶ್ರೀ ಚಾತುರ್ಮಾಸ್ಯ ವ್ರತಾಶ್ರಮಕ್ಕೆ ದಯಮಾಡಿಸಿ ಶ್ರೀ ಉಮಾಮಹೇಶ್ವರ ಪಾಠ ಶಾಲೆಯ ವಾರ್ಷಿಕೋತ್ಸವವನ್ನು ವೈಭವವಾಗಿ ನಡೆಸಿದರು. ಅನಂತರ ಶ್ರೀಮನ್ನಿ ಜಗುಣ ಶಿವಯೋಗಿಗಳ ಷಟ್ಶಾಸ್ತ್ರವೆಂಬ ಗ್ರಂಥವನ್ನು ದೀರ್ಘಕಾಲ ಪ್ರಾತಃ ಸಮಯದಲ್ಲಿ ಪ್ರವಚಿಸಿದರು. ಸಾಯಂಕಾಲ ಭಗವದ್ಗೀತಾ ಪ್ರವಚನೆಯನ್ನು ನಡೆಸಿದರು.

ಇಲ್ಲಿಂದ ಶ್ರೀಗಳವರು ಉತ್ತರದಲ್ಲಿ ಶ್ರೀ ಶಂಕರ ಜಯಂತಿ ಮಹೋತ್ಸ ವಕ್ಕೆ ದಯಮಾಡಿಸಿ ಕಾರ್ಯವನ್ನು ಪೂರ್ಣಗೊಳಿಸಿದರು. ಕರ್ನೂಲ್, ಪುಲಿ ಮದ್ದಿ, ಪೋಲೂರು, ಗಡಿಗರೇವುಲ, ಚಿಂದುಕೂರು ಮುಂತಾದ ಸ್ಥಾನಗಳಿಗೆ ಹೋಗಿ, ಆಮೇಲೆ ಶ್ರೀ ನಿರ್ವಾಣ ಮಠದಲ್ಲಿ ಪರಮಗುರು ಪೂಜಾಕಾರ್ಯವನ್ನು ಮಾಡಿಕೊಂಡು ನಂದ್ಯಾಲ ಶ್ರೀ ಚಾತುರ್ಮಾಸ್ಯವ್ರತಾಶ್ರಮಕ್ಕೆ ದಯಮಾಡಿಸಿದರು. ಭಕ್ತರು ಯಥಾವಿಧಿಯಾಗಿ ಶ್ರೀಗಳವರ ಜಯಂತ್ಯುತ್ಸವವನ್ನು ಪರಮ ಮಂಗಳ ಪ್ರದವಾಗಿ ಮಾಡಿದರು. ಆಗ ಅಲ್ಲಿಯವರೆಲ್ಲರು ಕೂಡಿ ಸ್ವಾಮೀ ! ಗುರುದೇವಾ! ಗತವತ್ಸರದಂತೆ ಈ ವರ್ಷವು, ಷೋಡಶ ಶ್ರೀ ಚಾತುರ್ಮಾಸ್ಯ ಮಹಾವ್ರತ ವನ್ನು ನಂದ್ಯಾಲ ಆಶ್ರಮದಲ್ಲಿಯೇ ನಡೆಸಬೇಕೆಂದು ಬಿನ್ನವಿಸಿಕೊಂಡು ಫಲ ಮಂತ್ರಾಕ್ಷತೆಯನ್ನು ಪಡೆದು ಅಲ್ಲಿಯೇ ಮಹಾವ್ರತ ನಡೆಸಲು ನಿರ್ಧರಿಸಿದರು.

## ಹದಿನಾರನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ನಂದ್ಯಾಲ ಪಟ್ಟಣ 4-7-60

ಶ್ರೀ ಶಾರ್ವರಿ ನಾಮ ॥ಸ॥ ಆಷಾಢ ಶುದ್ಧ ಏಕಾದಶಿ ಸೋಮವಾರ ಬ್ರಹ್ಮ ಮುಹೂರ್ತದಲ್ಲಿ ಯಥಾವಿಧಿ ಎಂದಿನಂತೆ ವೈದಿಕ ಕಾರ್ಯಕ್ರಮವೆಲ್ಲ ವಿಧ್ಯುಕ್ತ ವಾಗಿ ನಡೆದು ಉದಯ ಉಪನಿಷದ್ಭಾಷ್ಯ ಪ್ರಾರಂಭವಾಗಿ, ಸಾಯಂಕಾಲ ಯಥಾ ರೀತಿ ಭಗವದ್ಗೀತಾ ಶಾಸ್ತ್ರ ಪ್ರವಚನವಾಗಿ ಮಂಗಳವಾಯಿತು. ಈ ವಿಧದಿಂದ ಅಕುಂಠಿತವಾಗಿ ಶ್ರೀ ಗುರುಕೃಪೆಯಿಂದ 4–7–60 ಮೊದಲು 31–10–60 ವರಿ ವಿಗೂ ನಿತ್ಯ ನಿಯಮ ಸಂಪನ್ನವಾಗಿ ಭಾಷ್ಯ ಶಾಂತಿಯಿಂದ ವ್ರತ ಮಹಾಕಾರ್ಯವು ಸಾಂಗಮಂಗಳವಾಯಿತು.

ಈ ಮಹಾವ್ರತದಲ್ಲಿ ನಡೆದ ವಿಶೇಷ ಕಾರ್ಯಗಳು ನಾಲ್ಕು ಮಾಸಗಳು ನೈಮಿತ್ತಿಕವಾಗಿ ಎಲ್ಲಾ ಭಕ್ತರು ಪಟ್ಟಣ ಮತ್ತು ಗ್ರಾಮಗಳವರು ಕೂಡ ಶ್ರೀ ಶಿವ ಪಂಚಾಕ್ಷರ ಮಹಾಮಂತ್ರ ಜಪವನ್ನು ನಿಯಮವಾಗಿ ಒಬ್ಬೊಬ್ಬರು 6 ಲಕ್ಷ ಜಪ ಮಾಡುವಂತೆ ಗುರುಗಳು ಆದೇಶಿಸಿದರು. ಮತ್ತು ವೇದಾಂತ ಪರಿಭಾಷೆ ಕೋಶ ವಾದ ಜ್ಞಾನದರ್ಪಣ ಗ್ರಂಥವನ್ನು ವಿಧಿಯಾಗಿ ಪಠಿಸಬೇಕೆಂದು ನಿಯಮಿಸಿ ನೂರಾರು ಜನ ಜಿಜ್ಞಾಸುಗಳಿಗೆ ಪ್ರಶ್ನೋತ್ತರ ರೂಪವಾಗಿರುವ ಆ ಗ್ರಂಥ ಪರೀಕ್ಷೆ ಗಳನ್ನಿಟ್ಟು ಉತ್ತೀರ್ಣರಾದವರಿಗೆ ಪ್ರಮಾಣ ಪತ್ರಗಳನ್ನು ಅನುಗ್ರಹಿಸಿದರು.

ಗತ ॥ಸಂ॥ ಶ್ರೀ ಚಾತುರ್ಮಾಸ್ಯ ವ್ರತಾರಂಭದಲ್ಲಿ ಪ್ರಾರಂಭಿಸಿದ ಪ್ರಸ್ಥಾನ ತ್ರಯ' 'ಸುಧಾಖ್ಯ ವ್ಯಾಖ್ಯಾಸಮೇತ' ಎನ್ನುವ ಮಹಾಗ್ರಂಥರಚನೆ ಪೂರ್ಣವಾಗು ವಿಕೆ. 'ಜಗದ್ಗುರು ಶ್ರೀ ಶಂಕರ ಚರಿತ್ರೆ' ಮುದ್ರಣವಾಗಿ ಆಶ್ವಯುಜ ಶುದ್ಧ ವಿಜಯದಶಮಿ ಗ್ರಂಥಾವಿಷ್ಕರಣ ನಡೆದು ಭಕ್ತರಿಗೆ ಅನುಗ್ರಹಿಸಲಾಯಿತು.

ಶ್ರೀ ಪೋಲಾಬಾಲ ಸುಬ್ಬಯ್ಯ ಶ್ರೇಷ್ಠಿಯವರು ಮಹಾಪ್ರಸಾದರೂಪ ವಾಗಿರುವ ಜಗದ್ಗುರು ಶಂಕರ ಚರಿತ್ರೆಯನ್ನು ಕಳುಹಿಸಬೇಕಾದವರಿಗೆಲ್ಲಾ ಕಳುಹಿಸಿ ಕೊಟ್ಟರು. ಅದಕ್ಕೆ ಮಹನೀಯರು ಉತ್ತಮ ಪಂಡಿತರು ಅನೇಕ ಶುಭ ಸಂದೇಶಗ ಳನ್ನು ಕಳಿಸಿದರು. ಅವುಗಳನ್ನು ಶ್ರೀಜಗದ್ಗುರು ಶಂಕರ ಚರಿತ್ರೆಯಲ್ಲಿ ನೋಡ ಬಹುದು.

## ಗಾಯತ್ರೀ ಮಂತ್ರದ ಸಂಗ್ರಹಾರ್ಥ

ಪೂಜ್ಯ ಸ್ವಾಮಿ ! ಗಾಯತ್ರೀ ಮಂತ್ರದ ಅರ್ಥವನ್ನು ಕೇಳಲು ಬಯಸುತ್ತೇ ವೆಂದು ಭಕ್ತಿಯಿಂದ ಒಬ್ಬರು ಕೇಳಿದರು. ಅದಕ್ಕೆ ಪೂಜ್ಯ ಶ್ರೀಗಳವರು ಅಪ್ಪಾ ಯಜ ಮಾನರೇ! ಗಾಯತ್ರಿಯಲ್ಲಿ ಮೂರು ವ್ಯಾಹೃತಿಗಳಿವೆ. ಬ್ರಹ್ಮ ಮೊದಲು ತಪ ವನ್ನಾ ಚರಿಸಲು ಆತನಿಂದ ಓಂ ಭೂಃ, ಓಂ ಭುವಃ, ಓಂ ಸುವಃ ಎಂದು ಜೀವಾಹಂಕೃತಿ ವ್ಯವಹಾರ ಸ್ಥಾನಗಳು ಈ ಮೂರು ಉಂಟಾದವು; ಇವೇ ಮೂರು ಲೋಕಗಳು. ಭೂರ್ಲೋಕವೆಂದರೆ ಪೃಥಿವಿ ಸಂಬಂಧವಾದದ್ದು; ಭುವರ್ಲೋಕವೆಂದರೆ ಇದಕ್ಕಿಂ ತಲೂ ಸೂಕ್ಷ್ಮವು. ಸ್ಥೂಲ ಸಂಬಂಧ ಉಳ್ಳದ್ದು; ಸ್ವರ್ಲೋಕವೆಂದರೆ ಸ್ವರ್ಗ ಮತ್ತು ಇವಕ್ಕೆ ಆಚೆ ಮಹರ್ಲೋಕ, ತಪೋಲೋಕ, ಜನಲೋಕ. ಸತ್ಯಲೋಕ ವೆಂದು ನಾಲ್ಕು ಇರುವವೆಂತಲೂ, ಜೀವನು ತನ್ನ ಪುಣ್ಯ ವಿಶೇಷದಿಂದ ಸ್ವೇಚ್ಛೆ ಯಾಗಿ ಆಯಾ ಭೋಗಗಳನ್ನು ಅನುಭವಿಸುವನೆಂದು ಹೇಳಲ್ಪಡುತ್ತದೆ. ಮೇಲಿನ ಲೋಕಗಳ ಕೆಳಗೆ ಪಾತಾಳ, ಮಹಾತಲ, ರಸಾತಲ. ತಲಾತಲ. ಸುತಲ. ವಿತಲ. ಅತಲವೆಂದು ಏಳು ಲೋಕಗಳು, ಎಲ್ಲವೂ ಕೂಡಿ ಹದಿನಾಲ್ಕೆಂತಲೂ, ಇದರಲ್ಲಿ ಓಂ ಭೂಃ, ಓಂ ಭುವಃ, ಓ ಸುವಃ, ಓಂ ಜನಃ, ಓಂತಪಃ, ಓಂ ಸತ್ಯಂ ಅನ್ನುವ ಈ

7 ವ್ಯಾಹೃತಿಗಳೆಂದೂ ಹೇಳಲ್ಪಡುತ್ತವೆ. ಗಾಯತ್ರೀ ಮಂತ್ರವನ್ನು ಧ್ಯಾನಿಸುವಾಗ ಮೊದಲು ಈ ಮೂರು ವ್ಯಾಹೃತಿಗಳನ್ನು ಹೇಳುವರು. ಇವೇ ಜಾಗ್ರತ್ಸ್ವಪ್ನ ಸುಷುಪ್ತ್ಯಾವಸ್ಥೆಗಳೆಂತಲೂ, ಇದಕ್ಕೆ ಅತೀತವೂ ಆಧಾರವೂ ಆಗಿರುವುದೇ ಆತ್ಮ ನೆಂದೂ ದೊಡ್ಡವರು ಅರ್ಥವನ್ನು ಸೂಚಿಸುವರು. ಇವು ಪ್ರಣವದಲ್ಲಿ ಲಯ ವಾಗುವವು.

ಪ್ರತಿ ಮಂತ್ರಕ್ಕೂ ಋಷಿ, ದೇವತೆ, ಛಂದಸ್ಸು, ಬೀಜ, ಶಕ್ತಿ, ಕೀಲಕ ಎಂಬ ಷಡಂಗಗಳಿರುತ್ತವೆ ಮತ್ತು ಧ್ಯಾನ ಇತ್ಯಾದಿ ನಿಯಮಗಳು ಇರುತ್ತವೆ. ಆದ್ದ ರಿಂದ 'ಗಾಯಂತಂ ತ್ರಾಯತೇ ಇತಿ ಗಾಯತ್ರೀ' ಯಾವದು ಪುರಶ್ಚರಣ ಮಾಡುವ ತನ್ನನ್ನು ಕಾಪಾಡುವದೋ ಅದು ಗಾಯತ್ರಿ ಎಂದು ಹೇಳುವರು. ಗಾಯತ್ರಿ ಮಂತ್ರವನ್ನು ಅರಿತು ಅನುಷ್ಠಿಸಿದರೆ ಅಂತಃಕರಣ ದೋಷಗಳು ನಿವಾರಣೆಯಾಗು ವವು. ನಿಷ್ಕಾಮವಾಗಿ ಧ್ಯಾನಿಸಿದರೆ ಆತ್ಮಜ್ಞಾನವಾಗುವದು. ಈ ಮಂತ್ರ ವನ್ನು ಸಾವಿತ್ರೀ ಮಂತ್ರವೆಂದು ಕೂಡಾ ಕರೆಯುವರು. ಸವಿತೃ ದೇವತಾರ್ಪಣ ವಾಗಿದ್ದುದರಿಂದ ಇದಕ್ಕೆ ಈ ನಾಮವು ಬಂತು. ಈ ಮಂತ್ರವು ಸೂರ್ಯ ಪ್ರಾರ್ಥನಾ ತ್ಮಕವಾಗಿದೆ. ಸವಿತ ಎಂದರೆ ಸೂರ್ಯ ಭಗವಂತನೆಂದರ್ಥ. ಈ ಮಂತ್ರವು ಗಾಯತ್ರೀ ಛಂದಸ್ಸಿನಲ್ಲಿದೆ. ಈ ಛಂದಸ್ಸು 3 ಪಾದಗಳು ಉಳ್ಳದ್ದಾಗಿ ಪ್ರತಿಪಾದವು 8 ಅಕ್ಷರಗಳಿಂದ ಒಪ್ಪುತ್ತಿರುವದು.

ಓಂ ತತ್ಸವಿತುರ್ವರೇಣ್ಯಂ ।
ಭರ್ಗೋ ದೇವಸ್ಯ ಧೀಮಹಿ ।
ಧಿಯೋಯೋನಃ ಪ್ರಚೋದಯಾತ್ ॥

ಇದೇ ಮಂತ್ರ. ಇದರಲ್ಲಿ ಮೂರು ಪಾದಗಳು. ಮೊದಲನೇ ಪಾದದಲ್ಲಿ 7ಅಕ್ಷರ ಗಳೇ ಇದ್ದಾವಲ್ಲಾ ಎಂದರೆ ಹಾಗಲ್ಲ. 'ಣ್ಯಂ' ಎನ್ನುವ ಶಬ್ದವು 'ಣಿ. ಯಂ'ಎಂದು ತಿಳಿಯಬೇಕು. ವರೇಣ್ಯಂ–ಅಥವಾ ಓಂಕಾರಯುಕ್ತವಾಗಿಯಾದರೂ ಗಣಿಸ ಬೇಕು. ಶ್ರೀ ಶಂಕರರು ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ 'ಣ್ಯಂ' ಎನ್ನುವ ಅಕ್ಷರವನ್ನು 'ಣಿ, ಯಂ' ಎಂದು ವಿಭಜಿಸಿ ಹೇಳಿದ್ದಾರೆ. ಇದು ತಪ್ಪಲ್ಲವೆಂತಲೂ ಛಂದೋಭಂಗವಾಗುವದಿಲ್ಲವೆಂತಲೂ ತಿಳುಹಿಸಿದ್ದಾರೆ.

ಈ ಮಂತ್ರಕ್ಕೆ ಋಷಿ, ರಾಜರ್ಷಿ ವಿಶ್ವಾಮಿತ್ರನು, ಈ ಮಂತ್ರವು ಶುಕ್ಲಯ ಜುರ್ವೇದದಲ್ಲಿಯೂ, ಕೃಷ್ಣಯಜುರ್ವೇದದಲ್ಲಿಯೂ ಇದೆ. ಋಗ್ವೇದದ ಮೂರನೇ ಮಂಡಲದಲ್ಲಿ 60 ನೆಯ ಸೂಕ್ತದಲ್ಲಿ 10 ನೆಯ ಮಂತ್ರವಾಗಿದೆ. ಇದನ್ನು ಓಂಕಾರ ಯುಕ್ತವಾಗಿ ವ್ಯಾಹೃತಿಗಳಿಂದ ಕೂಡಿಯೂ ಹೇಳಬಹುದು. ಮತ್ತು ಓಂ ಭೂರ್ಭುವ

ವಸ್ಸುವಃ. ಓಂ ತತ್ಸವಿತುರ್ವರೇಣ್ಯಂ ಎಂತಲೂ, ಎರಡನೆಯ ಪಾದಕ್ಕೂ ಓಂಕಾರವನ್ನು ಸೇರಿಸಿ ಹೇಳಬಹುದು ಅಥವಾ ಬಿಟ್ಟು 'ತತ್ಸವಿತುರ್ವರೇಣ್ಯಂ ! ಎಂದು ಹೇಳಿದರೂ ತಪ್ಪಲ್ಲ.

ಓಂ ಭೂರ್ಭುವಃ ಸುವಃ ತತ್ಸವಿತುರ್ವರೇಣ್ಯಂ!
ಭರ್ಗೋ ದೇವಸ್ಯ ಧೀಮಹಿ ।
ಧಿಯೋಯೋನಃ ಪ್ರಚೋದಯಾತ್ ॥

ಈ ಮಂತ್ರಕ್ಕೆ ಮೊದಲು ಓಂಕಾರವಿದೆ. ಓಂ ಅನ್ನುವದು ಪರಮೇಶ್ವರನ ಸರ್ವೋತ್ತಮವಾದ ನಾಮವು. 'ತಸ್ಯವಾಚಕಃ ಪ್ರಣವಃ' ಆ ಪರಬ್ರಹ್ಮಕ್ಕೆ ಓಂ ತತ್‌ಸತ್ ಎಂಬುವ ನಾಮ ನಿರ್ದೇಶವಿದೆ. ಈ ಓಂಕಾರ ಅ, ಉ, ಮ ಎಂದು 3 ಅಕ್ಷರಗಳಿಂದೊಪ್ಪುತ್ತಿದೆ. ಇದೇ ಪರಮೇಶ್ವರನ ಅನೇಕ ನಾಮಗಳಾಗಿಯೂ ಬೆಳಗುತ್ತಿದೆ. ಅಕಾರವೇ ವಿರಾಟ್, ಉಕಾರವೇ ಹಿರಣ್ಯಗರ್ಭನು, ಮಕಾರವೇ ಅವ್ಯಾಕೃತನು. ಈ ಮೂರರ ಲಯಾಧಿಷ್ಠಾನವೇ ತುರೀಯವಾದ ಬ್ರಹ್ಮ. ಅಂದರೆ ಓಂಕಾರವು ಪರಮಾತ್ಮನ ಅಭಿಧಾನವಾಗಿದೆ. 'ಓಮಿತ್ಯೇತದಕ್ಷರ ಮುದ್ಗೀತ ಮುಪಾಸೀತ' (ಛಾಂದೋಗ್ಯ) 'ಸರ್ವೇವೇದಾಯತ್ಪದ ಮಾಮನಂತಿ' (ಕಠ) ಇತ್ಯಾದಿ ಉಪನಿಷತ್ತುಗಳು ವರ್ಣಿಸುತ್ತಿವೆ. ಭೂಃ, ಭುವಃ ಸುವಃ,– ಭೂಃ ಎಂದರೆ ಪ್ರಾಣವಾಚಕವಾದ, ಸರ್ವಜೀವನಾಧಾರವಾಗಿರುವ, ಪ್ರಾಣಕ್ಕಿಂತಲೂ ಪ್ರಿಯವಾದ ಪರಮೇಶ್ವರನಿಗೆ 'ಭೂಃ' ಎಂದು ಹೆಸರು. ಭುವಃ ಎಂದರೆ ದುಃಖರಹಿತವಾದ ಪರಮೇಶ್ವರನ ಸಂಬಂಧದಿಂದ ಸರ್ವಜೀವಿಗಳ ದುಃಖ ನಿವೃತ್ತಿಯಾಗುವದರಿಂದ ಆತನಿಗೆ 'ಭುವಃ' ಎಂದು ಹೆಸರು. ಸುವಃ ಎಂದರೆ ಸರ್ವ ಪ್ರಪಂಚ ಕಾರಣವಾಗಿ ಸಮಸ್ತ ಐಶ್ವರ್ಯಗಳನ್ನು ಕೊಡುವನಾದ್ದರಿಂದ ಅವನಿಗೆ 'ಸುವಃ' ಎಂದು ನಾಮವು. ಅಂಥಾ ಯಃ= ಯಾವ ಪರಮಾತ್ಮನಿದ್ದಾನೆಯೊ ಆತನು. ನಃ=ನಮ್ಮ, ಧಿಯಃ=ಬುದ್ಧೀಂದ್ರಿಯಾದಿಗಳನ್ನು, ಪ್ರಚೋದಯಾತ್=ಪ್ರೇರಣೆ ಮಾಡಲಿ, ಧೀ ಸಾಕ್ಷಿಯಾದ ಚೈತನ್ಯಾತ್ಮ ದೃಷ್ಟಿಯುಂಟಾಗಲಿ, ತತ್. ಸವಿತುಃ=ಸರ್ವ ಜಗತ್ಸೃಷ್ಟಿಕರ್ತನಾದ. ದೇವಸ್ಯ= ದೈವದ, ವರೇಣ್ಯಂ=ಶ್ರೇಷ್ಠವಾದ. ಭರ್ಗಃ=ದಿವ್ಯ ತೇಜಸ್ಸನ್ನು, ಧೀಮಹಿ=ಧ್ಯಾನ ಮಾಡುತ್ತೇವೆ ಅಥವಾ ಧರಿಸುತ್ತೇವೆಂದರ್ಥ.

"ಸವಿತುರ್ದೇವಸ್ಯ ತವ ಯದೋಂ ಭೂರ್ಭುವಃ ಸ್ವರ್ವರೇಣ್ಯಂ ಭರ್ಗೋಸ್ತಿ ತದ್ವಯಂ ಧೀಮಹಿ ಧರೇಮಹಿ ಧ್ಯಾಯೇಮಹಿ ಕಸ್ಮೈ ಪ್ರಯೋಜನಾಯೇತ್ಯತ್ರಾಹ ಹೇ ಭಗವಾನ್ !. ಯಃ ಸವಿತಾ ದೇವಃ ಪರಮೇಶ್ವರೋ ಭವಾನಸ್ಮಾಕಂ ಧಿಯಃ ಪ್ರಚೋದಯಾತ್, ಸ ಏವಾಸ್ಮಾಕಂ ಪೂಜ್ಯ ಉಪಾಸನೀಯ ಇಷ್ಟದೇವೋ ಭವತು ನತ್ವನ್ಯೋಭವತ್ತುಲ್ಯ ಭವತೋಽಧಿಕಂಚ ಕಿಂಚಿತ್ ಕದಾಚಿನ್ಮನ್ಯಾಮಹೇ॥"

ಮತ್ತು ಪೂರ್ಣ ಗಾಯತ್ರಿ ಚತುಷ್ಪಾದ ಗಾಯತ್ರಿ ಎಂದು ಅದು ಸ್ವಸ್ವರೂಪಾನುಭವ ತತ್ತ್ವಮಸಿ ಮಹಾವಾಕ್ಯಾರ್ಥ ಸ್ವರೂಪವಾಗಿದೆ ಎಂದು ಹೇಳುತ್ತಾರೆ. ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕೋಪನಿಷತ್ತುಗಳಲ್ಲಿಯೂ, ಬ್ರಹ್ಮಸೂತ್ರಗಳಲ್ಲಿಯೂ ಈ ವಿಷಯವು ವರ್ಣಿತವಾಗಿದೆ. "ಪರೋ . ರಜಸೇ ಸಾವದೋಂ" ರಜಸೇ=ಅವಿದ್ಯೆಗಿಂತಲೂ (ರಜಸ್ಸಿಗಿಂತಲೂ) ಪರಃ=ಅತೀತ, ಸಃ=ಆ ಪರಮಾತ್ಮ ಅವತು=ರಕ್ಷಿಸಲಿ. ಸರ್ವ ಪ್ರಕಾಶಗಳಿಗೆ ಅತೀತವಾದ ಪರಮ ಪ್ರಕಾಶ ಸ್ವರೂಪ ವ್ಯಾಪಕ ಬ್ರಹ್ಮವೇ ತಾನೆಂಬ ಅಖಂಡಾದ್ವಿತೀಯಾರ್ಥ ಬೋಧಕವಾಗಿದೆ ಎಂದು ಭಾವ (ಇದನ್ನು ಯತಿ ಸಂಧ್ಯವೆಂತಲೂ ಅನ್ನುತ್ತಾರೆ.)

ಇದು ಗುರುಮುಖವಾಗಿ ಉಪದೇಶಿಸಲ್ಪಟ್ಟಾಗ ಸಜೀವವಾಗಿ ಮಂತ್ರವೆನ್ನಲ್ಪಡುತ್ತೆ. ಗುರೂಪದೇಶ ಮೂಲಕವಾಗಿ ಅನುಷ್ಠಿಸಬೇಕು. ಹೀಗೆಂದು ಸಂಗ್ರಹವಾಗಿ ವಿವರಿಸಿ ತಿಳುಪಿದರು.

ಪೂಜ್ಯ ಶ್ರೀಗಳವರು ತಮ್ಮ ಗುರುಗಳ ಪುಣ್ಯಾರಾಧನೆ ಮಹಾಕಾರ್ಯಕ್ಕಾಗಿ ನಂದ್ಯಾಲದಿಂದ ಗಂಜಿಗುಂಟೆ ಶ್ರೀ ಮಠಕ್ಕೆ ಬಂದು ಗುರು ಕಾರ್ಯ ವ್ಯವಸ್ಥೆ ಮಾಡಿ ಮೊದಲಿನಂತೆ ಶ್ರೀ ಚೈತನ್ಯ ಸ್ವಾಮಿಗಳು, ಶ್ರೀ ಶಂಕರ ಶಾಸ್ತ್ರಿ ಸ್ವಾಮಿಗಳು ಮತ್ತಿತರ ಮಹನೀಯರೂ ಸದ್ಭಕ್ತರೂ ಬಂದರು. ಪ್ರತಿ ವರ್ಷದಂತೆ ಮೂರು ದಿನಗಳು ಕಾರ್ಯಕ್ರಮವು ವೈಭವೋಪೇತವಾಗಿ ನಡೆದು ಪೂರ್ಣವಾಯಿತು. ಉರವಕೊಂಡೆಯಲ್ಲಿ ಶ್ರೀ ಕನ್ನಿಕಾಪರಮೇಶ್ವರಿ ಆಲಯದೊಳಗೆ ಗೀತಾ ಜಯಂತಿ ಕಾರ್ಯಕ್ರಮ ನಡೆಯಿತು.

ಅನಂತರ ಗುಂತಕಲ್ಲು ಸುಧೀವರ ಶ್ರೀ ರಾಮಕೃಷ್ಣಯ್ಯನವರ ಮಹಡಿಯಲ್ಲಿ 10–12–60 ಮೊದಲು 4–1–61 ರವರಿಗೂ ವೇದಾಂತೋಪನಿಷತ್ತುಗಳ ಪ್ರತಿಪಾದನೆ, ಸಿದ್ಧಾಂತಬಿಂದು ಗ್ರಂಥವ್ಯಾಖ್ಯೆಪ್ರಿಯವಾಗಿ ನಡೆಯಿತು. ಇದೇ ಸಮಯದಲ್ಲಿ ಶ್ರೀ ವ್ಯಾಸಾಶ್ರಮ ಮಹರ್ಷಿ ಶ್ರೀ ಮಲಯಾಳ ಸ್ವಾಮಿಗಳವರು 10–12–60 ತಾರೀಕು ಶ್ರೀಗಳವರಿಗೆ ಪತ್ರವನ್ನು ಬರೆದಿದ್ದರು. "ಪ್ರಿಯವಾದ ಸ್ವಾಮಿಗಳವರೇ ! ವಂದನೆಗಳು. ತಮ್ಮಿಂದ ರಚಿಸಲ್ಪಟ್ಟ ಜ್ಞಾನದರ್ಪಣವೆಂಬ ಗ್ರಂಥವು ಬ್ರಹ್ಮ ವಿದ್ಯೆಯಲ್ಲಿ ಮೊದಲು ಪ್ರವೇಶಿಸುವವರಿಗೆ ಬಹಳ ಉಪಯೋಗವೆಂದು ನಮಗೆ ತಿಳಿಯಿತು. ಆ ಸಂಕಲ್ಪವಾಯಿತು. ಅದನ್ನು ವ್ಯಾಸಾಶ್ರಮದವರಿಂದ ಮುದ್ರಿಸಿದರೆ ಬೇಗನೆ ಲೋಕದಲ್ಲಿ ವ್ಯಾಪಕವಾಗುವದು. ಹಾಗೆ ಮುದ್ರಿಸುವದಕ್ಕೆ ತಮಗೆ ಸಮ್ಮತಿಯಾದರೆ ಕೂಡಲೇ ತಿಳಿಸಬೇಕು ಎಂದು ಬರೆಯಿಸಿದ್ದರು. ಇದಕ್ಕೆ ಶ್ರೀಗಳವರು ಪರಮ ಸಂತೋಷದಿಂದ ಹಾಗೇ ಆಗಲಿ ಅಭ್ಯಂತರವಿಲ್ಲೆಂದು ಬದಲು ತಿಳಿಸಿದರು. ಅದಕ್ಕೆ ಮಹರ್ಷಿ ಮಲಯಾಳ ಸ್ವಾಮಿಗಳವರು ಲೋಕ

ಸೇವಾಪರರಾದ ಮಹಾತ್ಮರು, ತ್ಯಾಗಶೀಲರಾಗಿ ಲೋಕಕ್ಷೇಮವೇ ತಮ ಜೀವಿತ ಲಕ್ಷ್ಯವಾಗಿ ಭಾವಿಸುವವರು........" ಹೀಗೆಂದು ಸಂತೋಷವಾಗಿ ಪತ್ರವನ್ನು ತಿಳಿಸಿದರು.

ಸ್ವಾಮಿಗಳವರು ಮುಮುಕ್ಷುಗಳ ಹಿತಾರ್ಥವಾಗಿ ಶ್ರೀಮದ್ಭಗವದ್ಗೀತಾ ಪರೀಕ್ಷೆಗಳನ್ನು ನಿಯಮಿಸಿ ಒಂದು ವರ್ಷದಲ್ಲಿ 18 ಅಧ್ಯಾಯ ಪರೀಕ್ಷೆಗಳು 21 ಕೇಂದ್ರಗಳಲ್ಲಿ ನಡೆಯಿಸಿ, ಪ್ರಶ್ನೋತ್ತರ ಪತ್ರಗಳನ್ನು ಕರೆಕ್ಷನ್ ಮಾಡಿ ಕಳುಹಿಸಿ ದರು. ನೂರಾರು ಜನ ಪಾಠಕರು ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಪ್ರಥಮ, ದ್ವಿತೀಯ, ತೃತೀಯ ಶ್ರೇಣಿಯವರಿಗೆ ಶ್ರೀ ಸನ್ನಿಧಿಯಿಂದ ಪ್ರಮಾಣ ಪತ್ರಗಳನ್ನು ಪ್ರಸಾದಿಸಲಾಯಿತು.

ಇಷ್ಟರಲ್ಲಿ ಆವಾನಿ ಶ್ರೀ ಎಲೇ ಮಲ್ಲೇಶಪ್ಪನವರ ಕನ್ನಡ ಉನ್ನತ ಪಾಠ ಶಾಲೆ ಪ್ರಾರಂಭೋತ್ಸವಕ್ಕೆ ದಯಮಾಡಿಸಿದರು. ಅಲ್ಲಿ ಶ್ರೀ ಚಾತುರ್ಮಾಸ್ಯ ವ್ರತಾಶ್ರಮದಲ್ಲಿರುತ್ತಾ ಉಭಯ ಸಾಯಂಕಾಲ ಶಾಸ್ತ್ರ ಪ್ರವಚನಗಳನ್ನು ನಡೆಸಿ ದರು. 25–3–61 ತಾರೀಕು ಶ್ರೀ ಉಮಾಮಹೇಶ್ವರ ಪಾಠಶಾಲೆ ಕಮಿಟಿಯ ವರು ಈ ಪಾಠಶಾಲೆಯ ವಾರ್ಷಿಕೋತ್ಸವವನ್ನು ಅತ್ಯಂತ ವೈಭವದಿಂದ ಪೂಜ್ಯ ಶ್ರೀ ಗುರುಗಳ ಸಾನಿಧ್ಯವಲ್ಲಿ ನಡೆಸಿದರು. ಶ್ರೀ T.G.L. ತಿಮ್ಮಯ್ಯ ಶ್ರೇಷ್ಠಿ M L A ಅವರು ಸ್ವಾಗತೋಪನ್ಯಾಸವನ್ನು ಮಾಡಿದರು. ಶ್ರೀ ಶರಭಾಚಾ ರ್ಯರವರು D E O. ಅಧ್ಯಕ್ಷತೆ ವಹಿಸಿದರು. G.V. ಚಲಪತಿ R.D.O ರಿಂದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ಬಹೂಕರಿಸಿದರು. ವಂದನ ಸಮರ್ಪಣೆ, ಮಂಗಳ.

ಇಷ್ಟರಲ್ಲಿಯೇ ಪ್ರಸ್ಥಾನತ್ರಯ ಮಹಾಗ್ರಂಥ ಮುದ್ರಣವು ಪೂರ್ಣವಾಯಿತು. ಬ್ರಹ್ಮಚಾರಿಗಳು ಗುಂಟೂರು ವೆಲ್‌ಕಂ ಪ್ರೆಸ್ಸಿನಿಂದ ಅಚ್ಚಾದ ಕೆಲವು ಪುಸ್ತಕಗಳನ್ನು ತೆಗೆದುಕೊಂಡು ಬಂದರು. ನೋಡಿ ಎಲ್ಲರೂ ಸಂತೋಷಪಟ್ಟರು. ಪೂಜ್ಯ ಶ್ರೀ ಸ್ವಾಮಿಗಳವರು ಭಕ್ತಿಯಿಂದ ಗಂಜಿಗುಂಟೆ ಶ್ರೀ ಮಠದಲ್ಲಿ ಶ್ರೀ ಗುರು ಅಧಿಷ್ಠಾನದಲ್ಲಿ ಒಂದು ಗ್ರಂಥವನ್ನು ಸಮರ್ಪಿಸಿ ಪಠಿಸಿದರು.

ಅನಂತರ ಸ್ವಾಮಿಗಳವರು ಮೊದಲು ಉರವಕೊಂಡೆ ಹೈಸ್ಕೂಲಿನಲ್ಲಿ ಓದು ವಾಗ ಮಹಾತ್ಮ ಗಾಂಧೀಜಿಯವರನ್ನು ಕಂಡು ಅವರ ದೊಡ್ಡಸ್ತಿಕೆಯನ್ನು ಗ್ರಹಿಸಿ ಪೂಜ್ಯ ಬುದ್ಧಿ ಉಳ್ಳವರಾಗಿದ್ದರು. ಆದಕಾರಣ ಸ್ವಾಮಿಗಳವರು ವಿಮಾನದಲ್ಲಿ ದಿಲ್ಲಿಗೆ ಹೋಗಿ ಮಹಾತ್ಮಾ ಗಾಂಧೀಜಿಯವರ ಸಮಾಧಿಯ ಬಳಿಯಲ್ಲಿ ಒಂದು ಗ್ರಂಥ ವನ್ನು ಸಮರ್ಪಿಸಿ, ರಾಜಭವನದಲ್ಲಿ ರಾಷ್ಟ್ರಪತಿ ಶ್ರೀ ರಾಜೇಂದ್ರ ಪ್ರಸಾದ ಅವರಿಗೆ

ಒಂದು ಗ್ರಂಥವನ್ನು ಅರ್ಪಿಸಿ, ಅಲ್ಲಿಯ ಭಕ್ತಾದಿಗಳೊಡನೆ ಪೂಜಾನುಷ್ಠಾನ ಪೂರ್ವಕ 3 ದಿನಗಳಿದ್ದರು. ಶ್ರೀಗಳವರಿಗೆ ದಿಲ್ಲೀ ಪ್ರಯಾಣವನ್ನು ಭಕ್ತಿಯಿಂದ ಶ್ರೀ A-G- ಕೇಶವರೆಡ್ಡಿ ಬೆನ್ನಿ ಕೆಂಪನಿ ಏಜಂಟು ನಂದ್ಯಾಲ ಮತ್ತು ಶ್ರೀ N. ರಾಮಮೂರ್ತಿ M-A. M:c- ನ್ಯೂ ಢಿಲ್ಲೀ ಇವರು ವಿಮಾನ ಪ್ರಯಾಣದ ಏರ್ಪಾಟುಗಳನ್ನು ಮಾಡಿದರು.

ಮಹಾತ್ಮಾ ಗಾಂಧೀಜಿಯವರ ಸಮಾಧಿಯನ್ನು ದರ್ಶಿಸಿದ ಮೇಲೆ ಎಲ್ಲಾ ಭಕ್ತರಿಗೆ ಅಲ್ಲಿಂದ ಮಹಾತ್ಮನ ಕೆಲವು ಮಾತುಗಳನ್ನು ಪತ್ರದ ಮೂಲಕ ತಿಳುಹಿದರು.

ಗಾಂಧೀಜಿಯವರು ಸತ್ಯವೇ ದೇವರೆಂದು ಆರಾಧಿಸಿದವರು. **Truth is God-** ನಾನು ಸತ್ಯ ಮಾರ್ಗದಲ್ಲಿ ನಡೆಯುತ್ತಿರುವುದರಿಂದ ಭಯಂಕರವಾದ ಪ್ರೇಮ ಪ್ರವಾದಗಳು ನನಗೆ ಕ್ಷುದ್ರವಾಗಿ ಕಾಣಿಸುತ್ತವೆ. ಅವು ನನಗೆ ಭಯುವನ್ನು ಕೊಡುವುದಿಲ್ಲ.

ಗೀತಾಧ್ಯಯನ, ತದರ್ಥ ಗ್ರಹಣದಿಂದ ನಾನು ಯಾವಾಗಲೂ ಆನಂದವಾಗಿ ಇರುತ್ತೇನೆ. ನನ್ನ ಜೀವಿತದಲ್ಲಿ ರಹಸ್ಯವೆಂಬುದೇ ಇಲ್ಲ. ನನ್ನ ಜೀವಿತವನ್ನು ಎಲ್ಲರೂ ಓದಿಕೊಳ್ಳಬಹುದು. ಒಂದು ಪೇಜಿಯಲ್ಲಿ ಸುಖ ಮತ್ತೊಂದು ಪೇಜಿಯಲ್ಲಿ ದುಃಖ ಇವೇ ಜೀವನದಲ್ಲಿರುವ ಪಾಠಗಳು. ಈ ಎರಡಕ್ಕೂ ನಾನು ಸಾಕ್ಷಿ. ಕೇವಲ ಸತ್ಯವಾದ ಪರಮಾತ್ಮನೊಬ್ಬನಿರುವನು.

ಶಿಷ್ಯನ ಯೋಗ್ಯತೆಯನ್ನನುಸರಿಸಿಯೇ ಗುರುವು ಲಭಿಸುವನು.

ನಿಜವಾದ ಮಾನವತ್ವ ಉಳ್ಳ ಮನುಜನ ಮಾತುಗಳು ಸತ್ಯವಾಗಿಯೂ, ಮಿತವಾಗಿಯೂ, ಮಧುರವಾಗಿಯೂ ಇರುತ್ತವೆ.

ಯಾವ ಮಹಾಸುಖ–ಸಮಾಧಿಯಲ್ಲಿ ಶ್ರೀ ರಾಮನಾಮವು ಕೂಡ ಪಾನಕ ವಲ್ಲಿಯ ಪುಳ್ಳಿಯಂತೆ ಅಡ್ಡವಾಗುವದೋ ಅಂಥಾ ಪೂರ್ಣ ಸುಖವಾದ ಸಹಜ ಸ್ಥಿತಿ ನನಗೆ ಯಾವಾಗ ಬರುವುದೋ ಎಂದು ಎದುರು ನೋಡುತ್ತಿರುವೆನು.

ಸಂಪೂರ್ಣ ಮಾನಸಿಕ ಮಲತ್ಯಾಗವು, ಕೇವಲ ಉಪವಾಸಾದಿ ಕಠಿಣ ವ್ರತ ಗಳಿಂದ ದೂರವಾಗದೆ, ಉತ್ತಮವಾದ ತತ್ತ್ವ ವಿಚಾರಣೆ, ಅನನ್ಯವಾದ ಭಗವಚ್ಚಿಂ ತನದಿಂದಲೇನೇ ದೂರವಾಗುವುದು.

ಸಂಪೂರ್ಣವಾದ ಅಹಿಂಸೆ (ಆತ್ಮದೃಷ್ಟಿ) ವಜ್ರಸನ್ನಿಭವಾದ ಕಠಿಣ ಹೃದಯವನ್ನು ಕೂಡಾ ದ್ರವೀಭೂತವನ್ನಾಗಿ ಮಾಡುವದು. ಅಹಿಂಸಾ ಸತ್ಯಗಳು

ನಾನಾ ವಿಧ ತಾಪಗಳನ್ನು ದೂರಮಾಡಿ, ಪೃಥಗ್ಭಾವನೆಯಿಂದ ತಾಳುವಂತೆ ಮಾಡುವವು.

ಢಿಲ್ಲಿಯ ಭಕ್ತರು ಪಾಲಂ ವಿಮಾನಾಶ್ರಯದಿಂದ ಶ್ರೀಗಳವರನ್ನು ವಿಮಾನದಲ್ಲಿ ಕುಳ್ಳಿರಿಸಿ ಕಳುಹಿದರು. ಅಲ್ಲಿಂದ ಹೈದರಾಬಾದು ಅನಂತರ ನಂದ್ಯಾಲ ಶ್ರೀ ಚಾತುರ್ಮಾಸ್ಯ ಮಹಾವ್ರತಾಶ್ರಮಕ್ಕೆ ಸುಖವಾಗಿ ಬಂದು ಸೇರಿದರು.

## ಹದಿನೇಳನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

## ನಂದ್ಯಾಲ ಪಟ್ಟಣ 24–7–61

ಶ್ರೀ ಪ್ಲವ ನಾಮ ॥ಸಂ॥ ಆಷಾಢ ಶುದ್ಧ ಏಕಾದಶಿ ಸೋಮವಾರ ಬ್ರಹ್ಮ ಮುಹೂರ್ತದಲ್ಲಿ ಪ್ರಭಾತ ಸೇವೆ ಪ್ರತಿ ॥ಸಂ॥ ದಂತೆ ವಿಧ್ಯುಕ್ತವಾಗಿ ವೈದಿಕ ಕಾರ್ಯಕ್ರಮಗಳೆಲ್ಲವೂ ನಡೆದು ಉಪನಿಷಚ್ಛಾಸ್ತ್ರ ಶ್ರವಣದಿಂದ ಮಂತ್ರಪುಷ್ಪ ಮಹಾಮಂಗಳವಾಗಿ ಪೂರ್ಣವಾಯಿತು.

ಈ ಪವಿತ್ರ ಶುಭ ಮುಹೂರ್ತದಲ್ಲಿ ಸಾಯಂಸಮಯ ಪ್ರಸ್ಥಾನತ್ರಯ ಮಹಾಗ್ರಂಥಾವಿಷ್ಕರಣವಾಗಬೇಕೆಂದು ನಿರ್ಣಯವಾಗಿತ್ತಾದಕಾರಣ, ಈ ಕಾರ್ಯಕ್ರಮಕ್ಕೆ ಆಹ್ವಾನಿತರಾದ ಗುಂತಕಲ್ಲು, ಆದವಾನಿ, ಮುಂತಾದ ಅನೇಕ ಸ್ಥಳಗಳಿಂದ ಗ್ರಂಥ ಮುದ್ರಣದಾತರೂ, ಶ್ರೀ ಶುದ್ಧಚೈತನ್ಯ ಸ್ವಾಮಿಗಳವರೂ ಮತ್ತು ಕಾಶೀ ಕ್ಷೇತ್ರಕ್ಕೆ ಹೋದ ಬ್ರಹ್ಮಚಾರಿಗಳು ಸಕಾಲಕ್ಕೆ ಬಂದರು. ಸಾಯಂಕಾಲ ಪೂಜಾನುಷ್ಠಾನಗಳಾದ ನಂತರ 6 ಗಂ॥ ಇಂದ 8–30 ಗಂಟೆಯವರಿಗೂ ಬೃಹದ್ರೂಪವಾಗಿ ಸಭೆ ನಡೆಯಿತು. ಗುಂಟೂರು ಪ್ರೆಸ್‌ನಿಂದ ಬಂದ ಎಲ್ಲಾ ಗ್ರಂಥಗಳನ್ನು ವ್ಯವಸ್ಥೆಯಾಗಿ ಸಭಾಸ್ಥಲದಲ್ಲಿ ಅಲಂಕರಿಸಿದರು.

ವೈದಿಕ ವಿಧಿಯನ್ನನುಸರಿಸಿ ಗ್ರಂಥಗಳ ಪೂಜೆ ಇತ್ಯಾದಿಗಳಾದವು. ಪೂಜ್ಯ ಶ್ರೀ ಶುದ್ಧಚೈತನ್ಯ ಸ್ವಾಮಿಗಳವರು ಮತ್ತು ವೈದಿಕರು ವೇದಮಂತ್ರಗಳನ್ನು ಪಠಿಸುತ್ತಿರಲು, ಶ್ರೀ ಚೈತನ್ಯ ಸ್ವಾಮಿಗಳು ತಮ್ಮ ಅಮೃತಹಸ್ತಗಳಿಂದ ರೇಷ್ಮೆಯ ನೂತನ ವಸ್ತ್ರದಲ್ಲಿ ಕಟ್ಟಿಟ್ಟ ಪ್ರಸ್ಥಾನತ್ರಯ ಮಹಾಗ್ರಂಥವನ್ನು ಬಿಚ್ಚಿ, ತೆರೆದು ತೋರಿಸುತ್ತಾ 'ವಾಙ್ಮೇ ಮನಸಿ ಪ್ರತಿಷ್ಠಿತಾ' ಎನ್ನುವ ಶಾಂತಿ ಮಂತ್ರವನ್ನು ಹೇಳುತ್ತಾ ಆವಿಷ್ಕರಿಸಿದರು. ಪುಷ್ಪವೃಷ್ಟಿ ಆಯಿತು. ಗ್ರಂಥವನ್ನು ತೆಗೆದು ಪಠಿಸಿ ಶ್ರೀ ಚೈತನ್ಯ ಸ್ವಾಮಿಗಳು ಪರಮ ಸಂತುಷ್ಟಾಂತರಂಗರಾಗಿ, ಆ ದಿವ್ಯ ಭವ್ಯವಾದ ಸಮಾವೇಶವನ್ನು ನೋಡಿ "ಇದು ಶ್ರೀಮದುಮಾಮಹೇಶ್ವರ ಗುರುಪೀಠ ಪರಂಪ

ರೇಮ ಮಹಾಶಕ್ತಿಯಾಗಿದೆ. ತಪಸ್ಸಂಪನ್ನರೂ ಶ್ರೋತ್ರೀಯ ಬ್ರಹ್ಮನಿಷ್ಠರೂ ಆದ ಪೂಜ್ಯಪಾದ ಶ್ರೀ ಶ್ರೀ ಶ್ರೀ ಶಂಕರಾನಂದಗಿರಿ ಗುರುಸ್ವಾಮಿಗಳವರ ಮೂಲಕ ಅಭಿವ್ಯಕ್ತವಾಗುತ್ತಾ ಮುಮುಕ್ಷು ಜನೋದ್ಧಾರಕವಾಗಿ ಬೆಳಗುತ್ತಿದೆ.

ಸಂಪ್ರದಾಯಗಳು ಎಷ್ಟೋ ಇವೆ. ಅವೆಲ್ಲವನ್ನು ನಾವು ನೋಡಿದ್ದೇವೆ. ನಿಷ್ಪಾಕ್ಷಿಕವಾಗಿ ಹೇಳಬೇಕೆಂದರೆ, ಈ ಸಂಪ್ರದಾಯದಲ್ಲಿ ಶ್ರೀಗಳವರ ಪ್ರಬೋಧೆಗ ಳೆಷ್ಟೋ ದಿವ್ಯಶಕ್ತಿ ಸಂಪನ್ನಗಳಾದವು. ನಾಸ್ತಿಕರನ್ನು ಆಸ್ತಿಕರನ್ನಾಗಿಯೂ, ಆಸ್ತಿಕ ರನ್ನು ಭಕ್ತರನ್ನಾಗಿಯೂ, ಭಕ್ತರನ್ನು ಮುಮುಕ್ಷುಗಳನ್ನಾಗಿಯೂ, ಮುಮುಕ್ಷುಗ ಳನ್ನು ಮುಕ್ತರನ್ನಾಗಿಯೂ ಮಾಡುವ ಪರಮಾದ್ವೈತ ಸಿದ್ಧಾಂತ ಪ್ರತಿಪಾದಕಗಳು. ಪ್ರಾಯಃ ಯಾವಾಗಲೋ ಒಂದು ಸಾರಿ ಕೆಲವು ದಿನಗಳು ಮಾತ್ರವೇ ಇಂಥಾ ಅದ್ವೈತ ಸಿದ್ಧಾಂತ ವಿಷಯಗಳನ್ನು ಮಾತನಾಡಿಕೊಂಬುವದಾಗಿರುತ್ತೆ. ಆದರೆ ಈ ಸಂಪ್ರದಾಯದಲ್ಲಿ ನಮ್ಮ ಶ್ರೀ ಸ್ವಾಮಿಗಳವರು 365 ದಿನಗಳು ಸಂತತವೂ ಈ ವಿಷಯಗಳನ್ನೇ ವಿವಿಧ ಪ್ರಕಾರದಿಂದ ಶಿಷ್ಯರಿಗೆ ಬೋಧಿಸುತ್ತಾ, ತಾವು ನಿಷ್ಕಾಮಪರ ರಾಗಿ, ನಿಸ್ವಾರ್ಥವಾಗಿ ಪರಿಶ್ರಮಿಸುತ್ತಾ ಶಿಷ್ಯ ಜನೋದ್ಧರಣಾರ್ಥವಾಗಿ ಅವತರಿಸಿದ ಕಾರಣಾಚಾರ್ಯರೇ ಶ್ರೀ ಸ್ವಾಮಿಗಳವರು.

ಅದ್ವಿತೀಯಾರ್ಥ ಬೋಧಕವಾದ ಶ್ರೀಗಳವರ ಮಾತುಗಳನ್ನು ಕೇಳಿ, ಪಾರ ಮಾರ್ಥಿಕ ದೃಷ್ಟಿಯುಳ್ಳವರಾಗಿ ಹಾಗೆಯೇ ವರ್ತಿಸುವ ಉತ್ತಮರಾದ ಶ್ರೀಗಳವರ ಶಿಷ್ಯರನ್ನು ಎಷ್ಟೋ ಜನರನ್ನು ನಾನು ನೋಡಿ ಬಹಳ ಸಂತೋಷಗೊಳ್ಳುತ್ತಿದ್ದೇನೆ. ಇದೊಂದು ವಿಶಿಷ್ಟ ಸಂಪ್ರದಾಯ, ಮಹಾ ವೈಭವವಾದುದೆಂದು ಭಾವಿಸುತ್ತಿದ್ದೇನೆ.

ಇನ್ನು ಶ್ರೀಗಳವರ ರಚನೆಗಳೆಷ್ಟು ಸುಗಮ ಸುಂದರಗಳು ! ಅರ್ಥ ಗಂಬೀರ ಉತ್ಕೃ ಭಾಗವತ ಭಾಷಾಶೈಲಿ. ಯಾವಾಗಲೋ ಕೆಲವು ವರ್ಷಗಳಿಗಾಗುವ 100 ಫಾರಂಗಳ ಈ ಪ್ರಸ್ಥಾನತ್ರಯ ಮಹಾಗ್ರಂಥ ಮುದ್ರಣ ಬೇಗನೆ ಮುಗಿಯುವುದಲ್ಲ. ಎಷ್ಟೋ ಅಡ್ಡಿಗಳೂ ಆತಂಕಗಳೂ ಇರುತ್ತವೆ. ಈ ಕಾರ್ಯದಲ್ಲಾದರೋ ಯಾವ ತೊಂದರೆಯೂ ಇಲ್ಲದೆ ಸಕಾಲಕ್ಕೆ ಸಾಂಗವಾಗಿ ಪೂರ್ಣವಾದ ಈ ಗ್ರಂಥಗಳು, ಈಗ ಮುಮುಕ್ಷು ಜನ ಕರಕಮಲಗಳನ್ನು ಅಲಂಕರಿಸುತ್ತವೆಂದರೆ. ಇದು ಮಹತ್ತರವಾದ ಗುರುಶಕ್ತಿಯೇ! ಶ್ರೀಗಳವರ ಭದ್ರವಾದ ಶುದ್ಧ ಸಂಕಲ್ಪ ಶಕ್ತಿಯೇ ಇದಕ್ಕೆ ಕಾರಣ.

ಇನ್ನು ಆಗಿನ ಕಾಲದಲ್ಲಿ ಶ್ರೀರಾಮಭದ್ರನಿಗೆ ಒಬ್ಬೇ ಒಬ್ಬ ಆಂಜನೇಯನಿ ದ್ದನು. ಈದಿನ ನಮ್ಮ ಸ್ವಾಮಿಗಳವರಿಗೆ ಅಂಥಾ ಶಕ್ತಿವಂತರಾದ ಇಬ್ಬರು ಆಂಜ ನೇಯರಿದ್ದಾರೆ. ಒಬ್ಬರು ಸತ್ರಿ ಇನ್ನೊಬ್ಬರು ಜಿ. ವಿ. ಸ್ವಾಮಿ ಮತ್ತು ದಾತರ ಉದಾರವಾದ ನಿರ್ಮಲಭಾವ, ಶ್ರೀ ವೆಲ್‌ಕಂ ಪ್ರೆಸ್ಸಿನವರ ಶ್ರದ್ಧೆ, ನನ್ನ ನಿಮಿತ್ತ ಮಾತ್ರತೆ.

ಮತ್ತು ಇಷ್ಟರವರಿಗು ಪ್ರಸ್ಥಾನತ್ರಯವೆಂಬ ಒಂದೇ ಗ್ರಂಥವು ಯಾರೂ ಪ್ರಚುರಿಸಿದ್ದಿಲ್ಲ. ಅವು ಬಿಡಿ ಬಿಡಿಯಾಗಿ ಲಭ್ಯವಾಗುತ್ತಿದ್ದರೂ, ಭಾಷ್ಯಗ್ರಂಥದಲ್ಲಿನ ಮೂಲಾರ್ಥಕ್ಕೆ ವಿರುದ್ಧವಾಗದೆ ಸಂಗ್ರಹಿಸಿ. ಅವುಗಳನ್ನು ಒಂದೇ ಗ್ರಂಥದಲ್ಲಿ ಸೇರಿಸಿ ಸ್ವಾಮಿಗಳವರು ಮುಮುಕ್ಷುಗಳಿಗೆ ಮಹೋಪಕಾರವನ್ನು ಮಾಡಿದರು. ಇದು ಪ್ರಶಂಸನೀಯವು" ಎಂದು ಹೇಳುತ್ತಾ ಪ್ರಸ್ಥಾನತ್ರಯ ಶಬ್ದಾರ್ಥವನ್ನು ವಿವರಣೆಮಾಡಿ ಉಪನ್ಯಸಿಸಿದರು. ಮಂಗಳವಾಗಿ ಸಭೆ ಪೂರ್ಣವಾಯಿತು. ನ್ಯಾಯ ವೇದಾಂತ ಶಿರೋಮಣಿ ಪಂಡಿತ ಶ್ರೀಮನ್ನಾರಾಯಣಮೂರ್ತಿಯವರಿಗೆ ಪ್ರಸ್ಥಾನ ತ್ರಯ ಮಹಾಗ್ರಂಥವನ್ನು ಕೊಟ್ಟರು ಮತ್ತು ದಾತರು, ಭಕ್ತರು ಮೊದಲಾದವ ರಿಗೆ ಗ್ರಂಥಗಳನ್ನು ಕೊಡೋಣವಾಯಿತು. ಇನ್ನು ಮಹಾತ್ಮರಿಗೆ ಪಂಡಿತರಿಗೆ ಕಳು ಹಿಸಿದರು. ಅವರು ಪ್ರಿಯವಾದ ತಮ್ಮ ಉತ್ತಮ ಅಭಿಪ್ರಾಯಗಳನ್ನು ಕಳುಹಿಸಿದರು.

ಇದೇ ಸುಸಂದರ್ಭದಲ್ಲಿ ಶ್ರೀರಾಮತೀರ್ಥ ಸೇವಾಶ್ರಮಾಧಿಪತಿಗಳು ಪೂಜ್ಯ ಶ್ರೀ ಕೇಶವತೀರ್ಥ ಸ್ವಾಮಿಗಳವರು ತಮ್ಮ ಪತ್ರದಲ್ಲಿ ಹೀಗೆ ಬರೆದು ಕಳಿಸಿದ್ದರು.

ಗೀ॥ ಪರಮ ಶಿವರೂಪ ! ಕಾರುಣ್ಯ ಭವ್ಯ ಭಾವ !
ದಿವ್ಯ ವೇದಾಂತ ಗಂಗಾನದೀ ಪ್ರದಾತ !
ಶಮಿತ ತಾಪತ್ರಯಾನಲ ಶಾಂತ ಮೂರ್ತಿ !
ಶಂಕರಾನಂದಗಿರಿ ಯತಿ ಚಕ್ರವರ್ತಿ !

ಗೀ॥ ಪರಮ ವೈರಾಗ್ಯ ಕೈಲಾಸ ಪರ್ವತಾಗ್ರ
ವಾಸ ! ಸಂತತಾಶ್ರಿತ ಜನ ಪ್ರಮಥಯುಕ್ತ !
ನಿರತ ಪರತತ್ತ್ವ ಬೋಧಕ ! ಗುರುವತಂಸ !
ಶಂಕರಾನಂದಗಿರಿ ಮಹಾಸ್ವಾಮಿ ಪಾದ !

(ಸಂ) ಸ್ವಾಮಿ ಕೇಶವತೀರ್ಥ

ಈ ಚಾತುರ್ಮಾಸ್ಯ ಮಹಾವ್ರತವು 24-7-61 ಮೊದಲು 19-11-61 ವರಿಗೂ ಶ್ರೀ ಉಮಾಮಹೇಶ್ವರರ ಅನುಗ್ರಹದಿಂದ ಮಂಗಳಪ್ರದವಾಗಿ ನಡೆಯಿತು. ಕಾರ್ತಿಕ ಶುದ್ಧ ಏಕಾದಶಿ ಅಖಂಡ ಭಗವನ್ನಾಮ ಭಜನೆ ದ್ವಾದಶಿಯ ದಿನ ಕಲಶೋ ದ್ವಾಸನಾದಿ ಕಾರ್ಯಗಳಿಂದ ಪೂರ್ಣಗೊಂಡಿತು. ಈ ವ್ರತ ಮಹಾಕಾರ್ಯದಲ್ಲಿ 2ನೇ ದಿನದಿಂದ ಪ್ರಸ್ಥಾನತ್ರಯ ಮಹಾಗ್ರಂಥದ ಮೂಲದಿಂದಲೇ ಬೆಳಗಿನ ಹೊತ್ತು ಬ್ರಹ್ಮಸೂತ್ರಗಳ ವ್ಯಾಖ್ಯೆ ಭಕ್ತಾದಿಗಳಿಗೆ ಅರ್ಥವಾಗುವಂತೆ ಪುನಃ ಪುನಃ ವಿವರಿಸಿ ತಿಳುಹಿಸಿದರು. ಸಾಯಂಸಮಯ ಗೀತಾಭಾಷ್ಯ ಪ್ರವಚನಗಳಾದವು ಮಂಗಳ ವಾಯಿತು.

ಶ್ರೀ ಸ್ವಾಮಿಗಳವರು 1–12–61 ಗಂಜಿಗುಂಟೆ ಶ್ರೀ ಮಠವನ್ನು ಸೇರಿ ಯಥಾರೀತಿ ಪ್ರತಿ ವತ್ಸರದಂತೆ ಡಿಶಂಬರ 3, 4, 5 ತಾರೀಕುಗಳು ವಿಧ್ಯುಕ್ತವಾಗಿ ತಮ್ಮ ಶ್ರೀಗುರು ಪುಣ್ಯಾರಾಧನ ಮಹೋತ್ಸವವು ಸಾಂಗವಾಗಿ ನಡೆಸಿದರು. ಶ್ರೀ ಶುದ್ಧಚೈತನ್ಯ ಸ್ವಾಮಿಗಳೂ ಶ್ರೋ ||ಬ್ರ|| ಶಂಕರಶಾಸ್ತ್ರಿ ಸ್ವಾಮಿಗಳವರೂ, ಹುಬ್ಬಳ್ಳಿ ಶ್ರೀ ಶಿವಪುತ್ರಸ್ವಾಮಿಗಳು ಇತ್ಯಾದಿ ಮಹಾತ್ಮರು ದಯಮಾಡಿಸಿ ತಮ್ಮ ಪ್ರವಚನಗಳನ್ನು ನಡೆಸಿದರು. ಮಹದಾನಂದವಾಗಿತ್ತು. ಕಡೆಯ ದಿನ ಸಭೆಯಲ್ಲಿ ಶ್ರೀ ಶಾಸ್ತ್ರಿಗಳವರು ಗಾಢವಾದ ಪ್ರೇಮಾತಿಶಯದಿಂದ ನಮ್ಮ ಶ್ರೀಗಳವರಿಗೆ 'ಅಭಿನವ ಶುಕಯೋಗಿ' ಎಂಬುವ ಅನ್ವರ್ಥನಾಮವನ್ನಿಟ್ಟು ಕರೆದರು. ಸಭಿಕರು ಸಂತೋಷಗೊಂಡರು.

ಗೀತಾ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಇದೇ ಮಹಾಸಭೆಯಲ್ಲಿ 108 ಮಂದಿ ಮುಮುಕ್ಷುಗಳಿಗೆ ಪ್ರಮಾಣ ಪತ್ರಗಳನ್ನು ಪ್ರಸಾದಿಸಿದರು. ಮಹಾತ್ಮರ ಪೂಜಾದಿಕಾರ್ಯಗಳಿಂದ ಎಲ್ಲವೂ ಪೂರ್ಣವಾಯಿತು. ಅನಂತರ ಉರವಕೊಂಡೆ ಕನ್ನಿಕಾಪರಮೇಶ್ವರಿ ಆಲಯದಲ್ಲಿ ಗೀತಾಜಯಂತಿ ಉತ್ಸವವೂ ಶಾಸ್ತ್ರ ಪ್ರವಚನಾದಿಗಳಿಂದ ಅತ್ಯಂತ ವೈಭವವಾಗಿ ನಡೆದು ಗೀತಾಮೂರ್ತಿ ಉತ್ಸವ ಮತ್ತು ಅನ್ನಸಂತರ್ಪಣಾದಿಗಳಿಂದ ಪೂರ್ಣವಾಯಿತು.

ಆತ್ಮನಾದ ತನಗೆ ಸಾಧನ ಬಲದಿಂದ ಬ್ರಹ್ಮತ್ವ ಬರುತ್ತದೆಂದು ತಿಳಿಯಬಾರದು. ಆತ್ಮ ಬ್ರಹ್ಮವೇ! ಸಾಧನೆಗಳು ಆ ಅಸ್ಥಿಯನ್ನು ದೂರಮಾಡುವವು. ಬ್ರಹ್ಮತ್ವವು ಸ್ವಯಂಸಿದ್ಧವು.

ಅಯ್ಯಾ ! ಭಾಷ್ಯವೆಂದರೆ ಮೂಲಾರ್ಥಕ್ಕೆ ವಿರುದ್ಧವಲ್ಲದ ಶ್ರುತಿಷಡ್ಲಿಂಗ ತಾತ್ಪರ್ಯವನ್ನು ವಿವರಿಸುವ ಸ್ವೀಯಪದಗಳಿಂದೊಪ್ಪುವ ವ್ಯಾಖ್ಯೆಯನ್ನು ಭಾಷ್ಯವೆನ್ನುತ್ತಾರೆ. ಆಚಾರ್ಯರು ಪ್ರಸ್ಥಾನತ್ರಯಕ್ಕೆ ಭಾಷ್ಯವನ್ನು ಬರೆದರು.

ಭಾಷ್ಯದಲ್ಲಿನ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಸಂಗತಿ, ಈ ಪಂಚಾವಯವಗಳಿಂದೊಪ್ಪಿರುವ ನ್ಯಾಯವೇ ಅಧಿಕರಣವೆಂದು ಕರೆಯಲ್ಪಡುವುದು. ಬ್ರಹ್ಮಸೂತ್ರಗಳಲ್ಲಿ 192 ಅಧಿಕರಣಗಳಿವೆ.

ಮೂಲಗ್ರಂಥಗಳಲ್ಲಿರುವ ಪದ, ಪದಾರ್ಥ, ವಾಕ್ಯಯೋಜನೆ, ಪ್ರಶ್ನೆ, ಪರಿಹಾರವೆಂಬುವ ಈ ಐದು ವ್ಯಾಖ್ಯಾನ ಲಕ್ಷಣಗಳೆನ್ನುವರು.

ನಿರ್ವಾಣ ಮಠದಲ್ಲಿ ಪರಮಗುರುಗಳ ಆರಾಧನ ಪೂಜಾ ಕಾರ್ಯಕ್ರಮವು ಅತ್ಯಂತ ಆನಂದವಾಗಿ ನಡೆಯಿತು. ಭಕ್ತರಾದ ಆಶ್ರಮ ಧರ್ಮಕರ್ತ ಶ್ರೀ ಉದಯ

ಗಿರಿ ವೀರಯ್ಯನವರು ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು. ಗುರುದೇವರ 43 ನೆಯ ಜಯಂತ್ಯುತ್ಸವ ಸಂದ್ಯಾಲ ಶ್ರೀ ಚಾತುರ್ಮಾಸ್ಯ ಮಹಾವ್ರತಾಶ್ರಮದಲ್ಲಿ ವಿಧ್ಯುಕ್ತವಾಗಿ ನಡೆಯಿತು.

ಅಷ್ಟಾದಶ (18 ನೆಯ) ಶ್ರೀ ಚಾತುರ್ಮಾಸ್ಯ ಮಹಾವ್ರತಾಚರಣೆಗಾಗಿ ಗಂಜಿಗುಂಟೆ ಶ್ರೀಮಠ ಶ್ರೀಸದ್ಗುರು ಪ್ರಣವಾನಂದಾಶ್ರಮಕ್ಕೆ ದಯಮಾಡಿಸಿದರು.

## ಹದಿನೆಂಟನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಗಂಜಿಗುಂಟೆ ಮಠ 13–7–62

ಸ್ವಸ್ತಿ ಶ್ರೀ ಶುಭಕೃತು ನಾಮ ॥ಸಂ॥ ಆಷಾಢ ಶುದ್ಧ ಏಕಾದಶಿ ಶುಕ್ರವಾರ ಪ್ರತಿವರ್ಷದಂತೆ ಬ್ರಹ್ಮ ಮುಹೂರ್ತದಲ್ಲಿ ವೈದಿಕ ಕಾರ್ಯಕಲಾಪಗಳು ಪ್ರಾರಂಭ ವಾಗಿ ಕಲಶಸ್ಥಾಪನ ಪೂಜಾನುಷ್ಠಾನಗಳು ಅಧಿಷ್ಠಾನಮಂದಿರನಲ್ಲಿ ಮಹಾನ್ಯಾಸ ಪೂರ್ವಕ ಶ್ರೀರುದ್ರಾಭಿಷೇಕ ಪೂಜಾ ಕಾರ್ಯಕ್ರಮ, ಮಹಾಮಂಗಳ, ಮಂತ್ರಪುಷ್ಪ ವಾಯಿತು. ಪೂಜ್ಯ ಶ್ರೀ ಗುರುದೇವರು ಪ್ರವಚನವನ್ನು ಪ್ರಾರಂಭಿಸಿ ಈ ವಿಧದಲ್ಲಿ ಮಾತನಾಡಿದರು. "ಈ 18 ಅನ್ನುವ ಸಂಖ್ಯೆಯು ಒಂದು ಪೂರ್ಣವಾದ ಸಂಖ್ಯೆ. ಯಜ್ಞದಲ್ಲಿ ಸಂಖ್ಯೆಯು 18 ಆಗಿದೆ. 15 ಮಂದಿ ಋತ್ವಿಕ್ಕುಗಳು, ಸತಿ ಪತಿಗಳಿಬ್ಬರು, ಉಪದ್ರಷ್ಟ ಒಬ್ಬರು— ಹೀಗೆ 18 ಸಂಖ್ಯೆಯಾಗಿದೆ. ಮಹಾಭಾರತ 18 ಪರ್ವಗಳು, ಶ್ರೀಮದ್ಭಗವದ್ಗೀತೆ 18 ಅಧ್ಯಾಯಗಳು. ಯುದ್ಧವು ನಡೆದದ್ದು 18 ದಿನಗಳೇ. ಆ ಯುದ್ಧದ ಬಲವು 18 ಅಕ್ಷೋಹಿಣೀ ಸೈನ್ಯವೆಂತಲೂ ಮತ್ತು ಪುರಾಣಗಳು 18 ಎಂತಲು, ವಾಶಿಷ್ಠದಲ್ಲಿ ಶಿಖಿಧ್ವಜನು ಮಾಡಿದ ತಪಸ್ಸು 18 ವರ್ಷಗಳು. ವಾಶಿಷ್ಠ ರಾಮಾಯಣದಲ್ಲಿ ವಶಿಷ್ಠ ಮಹರ್ಷಿಗಳು ಶ್ರೀರಾಮನಿಗೆ ಬೋಧಿಸಿರುವುದು 18 ದಿನಗಳೆಂದು ಹೇಳುತ್ತಾರೆ. ಈ ಪ್ರಕಾರ 18ಎನ್ನುವ ಸಂಖ್ಯೆ ಪೂರ್ಣಸಂಖ್ಯೆ. ವಿಶಿಷ್ಟವಾದ ಪ್ರಾಶಸ್ತ್ಯದಿಂದೊಪ್ಪುತ್ತೆಂದು ಕಾಣುತ್ತದೆ.

ಶ್ರೀ ಗುರುದೇವರ ಈ ಚಾತುರ್ಮಾಸ್ಯ ಮಹಾವ್ರತವು ಕೂಡಾ 18ನೆಯದಾಗಿದೆ. ಈ ಮಹಾಕಾರ್ಯವು ಇಲ್ಲಿಯೇ ಗುರುಸ್ಥಾನದಲ್ಲಿಯೇ ನಡೆಸಿಕೊಳ್ಳುವುದೊಂದು ವಿಶೇಷ. ಶ್ರೀಗುರುದೇವರ ಕೃಪಾಮಯ ಛತ್ರದಲ್ಲಿ ವ್ರತವು ಸಾಂಗ ಮಂಗಳವಾಗಿ ನಡೆಯಲಿ!. ನಿಮ್ಮೆಲ್ಲರ ಸದಿಚ್ಛೆಯು ಸಫಲವಾಗಲಿ". ಈ ಪ್ರಕಾರವಾಗಿ ಸಂಭಾಷಿಸುತ್ತಾ ಪ್ರಸ್ಥಾನತ್ರಯ ಮಹಾಗ್ರಂಥ ಮೂಲದಿಂದಲೇ ಬ್ರಹ್ಮಸೂತ್ರಗಳ ವ್ಯಾಖ್ಯೆ ಪ್ರಾರಂಭಿಸಿದರು ಮತ್ತು ನೈಷ್ಕರ್ಮ್ಯಸಿದ್ಧಿ ಗ್ರಂಥ ವ್ಯಾಖ್ಯೆಯು ಈ ನಾಲ್ಕು ತಿಂಗಳಲ್ಲಿ ಕ್ರಮವಾಗಿ ನಡೆಸಲು ಉಪಕ್ರಮಿಸಿ, ಮೊದಲು

ಅದರ ಸಂಗ್ರಹಾರ್ಥವನ್ನು ಹೇಳಿದರು. ಸಾಯಂಕಾಲದಲ್ಲಿ ಪೂಜಾನುಷ್ಠಾನಾನಂತರ ಗೀತಾಶಾಸ್ತ್ರ ಶ್ರವಣ ನಡೆಯಿತು. ಇದರಂತೆ ಅವಿಚ್ಛಿನ್ನವಾಗಿ ಈ ಅಷ್ಟಾದಶ ಚಾತುರ್ಮಾಸ್ಯ ಮಹಾವ್ರತವು 13–7–62 ಮೊದಲು 9–11–62 ವರೆಗೂ ಶಿವಪ್ರದವಾಗಿ ನಡೆದು ಪೂರ್ಣವಾಯಿತು. ಶ್ರೀ ಪಂಪಾಕ್ಷೇತ್ರದಲ್ಲಿ ದೀಕ್ಷಾ ವಿರಮಣ ನಡೆಯಿತು.

'ನೈಷ್ಕರ್ಮ್ಯ ಸಿದ್ಧಿ' ಉತ್ತಮೋತ್ತಮವಾದ ವೇದಾಂತ ಪ್ರಕರಣ ಗ್ರಂಥ. ನಿಷ್ಕ್ರಿಯಾತ್ಮಾನುಭವ ಸ್ಥಿತಿಯನ್ನು ಕೊಡುವ ಸರ್ವೋಪನಿಷತ್ಸಾರ ಸಂಗ್ರಹ. ಅಧಿಕಾರಿಯಾದಾತನು ಈ ಗ್ರಂಥವನ್ನು ಶ್ರೀಗುರುಮುಖದಿಂದ ಶ್ರವಣ ಮಾಡಲು ಅಜ್ಞಾನ ನಿವೃತ್ತಿ ದ್ವಾರಾ ಅಹಂ ಬ್ರಹ್ಮಾಸ್ಮಿ ಇತ್ಯಾಕಾರ ಸಹಜ ಸ್ಥಿತಿಯನ್ನುಂಟು ಮಾಡುವದು. ಬ್ರಹ್ಮಾಂಶ ಸಂಭೂತರಾದ ಶ್ರೀಸುರೇಶ್ವರಾಚಾರ್ಯರಿಂದ ಈ ಗ್ರಂಥವು ಗ್ರಥಿತವಾಗಿದೆ. ತಮ್ಮ ಗುರುಗಳಾದ ಶ್ರೀಶಂಕರ ಭಗವತ್ಪಾದಾಚಾರ್ಯರ ಆಜ್ಞಾನುಸಾರ ಬರೆದಿದ್ದಾರೆ. ಅವರ ಗುರುಗಳ ಉಪದೇಶ ಸಾಹಸ್ರಗ್ರಂಥದಲ್ಲಿನ ವಾಕ್ಯಗಳು ಕೂಡಾ ಪ್ರಮಾಣವಾಗಿ ಇದರಲ್ಲಿ ಉಲ್ಲೇಖಿಸಿದ್ದಾರೆ. ಇದರಲ್ಲಿ 4 ಪ್ರಕರಣಗಳಿವೆ. ಅತಿ ಮುಖ್ಯವಾದ್ದರಿಂದ ಪೂರ್ವಾಧ್ಯಾಯದಲ್ಲಿನ ವಿಷಯಗಳು ಪುನರಪಿ ಉತ್ತರಾಧ್ಯಾಯದಲ್ಲಿಯೂ. ಉತ್ತರಾಧ್ಯಾಯ ವಿಷಯಗಳು ಪೂರ್ವದಲ್ಲಿಯೂ ಅಲ್ಲಲ್ಲಿ ಪ್ರಕಾರಾಂತರವಾಗಿ ಪ್ರತಿಪಾದಿಸಲ್ಪಟ್ಟಿವೆ.

**ಮೊದಲನೆಯ ಅಧ್ಯಾಯ :** ಅಧಿಕಾರಿ, ಸಂಬಂಧ, ವಿಷಯ ಪ್ರಯೋಜನಗಳನ್ನು ಹೇಳಿ ಸ್ವಯಂ ಸಿದ್ಧವಾದ ಅದ್ವಿತೀಯಾತ್ಮನಲ್ಲಿ ಅಜ್ಞಾನದಿಂದ ಆಧ್ಯಾತ್ಮಿಕಾದಿ ದುಃಖತ್ರಯವು ಕಲ್ಪಿಸಲ್ಪಟ್ಟಿದೆಂತಲೂ, ಆಗಂತುಕಗಳಾದ ಉಪಾಯಗಳಿಂದ ಇವುಗಳ ಆತ್ಯಂತಿಕ ದುಃಖನಿವೃತ್ತಿ ಆಗುವದಿಲ್ಲವೆಂತಲೂ. ಆತ್ಮ ಸ್ವರೂಪಾಜ್ಞಾನದಿಂದ ದ್ವೈತ ಪ್ರಪಂಚ,ತನ್ಮೂಲಕ ಶುಭಾಶುಭಗಳ ಅಧ್ಯಾಸ. ತತ್ಕಾರಣವಾಗಿ ರಾಗದ್ವೇಷಗಳು, ಆ ಮೂಲಕ ಪುಣ್ಯಪಾಪಗಳು, ಆದರಿಂದ ದೇಹ ಪರಿಗ್ರಹ, ಇದರಿಂದ ದುಃಖ ಪ್ರತೀತಿ. ಈ ಪ್ರಕಾರವಾಗಿ ನಿತ್ಯ ಸುಖ ಸ್ವರೂಪನಾದ ಆತ್ಮನನ್ನು ಸುಖ ದುಃಖಗಳು ಆವರಿಸುತ್ತವೆ. ಇದೇ ಅಜ್ಞಾನ. ಇದು ಆತ್ಮಜ್ಞಾನದ ವಿನಾ ಅನ್ಯಥಾ ಉಪಾಯಗಳಿಂದ ನಿವೃತ್ತಿಯಾಗದು.

ಅನರ್ಥ, ಅನರ್ಥ ಕಾರಣ, ಪುರುಷಾರ್ಥ, ಪುರುಷಾರ್ಥ ಸಾಧನ ಎನ್ನುವ ವಿಷಯಗಳನ್ನು ಪ್ರತಿಪಾದಿಸುತ್ತಾ, ಅಹಂಕಾರವೇ ಅನರ್ಥ, ಈ ಅನರ್ಥ ಕಾರಣ ಅಜ್ಞಾನ, ಸರ್ವಾನರ್ಥ ನಿವೃತ್ತಿಪೂರ್ವಕ ಶಾಶ್ವತಾನಂದ ಲಕ್ಷಣಾತ್ಮಕವಾದ ಕೈವಲ್ಯವೇ ಮೋಕ್ಷ, ಅಂದರೆ ಪುರುಷಾರ್ಥ. ಇಂಥಾ ಪುರುಷಾರ್ಥ ಸಾಧನವು

ಜ್ಞಾನವೇ ಎಂದು ಹೇಳಲ್ಪಟ್ಟಿದೆ. ಇನ್ನು ಈ ಪುರುಷಾರ್ಥ ಸಾಧನೆಯ ವಿಷಯವಾಗಿ ಕರ್ಮವೇ ಮುಕ್ತಿಗೆ ಸಾಧನವೆಂತಲೂ, ಕರ್ಮಾಂಗವಾಗಿ ಉಳ್ಳ ಜ್ಞಾನವೇ ಸಾಧನವೆಂತಲೂ, ಅಲ್ಲದೆ ಜ್ಞಾನಾಂಗವಾಗಿ ಉಳ್ಳ ಕರ್ಮವೇ ಮುಕ್ತಿಯೆಂತಲೂ, ಕರ್ಮ ಜ್ಞಾನ ಸಮುಚ್ಚಯವೇ ಮುಕ್ತಿ ಎಂತಲೂ ವಿವಿಧ ರೀತಿಗಳಿಂದ ಹೇಳುವ ಕರ್ಮ ಮೀಮಾಂಸಕರ ಪೂರ್ವಪಕ್ಷ ಸಿದ್ಧಾಂತಗಳು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿವೆ. ಇದರಲ್ಲಿ ಆಚಾರ್ಯರಿಗೆ ಕ್ರಮಸಮುಚ್ಚಯವು ಅಂಗೀಕಾರ ಯೋಗ್ಯವೆಂತಲೂ, ಮುಕ್ತಿಯ ಸಮಕಾಲದಲ್ಲಿ ಉಕ್ತ ಕರ್ಮಾದಿಗಳ ಅಪೇಕ್ಷೆಯಿಲ್ಲ, ಕರ್ಮ ಸಮುಚ್ಚಯವಲ್ಲ. ಜ್ಞಾನದಿಂದಲೇ ಅಜ್ಞಾನ ನಿವೃತ್ತಿಯೆಂಬ ಇತ್ಯಾದಿ ವಿಷಯಗಳು ಮೊದಲನೆಯ ಅಧ್ಯಾಯದಲ್ಲಿವೆ.

**ಎರಡನೆಯ ಅಧ್ಯಾಯ :** ಇದು ಅನ್ವಯ ವ್ಯತಿರೇಕಗಳಿಂದ ಯುಕ್ತವಾಗಿ ತ್ವಂ ಪದಾರ್ಥ ಶೋಧನೆಯನ್ನು ಹೇಳುತ್ತೆ. ಮುಮುಕ್ಷುಗಳು ಈ ಪ್ರಕರಣವನ್ನು ಶ್ರದ್ಧೆಯಿಂದ ಕೇಳಿ ಆಲೋಚಿಸಿ ವಿಷಯ ವಿಮರ್ಶೆಯನ್ನು ತಿಳಿಯಬೇಕು. ಪ್ರತ್ಯಕ್ಷಾದಿ ಪ್ರಮಾಣಗಳು ಭೌತಿಕವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ವಿಷಯಗಳನ್ನು ಮಾತ್ರ ಪ್ರಕಾಶಪಡಿಸುತ್ತವೆ. ಆತ್ಮತತ್ತ್ವವು ಅಪ್ರಮೇಯವಾದ್ದರಿಂದ ವಿಷಯವಲ್ಲವೆಂತಲೂ ಅದು ಸ್ವಯಂ ಸಿದ್ಧವಾದ ಅನುಭವವೆಂದರಿಯಬೇಕು. ಅವಿಚಾರ ಸಿದ್ಧವಾದ ಈ ಅಜ್ಞಾನವು ಮಹಾವಾಕ್ಯಾರ್ಥಜನ್ಯಜ್ಞಾನದಿಂದಲೇ ವಿನಾ ಅನ್ಯಥಾ ಸ್ಮರಣಧ್ಯಾನಾದಿಗಳಿಂದ ಉಂಟಾಗುವದಲ್ಲೆಂದು ತಿಳಿಯಬೇಕು. ಮಹಾವಾಕ್ಯವನ್ನು ಶ್ರವಣ ಮಾಡಿದರೂ ಕೆಲವರಿಗೆ ಜ್ಞಾನವು ಉಂಟಾಗದೆ ಹೋಗುವದಕ್ಕೆ ಕಾರಣ, ತ್ವಂ ಪದಾರ್ಥ ಶೋಧನೆ ಚೆನ್ನಾಗಿ ಮಾಡದಿರುವುದೇ. ಯಾರಿಗೆ ತ್ವಂ ಪದ ಶೋಧನೆಯು ಚೆನ್ನಾಗಿ ಆಗಿದೆಯೋ ಅಂದರೆ ಅಹಂಕಾರಾದಿ ದೇಹ ಪರ್ಯಂತವಾದ ಸರ್ವ ಸಂಘಾತವನ್ನು ನಾನಲ್ಲ, ನನ್ನದಲ್ಲೆಂದು ನಿರ್ವಿಪ್ಪಾರ್ಥವನ್ನು ಅರಿತಿರುವರೋ, ಅವರಿಗೆ ಬಾರಿಬಾರಿಗೂ ವಾಕ್ಯಾರ್ಥ ಶ್ರವಣ ಮಾಡಬೇಕಾದ ಅಗತ್ಯವಿಲ್ಲ. ಸಕೃಚ್ಛ್ರವಣ ಮಾತ್ರದಿಂದಲೇ ಅಧಿಕಾರಿಗೆ ಅಹಂ ಬ್ರಹ್ಮಾಸ್ಮಿ ಎಂಬ ಅನುಭವವು ಆಗುವದು. ಅಂಥಾ ಅನುಭವವು ಯಾರಿಗೆ ಆಗಿಲ್ಲವೋ ಅವರು ಅನ್ವಯ ವ್ಯತಿರೇಕಗಳಿಂದ ಶ್ರದ್ಧೆಯಾಗಿ ಶ್ರವಣ ಮಾಡಬೇಕು. ಅನ್ವಯವೆಂದರೆ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಏಕವಾಗಿರುವ ತಾನು ಅಂದರೆ ಚೈತನ್ಯ. ಇನ್ನು ವ್ಯತಿರೇಕವೆಂದರೆ ಅನ್ಯಧರ್ಮ ಉಳ್ಳದ್ದಾಗಿ ದೃಷ್ಟ ನಷ್ಟವಾಗುವಂಥಾ ಅಹಂಕಾರಾದಿ ದೇಹ ಪರ್ಯಂತ ಯಾವದೃಶ್ಯ ಪದಾರ್ಥಗಳು.

ಹೀಗೆ ಅನ್ವಯ ವ್ಯತಿರೇಕ ದೃಷ್ಟಿಯಿಂದ ದೇಹವು ಆತ್ಮ ಅಲ್ಲವೆಂದು ನಿರೂಪಿಸಿ ದೃಷ್ಟ, ದೃಶ್ಯ ವಿಭಾಗಪೂರ್ವಕ ದ್ರಷ್ಟನ ಅನ್ವಯ ದೃಶ್ಯದ ವ್ಯತಿರೇಕವನ್ನು

ತೋರಿಸಿ ಅಹಂಕಾರ ಮಮಕಾರ ಪ್ರಯತ್ನೇಚ್ಛಾದಿ ಧರ್ಮಗಳು ಸುಷುಪ್ತವಸ್ಥೆಯಲ್ಲಿ ಇರುವದಿಲ್ಲವಾದ್ದರಿಂದ ಅನಾತ್ಮವೆಂತಲೂ, ಯಾವಾಗಲೂ ಇರುವ ಸಾಕ್ಷಿ ತಾನಾದ್ದರಿಂದ ಅಂತಃಕರಣ ವಿಕಾರವಾದ ಅಹಂಕಾರ, ತದ್ಧರ್ಮಾದಿಗಳು ಅವಿಚಾರ ಸಿದ್ಧವಾದ ಅಧ್ಯಾಸ ಭ್ರಾಂತಿಯಿಂದ ಆತ್ಮನಲ್ಲಿ ಕಾಣುತ್ತವೆ.

ಪ್ರಯುಕ್ತ ಸಾಕ್ಷಿಯಾದ ಆತ್ಮ ಅವಿಕಾರಿಕೂಟಸ್ಥನೆಂದು ತಿಳುಹುತ್ತಾ ಸಾಂಖ್ಯ ವೇದಾಂತ ಸಿದ್ಧಾಂತದಲ್ಲಿರುವ ವೈಲಕ್ಷಣ್ಯವನ್ನು, ಅಂದರೆ ಆತ್ಮನು ನಾನಾಯೆಂಬುವಾಗಿ ಸಾಂಖ್ಯರು ಹೇಳುತ್ತಾರೆ. ಏಕವೆಂದು ವೇದಾಂತ ಹೇಳುತ್ತೆ. ಆದಕಾರಣ ಏಕವಾದ ಆತನಲ್ಲಿ ಉಪಾಧಿಮೂಲಕ ಭಾಸವಾಗುವ ಈ ಅನಾತ್ಮ ವಿಕಾರಗಳೆಲ್ಲವೂ ಕೇಶೋಂಡ್ರಗಳಂತೆ ಕಲ್ಪನೆ. ಕೇಶೋಂಡ್ರಗಳೆಂದರೆ ಬಿಸಿಲು ಹೊತ್ತಿನಲ್ಲಿ ಕಣ್ಣುಗಳನ್ನು ತೆರೆದು ಮೇಲಕ್ಕೆ ಆಕಾಶದಲ್ಲಿ ನೋಡುತ್ತಿರಲು ಏನೋ ಕೂದಲಷ್ಟು ಸಣ್ಣಗೆ ಸುಳಿಸುಳಿಯಾಗಿ ಹೋದಂತೆ ಕಾಣುತ್ತೆ. ಏನೂ ಇಲ್ಲದಲೇ ಹಾಗೆ ಕಣ್ಣಿಗೆ ಕಾಣಿಸಿದಂತೆ ಸಾಕ್ಷಿಯಾದ ಆತ್ಮ ಏಕ, ಅವನಲ್ಲಿ ಏನೂ ಇಲ್ಲ; ಆದ್ದರಿಂದ ಅದ್ವೈತ ಸಿದ್ಧಾಂತಕ್ಕೆ ಭಂಗವಿಲ್ಲ. ಇತರೇತರಾಧ್ಯಾಸಸಿದ್ಧವಾದ ಈ ಆತ್ಮಾನಾತ್ಮಗಳ ಸಂಬಂಧ ಯಥಾರ್ಥವಾದ ಆತ್ಮಜ್ಞಾನದಿಂದ ನಿವೃತ್ತಿಯಾಗುತ್ತೆ ಎಂತಲೂ, ಹೀಗೆ ಸರ್ವ ವಿಲಕ್ಷಣಾತ್ಮ ತಾನೆಂದು ತಿಳಿಯುವದರಿಂದ ಅಹಂ,ಮಮ, ನಾನು, ನನ್ನದೆಂದು ಕಾಣಿಸುವ ಮಿಥ್ಯಾಜ್ಞಾನವು ಈ ಅನ್ವಯ ವ್ಯತಿರೇಕಗಳಿಂದ ದೂರಾಗುತ್ತೆಂದು ಹೇಳಿ ಕಡೆಗೆ ಸುಪ್ರಣವಾನುಸಂಧಾನಾತ್ಮಕವಾದ ಅರ್ಥವುಳ್ಳ ಒಂದು ಶ್ಲೋಕದಿಂದ ಈ ಅಧ್ಯಾಯ ಪೂರ್ಣವಾಗುತ್ತೆ.

**ಮೂರನೆಯ ಅಧ್ಯಾಯ :** ಹೀಗೆ ಪದ ಪದಾರ್ಥ ಜ್ಞಾನವುಳ್ಳ ಆತನಿಗೆ ವಾಕ್ಯವು ಸ್ವರೂಪಾಜ್ಞಾನ ನಿವೃತ್ತಿದ್ವಾರಾ ಅಖಂಡಾದ್ವಿತೀಯಾರ್ಥವನ್ನು ಬೋಧಿಸುತ್ತೆಂಬ ವಿಷಯವು ಈ ಅಧ್ಯಾಯದಲ್ಲಿ ವಿಪುಲವಾಗಿ ಹೇಳಲ್ಪಟ್ಟಿದೆ. ಅಜ್ಞಾನವು ಸ್ವಾಶ್ರಯ, ಸ್ವವಿಷಯ. ತನ್ನನ್ನೇ ಆಶ್ರಯಿಸಿ ತನ್ನನ್ನೇ ವಿಷಯವಾಗಿ ಅಂದರೆ ತನ್ನನ್ನೇ ಮುಚ್ಚುವುದೆಂದರ್ಥ. ಇದು ಮಹಾವಾಕ್ಯಾರ್ಥ ಜ್ಞಾನದಿಂದಲೇ ನಿವೃತ್ತಿಯಾಗುವುದೆಂದು ವಿಸ್ತೃತ ವ್ಯಾಖ್ಯೆಯಿದೆ. ವಾಕ್ಯಾರ್ಥ ಜ್ಞಾನವಾಗಬೇಕೆಂದರೆ ತತ್, ತ್ವಂ ಪದಗಳಿಗೆ ಇರುವ ಸಾಮಾನಾಧಿಕರಣ ಸಂಬಂಧವನ್ನು ಜೀವ ಪರಮಾತ್ಮಾದಿ ಪದಾರ್ಥಗಳಿಗೆ ಇರುವ ವಿಶೇಷಣ ವಿಶೇಷ್ಯ ಭಾವಸಂಬಂಧವನ್ನು, ವಾಕ್ಯಕ್ಕೆ ಲಕ್ಷ್ಯ ಲಕ್ಷಕ ಭಾವಸಂಬಂಧವನ್ನು ವಿಸ್ಪಷ್ಟವಾಗಿ ತಿಳಿಸಿದ್ದಾರೆ. ಅಂದರೆ ತತ್ತ್ವಮಸಿ ಮಹಾವಾಕ್ಯದಲ್ಲಿ ತತ್, ತ್ವಂ ಪದಗಳಿಗೆ ಏಕ ವಿಭಕ್ತಿಪ್ರತ್ಯಯಾತ್ಮಕವಾದ ಸಾಮಾನಾಧಿಕರಣ ಸಂಬಂಧವಿದೆ. ಆದ್ದರಿಂದ ಈ ವಾಕ್ಯವಲ್ಲಿ 'ನೀಲ ಮುತ್ಪಲಂ' ಅಂದ ಹಾಗೆ, ಪದಗಳಿಂದ ಪದಾರ್ಥಗಳಿಗೆ ವಿಶೇಷಣ ವಿಶೇಷ್ಯ ಭಾವ

ಸಂಬಂಧವಿದೆ. ತ್ವಂ ಪದಾರ್ಥವು ತತ್ಪದಾರ್ಥಾಭಿನ್ನವೇ ಎಂದರ್ಥ. ಅನ್ವಯ ವ್ಯತಿರೇಕಗಳಿಂದ ವಿಚಾರಿಸಿ ಆತ್ಮ ನಾನೇಯೆಂಬ ವಿವೇಕ ದೃಷ್ಟಿ ಇಲ್ಲದವನಿಗೆ, ನಾನು ದುಃಖಿ ಎಂತಲೂ, ಕಿಂಚಿಜ್ಞನೆಂತಲೂ, ಅದ್ವಿತೀಯವಾದ ಪರಮಾತ್ಮ (ಪರಬ್ರಹ್ಮ) ಪರೋಕ್ಷವೆಂತಲೂ ಕಾಣುವದು. ಆದರೇ ಈ ವಿಶೇಷಣ ವಿಶೇಷ್ಯಭಾವ ಸಂಬಂಧ ದಿಂದ ಕಿಂಚಜ್ಞತ ದುಃಖಿತ್ವಾದಿಗಳೂ ಪರಮಾತ್ಮನಲ್ಲಿ ಪರೋಕ್ಷತ್ವ ಅನಾತ್ಮತ್ವವು ನಿವಾರಣೆಯಾಗುವದು. 'ತ್ವಂ-ತದಸಿ, ತತ್ತ್ವಮಸಿ' ಅಂದ ಹಾಗೆ ಅನ್ವಯವನ್ನು ಗ್ರಹಿಸಬೇಕು.

ಆಗ ತತ್, ತ್ವಂ ಪದಗಳಲ್ಲಿನ ವಿರುದ್ಧಾರ್ಥವನ್ನು ಬಿಟ್ಟು ಲಕ್ಷ್ಯ ಲಕ್ಷ್ಯಕ ಭಾವಸಂಬಂಧದಿಂದ ಅರ್ಥಾತ್ ಜಹದ ಜಹಲ್ಲಕ್ಷಣದಿಂದ-ಭಾಗತ್ಯಾಗ ಲಕ್ಷಣದಿಂದ ಅಖಂಡಾದ್ವಿತೀಯಾರ್ಥವನ್ನು ತಿಳಿಸುವದೆಂದು, ಲಕ್ಷ್ಯ ಲಕ್ಷ್ಯಕ ಭಾವಸಂಬಂಧ ವಿಷಯವನ್ನು ನಿರೂಪಿಸಿದ್ದಾರೆ. ಅಜ್ಞಾನದಿಂದ ಅಹಂಕಾರ ಆತ್ಮಗಳಿಗೆ ಸಂಬಂಧ ವಿದ್ದಂತಿದೆ. ವಸ್ತುತಃ ಇಲ್ಲವೆಂಬುವದಾಗಿ, ಪುನರಪಿ ಪೂರ್ವಾಧ್ಯಾಯದಲ್ಲಿನ ಅನ್ವಯ ವ್ಯತಿರೇಕಪೂರ್ವಕ ತತ್, ತ್ವಂ ಪದಗಳ ಅಭೇದಾರ್ಥವನ್ನು ನಿರೂಪಿಸುತ್ತಾ, ತ್ವಂ ಪದದಲ್ಲಿನ ಅಹಂಕಾರವನ್ನು ತತ್ಪದದಲ್ಲಿನ ಪರೋಕ್ಷತ್ವವನ್ನು-ಮಿಥ್ಯಾತ್ಮತ್ವವನ್ನು ಚೆನ್ನಾಗಿ ತಿಳಿಸಿದ್ದಾರೆ. ಬೋಧೆಗೋಸ್ಕರ ಆತ್ಮನಲ್ಲಿ-ಅಜ್ಞಾನವು ಭಾವ ಪದಾರ್ಥವೇ ಎಂದರೂ, ತತ್ತ್ವತಃ ಇಲ್ಲದ್ದೇ ಅತ್ಯಂತಾಭಾವವೆಂದು ಬೋಧಿಸುತ್ತಾ, ಅಜ್ಞಾನವೆಂಬ ನಿದ್ರೆಯಿಂದ ಅರ್ಥಾತ್ ವಿಪರೀತ ಜ್ಞಾನದಿಂದ ಅವನನ್ನು ಶ್ರುತಿ, ಗುರುಗಳು ಎಚ್ಚ ರಗೊಳಿಸುತ್ತಾರೆ. ತತ್ತ್ವಮಸಿ ಮಹಾವಾಕ್ಯ ವಿನಾ ಅನ್ಯಪ್ರಮಾಣಗಳಿಂದ ಯಥಾರ್ಥ ಆತ್ಮಜ್ಞಾನವಾಗದು. ಇದು ಉಪಾಸನಾಪರವಲ್ಲ. ಇಲ್ಲಿ ಪ್ರಸಂಖ್ಯಾನವು ಕುದುರುವ ದಿಲ್ಲ. ಒಂದುವೇಳೆ ಇವು ಯಾವು ಇಲ್ಲದೇ ಹೋದರೆ ನಾನು ಇದನ್ನು ಹೇಗೆ ತಿಳಿ ಯಲಿ ? ಅಂದರೆ ಮತ್ತೆ ಮತ್ತೆ ವಾಕ್ಯ ಶ್ರವಣಾದಿಗಳನ್ನೇ ಮಾಡುತ್ತಿರು ಎಂಬು ದಾಗಿ ಈ ಮೊದಲಾದ ವಿಷಯಗಳನ್ನು ತಿಳುಹಿಸುತ್ತಾ ಈ ಅಧ್ಯಾಯ ಮುಗಿದಿದೆ.

**ನಾಲ್ಕನೆಯ ಅಧ್ಯಾಯ :** ಇದರಲ್ಲಿ ಫಲವರ್ಣನ, ಉಕ್ತ ಮೂರು ಅಧ್ಯಾಯಗಳಲ್ಲಿನ ಸಂಕ್ಷಿಪ್ತ ವಿಷಯ ಪ್ರತಿಪಾದನೆ.

ಸ್ವಪ್ನದಲ್ಲಿ ಕಾಣಿಸಿದ ವ್ಯಾಘ್ರಾದಿಗಳ ಘರ್ಜನೆ ಆ ಸ್ವಪ್ನಪ್ರಪಂಚದಿಂದ ಎಚ್ಚರ ಗೊಳಿಸಿದಂತೆ, ಮಹಾವಾಕ್ಯಾರ್ಥಜನ್ಯ ಜ್ಞಾನಾನಂತರ ಶಾಸ್ತ್ರ, ಗುರು, ಶಿಷ್ಯಾದಿ ಯಾವ ಭೇದವಿಲ್ಲದ ಅಖಂಡಾದ್ವಿತೀಯ ಸ್ಥಿತಿಯಿಂದ ತಾನೇ ತಾನಾಗಿರುವನು. ಆತನ ವ್ಯವಹಾರವು ಬ್ರಹ್ಮಾಭಿನ್ನವಾಗಿದೆ. ಕಾರಣ ಕ್ರಿಯಾಕಾರಕ ಫಲರಹಿತವಾದ ಪೂರ್ಣ ಸ್ಥಿತಿಯಿಂದಿರುವನು. ಆದ್ದರಿಂದ ಪ್ರವೃತ್ತಿ ಕಾರಣವಾದ ಕಾಮವು ದಗ್ಧ ವಾಗಿ ಹೋಗಿದೆ. ಆದರೇ ಇಲ್ಲಿ ಮತ್ತೊಂದು ಮಾತು. ಇದು ಅಲೇಪಕ ಮತದಂತ

ಸ್ವೇಚ್ಛಾಚಾರಿಯಾಗಿ ಹೇಗೋ ಇರುತ್ತಾನೆಂದು ಅರ್ಥಮಾಡಬಾರದು. ಅಪರೋಕ್ಷ ಬ್ರಹಾನುಭವಿಗೆ ಧರ್ಮಾಧರ್ಮಗಳ ತಾದಾತ್ಮ್ಯವಿಲ್ಲದ ಪೂರ್ಣಸ್ಥಿತಿ ಎಂದು ಗ್ರಹಿಸಬೇಕು. ಇತ್ಯಾದಿಯಾಗಿ ನೈಷ್ಕರ್ಮ್ಯ ಸಿದ್ಧಿಗ್ರಂಥ ಸಂಗ್ರಹಾರ್ಥವನ್ನು ಶ್ರೀಗುರುದೇವರು 18 ನೇ ಚಾತುರ್ಮಾಸ್ಯ ಮಹಾವ್ರತಾರಂಭದ ಮೊದಲ ದಿನಗಳಲ್ಲಿ ಶ್ರುತಿಯುಕ್ತ್ಯನುಭವಗಳಿಂದ 2, 3 ದಿನಗಳವರಿಗೂ ತಿಳುಹಿ, ಅನಂತರ ಕ್ರಮವಾಗಿ ಗ್ರಂಥವನ್ನು ಪ್ರತಿಪಾದಿಸಿದರು.

ಈ ವ್ರತ ಮಧ್ಯಕಾಲದಲ್ಲಿ ಭಕ್ತರೊಬ್ಬರು ಶ್ರದ್ಧಾಭಕ್ತಿಗಳೊಡನೆ ಪುರುಷಸೂಕ್ತದ ಅರ್ಥವು ಈ ದಿನ ಹೇಳಬೇಕೆಂದು ಬಯಸಿದರು. ಅದಕ್ಕೆ ಶ್ರೀಗಳವರು ದಯೆಯಿಂದ ಪುರುಷಸೂಕ್ತವನ್ನು ಅಧ್ಯಯನ ಮಾಡಬೇಕಾದರೆ, ಅದು ವೇದ ಭಾಗವಾದ್ದರಿಂದ ಸ್ವರಯುಕ್ತವಾಗಿ ಉದಾತ್ತ, ಅನುದಾತ್ತ ಸ್ವರಿತಗಳನ್ನು ಅರಿತು ಶುದ್ಧವಾಗಿ ಅನ್ನುತ್ತ ಹೇಳಬೇಕೆಂದು ನಿಯಮ. ಅದನ್ನು ಗಮನಿಸಿ ಗುರುಗಳಿಂದ ತಿಳಿದು ಭಕ್ತಿಯಿಂದ ಹೇಳಿಕೊಳ್ಳಬೇಕು; ತಪ್ಪುಗಳು ಹೇಳಬಾರದು.

ಇದರ ಅರ್ಥವೇನೆಂದರೆ ನೀವೆಲ್ಲರು ಅನುದಿನ ಶ್ರವಣಮಾಡುತ್ತಿರುವ ಪರ ಬ್ರಹ್ಮದ ವಿಷಯವೇ ಆಗಿದೆ. ಆ ಪರಮಾತ್ಮ ಸಮಷ್ಟಿ ಪ್ರಾಣರೂಪನು ಬ್ರಹ್ಮಾಂಡವೇ ದೇಹವಾಗುಳ್ಳ ವಿರಾಡ್ರೂಪನಾದ ಪುರುಷನೆಂದೂ ಕರೆಯಲ್ಪಡುವನು. ಆತನು ಸಹಸ್ರಾಧಿಕವಾಗಿ ಶಿರಸ್ಸುಗಳು, ಕಣ್ಣುಗಳು ಉಳ್ಳವನಾಗಿದ್ದಾನೆ. ಆ ಚೈತನ್ಯವೇ ಸರ್ವೋಪಾಧಿಗಳಲ್ಲಿ ಪ್ರಾಣಿಗಳ ರೂಪದಿಂದ ಬೆಳಗುತ್ತಿದೆ. 'ಸಹಸ್ರ ಶೀರ್ಷಾ ಪುರುಷಃ' ಎಂದರೆ ಅಸಂಖ್ಯಾತವಾದ ಈ ಸಮಸ್ತ ಬ್ರಹ್ಮಾಂಡವನ್ನು ಆತನು ವ್ಯಾಪಿಸಿ ಒಳಗೂ ಹೊರಗೂ ಇದ್ದಾನೆಂದು ಅರ್ಥ.

ಭೂತ ಭವಿಷ್ಯದ್ವರ್ತಮಾನ ಕಾಲತ್ರಯದಲ್ಲಿ ಕಾಣುವ ಜಗತ್ತೆಲ್ಲವೂ ಪರ ಬ್ರಹ್ಮ ಸ್ವರೂಪವೇ. ಎಲ್ಲಾ ಕಾಲಗಳಲ್ಲಿ ಅನುಸ್ಯೂತವಾಗಿರುವ ಆ ಪರಮಾತ್ಮನೇ ಈ ಬ್ರಹ್ಮಾಂಡಸ್ವರೂಪನು. ಈತನೇ ಮೋಕ್ಷಪ್ರದಾತ ಮತ್ತು ಪ್ರಾಣಿಗಳ ಭೋಗ್ಯ ಪದಾರ್ಥಗಳೆಲ್ಲವನ್ನೂ ಅತಿಕ್ರಮಿಸಿದ್ದಾನೆ. ಈ ಕಾಲತ್ರಯಾತ್ಮಕವಾದ ಜಗತ್ತೆಲ್ಲವು ಆತನ ಮಹಿಮೆಯೋ, ವಿಭೂತಿಯೋ. ಈ ಸರ್ವವೂ ನಾಲ್ಕು ಪಾದಗಳಿಂದಿರುವ ಆತನ ಅಂಶದಲ್ಲಿ ಒಂದು ಪಾದಮಾತ್ರವಾಗಿದೆ. ಮಿಕ್ಕ ಮೂರು ಪಾದಗಳು ನಾಶರಹಿತ ಸ್ವಪ್ರಕಾಶಾತ್ಮ ಸ್ವರೂಪವಾಗಿವೆ. ಆದ್ದರಿಂದ ಈ ಜಗತ್ತು ಸ್ವರೂಪ ಸಾಪೇಕ್ಷತೆಯಿಂದ ಅತ್ಯಲ್ಪವು. ತ್ರಿಪಾದ ಪುರುಷನಾದ ಆ ಪರಮಾತ್ಮ ಈ ಸಂಸಾರ ಸ್ಪರ್ಶರಹಿತನು. ಸರ್ವಾತೀತನು. ಆತನೇ ಈ ಚೇತನಾಚೇತನಾತ್ಮಕವಾದ ಪ್ರಪಂಚ ಕಲ್ಪನಾಧಾರವಾಗಿ ವ್ಯಾಪಿಸಿದ್ದಾನೆ.

ಆ ಆದಿಪುರುಷನಿಂದ-ಉಪಾಧಿ ಪ್ರವಿಷ್ಟಾತ್ಮನಿಂದ ಈ ಬ್ರಹ್ಮಾಂಡವು ಉತ್ಪನ್ನವಾಯಿತು. ಆತನೇ ಜೀವರೂಪದಿಂದ ಈ ಬ್ರಹ್ಮಾಂಡದಲ್ಲಿ ಪ್ರವೇಶಿಸಿ

ಬ್ರಹ್ಮಾಂಡಾಧಿದೇವತೆಯಾಗಿದ್ದಾನೆ. ಆಗ ದೇವತೆಗಳು ಆ ಪುರುಷ ಸ್ವರೂಪದಲ್ಲೇ ಮನಸ್ಸನ್ನು ಹವಿಸ್ಸಾಗಿ ಸಂಕಲ್ಪಿಸಿ. ಅಧ್ಯಾರೋಪ ದೃಷ್ಟ್ಯಾ ಮಾನಸ ಯಜ್ಞವನ್ನು ಮಾಡಿದರು. ಆಗ್ಗೆ ಬಾಹ್ಯ ಪದಾರ್ಥಗಳು ಯಾವೂ ಜನಿಸದೆ ಇರುವುದರಿಂದ ಈ ಯಜ್ಞಕ್ಕೆ ವಸಂತ ಋತುವೇ ಆಜ್ಯವಾಗಿಯೂ. ಗ್ರೀಷ್ಮ ಋತುವೇ ಸಮಿತ್ತುಗಳಾಗಿಯೂ. ಶರದೃತುವೇ ಹವಿಸ್ಸಾಗಿ ಆಯಿತು. ಅಂದರೆ ಮೊದಲು ಪುರುಷ ಸ್ವರೂಪವಾದ ಹವಿಸ್ಸು ಸಾಮಾನ್ಯವಾಗಿಯೂ. ಆಮೇಲೆ ವಸಂತಾದಿಗಳು ವಿಶೇಷ ಸ್ವರೂಪವಾಗಿಯೂ ಸಂಕಲ್ಪಿಸಲ್ಪಟ್ಟಿತು. ಅನಂತರ ಯಜ್ಞಸಾಧನ ಭೂತನಾದ ಪುರುಷನನ್ನು ಆಸನದಲ್ಲಿ ಕುಳ್ಳಿರಿಸಿ ಪೂಜಿಸಿದರು. ಅದು ಹೇಗೆಂದರೆ ಎಲ್ಲಾ ಸೃಷ್ಟಿಗೆ ಮೊದಲು ಜನಿಸಿದ ಆ ಪುರುಷರೂಪವಾದ ಪಶುವನ್ನು ದೇವತೆಗಳು ಪ್ರಜಾಪತಿ ಮೊದಲಾದ ಮುಖ್ಯಸ್ಥರು ಮತ್ತು ಋಷಿಗಳು ಪೂಜಿಸಿದರು. ಅರ್ಥಾತ್ ಯಜ್ಞ ಮಾಡಿದರು..

ಈ ವಿಧವಾಗಿ ದೇವತೆಗಳು ಯಾವಾಗ ಮಾನಸಿಕ ಯಜ್ಞವನ್ನು ಮಾಡುವರಾದರೋ ಪುರುಷ ಸ್ವರೂಪನಾದ ಪಶುವನ್ನು ತಂದು ಕಟ್ಟಿದರೋ ಆಗ ಗಾಯತ್ರ್ಯಾದಿ ಛಂದಸ್ಸುಗಳು ಸಪ್ತ ಸಮುದ್ರಗಳಾಗಿಯೂ. 12 ತಿಂಗಳು 6 ಋತುಗಳು 3 ಲೋಕಗಳು ಇವೆಲ್ಲವೂ 21 ಸಮಿತ್ತುಗಳಾಗಿ ಮಾಡಲ್ಪಟ್ಟವು. ಈ ವಿಧವಾಗಿ ಎಲ್ಲರಿಂದ ಪೂಜಿಸಲ್ಪಟ್ಟ ಆ ಪರಮಾತ್ಮನಿಂದ, ಮೊಸರಿನಿಂದ ಕೂಡಿದ ತುಪ್ಪ ಮೊದಲಾದ ಭೋಗ್ಯ ವಸ್ತುಗಳುಂಟಾದವು. ಪರಮಾತ್ಮ ವಾಯುದೇವತಾಕವಾದ ಅಡವಿಗಳಲ್ಲಿ ಮೃಗಾದಿಗಳನ್ನು ಗ್ರಾಮಗಳಲ್ಲಿ ಪಶುಗಳನ್ನು ಸೃಷ್ಟಿಸಿದನು. ಹೀಗೆ ಪೂಜಿಸಲ್ಪಟ್ಟ ಆ ಪುರುಷನಿಂದ ಋಗ್ವೇದ. ಸಾಮವೇದ ಹುಟ್ಟಿದವು. ಹಾಗೆ ಗಾಯತ್ರಿ ಮೊದಲಾಧ ಛಂದಸ್ಸು. ಯಜುರ್ವೇದ ಹುಟ್ಟಿದವು—ಮತ್ತು ಆತನಿಂದ ಅಶ್ವಗಳು. ಕೆಳಗೆ ಮೇಲೆ ದಂತಗಳುಳ್ಳ ಇತರ ಪ್ರಾಣಿಗಳು. ಹಸುಗಳು. ಕುರಿಗಳು ಮೊದಲಾದವುಗಳು ಉಂಟಾದವು. ಹೀಗೆ ಪರಮಾತ್ಮನನ್ನು ಯಾವಾಗ ದೇವತೆಗಳು ತಮ್ಮ ಮಾನಸಿಕ ಯಜ್ಞದಲ್ಲಿ ಸಂಕಲ್ಪಿಸಿದರೋ ಆಗ ಅವರು ಎಷ್ಟು ವಿಧವಾಗಿ ಸಂಕಲ್ಪಿಸಿದರು ? ಆತನ ಮುಖವು ಯಾವುದಾಯಿತು ? ಆತನ ಭುಜಗಳಾವು? ತೊಡೆಗಳು ಯಾವು? ಪಾದಗಳು ಯಾವು? ಎಂಬುದನ್ನು ಹೇಳುತ್ತಾನೆ.

ಆ ಪರಮಾತ್ಮನ ಮುಖದಿಂದ ಬ್ರಾಹ್ಮಣರು ಜನಸಿದರು. ಅಂದರೆ ಮುಖವು ಪ್ರಧಾನವು. ಭುಜಗಳಿಂದ ಕ್ಷತ್ರಿಯರು, (ಬಲ) ತೊಡೆಗಳಿಂದ ವೈಶ್ಯರು. (ಶಕ್ತಿ) ಪಾದಗಳಿಂದ ಶೂದ್ರರು (ಕರ್ಮ–ಕೆಲಸಕಾರ್ಯ) ಹುಟ್ಟಿದರು. ಆತನ ಮನಸ್ಸಿನಿಂದ ಚಂದ್ರನು, ಕಣ್ಣುಗಳಿಂದ ಸೂರ್ಯನು, ಮುಖದಿಂದ ಇಂದ್ರಾಗ್ನಿಗಳು ಮತ್ತು ಪ್ರಾಣದಿಂದ ವಾಯುವು ಉಂಟಾಯಿತು. ಹೀಗೆ ವಿರಾಟ್ಪುರುಷನ ನಾಭಿ

ಯಿಂದ ಅಂತರಿಕ್ಷವು, ಶಿರಸ್ಸಿನಿಂದ ದ್ಯುಲೋಕವು, ಪಾದಗಳಿಂದ ಭೂಮಿ, ಕಿವಿಗಳಿಂದ ದಿಕ್ಕುಗಳು ಹುಟ್ಟಿದವು.

ಈ ಪ್ರಕಾರ ಸರ್ವ ಪ್ರಾಣಿಗಳನ್ನುಂಟುಮಾಡಿ ಅವುಗಳಿಗೆ ಹೆಸರುಗಳನ್ನಿಟ್ಟು ವ್ಯವಹರಿಸುವಂತೆ ಮಾಡಿದರು. ಸೂರ್ಯನಂತೆ ಪ್ರಕಾಶರೂಪವಾಗಿ ಮನಸ್ಸಿಗೆ ಅತೀತವಾಗಿದ್ದ ಪರಮಾತ್ಮನನ್ನು ನಾನರಿತಿದ್ದೇನೆಂದು ಪೂರ್ವದಲ್ಲಿ ಬ್ರಹ್ಮ ಇಂದ್ರನಿಗೆ ಉಪದೇಶಿಸಿದನು (ತಿಳಿಸಿದನು). ಇಂದ್ರನು ಆ ಪರಮಾತ್ಮನನ್ನು ಚತುರ್ದಿಕ್ಕುಗಳಲ್ಲಿ ಪ್ರಚಾರ ಮಾಡಿದನು. ಅಂಥಾ ಪರಮಾತ್ಮನನ್ನು ಈ ಲೋಕದಲ್ಲಿ ಯಾವನು ಸಾಕ್ಷಾತ್ಕಾರ ಮಾಡಿಕೊಳ್ಳುವನೋ ಅಂದರೆ ತನ್ನ ಸ್ವರೂಪವಾಗಿ ತಿಳಿಯುವನೋ ಆತನು ಜನನ ಮರಣ ರಹಿತನಾಗುವನು. ಅರ್ಥಾತ್ ಸಂಸಾರ ಬಂಧ ವಿಮುಕ್ತನಾಗುವನು. ಈ ವಿಷಯಕವಾದ ಜ್ಞಾನವು ಅನುಭವೇತರ ಮಾರ್ಗದಿಂದೆ ಸಾಧ್ಯವಾಗದು. 'ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನ' ಎಂದು ಶ್ರುತಿ ಹೇಳುತ್ತಿದೆ. ಹೀಗೆ ದೇವತೆಗಳು ಪರಮಾತ್ಮನ ಮಾನಸ ಪೂಜೆಯನ್ನು ಮಾಡಿದರು. ಆ ಪುಣ್ಯಮಯ ಕಾರ್ಯಗಳು ಜಗತ್ತನ್ನು ಧರಿಸುವವಾಗಿಯೂ ಮುಖ್ಯವಾದವುಗಳಾಗಿವೆ. ಹೀಗೆ ಆ ಪರಮಾತ್ಮನನ್ನು ತಮ್ಮ ಆತ್ಮನಾಗಿ ಉಪಾಸಿಸುವ ಮಹಾತ್ಮರು ಪೂರ್ವದಲ್ಲಿ ದೇವತೆಗಳು, ಋಷಿಗಳು, ಯಾವ ಮುಕ್ತಿಯನ್ನು ಹೊಂದಿದರೋ ಅಂಥಾ ಮುಕ್ತಿಯನ್ನೇ (ಪರಮ ಪದವನ್ನೇ) ಹೊಂದುವರು. ಹೀಗೆಂದು ಪೂಜ್ಯ ಗುರುದೇವರು ಸಂಗ್ರಹವಾಗಿ ಅಲ್ಲಲ್ಲಿ ವಿವರಿಸುತ್ತಾ 3 ದಿನಗಳು ಬೋಧಿಸಿದರು.

## ಶ್ರೀಮದುತ್ತರಾಯಣ ಪುಣ್ಯಕಾಲ ಸದಾಚರಣೆ ಸಮಾರಂಭ

### ಶಿವ ಪಂಚಾಕ್ಷರೀ ಮಹಾಮಂತ್ರ ಪ್ರಭಾವ

ಗಂಜಿಗುಂಟೆ ಶ್ರೀಮಠ ಶ್ರೀ ಸದ್ಗುರು ಪ್ರಣವಾನಂದಾಶ್ರಮದಲ್ಲಿ ಶ್ರೀಗಳವರ ಶ್ರೀಮದುತ್ತರಾಯಣ ಪುಣ್ಯಕಾಲ 14–1–1963 ಶ್ರೀಗಳವರು ಶ್ರೀಗುರು ಅಧಿಷ್ಠಾನದಲ್ಲಿಯು ಶ್ರೀಚಂದ್ರಮೌಳೀಶ್ವರ–ಉಮಾಮಹೇಶ್ವರರಿಗೆ ಭಕ್ತಿಯಿಂದ ಮಹನ್ಯಾಸಪೂರ್ವಕ, ಶ್ರೀ ರುದ್ರಾಭಿಷೇಕಾದಿ ಸರ್ವೋಪಚಾರ ಪೂಜೆಗಳನ್ನು ವಿಧ್ಯುಕ್ತವಾಗಿ ಸಲ್ಲಿಸಿ ಭಕ್ತಿಯಿಂದ ಈ ವಿಧವಾಗಿ ಪ್ರವಚಿಸಿದರು:—

ಶ್ರೀಮದುತ್ತರಾಯಣ ಪುಣ್ಯಕಾಲದಲ್ಲಿ ಶ್ರೀಗುರುಗಳು ಶಾಸ್ತ್ರೋಕ್ತವಾಗಿ, ಗುರುಸಂಪ್ರದಾಯದಿಂದ ಸನಾತನವಾಗಿ ಬಂದ ಮಹಾಮಂತ್ರವನ್ನು ನಮಗೆ ಅನು

ಗ್ರಹಿಸಿದ ಪರ್ವದಿನವಿದು. ಶ್ರೀಗುರುವು ತನ್ನ ಶಿಷ್ಯನನ್ನು ತನ್ನ ಕೃಪಾಮಯ ದೃಷ್ಟಿಯಿಂದ ವೀಕ್ಷಿಸಿ, ವರದಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಟ್ಟು ಶಿವರೂಪ ನನ್ನಾಗಿ ಮಾಡಿ ಆ ಅನುಭವವನ್ನು ಪ್ರಸಾದಿಸುವನು. ಇದರಿಂದ ಶಿಷ್ಯನ ದೇಹ ತ್ರಯ ಶುದ್ಧವಾಗುವದು. ಪೂರ್ವಜನ್ಮ ನಿವೃತ್ತಿಯಾಗಿ ಪುನರ್ಜಾತನಾಗುವನು. ಶ್ರೀಗುರು ಪರಮಾತ್ಮನ ಕರುಣಾ ಕಟಾಕ್ಷದಿಂದಲೇ ಪವಿತ್ರನಾಗುವಿಕೆ. ಶ್ರೀಗುರುವಿನ ಕೃಪಾಮಯ ದೃಷ್ಟಿ ಶಿಷ್ಯನ ನೇತ್ರವೃತ್ತಿದ್ವಾರಾ ಆತನ ಭಕ್ತಿಮಯ ಮನೋರಂಗ ದಲ್ಲಿ ಅಂದರೆ ಭಾವನೆಯಲ್ಲಿ ವ್ಯಾಪಿಸಿ ಕರಣತ್ರಯವು ಕಾಂತಿವಂತವಾಗಿ ಬೆಳಗುವವು.

ಶುಭ ಮುಹೂರ್ತದಲ್ಲಿ ಸುಸ್ನಾತನಾಗಿ ಶ್ರೀಗುರು ಸನ್ನಿಧಿಗೆ ಬಂದು ದಂಡ ವತ್ಪ್ರಣಾಮಗಳನ್ನು ಆಚರಿಸಿ ನಿಂತ ಆತನನ್ನು ಶ್ರೀ ಗುರುಗಳು ತಮ್ಮ ಪಾದ ಸನ್ನಿ ಧಿಯಲ್ಲಿ ಕುಳ್ಳಿರಿಸಿಕೊಂಡು ಕಲಶೋದಕದಿಂದ ಸಂಪ್ರೋಕ್ಷಿಸಿ, ಗುರು ಪೂಜಾದಿ ಕಾರ್ಯಗಳನ್ನು ಮಾಡಿಸಿ, ಪರಿಶುದ್ಧಾಂತರಂಗನಾದ ಆತನ ದಕ್ಷಿಣ ಕರ್ಣದಲ್ಲಿ 'ಓಂ ನಮಃ ಶಿವಾಯ' ಎಂಬ ಮಹಾಮಂತ್ರವನ್ನೂ, ಅಜಪ ಗಾಯತ್ರಿಯನ್ನೂ ಉಪದೇಶಿಸಿ, ಋಷ್ಯ-ಛಂದಸ್ಸು, ದೇವತಾ, ಬೀಜ, ಶಕ್ತಿ, ಕೀಲಕ, ಎಂಬ ಷಡಂ ಗಗಳನ್ನೂ, ನ್ಯಾಸ ಪದ್ಧತಿಯನ್ನು ಪವಿತ್ರವಾದ ಗುರುಪೂಜಾ–ಮಂಡಲ ಮಂಟ ಪದಲ್ಲಿ ತಿಳಿಸುವುದು.

ಓಂ ಎಂಬುವ ಪ್ರಣವ ಪ್ರತಿಪಾದಕವಾದ ಬ್ರಹ್ಮವು, ಶಿವಾಯ. ಶಿವನು ನೀನಾ ಗಿದ್ದೀಯೇ. ಮಃ ಜೀವನು. ನ=ಅಲ್ಲವೆಂದು ಅರ್ಥ. ಸೋಹಂ ಎನ್ನುವ ಆತ್ಮ ಮಂತ್ರವು ಅಭ್ಯಾಸಪೂರ್ವಕವಾಗಿ ಆತ ಜ್ಞಾನಕ್ಕೆ ಪರಂಪರಾ ಸಾಧನೆ. ಷಡಕ್ಷರ ಮಂತ್ರವು ಸಾಕ್ಷಾತ್ತಾಗಿ ಪರಶಿವ ಪರಬ್ರಹ್ಮವನ್ನೇ ತನ್ನನ್ನಾಗಿ ತಿಳಿಸುವ ಮಹಾ ಮಂತ್ರವಾಗಿದೆ. ಈ ಅನುಭವವನ್ನು ಗುರ್ತಿಸಿ ತಾನು ಅದಾಗಿರುವದೇ ಸಹಜ ಸಮಾಧಿ.

ಪ್ರಣವ ಸಹಿತವಾದ ಪಂಚಾಕ್ಷರ ಮಹಾಮಂತ್ರವನ್ನು ಅರ್ಥಯುಕ್ತವಾಗಿ ಭಕ್ತಿಯಿಂದ ಜಪಿಸಿ ನಿಷ್ಠೆಯನ್ನು ಹೊಂದುವ ಅಧಿಕಾರಿಗೆ ಭವಬಂಧ ವಿಮುಕ್ತಿ ಯಾಗುವದು. ಸರ್ವ ಮಂತ್ರಗಳಿಗೆ ಮೂಲವಾದ ಪ್ರಣವವು ಪರಪ್ರಣವವೆಂತಲೂ ಅಪರ ಪ್ರಣವವೆಂತಲೂ ದ್ವಿವಿಧ. ಪರಪ್ರಣವವೇ ಸತ್ಯಜ್ಞಾನಾನಂದ ಲಕ್ಷಣಾತ್ಮಕ ಪರಬ್ರಹ್ಮವೆಂದು ಹೇಳಲ್ಪಡುತ್ತೆ. ಅಪರ ಪ್ರಣವವೇ ವಾಚಕವಾದ ಶಬ್ದರೂಪ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಸರ್ವಾತ್ಮಕವೆಂತಲೂ ಸರ್ವ ವಿದ್ಯಾ ಬೀಜ, ತೇಜೋಬೀಜ, ಮುಕ್ತಿಬೀಜ, ಅಕ್ಷರ, ಮುಖ್ಯಸ್ವರ, ವೇದಾಂತವೆಂತಲೂ, ನಾದಮಂತ್ರವೆಂತಲೂ, ಆತ್ಮಮಂತ್ರವೆಂತಲೂ ಪರ್ಯಾಯನಾಮಗಳಿಂದ ಕರೆ ಯಲ್ಪಡುತ್ತಿದೆ. ಮೂಲ ಪಂಚಾಕ್ಷರ ಅಂದರೆ ಷಡಕ್ಷರ ಮಹಾಮಂತ್ರವು ಮುಖ್ಯ

ವಾದದ್ದು. ಗುರೂಪದೇಶಪೂರ್ವಕವಾಗಿ ಪಡೆದು ಸದಾ ಅನುಷ್ಠಿಸತಕ್ಕದ್ದು. 'ನಮಃ ಶಂಕರಾಯ ಚ ಮಯಸ್ಕರಾಯ ಚ ನಮಶ್ಶಿವಾಯ ಚ ಶಿವತರಾಯ ಚ'

"ಸಕೃದುಚ್ಚಾರ ಮಾತ್ರೇಣ ಪಂಚಾಕ್ಷರ ಮಹಾ ಮನೋಃ ।
ಸರ್ವೇಷಾಮಪಿ ಜಂತೂನಾಂ ಸರ್ವ ಪಾಪಕ್ಷಯೋ ಭವೇತ್ ॥
ಈಶ ಮಂತ್ರ ಮಹಾಶಕ್ತಿಃ ಈಶ್ವರ ಪ್ರತಿ ಪಾದಿಕಾ ।
ಸಕೃದುಚ್ಚಾರ ಮಾತ್ರೇಣ ಸರ್ವಸಿದ್ಧಿ ಪ್ರದಾ ಭವೇತ್ ॥
ವಶಿಷ್ಠ ವಾಮದೇವಾದ್ಯಾಃ ಮುನಯೋ ಗೌತಮಾದಯಃ ।
ಮಂತ್ರೇಣಾನೇನ ಸಂಸಿದ್ಧಾ ಮಹಾ ತೇಜಸ್ವಿನೋಽಭವನ್ ॥
ಬ್ರಹ್ಮಾದೀನಾಂ ಚ ದೇವಾನಾಂ ಜಗತ್ಸೃಷ್ಟ್ಯಾದಿ ಕರ್ಮಣಿ ।
ಮಂತ್ರಸ್ಯಾ ಸ್ಯೈವ ಮಹಾತ್ಮ್ಯಾತ್, ಸಾಮರ್ಥ್ಯಮುಪಜಾಯತೇ ॥
ಪುರಾ ಸಾನಂದ ಯೋಗೀಂದ್ರಃ ಶಿವಧ್ಯಾನ ಪರಾಯಣಃ ।
ಪಂಚಾಕ್ಷರೀಂ ಸಮುಚ್ಚಾರ್ಯ ತತಾರ ನರಕಾರ್ಣವಮ್ ॥

"ನಮಶ್ಶಿವಾಯ ಚ ಶಿವತರಾಯ ಚ" ಇತ್ಯಾದಿಯಾಗಿ ಶ್ರೀರುದ್ರ ಅಷ್ಟಮೋನು ವಾಕದಲ್ಲಿಯೂ. ಸೂತ ಸಂಹಿತೆಯಲ್ಲಿಯೂ ವಿಶೇಷವಾಗಿ ಶ್ರೀ ಷಡಕ್ಷರ ಮಹಾ ಮಂತ್ರವನ್ನು ಕುರಿತು, ನಂದಿಕೇಶ್ವರ ಸನತ್ಕುಮಾರ ಸಂವಾದಾತ್ಮಕವಾಗಿ ಏತನ್ಮ ಹಿಮೆ ಕಾಣಿಸುತ್ತದೆ. ಈ ಮಹಾಮಂತ್ರವು ಪರಶಿವ ಪರಬ್ರಹ್ಮನನ್ನು ಪ್ರಕಾಶ ಪಡಿಸುತ್ತದೆ. ಇದು ದೊಡ್ಡವಿದ್ಯೆ. ಎಲ್ಲ ವಿದ್ಯೆಗಳಲ್ಲಿಯು ಅತಿ ಗೋಪ್ಯವಾದ ವಿದ್ಯೆ. ಈ ಮಹಾಮಂತ್ರ ಜಪವು ಮಾನಸಿಕ, ಉಪಾಂಶು, ವಾಚಿಕವೆಂದು ಮೂರು ಬಗೆ. ಈ ಮೂರು ವಿಧಗಳಲ್ಲಿ ಮಾನಸಿಕ ಜಪವು ಉತ್ತಮೋತ್ತಮ ವಾದದ್ದು. ಮಂತ್ರಗಳು ಅಸಂಖ್ಯಾಕಗಳಾಗಿವೆ. ಅವುಗಳಲ್ಲಿ ಪ್ರಣವ ಪಂಚಾಕ್ಷರ ಮಹಾಮಂತ್ರವು ಪರಮೋತ್ತಮವು. ಇದಕ್ಕೆ ಆದಿ ಅಂತ್ಯಗಳಿಲ್ಲ. ಇದಕ್ಕೆ ಸರಿ ಯಾದದ್ದು ಮತ್ತೊಂದಿಲ್ಲ. ಇದನ್ನರಿತ ಮೇಲೆ ಇನ್ನರಿಯಬೇಕಾದ್ದಿಲ್ಲ. ಸಪ್ತಕೋಟಿ ಮಹಾಮಂತ್ರಗಳಲ್ಲಿ ಪ್ರಣವ ಪಂಚಾಕ್ಷರ (ಷಡಕ್ಷರ) ಮಹಾಮಂತ್ರವು ದೊಡ್ಡದು; ಬ್ರಹ್ಮಾದಿ ದೇವತೆಗಳಲ್ಲಿ ಶಿವನು ಶ್ರೇಷ್ಠನು. ಆತನೇ ಪರಮಾತ್ಮ: ಪರ ಬ್ರಹ್ಮ ವಸ್ತುವು: ಅಖಿಲ ಜಗತ್ಕಾರಣನು; ಆಧಾರನು; ಪ್ರಣವ ಪಂಚಾಕ್ಷರಿ ಆತನ ವಾಚ ಕವು. ಅದೇ ಸರ್ವ ಮಂತ್ರಗಳಿಗೂ ಮೂಲ. ಅದೇ ಪರಶಿವಾಭಿಧಾನವಾಗಿ ಅಭಿ ಧೇಯವಾಗಿದೆ. ಈ ರೂಪವಾದ ಅಭಿದಾನ ಅಭಿದೇಯಗಳಿಂದ ಪ್ರತಿಪಾದಿಸಲ್ಪ ಡುವ ಬ್ರಹ್ಮವಸ್ತುವೇ ತಾನು ತನ್ನ ಸ್ವರೂಪವಾಗಿದೆ ಎಂದು ಮಂತ್ರಾರ್ಥ. ಇದ ರಿಂದ ಭವವು ದೂರವಾಗುವದು. ದುಃಖವಿಲ್ಲದೆ ಹೋಗುವುದು. ಶಾಂತಿಯುಟಾಗು ವದು: ಸಂಪತ್ತುಂಟಾಗುವದು: ದಾರಿದ್ರ್ಯ ದೂರವಾಗುವದು: ಸರ್ವರೋಗ

ನಿವಾರಣೆಯಾಗುವದು; ತನ್ನನ್ನು ಸುತ್ತು ಮುತ್ತಿದ ಕಷ್ಟಗಳು ಸುಟ್ಟು ಹೋಗುವವು; ಕೈವಲ್ಯವಾಗುವದು !

ಈ ಪಂಚಾಕ್ಷರಗಳೇ ಪಂಚ ಭೂತಗಳು, ಪಂಚ ತನ್ಮಾತ್ರೆಗಳು ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಬ್ರಹ್ಮರು, ಪಂಚ ಕೃತ್ಯಗಳು ಹೀಗೆ ಐದೈದಾಗಿರುವ ಸರ್ವವು ಈ ಪ್ರಣವ ಪಂಚಾಕ್ಷರಿ ಸ್ವರೂಪವೇ ಆಗಿದೆ. ಮೊದಲು ಓಂಕಾರದಿಂದ ಕೂಡಿದ ಪಂಚಾಕ್ಷರಿಯನ್ನು ಪ್ರಣವ ಪಂಚಾಕ್ಷರಿ–ಷಡಕ್ಷರಿ ಮಂತ್ರವೆಂದು ವೇದಾಗಮಗಳಲ್ಲಿ ಹೇಳಲ್ಪಟ್ಟಿದೆ. ಈ ಓಂಕಾರದ ಮಹಿಮೆ ಅಪಾರವಾದದ್ದು.

ಕೇವಲ ಪ್ರಣವ ಸ್ಮರಣಮಾತ್ರದಿಂದಲೇ ಪರಬ್ರಹ್ಮ ಸಾಕ್ಷಾತ್ಕಾರವಾಗುವುದು. ಎರಡನೆಯದಿಲ್ಲದ ಅದ್ವಿತೀಯ ಭವರಹಿತ ಶಿವನೇ ಆ ಪರಬ್ರಹ್ಮನು; ಆ ಪರಬ್ರಹ್ಮವೇ ಪರಮಾತ್ಮ ; ಆ ಪರಮಾತ್ಮನೇ ಪ್ರತ್ಯಗಾತ್ಮ: ಸನಾತನವಾಗಿ 'ಸೋಹಂ' ರೂಪದಿಂದಿದ್ದಾನೆ.

ಪ್ರಾಕೃತವಾದ ಪ್ರಾಣಯಾಮದಿಂದ ಹಂಸಃ– ಅನ್ನುವ ಬುದ್ಧಿ ಹುಟ್ಟಿದಂತೆ, ವೈಕೃತ ಸೂಕ್ಷ್ಮ ಪ್ರಾಣಾಯಾಮದಿಂದ ಸೋಹಂಭಾವ ಉದಯಿಸುವದು. ಈ ಸೋಹಂ ಎನ್ನುವದರಲ್ಲಿರುವ ಸ, ಹ, ಈ ವ್ಯಂಜನಗಳು ಎರಡು ಉಪಾಧಿ ಭಿನ್ನಗಳಾಗಿವೆ. ಈಸ್, ಹ್ ಎರಡನ್ನು ತೆಗೆದರೆ ಉಳಿಯುವುದು 'ಓಂ'. ಸಕಾರೋಪರೀ ಓಕಾರವನ್ನೂ, ಹಕಾರೋಪರಿ ಬಿಂದುವನ್ನೂ ಯೋಜನ ಮಾಡಲು ಅದೇ ಮೂಲ ಪ್ರಣವವು. ಅ, ಉ, ಮ, ತ್ರ್ಯಕ್ಷರಾತ್ಮಕವು. ನಿರುಪಾಧಿಕ ನಿಷ್ಪ್ರಪಂಚವಾದ ಈ ಪ್ರಣವದಿಂದ ಬ್ರಹ್ಮ (ಶಿವ) ತತ್ವ ಪ್ರಬೋಧೆಯಾಗುವದು. ಮಿಕ್ಕ ಪಂಚಾಕ್ಷರ ಮಂತ್ರದಿಂದ ಸರ್ವವು ಪಂಚಮುಖ ಬ್ರಹ್ಮಸ್ವರೂಪವೇಯಾದ ಶಿವತತ್ತ್ವವೇ ಎಂದು ಬೋಧೆಯಾಗುವದು. ಆದ್ದರಿಂದ ಈ ಷಡಕ್ಷರ ಮಹಾಮಂತ್ರದಿಂದ ನಿಷ್ಕಲ, ನಿರುಪಮ ಪರಬ್ರಹ್ಮ ತತ್ತ್ವ ಸಾಕ್ಷಾತ್ಕಾರ (ಅನುಭವ) ವಾಗುವದು; ಅದೇ ತಾನು!

ಭಕ್ತನಾದ ಮುಮುಕ್ಷುವು–ಗುರುಪುತ್ರನು ಶುಚಿರ್ಭೂತನಾಗಿ ಪೂರ್ವಾಭಿಮುಖವಾಗಿಯಾಗಲಿ ಉತ್ತರಾಭಿಮುಖವಾಗಿಯಾಗಲಿ ಸಿದ್ಧಾಸನವಾಗಲಿ "ಸ್ಥಿರ ಸುಖಮಾಸನಮ್" ಅಂದ ಹಾಗೆ ಸುಖವಾದ ಉತ್ತಮ ಆಸನದಲ್ಲಿ ಕುಳಿತು ಉಮಾ ಮಹೇಶ್ವರರನ್ನು (ಶ್ರೀ ಚಂದ್ರಮೌಳೀಶ್ವರನನ್ನು) ಶ್ರೀ ಸದ್ಗುರು ದೇವನನ್ನು ಭಕ್ತಿಯಿಂದ ಮನದಲ್ಲಿ ನೆನೆದು ಚಿತ್ತೈಕಾಗ್ರತೆಯಿಂದ ಈ ಮಹಾಮಂತ್ರವನ್ನು ಜಪಿಸಬೇಕು, ವಾಚಕಾದಿ ತ್ರಿವಿಧ ಜಪಗಳಲ್ಲಿ ಉತ್ತಮೋತ್ತಮವಾದದ್ದು ಮಾನ

ಸಿಕ ಜಪ ಅಥವಾ ಉಪಾಂಶುವಾಗಲಿ (ಕೆಳಗೆ ತುಟಿ ಸ್ವಲ್ಪ ಕದಲುತ್ತಾ) ಈ ಮಹಾ ಮಂತ್ರವನ್ನು ಜಪಿಸಬೇಕು.

ಜ್ಞಾನನಿಷ್ಠಾಗರಿಷ್ಟರಾದ ಶ್ರೀ ಸಾನಂದ ಯೋಗೀಶ್ವರರು ಪ್ರಣವ ಪಂಚಾಕ್ಷರ ಮಹಾಮಂತ್ರವನ್ನು ಒಂದು ಸಲ ಉಚ್ಚರಿಸಿ ನರಕಲೋಕದಲ್ಲಿದ್ದವರೆಲ್ಲರನ್ನು ಉದ್ಧರಿಸಿದರು. ಉಪಮನ್ಯುವೆಂಬ ಮಹಾಯೋಗಿ ಪ್ರಣವ ಪಂಚಾಕ್ಷರ ಮಹಾಮಂತ್ರ ಸಿದ್ಧಿಯನ್ನೊಂದಿ ಪರಶಿವನಿಂದ ಸರ್ವ ವಿದ್ಯೆಗಳನ್ನು ಆಚಾರ್ಯತ್ವವನ್ನು ಪಡೆದನು. ವಶಿಷ್ಠ, ವಾಮದೇವಾದಿ ಮಹಾಮುನಿಗಳು ಈ ಮಹಾಮಂತ್ರಾನುಷ್ಠಾನ ಸಿದ್ಧಿಯಿಂದ ಮಹಾ ತೇಜಸ್ಸಂಪನ್ನರಾಗಿ ಮುಕ್ತರಾದರು. ಬ್ರಹ್ಮಾದಿ ದೇವತೆಗಳು ಸೃಷ್ಟಿ, ಸ್ಥಿತಿ, ಲಯಾದಿ ಕಾರ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಈ ಮಹಾಮಂತ್ರದಿಂದ ಹೊಂದಿದರು. ಆದ್ದರಿಂದ ಶ್ರೀಗುರುದೇವರು ಪ್ರಸಾದಿಸಿದ ಈ ಮಂತ್ರವನ್ನು ಅನನ್ಯ ಭಕ್ತಿಯಿಂದ ಜಪಿಸಿದರೆ-ನಿಷ್ಠೆಯುಳ್ಳವರಾದರೆ ನಾವೆಲ್ಲರೂ ಮುಕ್ತರಾಗುವೆವು. ಸಂಶಯವಿಲ್ಲ. ಜಪಾನುಷ್ಠಾನವನ್ನು ತಪ್ಪದೆ ಮಾಡಬೇಕು. ಇದರಿಂದ ಅವಿಚ್ಯುತವಾದ ಆತ್ಮ ಸ್ವರೂಪಾನಂದವೇ ಉಂಟಾಗುತ್ತೆ.

ಈಶ್ವರನು ಕೊಟ್ಟ ಮೂರು ದೊಡ್ಡ ಆಸ್ತಿಗಳು, ಒಂದು ದೇಹ, ಮತ್ತೊಂದು ಮನಸ್ಸು, ಇನ್ನೊಂದು ವಾಕ್ಕು. ಈ ಕರಣತ್ರಯವನ್ನು ಅನಾತ್ಮ ವಿಷಯ ಚಿಂತನೆ, ಚರ್ಚೆ; ಕಾರ್ಯ ಇತ್ಯಾದಿಗಳಲ್ಲಿ ಹೋಗಗೊಡಿಸದೆ ಹಿತ, ಮಿತ, ಪವಿತ್ರ ವರ್ತನ ಶೀಲರಾಗಿ 'ಓಂ ನಮಶ್ಶಿವಾಯ' ಎನ್ನುವ ಮಂತ್ರೋಚ್ಚಾರಣೆ, ಸ್ಮರಣೆ, ತನ್ನಿಷ್ಠೆಯಿಂದ ಮಹಾಶುಭ ಉಂಟಾಗುವುದು. ಸರ್ವಲೋಕ ಪ್ರಿಯತ್ವ, ಸಮಸ್ತ ಶಾಸ್ತ್ರ ಪರಿಚಯ, ಮೃದು ಮಧುರವಾದ ಸುಸಂಪನ್ನ ವಾಕ್ಕೂ ನಮಗುಂಟಾಗುವವು. ಸರ್ವ ದುಃಖಗಳು ಕಷ್ಟ ನಿಷ್ಠುರಗಳು ದೂರವಾಗಿ ಹೋಗುವವು.

ಸತ್ವ ರಜಸ್ತಮೋಗುಣಗಳ ಚೇಷ್ಟೆಗಳನ್ನು ತೊಲಗಿಸಿ ನಿತ್ಯ ಶುದ್ಧವಾದ ಶಿವನನ್ನು ತನ್ನಲ್ಲಿ ತಾನಾಗಿ ಕಾಣುವ ಶಕ್ತಿ ಉಂಟಾಗಬೇಕಾದರೆ 'ಓಂ ನಮಶ್ಶಿವಾಯ' ಮಂತ್ರ ಜಪನಿಷ್ಠೆಯೇ ಸಾಕು. ಎಲ್ಲಾ ವಿಕಲ್ಪಗಳೂ, ಮಾನಸಿಕವಾದ ಧನವನಿತಾದಿ ವಿಷಯಚಿಂತೆಗಳು, ಮೋಹವು (ತಪ್ಪುತಿಳುವಳಿಕೆ), ಕಾಮನಕಾಟ ಇವು ದೂರಾಗ ಬೇಕಾದರೆ ಈ ಮಹಾಮಂತ್ರದ ಸಂಸ್ಮರಣೆಯೊಂದೇ ಶರಣ್ಯ. ಅಷ್ಟೇ ಅಲ್ಲ ಮಾನವನ ಬೆನ್ನು ಹತ್ತಿ ಕೆಡಿಸುವಂಥಾ ಅಸತ್ಯ, ಅನಾಚಾರ, ಪರವಂಚನೆ ಇತ್ಯಾದಿ ದುರ್ಗುಣಗಳು, ಜನ್ಮ ಜನ್ಮಗಳಿಂದ ಪೀಡಿಸುತ್ತಿರುವ ಕೋಪತಾಪಾದಿಗಳು ದೂರವಾಗಬೇಕಾದರೆ ಶ್ರೀಗುರುದೇವರು ಪ್ರಸಾದಿಸಿದ 'ಓಂ ನಮಶ್ಶಿವಾಯ' ಎನ್ನುವ ಮಹಾಮಂತ್ರ ಒಂದೇ ಪರಮ ಸಾಧನ. ಪರಮಾರ್ಥ ತತ್ತ್ವ ಚಿಂತನೆಗೆ, ಜನ್ಮ ಧನ್ಯವಾಗುವದಕ್ಕೂ ಮಾಯಾಮೇಯ ಪರಿಣಾಮಶೀಲ ಜನ್ಮಕರ್ಮ ಪಾಶಬಂಧಗಳಿಂದ ದೂರವಾಗುವದಕ್ಕೆ 'ಓಂ ನಮಶ್ಶಿವಾಯ' ಎನ್ನುವ ಮಹಾ ಮಂತ್ರವೇ ಆಶ್ರಯಣೀಯ.

ವೇದ ವೇದಾಂಗಗಳ ಸಾರಭೂತವಾದ 'ಓಂ ನಮಶ್ಶಿವಾಯ' ಎನ್ನುವ ಮಹಾ ಮಂತ್ರವು ಎಲ್ಲಾ ಮನಶ್ಚಾಂಚಲ್ಯವನ್ನು, ಪಂಚ ಭ್ರಾಂತಿಗಳನ್ನು, ಅರಿಷಡ್ವರ್ಗ ವನ್ನು ಹೋಗಲಾಡಿಸಿ ಮುಕ್ತಿಯನ್ನೀಯುವದು.

ವೇದಾಂತಗಳಾದ ಉಪನಿಷತ್ತುಗಳು, ಸರ್ವ ಶಾಸ್ತ್ರಗಳು, ಸರ್ವದರ್ಶನಗಳು, 28 ಆಗಮಗಳು, 18 ಪುರಾಣಗಳು, ಸನಾತನವಾದ ವೇದಮಂತ್ರಗಳು, ಇವುಗಳನ್ನೆಲ್ಲ ಅಧ್ಯಯನ ಮಾಡುವದರಿಂದ ಉಂಟಾಗುವ ಮಹಾಶುಭವು ಶ್ರೀಗುರು ಪ್ರದತ್ತವಾದ 'ಓಂ ನಮಶ್ಶಿವಾಯ' ಎಂಬ ಮಹಾಮಂತ್ರ ಜಪದಿಂದ ಆಗುವದು. ಅಗಸ್ತ್ಯ' ದಧೀಚಿ, ಭೃಗು, ಸಾನಂದ, ಮಾರ್ಕಾಂಡೇಯ, ವಸಿಷ್ಠ, ದೂರ್ವಾಸ ಮೊದಲಾದ ಮಹರ್ಷಿಗಳೆಲ್ಲರೂ ಮಹಾಮಹಿಮೆಯನ್ನೊಂದಿ ಧನ್ಯರಾದರು. ಈ ಮಹಾಮಂತ್ರವು ವೇದಗಳಿಗೆ ಮೂಲ, ಜ್ಞಾನಕ್ಕೆ ಆಶ್ರಯ. ಯತೀಶ್ವರರ ಮನಸ್ಸಿನಲ್ಲಿ ಸಂತತವಾಡುವ ವೇದಸಾರ ಮಂತ್ರವಾಗಿದೆ. ಆದ್ದರಿಂದ ಮುಮುಕ್ಷುಗಳು, ಭಕ್ತರು, ಭಾವುಕರಾದ ಎಲ್ಲಾ ಜನರು ಅತ್ಯಂತ ಶ್ರದ್ಧೆಯಿಂದ ಜಪಿಸಬೇಕು. ಬ್ರಹ್ಮವಿದ್ಯೆಗೆ ಇದು ಕೇಂದ್ರ ವಾದದ್ದು. ಆದ್ದರಿಂದ ಇದನ್ನು "ಮಂತ್ರರಾಜವೆಂದೆನ್ನುವರು" ಹೀಗೆ ಅಖಂಡವಾಗಿ ಮಂತ್ರಮಹಿಮೆಯನ್ನು ತದನುಷ್ಠಾನ ವಿಧಾನವನ್ನು ಶ್ರೀಗಳವರು ಬೋಧಿಸಿ ನಿಷ್ಠೆಯಲ್ಲಿ ಕೂಡಿಸಿದರು.

ಅನಂತರ ಪೂಜ್ಯ ಶ್ರೀಗಳವರು ಶ್ರೀಕಾಳಹಸ್ತಿ ವಿದ್ಯಾಪ್ರಕಾಶಾನಂದ ಸ್ವಾಮಿ ಯವರ ಶುಕಬ್ರಹ್ಮಾಶ್ರಮ ಮೌಕ್ತಿಕೋತ್ಸವ ಕಾರ್ಯಕ್ರಮಕ್ಕೆ ಆಹ್ವಾನಿಸಲ್ಪಟ್ಟು ಅಲ್ಲಿಗೆ ದಯಮಾಡಿಸಿದರು. ಆ ಮಹಾಕಾರ್ಯಕ್ರಮವು ಎಷ್ಟೋ ವೈಭವೋಪೇತ ವಾಗಿ ನಡೆಯಿತು. ಶ್ರೀ ವಿದ್ಯಾಪ್ರಕಾಶಾನಂದ ಸ್ವಾಮಿಗಳವರಿಂದ ರಚಿಸಲ್ಪಟ್ಟ "ಗೀತಾ ಮಕರಂದ" ಗ್ರಂಥವನ್ನು ಶ್ರೀ ಚಿರಂತನಾನಂಡ ಸ್ವಾಮಿಗಳು ಆವಿಷ್ಕರಿಸಿ ದರು. "ವೇದಾಂತ ಭೇರಿ" ಮಾಸಪತ್ರಿಕೆಯನ್ನು ನಮ್ಮ ಪೂಜ್ಯ ಶ್ರೀ ಸ್ವಾಮಿಗಳ ವರು, ಆವಿಷ್ಕರಿಸಿದರು. ಶ್ರೀ ವಿಮಲಾನಂದ ಸ್ವಾಮಿಗಳವರು, ಶ್ರೀ ವಿದ್ಯಾನಂದ ಸ್ವಾಮಿಗಳವರು ಮೊದಲಾದ ಮಹನೀಯರು ಆ ಸಭೆಗೆ ದಯಮಾಡಿಸಿದ್ದರು. ಅಪೂರ್ವವಾದ ಆಧ್ಯಾತ್ಮಿಕ ಉಪನ್ಯಾಸಗಳು ನಡೆದು ಸಭೆ ಜಯಪ್ರದವಾಗಿ ಜರುಗಿತು.

## ಶ್ರೀಗುರುದೇವಾಶ್ರಮ ಸ್ಥಾಪನೆ

ಆಮೇಲೆ ಅನಂತಪುರ ಜಿಲ್ಲೆ ಗೂಳಪಾಳ್ಯ ಶ್ರೀ ಪಾಟೀಲ್ ರಾಚನಗೌಡನವರು ತಮ್ಮ ಗ್ರಾಮಕ್ಕೆ ಶ್ರೀಗಳವರನ್ನು ಕರೆದುಕೊಂಡು ಹೋದರು. ಅವರು ಶ್ರೀ ಸ್ವಾಮಿ ಗಳವರ ಶುಭನಾಮದಿಂದ ಒಂದು ಆಶ್ರಮವನ್ನು ಸ್ಥಾಪಿಸಬೇಕೆಂದು ಭಕ್ತಿಯಿಂದ ಸನ್ನಿಧಿಯಲ್ಲಿ ಬಿನ್ನವಿಸಿಕೊಂಡರು. ಅದಕ್ಕೆ ಶ್ರೀಪಾದರು, "ಶಿವ ಶಿವಾ ! ಆಶ್ರಮ

ವೆಂದರೆ ಅದರ ನಿರ್ಮಾಣ ನಿರ್ವಹಣಾದಿಗಳು ಎಷ್ಟೋ ಕಷ್ಟವಪ್ಪಾ ! ಈ ಇದ್ದ ಶರೀರವೇ ಒಂದು ಮಹಾ ಪುಣ್ಯಾಶ್ರಮ. ಇಷ್ಟೇ ಸಾಕು. ಈ ಮೂಲಕ ಕ್ಷೇತ್ರಜ್ಞಾತ್ಮನು ಪರಮಾತ್ಮನೇ ಎಂಬ ಜ್ಞಾನವನ್ನು ಹೊಂದಿ ಧನ್ಯವಾದರೆ ಸಾಕು," ಎಂಬಿತ್ಯಾದಿ ಅನೇಕ ಧಾರ್ಮಿಕ ನೈತಿಕ ವಿಷಯಗಳನ್ನು ತಿಳಿಸಿದರು. ಆದರೇನು ಶ್ರೀ ರಾಚನಗೌಡರು ತನ್ನ ಪಟ್ಟನ್ನು ಬಿಡದೆ ವಿವಿಧ ರೀತಿಯಿಂದ ಶ್ರೀಸನ್ನಿಧಿಯಲ್ಲಿ ಪ್ರಾರ್ಥಿಸಿ ಗ್ರಾಮಕ್ಕೆ ಅಷ್ಟು ದೂರವೂ ಅಲ್ಲದೆ ಅಷ್ಟು ಸಮೀಪವೂ ಅಲ್ಲದೆ ಇರುವ. ತಮ್ಮ ಒಂದು ಉತ್ತಮವಾದ ಸ್ಥಳದಲ್ಲಿ (ಹೊಲದಲ್ಲಿ) ಶ್ರೀ ಶುಭಕೃತು ನಾಮ ಸಂ॥ರ ಮಾಘ ಶುದ್ಧ ೧೩॥ (ತಾ. 6-2-1963) ಬುಧವಾರ ವಿಧ್ಯುಕ್ತವಾಗಿ ಶಂಕು ಸ್ಥಾಪನೆಯನ್ನು ಮಾಡಿ ಆಶ್ರಮವನ್ನು ನಿರ್ಮಿಸಿದರು. ಅದೇ "ಶ್ರೀಗುರುದೇವಾಶ್ರಮ" ವೆಂದು ಕರೆಯಲ್ಪಡುತ್ತೆ. ಪ್ರಸ್ತುತ ಅಲ್ಲಿ ಒಂದು ಪರ್ಣಕುಟೀರವನ್ನು ಆಶ್ರಮವಾಗಿ ನಿರ್ಮಿಸಿದರು. ಕೊನಕೊಂಡ್ಲ ಮತ್ತು ಗೂಳಪಾಳ್ಯದ ಭಕ್ತರು ಕಲೆತು ಅಲ್ಲಿ ಬೇಕಾದ ಎಲ್ಲಾ ಏರ್ಪಾಡುಗಳನ್ನು ಮಾಡಿ ಪೂಜಾನುಷ್ಠಾನ, ಪಾರಾಯಣ, ಶಾಸ್ತ್ರ ಪ್ರವಚನಾದಿ ಕಾರ್ಯಗಳನ್ನು ನಡಿಸಿಕೊಳ್ಳುತ್ತಾ ಯಥಾವಿಧಿ ನಿತ್ಯ ನಿಯಮ ಸಂಪನ್ನವಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿದರು.

ಪೂಜ್ಯ ಶ್ರೀಗುರುಗಳು ಆ ದಿನ ಆ ಶುಭಕಾರ್ಯದಲ್ಲಿ ಕೂಡಿದ ಭಕ್ತಾದಿಗಳಿಗೆ ಈ ಪ್ರಕಾರ ಉಪದೇಶಿಸಿದರು :— "ಮತವೆಂದರೆ ಮಾನವನ ವಿಶ್ವಸನೀಯವಾದ ಸದ್ಭಾವನೆ. ಜನ್ಮಸಾರ್ಥಕತೆಗಾಗಿ ಮಾಡಿಕೊಂಡ ದಿವ್ಯಮಾರ್ಗ. ನೀತಿ, ನಿಯಮ, ನಿಷ್ಠೆ, ತತ್ತ್ವವಿಚಾರಣೆಗೆ ನಿಲಯವಾಗಿ ಭಕ್ತರ, ಮುಮುಕ್ಷುಗಳ ಮತ್ತು ಸಾಮಾನ್ಯ ಜನರನ್ನು ಕೂಡ ಸನ್ಮಾರ್ಗಿಗಳನ್ನಾಗಿ ಮಾಡುತ್ತಾ, ಚಿತ್ತ ಸಂಸ್ಕರಣವನ್ನು ಕೊಟ್ಟು ತ್ರಿಕರಣಗಳನ್ನು ಪರಿಶುದ್ಧಗೊಳಿಸುವದು. ನಿಷ್ಕಾಮ ಸೇವೆಯನ್ನು ಸಲ್ಲಿಸುತ್ತಾ "ವಿದ್ಯಾ ತಪೋಭ್ಯಾಂ ಪೂತಾತ್ಮಾ" ಅಂದಹಾಗೆ ವಿದ್ಯಾ ತಪಸ್ಸುಗಳಿಂದ ಆಧ್ಯಾತ್ಮಿಕ ಸಂಸ್ಕೃತಿಯನ್ನು ಹೊಂದಿ ಪುನೀತರಾಗುವದಕ್ಕೆ ನಿಲಯವಾದದ್ದೇ ಆಶ್ರಮವು. ಇದೇ **ಶ್ರೀ ಉಮಾಮಹೇಶ್ವರ ಗುರುಪೀಠಾಶ್ರಮ.**

ಒಂದು ಸ್ಥಾನದಲ್ಲಿ ಭಕ್ತಾದಿಗಳೆಲ್ಲರು ಸೇರಿ ಭಗವತ್ಕಾರ್ಯಗಳನ್ನು ನಡೆಯಿಸುತ್ತಾ ಪಾರಮಾರ್ಥ ಸತ್ಯವನ್ನು ಶ್ರವಣ ಮಾಡುತ್ತಾ ಜನ್ಮ ಧನ್ಯತೆಗೆ ಹೇತುವಾಗಿ ಲೋಕೋಪಕಾರಯುಕ್ತವಾಗಿ ಜೀವನವನ್ನು ಮಾನ್ಯಗೊಳಿಸಿಕೊಳ್ಳುವದಕ್ಕಾಗಿಯೇ ಆಶ್ರಮ, ಗುರುಕುಲ, ಗುರುಪೀಠವೆಂಬ ನಾಮಗಳಿಂದ ನಮ್ಮ ಭಾರತೀಯ ದಿವ್ಯ ಸಂಸ್ಕೃತಿಯ ಮುಖ್ಯ ಕೇಂದ್ರಗಳಾಗಿ ಬೆಳಗುತ್ತಿವೆ. ಇದು ಶ್ರೀ ಉಮಾಮಹೇಶ್ವರ ಗುರುಪೀಠದ ಶ್ರೀಗುರುದೇವಾಶ್ರಮವೆಂಬ ಶುಭನಾಮದಿಂದ ನಿರ್ಮಿಸಿಕೊಂಡಿದ್ದೀರಿ. ನಿಮ್ಮ ಆಧ್ಯಾತ್ಮಿಕ ಕೃಷಿ ಚೆನ್ನಾಗಿ ನಡೆಯಲಿ. ಈ ಕೇಂದ್ರವು ಅದಕ್ಕಾಗಿ ನಿರ್ಮಿಸಲ್ಪಟ್ಟದ್ದು.

ಸತ್ಯಶೀಲ ಸಂಪನ್ನವಾದ ಸ್ವಾಧ್ಯಾಯಾಧ್ಯಯನ ತಪಸ್ಸುಗಳು ಮುಖ್ಯವಾಗಿರಬೇಕು. ಯಾವ ಆಶ್ರಮಗಳಲ್ಲಿ ಇಂಥಾ ನಿಯಮ ನಿಷ್ಠೆಗಳಿಲ್ಲವೋ ಆ ಆಶ್ರಮಗಳೂ, ಮಠಗಳೂ ಶಕ್ತಿಹೀನವಾಗುತ್ತವೆ. ಕಡೆಗೆ ಸ್ವಾರ್ಥಪರರ ಆಕ್ರಮಣವಾಗಿ ಕೆಟ್ಟು ಹೋಗುವವು. ಹಾಗಾಗದಿರಲು ಶ್ರೀ ಉಮಾಮಹೇಶ್ವರನು ನಿಮ್ಮೆಲ್ಲರಿಗೆ ಸದಾ ದಿವ್ಯವಾದ ದೈವೀಗುಣಗಳನ್ನು ಕೊಟ್ಟು ಕಾಪಾಡಲಿ ! ಮುಖ್ಯವಾಗಿ ಸದಾಚಾರ ಸಂಪನ್ನತೆಯಿಂದ ಗುರುಪೀಠದಲ್ಲಿ ಭಕ್ತಿಯುಳ್ಳವರಾಗಿ ಆಶ್ರಮ ಕಾರ್ಯಗಳನ್ನು ನಿಯಮ ತಪ್ಪದೆ ಆಚರಿಸುತ್ತಾ ಬಂದರೆ ಎಲ್ಲರು ಧನ್ಯರಾಗುವರು. ಮಹನೀಯರಾದ ಆಚಾರ್ಯ ಪ್ರಭೃತಿಗಳು ಇಂಥಾ ಆಶ್ರಮಗಳನ್ನು ಅನೇಕ ಸ್ಥಾಪಿಸಿ, ತನ್ಮೂಲಕ ಕರ್ಮ, ಭಕ್ತಿ, ಜ್ಞಾನೋಪದೇಶಗಳನ್ನು ಮಾಡುತ್ತಾ ಧನ್ಯರಾಗಬೇಕು. ಕ್ರಮವನ್ನು ಯಾವಾಗಲೂ ತಪ್ಪಬಾರದು, ಜಾಗ್ರತೆ. ಶ್ರೀ ಉಮಾಮಹೇಶ್ವರರು, ಗುರುಪೀಠ ಗುರುಪರಂಪರಾಚಾರ್ಯರು ತಮ್ಮ ಕೃಪಾಮಯ ಛತ್ರದಲ್ಲಿ ಭಕ್ತರನ್ನು ಪಾಲಿಸಿ ಎಲ್ಲರಿಗೂ ಕೈವಲ್ಯಸುಖವನ್ನುಂಟು ಮಾಡಲಿ !" ಇತ್ಯಾದಿ ಆಶ್ರಮ ವಿಷಯವಾದ ಕರ್ಮಧರ್ಮಗಳನ್ನು ವಿಶೇಷವಾಗಿ ಉಪದೇಶಿಸಿದರು. ಎಲ್ಲಾ ಭಕ್ತರ ಪರಮ ಭಕ್ತಿಭಾವಗಳೇ ಗುರುಪೀಠದ ಮತ್ತು ಗುರುದೇವಾಶ್ರಮದ ಸಂಪತ್ತು !

ಶ್ರೀಗಳವರು ತಾಡಪತ್ರಿ, ಪತ್ತಿಕೊಂಡ, ಪ್ರೊದ್ದುಟೂರು, ತುಮಕೂರು, ಮುಂತಾದ ಸ್ಥಾನಗಳಿಗೆ ಪರಮ ಭಕ್ತರ ಭಾವಾನುಸಾರ ಅಲ್ಲಿಗೆ ದಯಮಾಡಿಸಿ, ಪೂಜಾನುಷ್ಠಾನಾದಿ ಕಾರ್ಯಗಳಿಂದ ಎರಡು ವೇಳೆಗಳಲ್ಲಿ ಆಧ್ಯಾತ್ಮಿಕ ತತ್ವ ಪ್ರವಚನಗಳನ್ನು ಮಾಡಿದರು. ಆ ಪ್ರಾಂತದ ಜನಗಳು ಈ ವರ್ಷ ಚಾತುರ್ಮಾಸ್ಯ ಮಹಾವ್ರತವು ಇಲ್ಲಿಯೇ ನಡೆಯಬೇಕೆಂದು ಬಯಸಿದರು. ಆದರೇನು ಈ ಮಹಾವ್ರತವು ಮುಂಚಿತವಾಗಿಯೇ ಗುಂತಕಲ್ಲು ಭಕ್ತರ ಪ್ರಾರ್ಥನಾನುಸಾರ ಅಲ್ಲಿಯೇ ಆಗಬೇಕೆಂದು ನಿರ್ಧರಿಸಲ್ಪಟ್ಟದ್ದರಿಂದ ಪೂಜ್ಯ ಶ್ರೀಗಳವರು, ನಿಮ್ಮ ಸಂಕಲ್ಪ ಶುಭಪ್ರದವಾದದ್ದು ಮುಂದೆ ನೋಡೋಣ," ಎಂಬ ಸಾಂತ್ವನ ವಾಕ್ಯಗಳಿಂದ ಸಂತೃಪ್ತಿಪಡಿಸಿದರು.

ಸ್ವಸ್ತಿ ಶ್ರೀ ಶೋಭಕೃತು ನಾಮ ಸಂ|| ರ ವೈಶಾಖ ಶುದ್ಧ 3|| ಶುಕ್ರವಾರ ತಾ|| 26-4-1963 ಅಕ್ಷಯ ತದಿಗಿ ಲತ್ತವರದಲ್ಲಿ ಶ್ರೀ ಉಮಾಮಹೇಶ್ವರ ಗುರುಪೀಠ ಭವನ ನಿರ್ಮಾಣಕ್ಕಾಗಿ ಶಂಕುಸ್ಥಾಪನಾದಿ ವಿಧ್ಯುಕ್ತ ಕಾರ್ಯಗಳು ನಡೆದವು. ಅನಂತರ ಶ್ರೀ ಶಂಕರ ಜಯಂತಿ ಮಹೋತ್ಸವವು ಯಥಾರೀತಿ ಶಿವಪ್ರದವಾಗಿ ನಡೆಯಿತು. ಆಮೇಲೆ ಶ್ರೀಗಳವರ ಪರಮ ಗುರುಗಳ ಆರಾಧನ ಕಾರ್ಯಕ್ರಮವು ವಿಧ್ಯುಕ್ತವಾಗಿ ನಡೆಯಿತು. ತಾ|| 19-5-63 ನಮ್ಮ ಶ್ರೀಗುರುದೇವರ ಜಯಂತಿ ಉತ್ಸವವು ನಡೆದು ಪೂರ್ಣವಾಯಿತು.

ಶ್ರೀ ಶಂಕರ ಜಯಂತಿ ಉತ್ಸವ ಮೊದಲು ಶ್ರೀಗುರುದೇವರ ಜಯಂತಿಯ ವರೆವಿಗೂ ಇಲ್ಲಿಯ ಮತ್ತು ಸುತ್ತಮುತ್ತಲಿನ ಉತ್ತಮ ಸಂಸ್ಕಾರಿಗಳಾದ ಅಧಿಕಾರಿ

ಗಳಿಗೆ ಬೇಕಾದ ಯಮ ನಿಯಮಾದಿ ಅನುಷ್ಠಾನ ವಿಧಾನಗಳು, ಮಂತ್ರ ಮಂತ್ರಾರ್ಥ ಗಳನ್ನು ವಿವರಿಸಿ ಪರಮ ತಾತ್ಪರ್ಯವಾದ ವಾಕ್ಯಾರ್ಥ ದೃಷ್ಟಿಯನ್ನು ಪ್ರಸಾದಿಸಿ ಪ್ರಬೋಧಿಸಿದರು.

## 19 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುಂತಕಲ್ಲು 2-7-63

ಸ್ವಸ್ತಿ ಶ್ರೀ ಶೋಭಕೃತು ನಾಮ ಸಂ॥ರ ಆಷಾಢ ಶುದ್ಧ ಏಕಾದಶಿ ಬ್ರಹ್ಮ ಮುಹೂರ್ತದಲ್ಲಿ ವಿಧ್ಯುಕ್ತವಾಗಿ ಪೂಜಾನುಷ್ಠಾನಾದಿಗಳೊಂದಿಗೆ ಮಹಾವ್ರತವು ಪ್ರಾರಂಭವಾಗಿ ಉದಯ 9-00 ಗಂಟೆಗೆ ಕೇನೋಪನಿಷತ್ಪ್ರವಚನಪೂರ್ವಕ ಮಹಾ ಮಂಗಳ ಮಂತ್ರ ಪುಷ್ಪಗಳಿಂದ ಪೂರ್ಣವಾಯಿತು. ಪ್ರದೋಷ ಪೂಜಾನಂತರ 7-00 ಗಂ॥ ಇಂದ 8-30 ಗಂಟೆಯವರೆವಿಗೂ ಭಗವದ್ಗೀತಾ ಪ್ರವಚನ, ಈ ವಿಧ ವಾಗಿ ಶ್ರೀ ಉಮಾಮಹೇಶ್ವರರ ಕೃಪೆಯಿಂದ 28-11-63 ರ ವರೆವಿಗೂ ನಾಲ್ಕು ತಿಂಗಳು ಮಹಾವ್ರತವು ಸಾಂಗಮಂಗಳವಾಗಿ ನಡೆದು ಸಮಾಪ್ತವಾಯಿತು.

ಈ ವರ್ಷ ಭಕ್ತಾದಿಗಳೆಲ್ಲರೂ ಕೂಡಿ ಶ್ರೀ ತಿರುಪತಿ ಮಹಾಕ್ಷೇತ್ರಕ್ಕೆ ದಯ ಮಾಡಿಸಿ ಕಾರ್ತಿಕ ಶುದ್ಧ ಪೌರ್ಣಮಿಯಲ್ಲಿ ಶ್ರೀಗಳವರು ದೀಕ್ಷಾ ವಿರಮಣಗೈದು ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿದರು. ಉತ್ತಮವಾದ ಬಿಡದಿಯಲ್ಲಿ ವಸತಿ ಮಾಡಿ ಎಲ್ಲಾ ಭಕ್ತರೊಂದಿಗೆ ಪೂಜಾನುಷ್ಠಾನಗಳನ್ನು ಶಾಸ್ತ್ರ ಪ್ರವಚನಾದಿ ಗಳನ್ನು ನಡೆಸಿದರು. ಆ ಸನ್ನಿವೇಶವು ಮಹದಾನಂದವಾಗಿತ್ತು.

### ಆತ್ಮಪ್ರಮಾಣ ಪ್ರತಿಪಾದ್ಯವಲ್ಲ

ಪ್ರತ್ಯಗಭಿನ್ನ ಪರಮಾತ್ಮ ತತ್ತ್ವವು ಪ್ರತ್ಯಕ್ಷಾದಿ ಪ್ರಮಾಣ ಗೋಚರವಲ್ಲ. "ಅಪ್ರಮಾಣಮನಾದಿಂ ಚ ಹೇತು ದೃಷ್ಟಾಂತ ವರ್ಜಿತಮ್" "ಅನಾಶಿನೋऽ ಪ್ರಮೇಯಸ್ಯ..." ಇತ್ಯಾದಿಯಾಗಿ ಶ್ರುತಿ ಸ್ಮೃತಿಗಳು ಹೇಳುತ್ತಿವೆ. ಹರಿತ, ಪೀತ, ರಕ್ತಾದಿ ರೂಪರಹಿತವಾದ್ದರಿಂದ ಆತ್ಮ (ಬ್ರಹ್ಮ) ಪ್ರತ್ಯಕ್ಷ ವಿಷಯವಲ್ಲ. ಇನ್ನು ಯಾವ ಗುರುತುಗಳು ಇಲ್ಲದ್ದರಿಂದ ಅನುಮಾನ ಪ್ರಮಾಣಕ್ಕೂ ವೇದ್ಯವಲ್ಲ. ಆತನ ಸಮವಾದ ಮತ್ತೊಂದು ವಸ್ತುವು ಇಲ್ಲದ್ದರಿಂದ ಉಪಮಾನಕ್ಕೆ ವಿಷಯವಲ್ಲ. ಉಪಪತ್ತಿಯನ್ನು ಹೊಂದಿಸುವ ಅರ್ಥಾಪತ್ತಿ ಪ್ರಮಾಣಕ್ಕೂ ವಿಷಯವಲ್ಲ. ಭಾವ ರೂಪನಾಗಿ ಉಪಲಬ್ಧನಾದ್ದರಿಂದ ಅಭಾವದಿಂದ ಅನುಪಲಬ್ಧಿ ಪ್ರಮಾಣಕ್ಕೂ ವಿಷಯ ವಲ್ಲ. ಶಬ್ದ ಪ್ರಮಾಣಕ್ಕೂ ವಿಷಯನಲ್ಲ. ಅರ್ಥಾತ್ ಷಟ್ಪ್ರಮಾಣಾದ್ಯವಿಷಯನು. ಹಾಲು ಕೆಟ್ಟು ಮೊಸರಾದಂತೆ ಪರಿಣಾಮಿಯು ಅಲ್ಲ. ನಿರ್ವಿಕಾರಿಯಾಗಿದ್ದಾನೆ. ಈ ಕಾರಣಗಳಿಂದ ಆಧ್ಯಾತ್ಮಿಕಾದಿ ತಾಪತ್ರಯಗಳನ್ನು ಹೊಂದುವದಿಲ್ಲ. ನೈಯಾಯಿಕರ

ಮತಾನುಸಾರ ಒಂಭತ್ತು ಗುಣಗಳಾದ ಧರ್ಮ, ಅಧರ್ಮ, ಯತ್ನ, ದ್ವೇಷ, ಭಾವನ, ರಾಗ, ಸುಖ, ದುಃಖ, ಇಚ್ಛಾ ಇವುಗಳ ಸೋಂಕಿಲ್ಲದ ನಿರ್ಗುಣನಾಗಿದ್ದಾನೆ. ಈ ಒಂಭತ್ತು ಗುಣಗಳು ಅಂತಃಕರಣ ಧರ್ಮಗಳಾಗಿದ್ದಾವೆ. ಅಂತಃಕರಣ ವಿಶಿಷ್ಟವಾದ ಜೀವ ಭಾವದಲ್ಲಿ ಇವು ಕಾಣಿಸಿಕೊಳ್ಳುತ್ತವೆ. ಸಾಕ್ಷಿಯಾದ ಪ್ರತ್ಯಗಾತ್ಮನಲ್ಲಿ ಇಲ್ಲ. ಸಾಕ್ಷಿಯೇ ಬ್ರಹ್ಮವು. ಅದು ತಾನು. ಪ್ರಮಾಣಗಳು ಅಧ್ಯಾಸ ನಿವೃತ್ತಿ ಪರ್ಯಂತವು ಕೆಲಸ ಮಾಡುತ್ತವೆ. ಸ್ವಯಂಪ್ರಕಾಶ ಸ್ವರೂಪವಾದ ಆತ್ಮ ತಿಳಿಯಿತು, ತಿಳಿಯ ಲಿಲ್ಲ ಎಂಬ ಉಭಯಕ್ಕೆ ವಿಲಕ್ಷಣ ಸಾಕ್ಷಿ "ವಿದಿತಾದವಿದಿತಾದಧಿ" ಎಂದು ಶ್ರುತಿ.

ಸಾಕ್ಷಿ ಬ್ರಹ್ಮವೇ ಎಂಬ ಅದ್ವಿತೀಯ ಜ್ಞಾನಾನುಭವವುಳ್ಳ ಆತನಲ್ಲಿ ಸಂಚಿತ, ಆಗಾಮಿ, ಪ್ರಾರಬ್ಧವೆಂಬ ಕರ್ಮದ ಸೋಂಕು ಇಲ್ಲ. "ಅನೇಕ ಜನ್ಮ ಸಹಸ್ರ ಸಂಚಿತ ಮಪಿ ಧರ್ಮಾಧರ್ಮಾದಿ ಸಮೂಲಂ ಕರ್ಮ ಕ್ಷಣಮಾತ್ರಾದೇವ ಭಸ್ಮೀ ಕರೋತಿ" ಅಂದ ಹಾಗೆ ಕರ್ಮರಾಶಿ ಜ್ಞಾನದಿಂದ ದಹನವಾಗಿ ಹೋಗಿದೆ. ನಿರಭಿಮಾನಿಯಾದ್ದ ರಿಂದ (ಅಕರ್ತನಾದ್ದರಿಂದ) ಆಗಾಮಿ ಕರ್ಮಫಲವಿಲ್ಲ. ಪ್ರಾರಬ್ಧ ಕರ್ಮಕ್ಕೆ ಸಾಕ್ಷಿ ಯಾಗಿ ಅಸಂಗಾನುಭವದಿಂದ ಚಿನ್ಮಯನಾಗಿ ಕಾಣುವ ಆತನಿಗೆ ಅದೊಂದು ಸ್ವಪ್ನ ದಂತೆ ಕಂಡು ತೀರಿಹೋಗುವದು............ಇಂಥಾ ಮಹಾಕ್ಷೇತ್ರಕ್ಕೆ ಬಂದ ನೀವೆಲ್ಲರು ಪರಮಾತ್ಮಾನುಭವರೂಪ ಪಾತ್ರತೆಯನ್ನು ಪಡೆಯಬೇಕು. ಅದು ನೀವಾಗಿದ್ದೀರಿ.

ಆತ್ಮನೇ ಅಧ್ಯಾಸದಿಂದ ಅವಸ್ಥೆಗಳಾಗಿ ಕಾಣಿಸುತ್ತಿದ್ದಾನೆ. ಹೀಗೆಂದು ವೇದ ವಾಕ್ಯಗಳು ಮುಕ್ತಕಂಠದಿಂದ ಹೇಳುತ್ತಿವೆ. ಕಂಠಗತ ಚಾಮೀಕರ ನ್ಯಾಯದಂತೆ ಅದು ನೀನೆಂದು ತೋರಿಸುತ್ತಿವೆ. ಆ ಅನುಭವವನ್ನು ಪಡೆಯಲು "ಶ್ರದ್ಧೇಯಮಾತ್ಮ ಜ್ಞಾನಂ" ಎಂದು ಭಾಷ್ಯ.

ಶ್ಲೋ॥ ವಾಂಛಾ ಸಜ್ಜನ ಸಂಗತೌ । ವರಗುಣೇ ಪ್ರೀತಿಃ । ಗುರೌ ನಮ್ರತಾ ।
ವಿದ್ಯಾಯಾಂ ವ್ಯಸನಂ । ಸ್ವಯೋಷಿತಿ ರತಿರ್ಲೋಕಾಪವಾದಾದ್ಭಯಂ।
ಭಕ್ತಿಃ ಶೂಲಿನಿ | ಶಕ್ತಿರಾತ್ಮದಮನೇ । ಸಂಸರ್ಗ ಮುಕ್ತಿಃ ಖಲೈಃ ।
ಏತೇ ಏಷು ವಸಂತಿ ನಿರ್ಮಲ ಗುಣಾಃ । ತೇಭ್ಯೋ ನಮಃ ಕುರ್ಮಹೇ ॥

ಶ್ಲೋ॥ ಭಿಕ್ಷಾರ್ಥೀ ಕ್ವ ಪ್ರಯಾತಃ ? ಸನನು ಬಲಿಮುಖೇ ।
ತಾಂಡವಂ ಕ್ವಾದ್ಯ ಭದ್ರೇ ? ಮನ್ಯೇ ಬೃಂದಾವನಾಂತೇ ॥
ಕ್ವನು ಸಮೃಗ ಶಿಶುಃ ? ಕಿಂ ವರಾಹೋ ನ ಜಾನೇ ।
ಬಾಲೇ ಕಚ್ಚಿನ್ನದೃಷ್ಟೋ ಜರಠ ವೃಷಪತಿಃ । ಗೋಪ ಏವಾಸ್ಯವೇತ್ತಾ ॥
ಲೀಲಾ ಸಂಲಾಪ ಇತ್ಥಂ ಶ್ರೀ ಜಲನಿಧಿ ಹಿಮವತ್ಕನ್ಯಯೋಸ್ತ್ರಾಯ ತಾಂ ವಃ॥

ಶ್ಲೋ॥ ದೃಷ್ಟಿಪೂತಂ ನ್ಯಸೇತ್ಪಾದಂ । ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯಪೂತಾಂ ವದೇದ್ವಾಚಮ್ । ಮನಃಪೂತಂ ಸಮಾಚರೇತ್ ॥

**Tell me who your friends are,**
**I will tell you what you are !**

ಶ್ಲೋ|| ಅಪೂಜ್ಯಾ ಯತ್ರ ಪೂಜ್ಯಂತೇ ಪೂಜ್ಯಾ ಯತ್ರಾವಮಾನಿತಾಃ ।
ತತ್ರ ತ್ರಯೋ ಭವಿಷ್ಯಂತಿ ವ್ಯಾಧಿ ದುರ್ಭಿಕ್ಷ ತಸ್ಕರಾಃ ॥

ಹೀಗೆನ್ನುವ ನೀತಿಕ್ರಿಯಾಚಾರ ಸಂಪನ್ನವಾದ ಮತ್ತು ಕಾವ್ಯಾಲಂಕಾರ ಸಂಶೋಭಿತ ಉತ್ತಮ ಭಾವಗಳುಳ್ಳ ಮೇಲಿನ ಶ್ಲೋಕಗಳ ಅರ್ಥವನ್ನು ಬೋಧಿಸಿದರು.

## ಶ್ರೀ ರಮಣಾಶ್ರಮ

ತಿರುಪತಿಯಿಂದ ಎಲ್ಲರು ಶ್ರೀರಮಣಾಶ್ರಮಕ್ಕೆ ಹೋಗಿ ಸಂದರ್ಶಿಸಿದರು. ಆ ಪವಿತ್ರವಾದ ಸ್ಥಾನದಲ್ಲಿ ಮಾತನಾಡಿಕೊಂಡ ವಿಷಯಗಳು : "ಬ್ರಹ್ಮತತ್ತ್ವವು ಸ್ವಯಂ ಸಿದ್ಧವಾಗಿ ನಿತ್ಯಪ್ರಾಪ್ತವಾದದ್ದು. ಸಾಧನಾಂತರದಿಂದ ಪ್ರಾಪ್ತವಾಗುವುದಿಲ್ಲ. ಅದು ನಮ್ಮೆಲ್ಲರ ನಿಜಸ್ವರೂಪವಾಗಿರುವದೆಂದು ತಿಳಿಯಬೇಕು. ಸಾಧನೆಗಳೆಲ್ಲವೂ ಚಿತ್ತಶುದ್ಧಿಯ ಪರ್ಯಂತ ಅತ್ಯಂತೋಪಯುಕ್ತಗಳು. ಜ್ಞಾನೋದಯಾನಂತರ ಅವು ಸಹಜವಾಗುವವು.

ವೈದಿಕ ಕರ್ಮಾಚರಣ ಸಂಪನ್ನನಾದವನಿಗೆ ಈಶ್ವರಾನುಗ್ರಹದಿಂದ ಶಮದಮಾದಿ ಗುಣ ಸಂಪತ್ತು, ಶೀಲ, ಬ್ರಹ್ಮಚರ್ಯ ಚೆನ್ನಾಗಿದ್ದರೆ ಅವನು ಬ್ರಹ್ಮವಿದ್ಯಾಧಿಕಾರಿಯಾಗಿ ಈ ಜನ್ಮದಲ್ಲಿಯೇ ಬ್ರಹ್ಮಸ್ಥಿತಿಯನ್ನು ಪಡೆಯುವನು. ಆದ್ದರಿಂದ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನು ಶ್ರದ್ಧೆಯಿಂದ ಎಲ್ಲರೂ ಈಗಲೇ ಪಡೆದು ಧನ್ಯರಾಗಬೇಕು.

ಅದ್ವಯವಾದ ಪರತತ್ತ್ವವನ್ನೇ ಅದು ನೀನೆಂದು ಉಪನಿಷತ್ತುಗಳು ಏಕಮುಖವಾಗಿ ತಿಳಿಸುತ್ತಿವೆ. ಅಂಥಾ ಅನುಭವಸಿದ್ಧವಾದ ಆತ್ಮತತ್ತ್ವವನ್ನು ಹೇಳುವದರಿಂದ ಉಪನಿಷತ್ತುಗಳು ಪ್ರಮಾಣವಾಗಿವೆ. ಏತದಾಧಾರದಿಂದಲೇ ವೇದದಲ್ಲಿ ಕರ್ಮೋಪಾಸನಾದಿಗಳಿಗೆ ಕೂಡಾ ಅಸ್ತಿತ್ವವು ಬಂದಿದೆ. ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಸಾಧನೆಗಳು ಜೀವನದ ಪರಮ ಪಾಥೇಯಗಳು.

ಆಚಾರ್ಯ ಪ್ರಭೃತರು ಅದ್ವೈತ ತತ್ತ್ವವನ್ನು ನೂತನವಾಗಿ ಸೃಷ್ಟಿಸಿದ್ದಲ್ಲ. ವೇದೀಯವಾದ ಆ ಸನಾತನ ತತ್ತ್ವವೇ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ಅದನ್ನು ಕಂಡು ಅನುಷ್ಠಿಸಿ ಮಂತ್ರದಂಷ್ಟ್ರರಾದ ಋಷಿಗಳು ಬೋಧಿಸಿದರು.

ಸರ್ವ ಶಾಸ್ತ್ರಗಳಿಗೆ ಮೂಲವೂ ಸರ್ವ ವಿಜ್ಞಾನಗಳಿಗೆ ಆಧಾರವೂ, ಆದ ವೇದವು ಪುರುಷ ನಿರ್ಮಿತವಾದುದಲ್ಲ. ಅದು ಅಪೌರುಷೇಯವು. ಭಗವಂತನ

ಉಚ್ಛ್ವಾಸ ನಿಶ್ವಾಸ ರೂಪಗಳೇ ವೇದಗಳು. ಪರಂಪರೆಯಾಗಿ ಋಷಿಗಳು ತಪಸ್ಸಿನಿಂದ ಕಂಡು ಮಂತ್ರದ್ರಷ್ಟರಾದರು. ಅದು ಒಬ್ಬರು ಬರೆದುದಲ್ಲ. ನಿತ್ಯವು, ಶಾಂತಿ, ಸುಖ, ಆನಂದ, ಬ್ರಹ್ಮ ಎಂಬೀ ಮೊದಲಾದವುಗಳು ಯಾವ ಯುಗಕ್ಕೆ, ಯಾವ ದೇಶ ಕಾಲ ವಸ್ತುಗಳಿಗೆ, ಸಂಬಂಧಪಟ್ಟವುಗಳಾಗಿ ಪರಿಮಿತವಾಗಿಲ್ಲ. ಸರ್ವಕಾಲ, ಸರ್ವ ಯುಗ, ಸರ್ವರಿಗೂ ಬೇಕಾದ ಸನಾತನ ತತ್ತ್ವವಾಗಿದೆ. ಆದ್ದರಿಂದ ವೇದ-ಉಪ ನಿಷತ್ತುಗಳು ಒಬ್ಬರಿಂದ ಒಬ್ಬರಿಗೆ ಪರಂಪರೆಯಾಗಿ ಶ್ರುತವಾಗುತ್ತ ಬಂದುದರಿಂದ, ಪರಾವಿದ್ಯೆ ಎಂತಲೂ, ಶ್ರುತಿ ಎಂತಲೂ ಹೇಳಲ್ಪಡುತ್ತದೆ. ಪರಂತು ರಚನಾತ್ಮಕ ವಲ್ಲ. ಬರಬರುತ್ತಾ ಅಧಿಕಾರಿಗಳನ್ನನುಸರಿಸಿ ರಚನಾತ್ಮಕವಾಗಿದೆ ಎಂದು ಹೇಳುತ್ತಾರೆ."

ಶೋಭಕೃತು ದಶಮಿ ಮೊದಲು ದ್ವಾದಶಿವರೆಗೂ ಮೂರು ದಿನಗಳು ಶ್ರೀಗಳವರ ಗುರುದೇವರ ಪುಣ್ಯಾರಾಧನೆ ಮಹೋತ್ಸವವು ಮಹಾತ್ಮರ ಆಗಮನದಿಂದಲೂ ಅಮೃತೋಪದೇಶಗಳಿಂದಲೂ, ಉಪನ್ಯಾಸಗಳಿಂದಲೂ ಕಾರ್ಯಕ್ರಮವು ಶಿವಪ್ರದ ವಾಗಿ ನಡೆದು ಪೂರ್ಣವಾಯಿತು. ಆಮೇಲೆ ಶ್ರೀ ಗೀತಾ ಜಯಂತಿ ಉತ್ಸವವು, ಪೆನ್ನ ಹೋಬಿಳ ಕ್ಷೇತ್ರವಾಸವಾಯಿತು. ಆಮೇಲೆ ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮದಲ್ಲಿ "ಸಿದ್ಧಾಂತ ಬಿಂದು ಸೂತಸಂಹಿತೆ ಯಜ್ಞವೈಭವ ಖಂಡ" ಅಪೂರ್ವ ವಾಗಿ ಪ್ರವಚನ ನಡೆಯಿತು. ಅಲ್ಲಿ ಭಕ್ತರಿಗೆ ಮತ್ತೊಮ್ಮೆ ಆ ಭಕ್ತರು ಕೇಳಿದ ಕೆಲವು ವಿಷಯಗಳನ್ನು ತಿಳಿಸಿದರು.

ಸಂಕಲ್ಪ ವಿಕಲ್ಪವಾದ ಮನೋವೃತ್ತಿಗಳು ಆಯಾ ಇಂದ್ರಿಯಗಳಿಂದ ನೋಡು ವದು, ಮಾತನಾಡುವದು, ಕೇಳುವುದು ಮೊದಲಾದ ಕೆಲಸಗಳನ್ನು ಆಚರಿಸಿದರೂ ಆ ಇಂದ್ರಿಯ ವೃತ್ತಿಗಳು ಚೇತನವಂತಲ್ಲ. ಚೈತನ್ಯದಿಂದಲೇ ಎಲ್ಲವು ಗೋಚರಿಸುತ್ತವೆ. ಆ ಚೈತನ್ಯವೇ ಪರಬ್ರಹ್ಮವು. "ಪ್ರಜ್ಞಾನಂ ಬ್ರಹ್ಮ" ವೆಂದು 'ಅಯಮಾತ್ಮ ಬ್ರಹ್ಮ' ಈ ಆತ್ಮ ಬ್ರಹ್ಮವೇ ಎಂಬುದಾಗಿ ತಿಳುಹಿ ಮೂಕೀ ಭಾವವನ್ನು ಹೊಂದುತ್ತದೆ.

ಶ್ರುತಿಗಳಲ್ಲಿ ಸ್ಮೃತಿಗಳಲ್ಲಿ ಅಲ್ಲಲ್ಲಿ ಕೆಲವು ಕಥೆಗಳು ಹೇಳಲ್ಪಟ್ಟಿವೆ. ದೇಶ ಕಾಲಕ್ಕೆ ಸಂಬಂಧಪಟ್ಟ ಈ ಕಥೆಗಳು ವೇದೋಪನಿಷತ್ತತ್ವ ಪ್ರಸಂಗದಲ್ಲಿ ಏಕೆ ಹೇಳಿದ್ದಾರೆ ? ಅಂದರೆ ವೇದೋಪನಿಷದರ್ಥ ದೇಶಕಾಲಗಳಿಗೆ ಒಳಪಟ್ಟುದಲ್ಲ. ಆಯಾ ಸಂದರ್ಭದಲ್ಲಿ ಮಂತ್ರ ಅಂದರೇ ಶ್ರುತಿ ಸತ್ಯಾರ್ಥವನ್ನು ಹೇಳುವದಕ್ಕಾಗಿ ಅದನ್ನು ಉದಾಹರಣೆಯಾಗಿ ಕೈಕೊಂಡಿದೆ ಅಷ್ಟೆ. ಭಗವದ್ಗೀತಾ ತತ್ತ್ವಶಾಸ್ತ್ರ ವಿಷಯಗಳು ಕೇವಲ ನಿತ್ಯ ಸತ್ಯವಾದ ಸನಾತನ ವಸ್ತುತತ್ತ್ವವನ್ನೇ ಬೋಧಿಸುತ್ತೆ. ಆದರೂ ಶ್ರೀ ಕೃಷ್ಣಾರ್ಜುನ ಸಂವಾದವೆನ್ನುವ ಮಹಾಭಾರತದ ಕಥೆ ಸಂದರ್ಭವನ್ನು ಪುರ ಸ್ಕರಿಸಿಕೊಂಡು ಸನಾತನವಾದ ಬ್ರಹ್ಮತತ್ತ್ವವನ್ನು ತಿಳುಹುವದೇ ಅವರ ಉದ್ದೇಶ್ಯ ವೆಂದು ಗ್ರಾಹ್ಯ. ಹಾಗೆಯೇ ಉಪನಿಷತ್ತುಗಳಲ್ಲಿ ಯಾಜ್ಞವಲ್ಕ್ಯ, ಮೈತ್ರೇಯಿ,

ಜನಕ, ಕೇಕಯ, ಜೈವಲಿ ಪ್ರವಾಹಣ, ಸತ್ಯಕಾಮ, ಶ್ವೇತಕೇತು, ಉದ್ದಾಲಕ, ಭೃಗು, ವರುಣ, ಉಮಾ, ಇತ್ಯಾದಿ ಕಥೆಗಳು ಉದಾಹರಿಸಿದರೂ ಅಪೂರ್ವವಾದ ನಿನ್ನ ಸ್ವರೂಪವನ್ನು ತಿಳಿಸುವುದೇ ಮುಖ್ಯೋದ್ದೇಶ. ಸತ್ಯವನ್ನು ಸುಬೋಧ ಗೊಳಿಸಲು ಆಯಾರೂಪ ಸಂವಾದಾತ್ಮಕವಾಗಿ ಉಲ್ಲೇಖಿಸಲ್ಪಟ್ಟಿದೆ ಎಂದು ತಿಳಿಯಬೇಕು. ಮುಖ್ಯ ತಾತ್ಪರ್ಯ ಬ್ರಹ್ಮವಿಷಯವೇ.

## ಸನ್ಯಾಸಾಧಿಕಾರ

ಸ್ವಾಮೀ ವೇದಾಧಿಕಾರವಿಲ್ಲದವರಿಗೆ ಪರಮಾರ್ಥ ತತ್ತ್ವನಿಷ್ಠೆ ಉಂಟಾಗುವದೋ ಇಲ್ಲವೋ ? ಅಂದರೆ ; ಉಂಟಾಗುತ್ತೆ. ಅಂಥವರು ಎಷ್ಟೋ ಜನರಿದ್ದಾರೆ. ಅನನ್ಯ ಸಾತ್ವಿಕ ಶ್ರದ್ಧಾ ಭಕ್ತಿಗಳು ಇದಕ್ಕೆ ಪಾತ್ರ (ಮುಖ್ಯ). ಬ್ರಹ್ಮಸೂತ್ರಗಳಲ್ಲಿಯೂ ಗೀತೆಯಲ್ಲಿಯೂ ಈ ವಿಷಯವು ವಿವರಿಸಲ್ಪಟ್ಟಿದೆ. "ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಸ್ತೇ ಪೀಯಾಂತಿ ಪರಾಂ ಗತಿಂ" ಅನ್ನುವದಾಗಿ ಶ್ರುತ್ಯರ್ಥವನ್ನು ಶ್ರದ್ಧಾ ಭಕ್ತಿಗಳಿಂದ, ಮಹನೀಯರಾದ ಪೂಜ್ಯರಿಂದ ಶ್ರವಣಮಾಡಿ ಆತ್ಮಾನುಭವವನ್ನೂ ನಿಷ್ಠೆಯನ್ನೂ ಪಡೆಯಬಹುದು.

ಸನ್ಯಾಸ(ತುರೀಯಾಶ್ರಮ)ವೆನ್ನುವುದು ವೇದಸಮ್ಮತವೇನಾ? ಅಲ್ಲವಾ? ಅಂದರೆ ಹೌದು ! ಅದು ಸಮ್ಮತವೇ. ಆದರೆ ಅದು ಸಂಸ್ಕಾರ ಹೀನರಿಗೆ ಆಚಾರ ಹೀನರಿಗೆ ಸಾಧ್ಯವಿಲ್ಲ. ಕಲಿಬಾಹ್ಯವೆಂದು ಹೇಳಲ್ಪಟ್ಟರೂ, ಕರ್ಮೋಪಾಸನಾದಿಗಳಿಂದ ಸುಸಂಸ್ಕೃತ ಆಚಾರ ವಿಚಾರ ಸಂಪನ್ನರಾದ ಶೀಲವಂತರಿಗೆ, ಅಜ್ಞಾನ ತತ್ಕಾರ್ಯಾಧ್ಯಾಸ ನಿವೃತ್ತಿಪೂರ್ವಕ ಜ್ಞಾನಿಗೆ ಪರಮಹಂಸ ಪರಮಾರ್ಥ ಸನ್ಯಾಸ ವಿಧ್ಯುಕ್ತವೇ. ಇಂದ್ರಿಯ ವಿಷಯಲಾಲಸರಿಗೆ ಮಾತ್ರ ಇದು ಸಾಧ್ಯವಲ್ಲ. ಈಷಣತ್ರಯ ತ್ಯಾಗಿಗಳಾಗಿ ಜ್ಞಾನನಿಷ್ಠೆಗೆ ಜೀವನವನ್ನು ಅಂಕಿತಮಾಡಿದ ಆಶ್ರಮ ಸನ್ಯಾಸ ; ಶ್ರುತಿಸಮ್ಮತವು ಸುಪ್ರಸಿದ್ಧವು. ಇದು ಮಹಾ ನಿಷ್ಕಾಮ ತಪಃ ಫಲವು. ಗೃಹಸ್ಥರಲ್ಲಿ ಕೂಡಾ ಆಶ್ರಮ ಸ್ವೀಕಾರ ಮಾಡಿದ ಪುಣ್ಯಾತ್ಮರಿದ್ದಾರೆ. ಇದು ಜ್ಞಾನಪ್ರಭಾವ. ಹೀಗೆ ವೇದೋಕ್ತ ಸನ್ಯಾಸ ಧರ್ಮಗಳಿಗಿಂತಲೂ ಬೇರೆಯಾದವುಗಳು ಶಾಸ್ತ್ರೀಯವಲ್ಲ.

ಯೋಗವೆಂದರೆ ಗೀತಾಶಾಸ್ತ್ರದಲ್ಲಿ ಜ್ಞಾನವೆಂತಲೂ, ಆತ್ಮಜ್ಞಾನ ನಿಷ್ಠೆಯಂತಲೂ, ಷನ್ಕಿಮ ಕರ್ಮನಿಷ್ಠೆ ಎಂತಲೂ, ಪರಮಾತ್ಮನೇ ತನ್ನ ಸ್ವಮಾಯೆಯಿಂದ ಜಗದ್ರೂಪ ವಾಗಿ ಕಾಣಿಸಿದನೆಂತಲೂ ಹೇಳಲ್ಪಟ್ಟಿದೆ ಮತ್ತು ನಿಷ್ಕಾಮಕರ್ಮ ಧ್ಯಾನ ಯೋಗಗಳು ಜ್ಞಾನನಿಷ್ಠೆಯ ಪರಂಪರಾ ಸಾಧನಗಳಾದ್ದರಿಂದ ಇವುಗಳನ್ನೂ ಯೋಗ ವೆಂದು ಕರೆಯುವರು. ಈ ಧ್ಯಾನಯೋಗವೇ ಸಮಾಧಿ ಎಂತಲೂ ಹೇಳುತ್ತಾರೆ. ಅಂದರೆ ಕ್ರಮಶಃ ಸ್ವರೂಪಾನುಸಂಧಾನಪೂರ್ವಕ ಮನಸ್ಸು ಬಾಧಿಸಲ್ಪಡುವದೆಂದು

ಹೇಳುವರು. ಸಮಾಧಿಯೆಂದರೆ ಬುದ್ಧಿಯ ಕೃತ ನಿಶ್ಚಯವೆಂತಲೂ, ಆತ್ಮವೆಂತಲೂ, ಆತ್ಮಜ್ಞಾನನಿಷ್ಠೆ ಎಂತಲೂ ಹೇಳುವರು. ಆತ್ಮಾನಾತ್ಮ ವಿಚಾರ ಪದ್ಧತಿಯಿಂದ ಇದನ್ನು ಸಾಂಖ್ಯವೆಂದು ಹೇಳುವರು. ಹೀಗೆ ಅನುಭವ ಮೂಲಕ ಇದು ಒಂದು ವಿಚಾರ ಯೋಗವೆಂದು ತಿಳಿಯುವುದು. ಯೋಗ ಸೂತ್ರಕಾರರು ಚಿತ್ತವೃತ್ತಿಗಳ ನಿರೋಧವೇ ಯೋಗವೆಂದಿದ್ದಾರೆ.

ಕಾಣಿಸುವುದ್ದು ಕಾಣಿಸದಿರುವುದು ಎಂಬ ಈ ವ್ಯಕ್ತಾವ್ಯಕ್ತ ಪ್ರಪಂಚವು ಆತ್ಮನಲ್ಲಿ ಅಧ್ಯಾರೋಪಿಸಲ್ಪಟ್ಟಿದೆ; ಸ್ವತಂತ್ರವಲ್ಲ, ನಿಜವಾಗಿಯೂ ಆತ್ಮನಲ್ಲಿ ಇಲ್ಲ. ಅನಿರ್ವಚನೀಯವಾಗಿ ತೋರುತ್ತದೆ. 'ಉಪಾಧಿ'ಯಿಂದಲೆ ಆತ್ಮನಿಗೆ ಈಶ್ವರನೆಂದೂ ಜೀವನೆಂದೂ ನಾಮವಾಯಿತು. ಆತ್ಮಾನಾತ್ಮಗಳ ಅನ್ಯೋನ್ಯಾಧ್ಯಾಸವೇ ಬಂಧ; ವಿವೇಕದಿಂದ ಮೋಕ್ಷ !

ವೇದ ಸಮ್ಮತವಾಗಿ ದೇವತೆಗಳು ಸೂಕ್ಷ್ಮ ಕಾರ್ಯಕಾರಣರು. ಅವರು ವಿಗ್ರಹರೂಪದಿಂದಲೂ ಇರುವರು. ದೇವತೆಗಳಲ್ಲಿ ಇಂದ್ರಾಗ್ನ್ಯಾದಿ ದೇವತೆಗಳು ಉತ್ತಮರು. ಪುಣ್ಯಾತ್ಮರು ಆಸ್ಥಾನಕ್ಕೆ ಹೋಗುವರು. ಆಚಾರ್ಯ ಪ್ರಭೃತರು, ಉಪನಿಷತ್ತುಗಳು ಹೀಗೆಂದು ತಿಳುಹುತ್ತವೆ. ಸಕಾಮಿಗಳಾಗಿ ದೇವರನ್ನು ಆರಾಧಿಸುವದರಿಂದ ದೃಷ್ಟಾದೃಷ್ಟ ಫಲಗಳು ಕೊಡುವರು. ನಿಷ್ಕಾಮರಾಗಿ ಆರಾಧಿಸಿದರೆ ಮೋಕ್ಷವನ್ನು ಪಡೆಯಲು ಬೇಕಾದ ಶ್ರದ್ಧಾ ಭಕ್ತಿಗಳನ್ನೂ, ಸದ್ಗುರು ಪ್ರಾಪ್ತಿಯನ್ನೂ ಆ ದೈವವು ಉಂಟುಮಾಡುವದೆಂದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ಆಚಾರ್ಯರು ಭಾಷ್ಯದಲ್ಲಿ ವ್ಯಾವಹಾರಿಕ ದೃಷ್ಟಿಯಿಂದ ದೈವಾಸ್ತಿತ್ವವನ್ನೂ ಸ್ವರ್ಗ, ನರಕ, ವರ್ಣಾಶ್ರಮಾಸ್ತಿತ್ವವನ್ನೂ ಅಂಗೀಕರಿಸಬೇಕಾಗುತ್ತದೆ. ಪುಣ್ಯ ಪಾಪಾದಿ ಕರ್ಮಗಳನ್ನು ಶಾಸ್ತ್ರರೀತ್ಯಾ ಅಂಗೀಕರಿಸಿ, ಪ್ರಜೆಗಳನ್ನು ಸನ್ಮಾರ್ಗಗಾಮಿಗಳನ್ನಾಗಿ ಮಾಡುವದೇ ಉದ್ದೇಶವೆಂದು ಹೇಳುತ್ತಾರೆ. ವಸ್ತುತಃ ಪರಮಾತ್ಮ ದೃಷ್ಟಿಯಿಂದ ಇವೇನೂ ಇಲ್ಲ. ಇನ್ನೊಂದು ದೃಷ್ಟಿಯಿಂದ ಇಲ್ಲವೆಂದು ಹೇಳಬಾರದು. ಆದ್ದರಿಂದ ತಿಳಿದು ವರ್ತಿಸಬೇಕು. ಇಂದ್ರಾದಿ ದೇವತೆಗಳು ಮಾನವನ ಮುಕ್ತಿಗೆ ವಿಘ್ನಕಾರಕರು— ಅಂದರೆ ಇಂದ್ರಿಯಗಳು ಸ್ವಾಧೀನವಾಗದಿರುವುದೇ ವಿಘ್ನ ಎಂದರ್ಥವೆಂತಲು ಹೇಳುತ್ತಾರೆ.

ಪರಮಾತ್ಮ ಸಾಧಕನ ಆತ್ಮರೂಪನಾಗಿಯೇ ಇದ್ದಾನೆ. ಬ್ರಹ್ಮವಿದ್ಯಾ ಫಲವೆಂದರೆ ಬ್ರಹ್ಮಾನುಭವವೇ.

ಬ್ರಹ್ಮಜ್ಞಾನದಿಂದ ಮನಸ್ಸು ವಿಕಸನವಾಗುವದು. ಬುದ್ಧಿ ವಿಶಾಲವಾಗಿ ಶಾಂತಿ ಭಾಸವಾಗುವುದು. ಆತ್ಮಜ್ಞಾನವೇ ಸರ್ವಶಕ್ತಿಗಳ ಕೇಂದ್ರ; ಯಶೋನಿದಾನ.

ನೀನು ಮಾತನಾಡುವ ಈ ಭಾಷೆಗಿಂತಲೂ ಉತ್ತಮವಾದ ಭಾಷೆ ಪರಾಭಾಷೆ. ವಸ್ತುಸ್ಥಿತಿಯಿಂದ ಕಾಣುವಿಕೆ ಎಂದರ್ಥ.

ಆಮೇಲೆ ಶ್ರೀಗುರುದೇವಾಶ್ರಮದ ವಾರ್ಷಿಕೋತ್ಸವವು 27-1-64 ತಾರೀಖು ವಿಧ್ಯುಕ್ತವಾಗಿ ನಡೆಯಿತು. ಶ್ರೀಗುರುದೇವಾಶ್ರಮದಲ್ಲಿಯೇ ಶ್ರೀಗಳವರು ನಿಷ್ಠೆಯಿಂದಿರುತ್ತಾ ಆಚಾರ್ಯ ಕೃತಿ ಶ್ರೀ ಸದ್ಗುರು ಪಾದುಕಾಸ್ತವ, ಶ್ರೀ ದಕ್ಷಿಣಾ ಮೂರ್ತಿ ಸ್ತೋತ್ರ ಮತ್ತು ಶಾಂತಿಮಂತ್ರಗಳು ಇವುಗಳನ್ನು ಆಂಧ್ರಾನುವಾದ ಮಾಡಿದರು. ಈ ವಿಷಯವಾಗಿಯೇ ಪ್ರವಚನ ಮಾಡಿದರು.

"ಈ ಪ್ರಪಂಚವು ಲಯವಲ್ಲ; ನಾಶನವು ಅಲ್ಲ. ಬಾಧಿತಾನುವೃತ್ತಿಯಿಂದ ಇಲ್ಲದ್ದೆಂದು ಅರಿಯಬೇಕು. ಅಪರೋಕ್ಷ ಮಿಥ್ಯಾ ನಿಶ್ಚಯ.

ಆತ್ಮಜ್ಞಾನ, ವಾಸನಾಕ್ಷಯ, ಮನೋನಾಶವೆಂದರೆ ಒಂದೇ ಅರ್ಥ. ಜ್ಞಾನ ವಾದೊಡನೆ ಮನೋನಾಶ, ವಾಸನಾಕ್ಷಯ. ಆತ್ಮಜ್ಞಾನವಾದರೆ ಅನಾತ್ಮತ್ವ ಭ್ರಾಂತಿ ಇಲ್ಲವಾಗಿ ಹೋಗುವದು. ಆತ್ಮವು ಬ್ರಹ್ಮವೇ ಎಂಬ ನಿಷ್ಠೆಯುಂಟಾದರೆ ಕರ್ತೃತ್ವ ಬುದ್ಧಿಯೇ ಇಲ್ಲ.

ಮಹಾಶಿವರಾತ್ರಿಯನ್ನು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಆಚರಿಸಿದರು. ಶ್ರೀಗಳವರಿಂದ ವಿರಚಿತವಾದ ಮಹೋಪನಿಷತ್ತು ಗ್ರಂಥಾವಿಷ್ಕರಣ ವಾಯಿತು. ಶ್ರೀ ಶಿವಪಂಚಾಕ್ಷರ- ಷಡಕ್ಷರ ಮಹಾಮಂತ್ರವನ್ನೂ, ಮಂತ್ರಾರ್ಥ ವನ್ನೂ ಬೋಧಿಸಿದರು ಮತ್ತು ನೈಮಿತ್ತಿಕವಾಗಿ ಮೌನ ಮತ್ತು ಅಪಕ್ವಾಹಾರ ದೊಡನೆ ಶ್ರೀಗುರುವ್ರತವನ್ನಾಚರಿಸಿದರು. ಮಹೋಪನಿಷದ್ ವ್ಯಾಖ್ಯೆ ನಡೆಯಿತು.

ಗುತ್ತಿಪುರ ಭಕ್ತರು ಶ್ರೀ ಡಿ. ವಿ. ನಾಗಮಾಣಿಕ್ಯಂ ಮೊದಲಾದ ಭಕ್ತರ ಪ್ರಾರ್ಥನಾನುಸಾರ ಗುತ್ತಿ ಶ್ರೀ ಕನ್ನಿಕಾಪರಮೇಶ್ವರಿ ದೇವಾಲಯಕ್ಕೆ ದಯಮಾಡಿಸಿ, ಪೂಜಾನುಷ್ಠಾನಗಳು, ಉಪನಿಷತ್ ಗೀತಾ ಪ್ರವಚನಗಳನ್ನು ನಡೆಯಿಸಿದರು.

"ನಾನ್ಯಃ ಪಂಥಾ ಅಯನಾಯ ವಿದ್ಯತೇ" ಅಂದಹಾಗೆ ಪರಬ್ರಹ್ಮ ಸ್ವರೂಪ ವನ್ನು ಅರಿಯುವದಕ್ಕೆ ಬೇರೆ ಯಾವ ಮಾರ್ಗವೂ ಇಲ್ಲ. ಶ್ರುತಿ ಗುರುಗಳನ್ನು ಆಶ್ರಯಿಸಿಯೇ ತಿಳಿಯಬೇಕು.

ನಿತ್ಯಾನಿತ್ಯ ವಸ್ತು ವಿವೇಕವೆಂದರೆ ನಿತ್ಯವಾದ ಆತ್ಮಸ್ವರೂಪವನ್ನು, ಅನಿತ್ಯ ವಾದ ಅನಾತ್ಮ ವಿಷಯ ಸ್ವರೂಪವನ್ನು ಚೆನ್ನಾಗಿ ವಿಚಾರಿಸಿ ತಿಳಿಯುವುದು. ಇದರಿಂದ ಆತ್ಮದ ಸತ್ಯತ್ವವೂ ಅನಾತ್ಮದ ಅಸತ್ಯತ್ವವೂ ವೇದ್ಯವಾಗುವುದು.

ಇಹಾಮುತ್ರಾರ್ಥ ಫಲಭೋಗ ವಿರಾಗ- ಈ ಲೋಕ ಮತ್ತು ಪರಲೋಕ ಸುಖಗಳು ಅನಿತ್ಯವಾದ್ದರಿಂದ ಅವುಗಳಲ್ಲಿ ಆಸಕ್ತಿ ಇಲ್ಲದಿರುವಿಕೆ. ಆತ್ಮ ನಿತ್ಯತ್ವದಲ್ಲಿ ಅಭಿರತಿ, ಆಸಕ್ತಿ ಇರುವಿಕೆ,

ಶಮಾದಿ ಷಟ್ಕ ಸಂಪತ್ತಿ- ಶಮವೆಂದರೆ ಮನೋನಿಗ್ರಹ (ಅಂತರಿಂದ್ರಿಯ ನಿಗ್ರಹ) ದಮವೆಂದರೆ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು ಅಂದರೆ ಬಾಹ್ಯೇಂದ್ರಿಯಗಳ ನಿಗ್ರಹ.

ಉಪರತಿ– ಲೌಕಿಕ ಕರ್ಮ ಕಲಾಪಗಳು, ವಾಸನೆಗಳು, ಯಾವ ಗಡಿಬಿಡಿಗಳೂ ಇಲ್ಲದೆ ಶಾಂತವಾಗಿ, ನಿಷ್ಕಾಮವಾಗಿ ಇರುವುದು.

ತಿತಿಕ್ಷೆ– ಸುಖ ದುಃಖಾದಿ ದ್ವಂದ್ವಗಳನ್ನು ಸಮಬುದ್ಧಿಯಿಂದ ಸಹಿಸುವದು. ಅಸಂಗವಾಗಿರುವುದು.

ಶ್ರದ್ಧೆ– ಗುರು ವೇದಾಂತ ಶಾಸ್ತ್ರಗಳಲ್ಲಿ ಅತ್ಯಂತ ಆದರಯುಕ್ತವಾದ ವಿಶ್ವಾಸ, ಪರಮಭಕ್ತಿ.

ಸಮಾಧಾನ– ಮನಸ್ಸು ತಲ್ಲಣಗೊಳ್ಳದೆ ಸಮಾಹಿತವಾಗಿರುವುದು.

ಮುಮುಕ್ಷತ್ವ– ಮೋಕ್ಷ ವಿಷಯಕವಾದ ಉತ್ಕಟೇಚ್ಛೆ. ಇಂಥಾ ನಾಲ್ಕು ಸಂಪತ್ತುಳ್ಳವರಿಗೆ ನಿಜವಾದ ಚಿತ್ತಶುದ್ಧಿಯುಂಟಾಗಿ ಬ್ರಹ್ಮಜ್ಞಾನವಾಗುವದು. ಇವು ಎಲ್ಲವು ಅತ್ಯಂತ ಸಾತ್ವಿಕ ಶ್ರದ್ಧೆಯಲ್ಲಿ ಅಂತರ್ಗತವೆಂದು ಹೇಳಬಹುದು.

ಆತ್ಮ ತತ್ತ್ವವನ್ನು ಅರಿತಾತನು ಶೋಕವನ್ನೊಂದುವದಿಲ್ಲ. "ಆತ್ಮವಿಚ್ಛೋಕಂ ತರತಿ".

"ತತ್ವಮಸಿ" ಮಹಾವಾಕ್ಯ– ನೀನಾ ಪರಮಾತ್ಮನಾಗಿದ್ದೀಯೇ ಎಂದು ವರ್ತಮಾನ ಕಾಲವನ್ನೇ ತಿಳಿಸುತ್ತೆ. ಆದ್ದರಿಂದ ವರ್ತಮಾನವೇ ಭೂತ ಭವಿಷತ್ತುಗಳಾಗಿದೆ. ಕಾರಣ ನಿತ್ಯಾಪರೋಕ್ಷವಾದ ಆತ್ಮನೇ ಪರಮಾತ್ಮ.

ಕಣ್ಣು ರೂಪವನ್ನು ಕಾಣುತ್ತೆ. ಅದನ್ನು ಮನಸ್ಸು ನೋಡುತ್ತೆ; ಮನಸ್ಸಿಗಿಂತಲೂ ಒಳಗಿನ ಬುದ್ಧಿ ಅದನ್ನು ನೋಡುತ್ತೆ; ಬುದ್ಧಿ ಸಾಕ್ಷಿ ಚೈತನ್ಯದಿಂದ ಪ್ರಕಾಶವಾಗುತ್ತೆ, ಆ ಸಾಕ್ಷಿ ಪರಶಿವನಾದ ತನ್ನನ್ನು ತಾ ನೋಡುವದು ಮತ್ತೊಂದಿಲ್ಲ.

ಭಕ್ತಿಯಿಂದ ಯಾರು ತನ್ನನ್ನು ಜಪಿಸುತ್ತಿರುವರೋ ಅವರನ್ನು ತಾರಣಗೊಳಿಸುವುದು ಗಾಯತ್ರಿ. ಅದು ವೇದಮಾತೆ. ಮಂತ್ರಶಕ್ತಿ ಸಣ್ಣದಾಗದಂತೆ ಪರಿಶುದ್ಧವಾಗಿ ಉಳಿಸಿಕೊಳ್ಳಬೇಕು.

ಅಶುದ್ಧ ಪದಾರ್ಥ ಸೇವನೆ, ಅಶುದ್ಧ ಸಂಕಲ್ಪಗಳಿಂದ ಉತ್ತಮ ಶಕ್ತಿ ಕ್ಷೀಣಿಸುತ್ತೆ.

ಆತ್ಮಜ್ಞಾನವು ಸಚ್ಛೀಲ ಸಂಭರಿತವಾದ ಅನುಷ್ಠಾನವಿಲ್ಲದೆ ಹೋದರೆ ಶೋಭಿಸುವದಿಲ್ಲ. ಶಾಂತಿಯನ್ನು ಕೊಡುವುದಿಲ್ಲ.

ಗಾಯತ್ರಿ, ಸಾವಿತ್ರಿ, ಸರಸ್ವತಿ ಎನ್ನುವ ಮೂರು ರೂಪಗಳಿಂದ, ಉದಯ ವಿಷ್ಣು ಪ್ರಧಾನ, ಮಧ್ಯಾಹ್ನ ಬ್ರಹ್ಮ ಪ್ರಧಾನ, ಸಾಯಂಕಾಲ ಶಿವ ಪ್ರಧಾನ. ಆದ್ದರಿಂದ ತ್ರಿಸಂಧ್ಯೆಯಲ್ಲಿಯೂ ಅನುಸಂಧಾನಗಳಿರಬೇಕು. ಮುಖ್ಯವಾಗಿ ಗಾಯತ್ರೀ ಅಂದರೆ ಪ್ರತ್ಯಗಾತ್ಮನಾದ ಪರಬ್ರಹ್ಮವೇ ಎಂದರ್ಥ.

ಭಾರತಾವನಿಯಲ್ಲಿ ಪೂಜ್ಯ ಮಹಿಳೆಯರು ಸೀತೆ, ಸಾವಿತ್ರಿ, ದಮಯಂತಿ, ಬೃಂದ, ಸುಲೋಚನ ಮುಂತಾದ ಅನೇಕ ಮಹಿಳೆಯರು ಜಗತ್ತಿಗೆ ಮಂಗಳವನ್ನೀಯುತ್ತ ಲಜ್ಜಾಭರಣ ಭೂಷಿತರಾಗಿ ಸತ್ಕೀರ್ತಿಯನ್ನು ಗಳಿಸಿದ ಪುಣ್ಯಶೀಲೆಯರು. ಅಂಥವರು ಇಂದಿಗೂ ಇದ್ದಾರೆ. ಅಂಥವರ ಇರುವಿಕೆಯಿಂದಲೇ ಇನ್ನೂ ಸತ್ಯವು ನಡೆಯುತ್ತಿದೆ.

ಪೂರ್ಣಾನುಭವಿಯಾದಾತನಿಗೆ ಅಶಾಂತಿ ಅಡ್ಡಿಗಳು ಉಂಟಾಗುವುದಿಲ್ಲ. ಬ್ರಹ್ಮಜ್ಞರು ತಮ್ಮ ಪ್ರಸನ್ನತೆಯನ್ನು ಕಳಕೊಳ್ಳುವದಿಲ್ಲ. ಅನಾತ್ಮ ವಿಷಯಗಳ ದ್ವಂದ್ವ ಲಂಪಟ ಅವರ ಅಂತಃಶಕ್ತಿಯನ್ನು ಸೋಂಕಲಾರದು."

ಲತ್ತವರ ಶ್ರೀ ಉಮಾಮಹೇಶ್ವರಾಶ್ರಮ ಶ್ರೀ ಶಂಕರ ಜಯಂತಿ ಕಾರ್ಯಕ್ರಮಕ್ಕೆ ಆಗಮಿಸಿ ಪ್ರತಿವರ್ಷದಂತೆ ಕಾರ್ಯಕ್ರಮಗಳನ್ನು ಶಿವಪ್ರದವಾಗಿ ನಡೆಸುತ್ತಾ 'ಜ್ಞಾನಸುಧೆ' ಗ್ರಂಥ ಪ್ರವಚನ ಮನುಧರ್ಮ ಶಾಸ್ತ್ರ ಪ್ರಸಂಗವು ಉತ್ತಮ ರೀತಿಯಿಂದ ನಡೆದವು. ಎಲ್ಲರು ಆನಂದ ಹೊಂದಿದರು. ಗೀತಾ ಭಾಷ್ಯ ವಿಶೇಷಗಳನ್ನು ತಿಳುಹಿದರು.

ಶಿವಸ್ಮರಣ ಸಂಪನ್ನರು, ಅಗ್ನಿಯಿಂದ ದಹನವಾದ ಶೇಷವು–ಉಳಿಮೆಯಾದ ವಿಭೂತಿಯನ್ನು ಐಶ್ವರ್ಯವಾಗಿ ಭಾವಿಸಿ ಧರಿಸಬೇಕು. ರುದ್ರಾಕ್ಷಿ ಧಾರಣ ಮಾಡಬೇಕು. ರುದ್ರಾಕ್ಷಿ ಅಂದರೆ, ಶಿವನ ಮೂರನೆಯ ಕಣ್ಣು. ಸರ್ವದೇವತೆಗಳಲ್ಲಿ ಫಾಲನೇತ್ರ ಉಳ್ಳವನು ಪರಮೇಶ್ವರನೊಬ್ಬನೆ. ಪ್ರಣವ ಪಂಚಾಕ್ಷರಿ ಮಹಾಮಂತ್ರ ದೀಕ್ಷಾಪೂರ್ವಕವಾಗಿ ಉಪದೇಶವನ್ನೊಂದಿ ಜಪಿಸಬೇಕು. ಹಾಗೆ ಇಲ್ಲದಿದ್ದರೂ 'ಶಿವ ಶಿವ' ಎಂದು ಜಪಿಸುತ್ತಿದ್ದವರೂ ಧನ್ಯರೇ.

"ಓಂ ಬಿಲ್ವದಳ ನಿಲಯಾಯೈ ನಮಃ" ಎಂಬುದಾಗಿ ಶ್ರೀಲಕ್ಷ್ಮೀ ಅಷ್ಟೋತ್ತರ ಶತನಾಮಾವಳಿಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಬಿಲ್ವದಳ ಮೂಲದಲ್ಲಿಯೂ, ಗೋವಿನ ಪುಚ್ಛದಲ್ಲಿಯೂ, ಪತಿವ್ರತೆಯರಾದ ಉತ್ತಮ ಸ್ತ್ರೀಯರ ಬೈತಲೆಯಲ್ಲಿಯೂ, ಆನೆಯ ಮಸ್ತಕದಲ್ಲಿಯೂ, ಪದ್ಮದಲ್ಲಿಯೂ ಲಕ್ಷ್ಮೀದೇವಿಯ ವಾಸಸ್ಥಾನವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಲಕ್ಷ್ಮೀಪ್ರದವಾದ ಬಿಲ್ವದಳಗಳಿಂದ ಅರ್ಚಿಸಿ ಶಿವಸ್ಮರಣೆ ಮಾಡುವವರು ಧನ್ಯರು. ಆದ್ದರಿಂದ ಸರ್ವ ಶ್ರೇಯಸ್ಸಂಪನ್ನನಾದ ಶ್ರೀ ಉಮಾಮಹೇಶ್ವರನನ್ನು ಪೂಜಿಸಿ ಭಾವಿಸಿ ತಮ್ಮ ನಿಜಸ್ವರೂಪವನ್ನು ಅರಿತು ಧನ್ಯರಾಗಬೇಕು. "ಶಿವ" ಇತ್ಯಕ್ಷರ ದ್ವಯಂ" ಕಡೆಗೆ ಈ ಎರಡಕ್ಷರವಾದರೂ ಸಾಕು. ಶಿವನೆಂದರೆ ಪ್ರಣವ ಪ್ರತಿಪಾದ್ಯವಾದ ಪರಬ್ರಹ್ಮವೇ "ದೇವಃ ಶ್ರೀ ಚಂದ್ರಶೇಖರಃ"

ಮಾನವರ ಬಯಕೆಗಳೆಂಬ ದಾಹದ ಮರು ಮರೀಚಿಕಾ ಜಲವು ಯಾವಾಗಲು ದಾಹನಿವೃತ್ತಿಯನ್ನು ಮಾಡಲಾರದು. ಆದ್ದರಿಂದ ಗುರುಸನ್ನಿಧಿ ವಾಕ್ಯ ಶ್ರವಣ ಮನನಾದಿಗಳನ್ನು ಮಾಡಿ ಪ್ರತ್ಯಗಾತ್ಮನಾದ ತಾನು ಪರಮಾತ್ಮನೇ ಎಂದು ತಿಳಿದು ಶಾಂತ

ನಾಗಬೇಕು. ಹೀಗಿಲ್ಲದೇ ವಿಷಯ ಪಾಂಥಾ ಮಧುಪಾನ ಮತ್ತವಾದ ಬುದ್ಧಿ ಮಾದಕವಾಗಿ, ಸಿದ್ಧವಸ್ತು ಸ್ಮೃತಿಯಿಂದ ದೂರವಾಗಿ ಸತ್ಯವನ್ನು ಮುಚ್ಚುತ್ತೆ. ಆದ್ದರಿಂದ ಮುಮುಕ್ಷುವು ಜಾಗ್ರತೆಯಾಗಿ ತಿಳಿದು ನೋಡಿ ತನ್ನನ್ನು ತಾನು ಧನ್ಯನನ್ನಾಗಿ ಮಾಡಿಕೊಳ್ಳಬೇಕು."

ಬುಕ್ಕಾಪುರ ಶ್ರೀನಿರ್ವಾಣಾಶ್ರಮ-ಮಠದಲ್ಲಿ ಪರಮ ಗುರುಗಳ ಪುಣ್ಯಾರಾಧನೆಯು ಯಥಾರೀತಿ ನಡೆಯಿತು. ಅನಂತರ ನಂದ್ಯಾಲ ಆಶ್ರಮದಲ್ಲಿ ಶ್ರೀಗಳವರ ಜಯಂತ್ಯುತ್ಸವ ಶಿವಪ್ರದವಾಗಿ ಜರುಗಿತು. ಈ ಸುಸಂದರ್ಭದಲ್ಲಿ ಉತ್ತಮ ಪಂಡಿತರು ಭಕ್ತರು ಮೊದಲಾದ ಕೆಲವರು ಭಕ್ತ್ಯುಕ್ತವಾದ ಉಪನ್ಯಾಸಗಳನ್ನು ಮಾಡಿದರು.

## 20 ನೆಯ ಶ್ರೀಚಾತುರ್ಮಾಸ್ಯ ಮಹಾವ್ರತ

### ನಂದ್ಯಾಲ 20-7-1964

ನಂದ್ಯಾಲ ಶ್ರೀ ತ್ಯಾಗರಾಜ ಸ್ವಾಮಿ ಆಲಯದ ವಿಶಾಲವಾದ ಕಲ್ಯಾಣ ಭವನದಲ್ಲಿ ಸ್ವಸ್ತಿ ಶ್ರೀ ಕ್ರೋಧನ ನಾಮ ಸಂ॥ ಆಷಾಢ ಶುದ್ಧ ೧೧ ಪರ್ವದಿಂದ ಸರ್ವ ವಾದ್ಯ ವಿಶೇಷದಿಂದ ಪೂರ್ಣ ಕುಂಭವನ್ನು (ಗಂಗಾ ಕಲಶವನ್ನು) ವೇದಮಂತ್ರ ಪಠನಪೂರ್ವಕ ತಂದು ಕಲಶಸ್ಥಾಪನೆ ಮಹಾವ್ರತಾಂಗದ ಪೂಜಾನುಷ್ಠಾನ ಕಾರ್ಯಗಳು ಮಂಗಳಪ್ರದವಾಗಿ ನಡೆದು ಪ್ರಾರಂಭಿಸಲ್ಪಟ್ಟಿತು. ಪ್ರಾತಃಕಾಲ ಮಾಂಡೂಕ್ಯೋಪನಿಷತ್ ಪ್ರವಚನ,ಸಾಯಂಕಾಲ ಗೀತಾ ಬಾಷ್ಯ ಪ್ರವಚನಗಳು ಶ್ರೀಉಮಾಮಹೇಶ್ವರರ ಕೃಪೆಯಿಂದ ಅವಿಚ್ಛಿನ್ನವಾಗಿ ತಾ॥ 20-7-64 ಮೊದಲು ತಾ. 16-11-64 ಕಾರ್ತಿಕ ಶು. ೧೨॥ ವರಿವಿಗೂ ಜರುಗಿ ಪೂರ್ಣವಾಯಿತು. ಅಸಂಖ್ಯಾತ ಭಕ್ತಾದಿಗಳು ಈ ಮಹಾಕಾರ್ಯದಲ್ಲಿ ಭಾಗವಹಿಸಿ ಭಕ್ತಿಯಿಂದ ನಡೆದುಕೊಂಡರು. ಇಲ್ಲಿ ನಡೆದ ಉತ್ತಮವಾದ ಪ್ರವಚನಗಳು ನಿಯಮನಿಷ್ಠಾದಿಗಳು ಮಹಾಪ್ರಸಾದ ರೂಪವಾಗಿರುವವೆಂದು ಭಕ್ತಜನಾವಳಿ ಪರಸ್ಪರ ಹೇಳಿಕೊಳ್ಳುತ್ತಾ ಮಹದಾನಂದವನ್ನೊಂದಿದರು. ಶ್ರೀ ಮಹಾನಂದಿ ಸುಕ್ಷೇತ್ರದಲ್ಲಿ ದೀಕ್ಷಾ ವಿರಮಣೆಯಾಯಿತು.

"ಮುಕ್ತಿಯೆಂದರೆ ಆತ್ಮ ಸ್ವರೂಪದ ಅನುಭವವೇ. ಈ ಶರೀರವು ಇರುವಾಗಲೇ ಇಲ್ಲಿಯೇ ಮರಣರಹಿತವಾದ ಆ ಸ್ಥಿತಿಯನ್ನು ಕಾಣಬೇಕು. ಮೋಕ್ಷವೆಲ್ಲಿಂದಲೋ ಹುಟ್ಟಿ ಬರುವದಿಲ್ಲ. "ತದೇತದಶರೀರಸ್ಥಂ ಮೋಕ್ಷಂ" ಅಂದ ಆಚಾರ್ಯರ ನುಡಿಯಂತೆ ಪಾರಿಶೇಷ ನ್ಯಾಯೇನ ಶರೀರದಿಂದ ಆತ್ಮನನ್ನು ಬೇರೆಯಾಗಿ ತಿಳಿಯಬೇಕು. ಆತ್ಮನನ್ನು ದೃಶ್ಯವಾಗಿ ತಿಳಿಸಿ ನೋಡುವದೆಂದರ್ಥವಲ್ಲ. ಅದು ದೃಕ್ಸ್ವರೂಪ. ದೃಕ್ಕೇ ಬ್ರಹ್ಮ ವಸ್ತುವು.

ಗೌಣಾತ್ಮ, ಮಿಥ್ಯಾತ್ಮ, ಮುಖ್ಯಾತ್ಮ ಎಂದು ತ್ರಿವಿಧ. ಪುತ್ರಮಿತ್ರಾದಿಗಳಲ್ಲಿರುವ ಕಲ್ಪನೆಯಿಂದ ಉಂಟಾಗುವ ನನ್ನದೇ ಎಂಬ ಭಾವವು ಗೌಣಾತ್ಮ. ಗೌಣವೆಂದರೆ

ಅಪ್ರಧಾನ, ಔಪಚಾರಿಕ. ಶರೀರವೇ ನಾನೆಂದು ಅಭಿಮಾನಿಸುವುದೇ ಮಿಥ್ಯಾತ್ಮ. ಇನ್ನು ಸದ್ರೂಪವಾದ ಬ್ರಹ್ಮವೇ ನಾನೆನ್ನುವುದು ಮುಖ್ಯಾತ್ಮ (ಬ್ರಹ್ಮಾತ್ಮ)ನೆಂದು ತಿಳಿಯುವದು.

ನಮ್ಮ ಜೀವನದ ನಿತ್ಯನಿಯಮ ವಿಧಾನಗಳೇ ಒಂದು ಉತ್ತಮವಾದ ಪ್ರಸ್ಥಾನ. ಪೂಜೆ, ಅನುಷ್ಠಾನ, ಮಿತಭಾಷಣ, ಶಾಸ್ತ್ರಾರ್ಥ ವಿಚಾರ ಮೊದಲಾದ ಗುರುಕಾರ್ಯ ಗಳಿಂದ ಇತರ ಅವಕಾಶವೇ ಇಲ್ಲದೆ ಸದಾಶಿವರೂಪವಾಗಿರುತ್ತೇವೆ. ಪ್ರಾಯಃ ಇಂಥಾ ನಮ್ಮನ್ನು ನಮ್ಮ ತತ್ತ್ವವನ್ನು ಯಥಾರ್ಥವಾಗಿ ಅರಿಯುವವರು ಕಡಿಮೆ. ಆದರೇನು ನಮಗೆ ನಿಂದಾಸ್ತುತಿಗಳು ಸಮ. ಇತರರು ಎಷ್ಟು ತೀವ್ರವಾದ ಕೋಪತಾಪಗಳಿಂದ ನಮ್ಮನ್ನು ನೋಡಿದರೂ, ಮೇಲೆ ಬಿದ್ದು ಬಂದರೂ ನಮ್ಮ ಸಹಜ ಪ್ರಸಾದ ಗುಣ, ಸ್ವಾಸ್ಥ್ಯತೆ, ಪ್ರಸನ್ನತೆ ದೂರಾಗುವುದಿಲ್ಲ. ಇದು ಶ್ರೀಗುರುದೈವದತ್ತವಾದ ಮಹಾ ಸಂಪತ್ತು. ನಾವು ಹೇಳುವದು ಪರಮಾರ್ಥ ತತ್ತ್ವ ವಿಷಯ–ಬ್ರಹ್ಮಾತ್ಮ ಬೋಧೆ–ಅನುಷ್ಠಿಸುವದು ನಾನು ನೀನೇ ಎಂಬ ನಿರ್ಗುಣೋಪಾಸನೆ ಮಾಡುವುದು. ಶ್ರೀಗುರು ದೈವವಾದ ಉಮಾಮಹೇಶ್ವರ (ಶ್ರೀ ಚಂದ್ರಮೌಳೀಶ್ವರ) ಪೂಜಾಭಿಷೇಕ ಇದೇ ನಮ್ಮ ಜೀವನ ವಿಧಾನ.

ಎಲ್ಲಾ ವೇದಗಳು ಏಕವಾದ ಪರಮಾರ್ಥ ತತ್ತ್ವವನ್ನು ಗಮ್ಯವಾಗಿ ತಿಳಿಸಿ ಮೂಕೀ ಭಾವವನ್ನು ಹೊಂದುವವು. ಕೇವಲ ಕರ್ಮಗಳು ಮಾತ್ರವೇ ಬ್ರಹ್ಮತತ್ತ್ವ ವನ್ನು ಅರುಹಲು ಸಮರ್ಥವಲ್ಲ. ಸಾಕ್ಷಿಯಾದ ಪ್ರತ್ಯಗಾತ್ಮನೇ ವ್ಯಾಪಕವಾದ ಪರ ಮಾತ್ಮನೆಂದು ಮಹಾವಾಕ್ಯಾರ್ಥಜನ್ಯ ಜ್ಞಾನದೃಷ್ಟಿಯಿಂದ ತಿಳಿದಮೇಲೆ ವೇದಗಳು, ದೇವತೆಗಳು, ಮೊದಲಾದ ಸರ್ವವು, ಸರ್ವರೂ ಆದರಲ್ಲಿ ಅಂತರ್ಗತವೆಂದು ಬೃಹ ದಾರಣ್ಯಕಾದಿ ಉಪನಿಷತ್ತುಗಳು ಹೇಳುತ್ತಿವೆ. ಈ ಯಥಾರ್ಥವನ್ನು (ತನ್ನನ್ನು) ಅರಿಯುವದಕ್ಕಾಗಿ ಮಾನವಜನ್ಮ. ಅದನ್ನು ತಿಳಿಯದೆ ದೇಹಬಿಟ್ಟವನು ಕೃಪಣ ನೆಂದು ಉಪನಿಷತ್ತು ಹೇಳುತ್ತೆ.

ಈಶ್ವರನಿಗೆ ಐದು ಮುಖಗಳು. ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಪರಮೇಶ್ವರನ ಉಚ್ಛ್ವಾಸ ನಿಶ್ವಾಸಗಳಾಗಿವೆ. ಪರಮೇಶ್ವರನ ಪ್ರಾಣ, ಆದೇ ತಾನು. ಇನ್ನು ಊರ್ಧ್ವಮುಖವು ಸುಪ್ರಣವನಾದೋದ್ಗಾರವಾಗಿದೆ. ಓಂ ಎಂಬುದಾಗಿ ಸರ್ವಕಾರ್ಯಗಳು ಪ್ರಾರಂಭಿಸಲ್ಪಡುತ್ತವೆ. ಅ, ಉ, ಮ, ತ್ರ್ಯಕ್ಷರಾತ್ಮಕಂ ಪ್ರಣವಂ (ಓಂ). ಕೇನೋಪನಿಷತ್ತಿನಲ್ಲಿ ಹೇಳಿದಂತೆ ಅನುಗ್ರಹ ಸಮಯದಲ್ಲಿ ಉಕಾರ, ಮಕಾರ. ಅಕಾರಗಳಾಗಿ ಹೇಳುವರು. "ಉಮಾಂ–ಓಂ–ಇತ್ಯುಮೇತಿ". ಪ್ರಾಣಾನ್ ಸರ್ವಾನ್ ಪರಮಾತ್ಮನಿ ಪ್ರಣಾಮಯತೀತಿ ಪ್ರಣವಃ ಚತುರ್ಥಾವಸ್ಥಿತ ಇತಿ ಸರ್ವದೇವ ವೇದ ಯೋನಿಃ ಸರ್ವವಾಚ್ಯ ವಸ್ತುಪ್ರಣವಾತ್ಮಕಂ" ಅಂದರೆ ಸರ್ವ ಪ್ರಾಣಿಗಳನ್ನು ಪ್ರಪಂಚ ವನ್ನೆಲ್ಲ ಪರಮಾತ್ಮನಲ್ಲಿ ಸೇರಿಸುವದರಿಂದ ಪ್ರಣವವೆನ್ನಲ್ಪಡುವದು. ನಾಲ್ಕು ಪಾದ

ಗಳಿಂದ ಕೂಡಿದ್ದರಿಂದ ಬ್ರಹ್ಮ, ವಿಷ್ಣು, ರುದ್ರಾದಿ ಸಮಸ್ತ ದೇವತೆಗಳಿಗೂ, ನಾಲ್ಕು ವೇದಗಳಿಗೂ ಮೂಲ ಸ್ಥಾನವಾಗಿದೆ. ಸರ್ವವಾಙ್ಮಯ ಜಾಲವೆಲ್ಲವೂ ಪ್ರಣವಾತ್ಮಕವಾಗಿದೆ ಎಂದರ್ಥ"

ಶ್ರೀಗಳವರ ಗುರುದೇವರ ಪುಣ್ಯಾರಾಧನೆ ಮಹೋತ್ಸವವು ಮಹಾತ್ಮರ ಉಪನ್ಯಾಸಗಳೊಂದಿಗೆ ಗುರು ಪೂಜಾದಿಕಾರ್ಯಗಳಿಂದ ಮಹದಾನಂದವಾಗಿ ನೆರವೇರಿತು ಮತ್ತು ಉರವಕೊಂಡ ಶ್ರೀ ಕನ್ನಿಕಾಪರಮೇಶ್ವರಿ ದೇವಾಲಯದಲ್ಲಿ ಶ್ರೀ ಗೀತಾ ಜಯಂತಿ ಉತ್ಸವವು ಜಯಪ್ರದವಾಗಿ ನಡೆಯಿತು.

ತಾ. 1–1–65 ಗೂಳಪಾಳ್ಯ ಶ್ರೀಗುರುದೇವಾಶ್ರಮದಲ್ಲಿ ಶ್ರೀಗುರುದೇವರು ಪೂಜಾನುಷ್ಠಾನ ಶಾಸ್ತ್ರ ಶ್ರವಣಗಳಿಂದ ಬ್ರಹ್ಮನಿಷ್ಠೆಯಲ್ಲಿರುತ್ತ ತಾ. 14–2–65 ಶ್ರೀ ಕ್ರೋಧಿ ಸಂ|| ಮಾಘ ಶುದ್ಧ ೧೩॥ ಪವಿತ್ರ ದಿನ ಭಕ್ತಾದಿಗಳು ಭಕ್ತಿಯಿಂದ ರಚಿಸಿದ ಆರುಕೋಟಿ ಪ್ರಣವ ಪಂಚಾಕ್ಷರ (ಷಡಕ್ಷರೀ ಮಹಾಮಂತ್ರ) ಲೇಖನ ಪುಸ್ತಕಗಳನ್ನು ಆಶ್ರಮದಲ್ಲಿ ಸ್ಥಾಪಿಸಿ, ಪಂಚಾಯತನ ಪೂಜಾಪ್ರತಿಷ್ಠಾಪನಾದಿ ಕಾರ್ಯಗಳನ್ನು ವಿಧ್ಯುಕ್ತವಾಗಿ ನಡೆಸಿದರು. ಪೂಜ್ಯ ಶ್ರೀ ಸುರುಪುರ ಶಂಕರ ಶಾಸ್ತ್ರಿ ಸ್ವಾಮಿಗಳವರು ಈ ಕಾರ್ಯಕ್ಕೆ ದಯಮಾಡಿಸಿದ್ದರು. ಪೂಜ್ಯ ಶ್ರೀ ಶುದ್ಧಚೈತನ್ಯ ಸ್ವಾಮಿಗಳವರಿಂದ ಆಶ್ರಮ ಪ್ರವೇಶೋತ್ಸವವಾಯಿತು. ಮೂರು ದಿನಗಳು ವೇದೋಕ್ತವಾಗಿ ಶ್ರೀ ಉಮಾಮಹೇಶ್ವರರ (ಶ್ರೀ ಚಂದ್ರಮೌಳೀಶ್ವರ) ಶ್ರೀ ಸದ್ಗುರು ಪೂಜೆ ಪ್ರವಚನಗಳು ವೈಭವೋಪೇತವಾಗಿ ಪ್ರಶಾಂತವಾಗಿ ನಡೆದವು. ಸಹಸ್ರಾಧಿಕ ಭಕ್ತಜನಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಮಂಡಲ ಪೂಜಾನುಷ್ಠಾನಗಳು ಮಾಂಡೂಕ್ಯೋಪನಿಷತ್ಪ್ರವಚನವು ನಡೆಯಿತು. ಮಹಾಶಿವರಾತ್ರಿ ಕಾರ್ಯಕ್ರಮವು ಅಖಂಡ ಭಗವನ್ನಾಮ ಭಜನೆಯಿಂದ ಆನಂದವಾಗಿ ಪೂರ್ಣವಾಯಿತು.

"ಉಪನಿಷದರ್ಥಗಳನ್ನು ಭಗವನ್ನಿಷ್ಠರಾದ ಸಂಯಮೀಂದ್ರರಿಗೆ, ತತ್ತ್ವವಿದರಿಗೆ ಉಪನಿಷನ್ಮಾತೆ ತನ್ನ ಹೃದಯವನ್ನು ಬಿಚ್ಚಿ ತೋರಿಸುವಳು. ಅಂದರೆ ಅನುಭವದಿಂದ ತಿಳಿದು ಶಾಂತಿಯನ್ನೊಂದುವರು.

ಉತ್ತಮ ವೇದಾಂತ ವಿಷಯಗಳು ಬುದ್ಧಿ ಪ್ರಧಾನಗಳಲ್ಲ, ತೇಜಸ್ಸಂಪನ್ನವಾದ ತಾತ್ತ್ವಿಕರ ದೃಷ್ಟಿಗೆ ವೇದ್ಯಗಳು.

ಸರಿಯಾಗಿ ಶಿಕ್ಷೆಯನ್ನು ಪಡೆಯದೆ ಪ್ರಾಕೃತ ಬುದ್ಧಿಯಿಂದ ವರ್ತಿಸುವ ಜನಗಳಿಗೆ ಪ್ರಾಯಶಃ ಸ್ವಮತ ದ್ವೇಷ, ಪರಮತಾಭಿರುಚಿ, ವೇದಶಾಸ್ತ್ರಗಳಲ್ಲಿ ಅಶ್ರದ್ಧೆ, ಅವಿಶ್ವಾಸ, ದೇವರಲ್ಲಿ ಗುರುವಿನಲ್ಲಿ ಅಪನಂಬಿಕೆ, ಮಹಾಪುರುಷರ ವಾಕ್ಯಗಳಲ್ಲಿ ಹಾಸ್ಯಾಸ್ಪದವಾದ ಭಾವನೆ, ಸ್ವಮಾತಾ ಪಿತೃಗಳಲ್ಲಿ ವಿರೋಧ, ಸ್ವಕರ್ಮ ಧರ್ಮಗಳಲ್ಲಿ ಅಸಹ್ಯ ಬುದ್ಧಿ, ಇವು ಗುಣ ತಾರತಮ್ಯದಿಂದಲೂ ಅಂಥಾ ಸ್ನೇಹದಿಂದಲೂ ಉಂಟಾಗಿ

ಸ್ವೇಚ್ಛೆಯಾಗಿರುವ ಜನಗಳಿಗೆ ಪರಮಾತ್ಮದೃಷ್ಟಿ ಬರುವುದು ಬಹುಕಷ್ಟ. ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲಿ.

ಆತ್ಮಜ್ಞಾನ ಪ್ರಭಾವದಿಂದ ಪ್ರಪಂಚವನ್ನೇ ತೃಣಕಣವಾಗಿ ಕಾಣುವ ಧೀರರಾದ ತತ್ತ್ವವಿದರು, ಈ ಲೋಕದ ಮಾರ್ಗದಲ್ಲಿ ಗಮನಿಸದೆ ತಮ್ಮ ದಿವ್ಯವಾದ ಬ್ರಹ್ಮಮಯ ದೃಷ್ಟಿಸಮನ್ವಯ ದೃಷ್ಟಿಯಿಂದ, ಶೇಷ ಪ್ರಾರಬ್ಧವನ್ನು ಅನುಭವಿಸುತ್ತಾ ಸ್ಥಿರ ಮುಕ್ತಿಯನ್ನು ಪಡೆಯುವನು.

ಬ್ರಹ್ಮಜ್ಞಾನ ಸಂಪನ್ನರಿಗೆ ಪುಣ್ಯಕರ್ಮಗಳಿಂದ ಸುಖವೃದ್ಧಿಯಾಗಲಿ ಪಾಪ ಕರ್ಮದಿಂದ ದುಃಖರೂಪವಾದ ನಿಕೃಷ್ಟತೆಯಾಗಲಿ ಆಗುವದಿಲ್ಲ. ಸುಖದುಃಖಾದಿ ದ್ವಂದ್ವಗಳು ಅವರಿಗಿಲ್ಲ. ಕಾಮ ಕಾರಣವಾದ ಅಜ್ಞಾನ ಆತ್ಮ ಜ್ಞಾನದಿಂದ ನಿವೃತ್ತಿಯಾಗಿದೆ.

ಜಗಚ್ಚಕ್ಷುವಾದ ಸೂರ್ಯನು ನೇತ್ರೇಂದ್ರಿಯಕ್ಕೆ ವಿಷಯವಾದ ಹೊರಗಿನ ದೋಷದಿಂದ ಹೇಗೆ ಸ್ಪೃಶಿಸಲ್ಪಡುವದಿಲ್ಲವೋ ಹಾಗೆ ಸ್ವರೂಪಾನುಭವವನ್ನುಳ್ಳ ತತ್ತ್ವವಿದರು ಈ ಲೋಕ ದ್ವಂದ್ವಗಳಿಂದ ಲಿಪ್ತರಾಗುವದಿಲ್ಲ.

ಆತ್ಮಜ್ಞಾನ ಉಂಟಾಗಲು ನಾನು ನನ್ನದೆಂಬ ಅಧ್ಯಾಸ (ತಪ್ಪು ತಿಳುವಳಿಕೆ) ನಿವೃತ್ತಿಯಾಗುವದು. ರಾಗದ್ವೇಷವಿಲ್ಲದ್ದರಿಂದ ಕರ್ತೃತ್ವ ಭೋಕ್ತೃತ್ವವಿರುವುದಿಲ್ಲ. ಆದ್ದರಿಂದ ಆತ್ಮಜ್ಞಾನವೇ ಸರ್ವಾನರ್ಥ ನಿವೃತ್ತಿ ಕಾರಣವೆಂದು ಸರ್ವ ಭಕ್ತರು ತಿಳಿದು ಜ್ಞಾನಾನುಭವವನ್ನು ಪಡೆಯಬೇಕು."

ಆಮೇಲೆ ಶ್ರೀಗಳವರ ಪರಮ ಗುರುಗಳ ಆರಾಧನೆ ಮತ್ತು ಶ್ರೀ ಸ್ವಾಮಿಗಳವರ ಜಯಂತ್ಯುತ್ಸವವು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಶಿವಪ್ರದವಾಗಿ ನಡೆಯಿತು.

ಉರವಕೊಂಡೆ ಭಕ್ತರ ಪರಮಭಕ್ತಿ ಭಾವಾನುಸಾರವಾಗಿ 21 ನೇ ಶ್ರೀ ಚಾತುರ್ಮಾಸ್ಯ ಮಹಾವ್ರತ ಉರವಕೊಂಡೆ ಶ್ರೀಕನ್ನಿಕಾಪರಮೇಶ್ವರಿ ದೇವಾಲಯದಲ್ಲಿ ನಡೆಯಲು ನಿರ್ಧರಿಸಲ್ಪಟ್ಟಿತು. ಸನ್ನಿಧಿಯಲ್ಲಿ ಭಕ್ತರು ಫಲ ಮಂತ್ರಾಕ್ಷತೆಗಳನ್ನು ಪಡೆದು ಹೋದರು.

## 21 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಉರವಕೊಂಡೆ 9-7-65

ಶ್ರೀ ವಿಶ್ವಾವಸು ನಾಮ ಸಂ॥ ಆಷಾಢ ಶುದ್ಧ ೧೧॥ ಉಷಃಕಾಲದಲ್ಲಿ ಶಾಸ್ತ್ರೀಯವಾಗಿ ಮಹಾವ್ರತವು ಪ್ರಾರಂಭಿಸಲ್ಪಟ್ಟು, ಉದಯ ಕಠೋಪನಿಷತ್ ಶಾಸ್ತ್ರ ಶ್ರವಣ, ಸಾಯಂಸಮಯ ಶ್ರೀಮದ್ಭಗವದ್ಗೀತಾ ಶಾಂಕರಭಾಷ್ಯ ಪ್ರವಚನಗಳು ಅವಿಚ್ಛಿನ್ನವಾಗಿ ತ್ರಿಕಾಲ ಪೂಜಾನುಷ್ಠಾನಗಳೊಂದಿಗೆ, ತಾ. 9-7-65

ಮೊದಲು 6-11-65ರವರೆಗೂ ಶಿವಪ್ರದವಾಗಿ ಈ ಮಹಾಕಾರ್ಯ ನಡೆಯಿತು. ಅನೇಕ ಮಹನೀಯರು ಈ ಕಾರ್ಯಕ್ಕೆ ದಯಮಾಡಿಸಿದ್ದರು. ಆಯಾ ಪ್ರಾಂತೀಯ ಪಟ್ಟಣಗಳಿಂದಲೂ ಗ್ರಾಮಗಳಿಂದಲೂ ಭಕ್ತಾದಿಗಳು ಬಂದು ಕಾರ್ಯಕ್ರಮದಲ್ಲಿ ಭಾಗವಹಿಸಿ ಧನ್ಯರಾದರು.

ಕಾರ್ತಿಕ ಶು॥ ೧೫॥ ಪೌರ್ಣಮಿಯ ದಿನ ಉರವಕೊಂಡೆ ಶ್ರೀ ಮಲ್ಲಿಕಾರ್ಜುನ ಸ್ವಾಮಿ ಆಲಯ ಕ್ಷೇತ್ರದಲ್ಲಿ ಶ್ರೀಗಳವರ ದೀಕ್ಷಾವಿರಮಣೆಯಾಯಿತು. ಸಂತರ್ಪಣೆಗಳು ವಿಶೇಷವಾಗಿ ನಡೆದವು. ಆಮೇಲೆ ಯಥಾರೀತಿ ತಮ್ಮ ಗುರುದೇವರ ಪುಣ್ಯಾರಾಧನ ಮಂಗಳಪ್ರದವಾಗಿ ನಡೆಯಿತು. ಈ ಸುಸಂಧಿಯಲ್ಲಿ ಮತ್ತೊಂದು ವಿಷಯವನ್ನು ತಿಳಿಯಬೇಕಾಗಿದೆ.

## ಶ್ರೀ ಗುರುವಿನ ಲೀಲೆ

ಶ್ರೀಗುರುಪೀಠಾಧಿಪತ್ಯ, ಆಚಾರ್ಯತ್ವ, ಆಶ್ರಮ ಅಂದರೆ ಬಹಳ ಸುಖವೆಂದೂ ಸುಲಭವೆಂದೂ ಭಾವಿಸಬಾರದು. ಅದು ಕಂಟಕ ಕಾಠಿಣ್ಯಶಿಲಾವೃತ ಪ್ರದೇಶದಲ್ಲಿ ಕಲ್ಲುಮುಳ್ಳುಗಳಿಂದ ಕೂಡಿದ ಸ್ಥಳದಲ್ಲಿ ನಡೆದಂತೆ ಇರುತ್ತದೆ. ಆದ್ದರಿಂದ ಬಹಳ ಜಾಗ್ರತೆಯಿಂದ ನಡೆಯಬೇಕು. ಮನಸಾಕ್ಷಿಯಾಗಿ ಸಂತತ ಆಚಾರ, ವಿಚಾರ, ಶೀಲಸಂಪನ್ನರಾಗಿ ದೈವದತ್ತ ದಿವ್ಯಶಕ್ತಿಯಿಂದೆಷ್ಟು ಚೆನ್ನಾಗಿ ವರ್ತಿಸಿದರೂ ಅನಿಮಿತ್ತ ಶತ್ರುಗಳ ಬಾಧೆ ತಪ್ಪದು. ಒಳ್ಳೆಯದನ್ನು ಹೇಳಿದರೂ ಕೇಳರು. ತಮಗೆ ತಿಳಿಯದ್ದನ್ನು ತಿಳಿಸಿದರೂ ತಮ್ಮ ಹಠದ ಮಾರ್ಗವನ್ನು ಬಿಡರು. ಇದು ಲೋಕದ ವಿಧಾನ. ಪೂಜ್ಯ ಶ್ರೀಗಳವರು ಶ್ರೀಗುರುಪೀಠ ಸಮಾರೋಹಣಾನಂತರ ಅನೇಕ ದ್ವಂದ್ವಗಳನ್ನು ಕಷ್ಟನಿಷ್ಠುರಗಳನ್ನು ನೋಡಿದರು. ಆದರೇನು ಶ್ರೀಗುರು ಕೃಪೆಯಿಂದ ಸಮದೃಷ್ಟಿಯಿಂದ ಶ್ರೀಗುರುದೇವರ ಲೀಲೆಯಾಗಿ ಭಾವಿಸಿ ನಡೆದರು.

ಸಂತತ ಶ್ರೀಗುರುಪಾದಪದ್ಮಾರಾಧಕರಾಗಿ ಬ್ರಹ್ಮನಿಷ್ಠೆಯಿಂದ ಪ್ರಶಾಂತ ರಾಗಿದ್ದರು. ಮಹಾತ್ಮರು ಸದ್ಗುರುಗಳು ಆದವರಿಗೆ ನಿರ್ನಿಮಿತ್ತವಾಗಿ ಯಾವು ಯಾವೋ ದ್ವಂದ್ವಗಳು ಆಗಾಗ ಬಂದು ಹೋಗುತ್ತಿರುತ್ತವೆ. ನಿಜವಾಗಿಯು ಪ್ರಾರಬ್ಧವೆಂದರೆ ಆತ್ಮಜ್ಞಾನಿಗಳಿಗೆ ಬಂದ ಕಷ್ಟನಿಷ್ಠುರಗಳೇ ಪ್ರಾರಬ್ಧವೆನಬೇಕು. ಈ ವಿಷಯವನ್ನು ಶ್ರೀಗಳವರ ಗುರುದೇವರು ಶ್ರೀ ಸದಾನಂದ ಸದ್ಗುರುಪಾದರು ತಮ್ಮ ಶಿಷ್ಯರಾದ ನಮ್ಮ ಶ್ರೀ ಸ್ವಾಮಿಯವರ ಹತ್ತಿರ ಆಗಾಗ ಹೀಗೆ ಅನ್ನುತ್ತಿದ್ದರಂತೆ,

"ದ್ವಂದ್ವಗಳಿಂದಲೇ ಮಹಾತ್ಮರು ಬಯಲಿಗೆ ಬಂದರಪ್ಪಾ!" "ಮತ್ತು ಆ ದ್ವಂದ್ವಗಳಿಗೆ ತಾಳಿಕೊಳ್ಳುವದು ಮಾತ್ರವೇ ಅಲ್ಲ, ವಸ್ತುತಃ ಅವು ಇಲ್ಲವೆಂದರಿತು ಅಸಂಗವಾದ ನಿಜನಿಷ್ಠೆಯಲ್ಲಿರಬೇಕಪ್ಪಾ!" ಹೀಗೆಂದು ಹೇಳುತ್ತಿದ್ದರಂತೆ.

ಶ್ರೀಗುರುಸ್ಥಾನದಲ್ಲಿ ಇದ್ದು ಈಪರಿ ದೃಶ್ಯಮಾನವಾದ ಜಗತ್ತಿನ ವಿಧಾನ ವೈಚಿತ್ರ್ಯಗಳನ್ನು ಕಾಣುತ್ತಾ ಬ್ರಹ್ಮಾನುಭವ ಸ್ಥಿತಿಯಿಂದ ಇವೆಲ್ಲವೂ ಶಿವಲೀಲೆಯಾಗಿ ಕಂಡರು. ವಿವಿಧ ಸಂಸ್ಕಾರಗಳುಳ್ಳವರು ಇರುತ್ತಾರೆ. ಸಭೆಯಲ್ಲಿ ಒಬ್ಬ ಭಕ್ತನು ಬಂದು ನಿಸ್ಪೃಹರಾದ ಸ್ವಾಮಿಗಳವರ ಸನ್ನಿಧಿಗೆ ಯಾವದೊ ಒಂದು ವಸ್ತುವು ಹಣ್ಣೋ ಹಂಪಲೋ ಪದಾರ್ಥವನ್ನು ಸಮರ್ಪಿಸಿ ಭಕ್ತಿಯಿಂದ ನಿಂತಿರಲು, ಅಷ್ಟರಲ್ಲೇ ಇನ್ನೊಬ್ಬ ಭಕ್ತನು ಬಂದು "ಸ್ವಾಮೀ ! ಅದು ನನಗೆ ಪ್ರಸಾದಿಸಬೇಕು ಎಂದು ಪ್ರಾರ್ಥಿಸುತ್ತಾನೆ. ಆಗ ತಕ್ಷಣ ಗುರುಗಳು ಅದನ್ನು ಆತನಿಗೆ ಕೊಟ್ಟರು. ಅದನ್ನು ನೋಡಿ ಅದನ್ನು ತಂದ ಭಕ್ತನು 'ನಾನೆಷ್ಟೋ ಭಕ್ತಿಯಿಂದ ಸ್ವಾಮಿಗಳಿಗಾಗಿ ತಂದು ಕೊಟ್ಟರೆ ಅದನ್ನು ಶ್ರೀಗಳವರು ಯಾರಿಗೋ ಕೊಟ್ಟರಲ್ಲಾ ! ಸ್ವಾಮಿಗಳು ಸ್ವೀಕರಿಸ ಲಿಲ್ಲವಲ್ಲಾ !' ಎಂಬುದಾಗಿ ಅಂದುಕೊಂಡು ಬಾಧೆಪಡುತ್ತಾನೆ. ಕೊಡದೇ ಹೋದರೆ ಕೇಳಿದ ಎರಡನೆಯ ಭಕ್ತನು 'ಸ್ವಾಮಿಗಳಿಗೆ ನನ್ನ ಮೇಲೆ ದಯೆಯಿಲ್ಲ. ಇವರಿಗಿನ್ನೂ ಆಶೆಯಿದೆಯೇನೋ' ಎಂದು ನೊಂದುಕೊಳ್ಳುತ್ತಾನೆ. ಇಂಥಾ ದ್ವಂದ್ವಗಳನ್ನು ಎಷ್ಟೋ ನೋಡಿದರು. ಆದರೂ ತಮ್ಮ ಪ್ರಸಾದ ಗುಣವನ್ನು ಬಿಡದೆ ಪ್ರಶಾಂತದಿಂದ ಇರುತ್ತಿದ್ದರು. ಗುರುತ್ವವೆಂದರೆ ಹೀಗಿರುತ್ತೆ. ನಿಜನಿಷ್ಠೆ ಇಲ್ಲದಿದ್ದರೆ ಅದು ಕಷ್ಟ ವಾಗಿರುತ್ತೆ. ಶಿವನಾಗಿರಬೇಕು.

ಉರವಕೊಂಡೆಯಲ್ಲಿ ಗೀತಾ ಜಯಂತಿ ಕಾರ್ಯಕ್ರಮ ಮುಗಿಸಿಕೊಂಡು ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮಕ್ಕೆ ದಯಮಾಡಿಸಿದರು. ಅಲ್ಲಿ 2-12-65 ಶ್ರೀ ಶೃಂಗೇರಿ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ದಯಮಾಡಿಸಿದ್ದರು. ಶ್ರೀ ಸ್ವಾಮಿಗಳವರು ಅವರನ್ನು ಸಂದರ್ಶಿಸಿದರು. ಅವರ ವಾತ್ಸಲ್ಯಪೂರಿತ ಮಾತುಗಳಾದವು. ಶ್ರೀ ಜಗದ್ಗುರು ಮಹಾಸ್ವಾಮಿಗಳವರು ನಾಗರಲಿಪಿ ವಿವೇಕ ಚೂಡಾಮಣಿ ಗ್ರಂಥವನ್ನು ನಮ್ಮ ಶ್ರೀಗಳವರಿಗೆ ಪ್ರಸಾದಿಸಿದರು. ಅನಂತರ ನಮ್ಮ ಗುರುಗಳು ತಮ್ಮ ರಚನೆಗಳನ್ನು; ಪ್ರಸ್ಥಾನತ್ರಯ ಮಹಾಗ್ರಂಥ, ಶ್ರೀ ಜಗದ್ಗುರು ಶಂಕರ ಚರಿತ್ರೆ ಇತ್ಯಾದಿಗಳನ್ನು ಭಕ್ತಿಯಿಂದ ಶ್ರೀ ಸನ್ನಿಧಿಗೆ ಸಮರ್ಪಿಸಿದರು.

ಅವುಗಳನ್ನು ನೋಡಿ ಸಂತೋಷಗೊಂಡು "ಶ್ರೀ ಶಂಕರ ಚರಿತ್ರೆ ಎಷ್ಟು ಚೆನ್ನಾಗಿದೆಯಲ್ಲಾ ಸ್ವಾಮೀ ! ಭಕ್ತಿಯಿಂದ ಶ್ರದ್ಧೆಯಾಗಿ ಓದಿದರೆ ಒಂದು ದಿನದಲ್ಲಿ ಪೂರ್ಣವಾಗುತ್ತೆ, ಇಂಥಾ ರಸವತ್ತರವಾದ ಮಹಾಗ್ರಂಥವನ್ನು ಉಚಿತವಾಗಿ ಎಲ್ಲರಿಗೂ ಕೊಡುತ್ತಿದ್ದೇವೆನ್ನುತ್ತಿದ್ದೀರಲ್ಲಾ. ಅದೇಕೆ ?

ಸಂಸ್ಥಾನಕ್ಕೆ ಕೊಟ್ಟರೆ ಬೇಗನೆ ಅನತಿ ಕಾಲದಲ್ಲೇ ಮಾರಾಟವಾಗಿ ಹೋಗುತ್ತವೆ ಅನ್ನುತ್ತಾ ಸಂತೋಷಗೊಂಡರು. "ಗುರುದೇವಾ ಅದಕ್ಕೆ ಬೆಲೆ ಇಲ್ಲ. ಭಕ್ತರು ಭಕ್ತಿಯಿಂದ ಅಧ್ಯಯನ ಮಾಡಿದರೆ ಸಾಕು," ಎಂದು ನಮ್ಮ ಸ್ವಾಮಿಗಳವರು ಭಿನ್ನವಿಸಿಕೊಂಡರು. ಶ್ರೀ ಜಗದ್ಗುರು ಮಹಾಸ್ವಾಮಿಗಳವರು ನಗುತ್ತ "ಹೌದು

ಹೌದು ! ಬಹಳ ಸಂತೋಷ, ಬಹಳ ಸಂತೋಷ," ಎಂದು ಸಂತಸಿಸಿ ಆಶೀಃ ಪೂರ್ವಕವಾದ ಫಲಮಂತ್ರಾಕ್ಷತೆಗಳನ್ನು ಪ್ರಸಾದಿಸಿದರು.

ಅನಂತರ ಶ್ರೀ ಶೈಲ ಮಹಾಕ್ಷೇತ್ರಕ್ಕೆ ಹೋಗಿ ಶ್ರೀ ಮಲ್ಲಿಕಾರ್ಜುನ ಜ್ಯೋತಿರ್ಲಿಂಗಕ್ಕೆ ಮಹನ್ಯಾಸಪೂರ್ವಕ ಏಕಾದಶವಾರ ರುದ್ರಾಭಿಷೇಕವನ್ನು ಮಾಡಿಸಿ ಅಲ್ಲಿ ಒಂದು ವಾರದವರೆಗೂ ಪೂಜಾನುಷ್ಠಾದಿ ನಿಯಮ ನಿಷ್ಠೆಗಳಲ್ಲಿದ್ದರು.

ಇಲ್ಲಿ 'ಶ್ರೀಶೈಲ ಪ್ರಭ' ಮಾಸಪತ್ರಿಕೆ ಸಂಪಾದಕರು ಬ್ರಹ್ಮಶ್ರೀ ಯನ್. ಪೇರರಾಜು ಪಂಡಿತ ಮಹೋದಯರು ಶ್ರೀಗಳವರ ಅನುಷ್ಠಾನಾದಿಗಳಿಗೆ ಎಲ್ಲಾ ವ್ಯವಸ್ಥೆಯನ್ನು ಮಾಡಿಸಿದರು. ಶ್ರೀ ಸ್ವಾಮಿಗಳವರು ರಚಿಸಿದ ಶ್ರೀ ಜಗದ್ಗುರು ಶಂಕರ ಚರಿತ್ರೆ ಮತ್ತು ಮಹೋಪನಿಷತ್ತನ್ನು ಸಂಪೂರ್ಣವಾಗಿ ಶ್ರೀಶೈಲ ಪ್ರಭೆ ಮಾಸಪತ್ರಿಕೆಯಲ್ಲಿ ಕ್ರಮವಾಗಿ ಪ್ರಚುರಿಸಿದರು. ಪಂಡಿತರು ತಮ್ಮ ರಚನೆಗಳಾದ ಆನಂದ ರಾಮಾಯಣ ಮುಂತಾದ ಗ್ರಂಥಗಳನ್ನು ಶ್ರೀಗಳವರಿಗೆ ಸಮರ್ಪಿಸಿದರು.

ತಾ|| 24–5–66 ಲತ್ತವರ ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಶ್ರೀ ಶಂಕರ ಜಯಂತ್ಯುತ್ಸವಗಳು ಜಯಪ್ರದವಾಗಿ ನಡೆದವು. ಬೃಹದಾರಣ್ಯಕೋಪನಿಷದ್ಭಾಷ್ಯ ಶ್ರವಣ ಚೆನ್ನಾಗಿ ನಡೆಯಿತು. ಪರಮಗುರುಗಳ ಆರಾಧನೆ ಆನಂದವಾಗಿ ಆಯಿತು. ಜ್ಯೇಷ್ಠ ಬಹುಳ ತ್ರಯೋದಶಿ ಶ್ರೀಗಳವರ ಜಯಂತ್ಯುತ್ಸವವು ಅತ್ಯಂತ ವೈಭವವಾಗಿ ನಡೆಯಿತು.

## 22 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುಂತಕಲ್ಲು 28–6–66

ಸ್ವಸ್ತಿ ಶ್ರೀ ಪರಾಭವ ನಾಮ ಸಂ|| ಬ್ರಹ್ಮ ಮುಹೂರ್ತದಲ್ಲಿ ಯಥಾ ಪ್ರಕಾರ ಪ್ರತಿವರ್ಷದಂತೆ ಕಲಶಸ್ಥಾಪನೆ ಪೂಜಾಪಾರಾಯಣಾದಿ ಕಾರ್ಯಗಳು ವೈದಿಕ ವಿಧಾನ ದಿಂದ ನಡೆದು, ಪ್ರಾತಃಕಾಲ ಬ್ರಹ್ಮಸೂತ್ರ ಭಾಷ್ಯಶ್ರವಣ, ಸಾಯಂಕಾಲ ಗೀತಾ ಭಾಷ್ಯ ಶಾಸ್ತ್ರಶ್ರವಣ ತ್ರಿಕಾಲ ಪೂಜಾನುಷ್ಠಾನಗಳಿಂದ ನಾಲ್ಕು ತಿಂಗಳು ಸಾಂಗ ಮಂಗಳವಾಗಿ ನಡೆದು ಪೂರ್ಣವಾಯಿತು. ಕಾರ್ತಿಕ ಶುದ್ಧ ಪೌರ್ಣಿಮ ಹಂಪಿ ಮಹಾಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು.

ಈ ಮಹಾವ್ರತ ಸಮಯದಲ್ಲಿ ಗುಂತಕಲ್ಲು ಆಶ್ರಮಕ್ಕೆ ಆಳ್ಳಗಡ್ಡೆ ಪೂಜ್ಯ ಶ್ರೀ ಶಂಕರಾನಂದ ಸ್ವಾಮಿಗಳು, ಶ್ರೀ ರಾಮಕೃಷ್ಣಾನಂದಸ್ವಾಮಿ ಪ್ರಭೃತರು ದಯಮಾಡಿ ಸಿದ್ದರು. ಶ್ರೀಗಳವರು ಆಶ್ರಮವಾಸಿಗಳಿಗೆ ಸಂಸ್ಕೃತ ಪಾಠವನ್ನು ಹೇಳಲು ಸಂಸ್ಕೃತ ಪಂಡಿತರಾದ ಅಧ್ಯಾಪಕರನ್ನು ನಿಯಮಿಸಿ ಪಾಠಗಳು ಹೇಳಿಸಿದರು. ಶ್ರೀ ಸ್ವಾಮಿ ಗಳವರ ಸದ್ಗುರುಗಳ 13 ನೆಯ ಪುಣ್ಯಾರಾಧನೆ ಆನಂದಪ್ರದವಾಗಿ ನಡೆಯಿತು.

"ಖನನ ಕ್ರಿಯೆಯಿಂದ (ಭೂಮಿಯನ್ನು ಅಗೆಯುವುದರಿಂದ) ಜಲಪ್ರಾಪ್ತಿ ಯಾಗುವಂತೆ ಅನನ್ಯವಾದ ಗುರುದೈವ ಸೇವೆಯಿಂದ ಮುಮುಕ್ಷುಗಳಿಗೆ ಉತ್ತಮವಾದ ಬ್ರಹ್ಮವಿದ್ಯೆ ಪ್ರಾಪ್ತವಾಗಿ ಧನ್ಯರಾಗುವುದರಲ್ಲಿ ಸಂಶಯವಿಲ್ಲ."

ಪಾವನ ಗಂಗೆಯಿಂದ ದೇಹಶುದ್ಧಿ, ಸತ್ಯವ್ರತದಿಂದ ಮನಶುದ್ಧಿ, ಆತ್ಮಜ್ಞಾನ ದಿಂದ ಆವರಣ ಭಂಗವಾಗಿ ಧನ್ಯರಾಗುವರು.

ಸದ್ಗುರುಗಳ ಸನ್ನಿಧಿಯಲ್ಲಿ ಪೀಠದಲ್ಲಿ ಕೂಡುವದಾಗಲಿ ಸ್ವೇಚ್ಛೆಯಿಂದ ಸಂಭಾ ಷಿಸುವುದಾಗಲಿ ಒಳ್ಳೆಯದಲ್ಲ. ಅವರಿಗೆ ಭಕ್ತನು ಸೇವಕನೇ ಆಗಿದ್ದು ವಿನಮ್ರ ಭಾವ ದಿಂದ ನಡೆದುಕೊಂಡು ವಿದ್ಯಾತಪಸ್ಸುಗಳನ್ನು ಪಡೆದು, ಅವರನ್ನು ನೋಡುತ್ತಾ ಧನ್ಯನಾಗುವನು.

ಐಹಿಕ ಸುಖಗಳನ್ನು ಇಚ್ಛಿಸುವವನಿಗೆ ನಿಜವಾದ ಬ್ರಹ್ಮವಿದ್ಯೆ ಉಂಟಾಗದು, ಗುರುವಿದ್ಯೆಗಾಗಿ ಶ್ರಮಿಸುವವನಿಗೆ ಸುಖ ದುಃಖಗಳೆನ್ನುವವು ಕಾಣಿಸವು.

ಪೂಜ್ಯ ಮಹಾತ್ಮರನ್ನು ವಿನೋದವಾಗಿ ಹೀಯಾಳಿಸುತ್ತಾ ನಿಂದಿಸುವ ಪ್ರಾಕೃತ ಜನರ ಮಾತುಗಳನ್ನು ಸದ್ಭಕ್ತರಾಲಿಸಬಾರದು. ಅಲ್ಲಿಂದ ದೂರ ಹೊರಟು ಹೋಗ ಬೇಕು. ದೊಡ್ಡವರ ಸಾಂಗತ್ಯದಿಂದ ಸಂಪ್ರಾಪ್ತವಾಗುವ ಸುಖವನ್ನು ಪ್ರಾಕೃತ ಜನರು ಅರಿಯರು.

ದ್ವಂದ್ವ ಭೂಯಿಷ್ಠವಾದ ಈ ಸಂಸಾರ ವೃಕ್ಷದಲ್ಲಿ ಎರಡು ಅಮೃತೋಪಮ ವಾದ ಫಲಗಳಿವೆ. ಒಂದು (ವಾಕ್ಯ) ಕಾವ್ಯಾಮೃತ ರಸಪಾನ– ವಾಕ್ಯ ಶ್ರವಣ; ಎರಡ ನೆಯದು ಮಹಾತ್ಮರ, ಸತ್ಪುರುಷರ ಸನ್ನಿಧಿ ಸಹವಾಸ; ಇವು ಇಲ್ಲದೇ ಹೋದರೆ ಎಲ್ಲವು ಸೊನ್ನೆಯೇ,

"ಧರ್ಮ ಏವ ಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ" ಧರ್ಮ ತಪ್ಪಿ ವರ್ತಿಸಿ ದರೆ ಅದು ನಮ್ಮನ್ನು ಬಾಧಿಸುವುದು. ಅದನ್ನು ಅನುಸರಿಸಿದರೆ ರಕ್ಷಿಸುವದು. ಧರ್ಮ ರಕ್ಷಣೆ ಎಂದರೆ ಸದಾಚಾರ; ಧರ್ಮ ಲೋಪವೆಂದರೆ ಧರ್ಮವು ಕೇವಲ ಮಾತು ಗಳಾಗಿದ್ದು, ಆಚರಣೀಯವಾಗದಿರುವಿಕೆ.

ಜನ್ಮಾಂತರದಲ್ಲಿ ಧರ್ಮ ಮಾಡದ ದೋಷದಿಂದ ಈಗ ದರಿದ್ರನು. ದಾರಿದ್ರ್ಯ ದೋಷದಿಂದ ಪಾಪಾಚರಣೆ, ಪಾಪದಿಂದ ನರಕ ಲೋಕ; ಅದರಿಂದ ಮತ್ತೂ ದಾರಿದ್ರ್ಯ ಮತ್ತೂ ಪಾಪಾಚರಣೆಯುಂಟಾಗುವದು. ಆದ್ದರಿಂದ ಪಾಪಕರ್ಮವು ಯಾವ ಪ್ರಕಾರದಿಂದಲೂ ಮಾಡಬಾರದು. ಹೀಗೆಂದು ಶಾಸ್ತ್ರ ತಿಳುಹುತ್ತೆ.

ಶ್ಲೋ॥ ನ ದೇವಾಂಶೋ ದದಾತ್ಯನ್ನಂ; ನಾ ರುದ್ರೋ ರುದ್ರಮರ್ಚಯೇತ್ ।
ನಾನೃಷಿಃ ಕುರುತೇ ಕಾವ್ಯಂ; ನಾ ವಿಷ್ಣುಃ ಪೃಥಿವೀ ಪತಿಃ ॥

ದೈವಾಂಶವಿಲ್ಲದೆ ಹೋದರೆ ಅನ್ನದಾನ ಮಾಡಲಾರನು; ರುದ್ರಾಂಶವಿಲ್ಲದಿದ್ದರೆ ಶ್ರೀ ರುದ್ರನನ್ನು ಅರ್ಚಿಸಲಾರನು; ಋಷಿಯಲ್ಲದಿದ್ದರೆ ಕಾವ್ಯವನ್ನು ಬರೆಯಲಾರನು; ವಿಷ್ಣ್ವಂಶವಿಲ್ಲದವನು ರಾಜ್ಯಪಾಲನೆ ಮಾಡಲಾರನು; ಹೀಗೆಂದು ಮನು ಪ್ರಜಾ ಪತಿಯ ವಾಕ್ಯ.

ಹಲ್ಲುಗಳು, ಕೂದಲುಗಳು, ಉಗುರುಗಳು ಮನುಷ್ಯನಿಂದ ಸ್ಥಾನ ಭ್ರಂಶವಾದರೆ ಹೇಗೆ ಶೋಭಿಸುವುದಿಲ್ಲವೋ ಹಾಗೆ ಮಾನವನ ಬುದ್ಧಿಗೆ ನಿಜವಾದ ಸ್ಥಾನ ಶಿವಭಾವನೆ, ಬ್ರಹ್ಮಭಾವನೆ. ಅದು ಇಲ್ಲದೆ ಹೋದರೆ ಜೀವಿತವು ಶೋಭಿಸುವದಿಲ್ಲ. ಮುಮುಕ್ಷು ಗಳು ಸತ್ಯ ಸಾಹಿತ್ಯವನ್ನು ಕೈಗೊಂಡು ಅರ್ಥಗ್ರಾಹಿಗಳಾಗಿ ಧನ್ಯರಾಗಬೇಕು. ಮಹಾ ಕವಿ ಕಾಳಿದಾಸನ ಪ್ರಯೋಗ ಉದಾಹರಣೆಗಳು, ಭಾರವಿಯ ಅರ್ಥಗೌರವ, ದಂಡಿಯ ಪದಗುಂಭನ– ಲಾಲಿತ್ಯ ಎಷ್ಟೋ ಪ್ರಶಸ್ತವಾದವು. ಕ್ರಮಶಃ ಇವು ಮೋಕ್ಷಕ್ಕೆ ಮಾರ್ಗವಾದವು.

ಶ್ರೀ ಗುರುದೇವರು ಭಕ್ತರ ಪ್ರಾರ್ಥನಾನುಸಾರ ಬೆಳಗುಪ್ಪೆ, ಕಲ್ಯಾಣದುರ್ಗ ಮುಂತಾದ ಸ್ಥಾನಗಳಿಗೆ ಹೋಗಿ ಮುಂಡಕೋಪನಿಷತ್ತು ಮತ್ತು ಭಾಗವತದಲ್ಲಿನ ಭಕ್ತಿಮಯ ಘಟ್ಟಗಳನ್ನು ಪ್ರತಿಪಾದಿಸಿ ಬೋಧಿಸಿದರು. ಪೂಜಾನುಷ್ಠಾನಾದಿ ನಿಯಮಗಳನ್ನು ಪಾಲಿಸುತ್ತಾ ಎಲ್ಲರಿಗೂ ಆ ವಿಷಯಗಳನ್ನು ಪ್ರತ್ಯೇಕವಾಗಿ ಹೇಳಿದರು.

ಪರಾಭವ ನಾಮ ಸಂ|| ಶ್ರೀಮದುತ್ತರಾಯಣ ಪುಣ್ಯ ಪರ್ವಕಾಲ ಗುರು ಪೂಜಾ ಕಾರ್ಯಕ್ರಮಗಳು ನಡೆದವು. ಕರ್ನೂಲು, ಆದೋನಿ, ಬೆಂಗಳೂರು ಮೊದ ಲಾದ ಸ್ಥಳಗಳಿಗೆ ಭಕ್ತರ ಭಾವನಾನುಸಾರ ಶ್ರೀಗಳವರು ದಯಮಾಡಿಸಿ ಬ್ರಹ್ಮ ಸೂತ್ರಾರ್ಥ ಪ್ರಸಂಗಗಳನ್ನು ಬೋಧಿಸಿದರು.

25–2–67 ನಂದ್ಯಾಲ ಶ್ರೀ ಉಮಾಮಹೇಶ್ವರಾಶ್ರಮದಿಂದ ಮಹಾನಂದಿ ಕ್ಷೇತ್ರಕ್ಕೆ ಹೋಗಿ ಶ್ರೀ ಜಗದ್ಗುರು ಕಂಚಿ ಕಾಮಕೋಟಿ ಪೀಠಾಧೀಶ್ವರ ಶ್ರೀ ಚಂದ್ರ ಶೇಖರ ಸರಸ್ವತೀ ಸ್ವಾಮಿಗಳವರನ್ನು ಸಂದರ್ಶಿಸಿ ಪ್ರಸ್ಥಾನತ್ರಯ ಮಹಾಗ್ರಂಥ, ಶ್ರೀ ಜಗದ್ಗುರು ಶಂಕರ ಚರಿತ್ರೆ ಮೊದಲಾದ ಗ್ರಂಥಗಳನ್ನು ಸಮರ್ಪಿಸಿದರು. ಜಗ ದ್ಗುರುಗಳು ಸ್ಮೇರಾನನದಿಂದ ಸೌಮ್ಯವಾಗಿ ಸಂಭಾಷಿಸುತ್ತಾ, ಶ್ರೀ ಜಗದ್ಗುರುಗಳ ಮುಂದಿಟ್ಟ ಗ್ರಂಥಗಳಲ್ಲಿ ಶ್ರೀ ಜಗದ್ಗುರು ಶಂಕರ ಚರಿತ್ರೆಯನ್ನು ಕೈಗೆತ್ತಿಕೊಂಡು ಕಣ್ಣುಗಳಿಗೊತ್ತಿಕೊಂಡು ಶಿರದಲ್ಲಿಟ್ಟು ಗ್ರಂಥವನ್ನು ತೆಗೆದು ತಮ್ಮ ಹಸ್ತದಲ್ಲಿದ್ದ ದೊಡ್ಡ ಭೂತಕನ್ನಡಿಯಿಂದ ಮತ್ತೆ ಮತ್ತೆ ಗ್ರಂಥವನ್ನು ಪರಿಶೀಲಿಸಿ ನೋಡಿದರು. "ತಾವು ಆಧ್ಯಾತ್ಮ ವಿದ್ಯಾ ಪ್ರಚಾರವನ್ನು ಮಾಡುತ್ತಿದ್ದೀರಾ ?" ಎಂಬುದಾಗಿ ಕೆಲವು ಮಾತುಗಳನ್ನು ಪ್ರೇಮದಿಂದ ಸಂಭಾಷಿಸಿದರು.

ನಮ್ಮ ಶ್ರೀಗಳವರು ಉತ್ತರ ಆಶ್ರಮದಲ್ಲಿ ಪ್ರತಿಷ್ಠಿಸಬೇಕಾದ ಶ್ರೀ ಚಂದ್ರ ಮೌಳೀಶ್ವರ ಜಗದ್ಗುರು ಶಂಕರಾದಿ ಪ್ರತಿಷ್ಠಾ ಕಾರ್ಯಗಳ ವಿಧಿ ವಿಧಾನಗಳನ್ನು ವಿನಯವಾಗಿ ಭಕ್ತಿಯಿಂದ ಶ್ರೀ ಜಗದ್ಗುರುಗಳಿಗೆ ಬಿನ್ನವಿಸಿಕೊಂಡರು. ಅದಕ್ಕೆ ಶ್ರೀ ಜಗದ್ಗುರುಗಳು ಮಹದಾನಂದಪೂರ್ವಕ ನಿಷ್ಠಾಸಂಪನ್ನವಾದ ತಮ್ಮ ಪ್ರಶಾಂತ

ದೃಷ್ಟಿಯಿಂದ ನೋಡುತ್ತಾ, "ಆ ಆ ಮನಃಪೂರ್ವಕವಾಗಿ ಅನುಜ್ಞೆಯನ್ನೀಯುವುದಾಗಿದೆ. ಶುಭ !" ಅನ್ನುತ್ತ ತೂಷ್ಣೀಂಸ್ಥಿತರಾದರು.

ಅನಂತರ ನೂತನವಾದ ಪಕ್ಕದಲ್ಲಿದ್ದ ಚಿಕ್ಕಸ್ವಾಮಿ ಜಯೇಂದ್ರ ಸರಸ್ವತೀ ಸ್ವಾಮಿಗಳನ್ನು ಸಂದರ್ಶಿಸಿ ಸಂಭಾಷಿಸಿ, ಸಂತೋಷದಿಂದ ಮಹಾನಂದೀಶ್ವರನಿಗೆ ಅಭಿಷೇಕಾದಿಗಳನ್ನು ಮಾಡಿಸಿ ಸಂದ್ಯಾಲ ಶ್ರೀ ಉಮಾಮಹೇಶ್ವರಾಶ್ರಮಕ್ಕೆ ದಯಮಾಡಿಸಿದರು.

ಅಲ್ಲಿಂದ ಪ್ರತಿಷ್ಠಾ ಮಹೋತ್ಸವಕ್ಕೆ ಬೇಕಾದ ಪ್ರತಿಷ್ಠಾ ಮೂರ್ತಿಗಳ, ಯಂತ್ರ ಮೊದಲಾದ ಸಾಲಿಗ್ರಾಮ ಶಿವಲಿಂಗಾದಿ ವಸ್ತುಗಳನ್ನು ಕಾಶೀ ಕ್ಷೇತ್ರದಲ್ಲಿ ತೆಗೆದುಕೊಂಡು ಅಲ್ಲಿ ಪಂಡಿತರೊಡನೆ ಮಾತನಾಡಿ ತಿಳಿದು ಬರಬೇಕೆಂದು ಶ್ರೀಗಳವರು ಕಾಶೀ ಕ್ಷೇತ್ರಕ್ಕೆ 3–3–67 ಗುಂತಕಲ್ಲಿನಿಂದ ಈಶಾನುಸ್ಮರಣಪೂರ್ವಕವಾಗಿ ದಯಮಾಡಿಸಿದರು. ಮಾರ್ಗ ಮಧ್ಯದಲ್ಲಿ ಜಯಪೂರ್‌ನಲ್ಲಿಳಿಯಬೇಕಾಯಿತು. ಅಲ್ಲಿ ಮಾಹೇಶ್ವರೀ ಸದನದ ಭಕ್ತಾದಿಗಳ ಭಾವನಾನುಸಾರ ಪೂಜಾನುಷ್ಠಾನ ಪ್ರವಚನಾದಿಗಳು ನಡೆಯಿಸಿ, 13–3–67 ಕ್ಕೆ ಕಾಶೀಕ್ಷೇತ್ರ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲ ಜಂಗಮವಾಡಿ ಮಠವನ್ನು ಸೇರಿದರು.

ಅಲ್ಲಿ ತಮ್ಮ ಮೊದಲಿನ ವಸತಿಯಲ್ಲೇ ಬಿಡದಿಯನ್ನು ಮಾಡಿ ನಿಯಮ ನಿಷ್ಠೆಗಳಿಂದ ಕೆಲವು ದಿನಗಳಿದ್ದು ಜಗದ್ಗುರು ಮಹಾಸನ್ನಿಧಿ ಮತ್ತು ತಮಗೆ ತಿಳಿದ ಪಂಡಿತರು, ಮಹಾತ್ಮರು, ಗುರುಗಳೊಡನೆ ಕಲೆತು ಪ್ರತಿಷ್ಠಾ ವಿಷಯಗಳನ್ನು ಮಾತನಾಡಿಕೊಂಡು ಪ್ರತಿಷ್ಠೆಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಶ್ರೀಗಳವರು ಕಾಮದಹನ ಅಂದರೆ ಫಾಲ್ಗುಣ ಶುದ್ಧ ಪೌರ್ಣಿಮೆ ಆದಮೇಲೆ ಗುಂತಕಲ್ಲು ಆಶ್ರಮಕ್ಕೆ ದಯಮಾಡಿಸಿದರು.

## ಶ್ರೀಕ್ಷೇತ್ರ ಉಮಾಮಹೇಶ್ವರಾಶ್ರಮ, ಲತ್ತವರ

### ಶ್ರೀ ಶಂಕರ, ಚಂದ್ರಮೌಳೀಶ್ವರ ಪ್ರತಿಷ್ಠೆ

ಶ್ರೀ ಚಂದ್ರಮೌಳೀಶ್ವರ, ಜಗದ್ಗುರು ಶಂಕರಾದಿ ಪ್ರತಿಷ್ಠಾ ಮಹೋತ್ಸವಕ್ಕೆ ಬೇಕಾದ ವ್ಯವಸ್ಥೆಗಳನ್ನು ಬೃಹದ್ರೂಪವಾಗಿ ಏರ್ಪಾಟುಗಳು ಮಾಡಿದ್ದರು. ಸಕಾಲಕ್ಕೆ ಆಹೂತರಾದ ವೈದಿಕ ಬ್ರಾಹ್ಮಣರು, ಪೂಜ್ಯ ಮಹಾತ್ಮರು ದಯಮಾಡಿಸಿದರು. ಪ್ರತಿಷ್ಠಾ ಮಹೋತ್ಸವ ಕಾರ್ಯಗಳು ವೇದೋಕ್ತವಾಗಿ ಮಂಟಪ ಪ್ರವೇಶ, ಮಹಾಗಣಪತಿ ಪೂಜೆ, ಸ್ವಸ್ತಿ ಪುಣ್ಯಾಹವಾಚನ, ನಾಂದಿ, ಋತ್ವಿಗ್ವರಣ ಇತ್ಯಾದಿ ಕಾರ್ಯಗಳು ಪ್ರಾರಂಭಿಸಲ್ಪಟ್ಟವು. ಮಂತ್ರಪೂತವಾದ ವೈದಿಕರ ವೇದಸೂಕ್ತಗಳು ಸುಶ್ರಾವ್ಯವಾಗಿ ಕರ್ಣಪೇಯಗಳಾಗಿದ್ದವು. ತೀರ್ಥಯಾತ್ರೆಯ ಪರಿಸೆಯ ಪ್ರಜೆಗಳಂತೆ ಈ ಪುಣ್ಯಸ್ಥಳಕ್ಕೆ ಅನೇಕ ಪಟ್ಟಣಗಳಿಂದ ಗ್ರಾಮಗಳಿಂದ ಭಕ್ತಾದಿಗಳು ಬಂದು ಸೇರಿದರು.

ಆ ಬಂದ ವೈದಿಕರು, ಮಹಾತ್ಮರು ಈ ಸ್ಥಳವನ್ನು ನೋಡಿ "ಇಲ್ಲಿ ವರ್ಷಾಪಾತವಾದ ಜಲವು ಪಶ್ಚಿಮವಾಹಿನಿ (ನದ) ಯಾಗಿ ಪ್ರವಹಿಸುತ್ತದೆ. ಆದ್ದರಿಂದ ಇದು ಪುಣ್ಯಮಯವಾದ "ಶ್ರೀಕ್ಷೇತ್ರ" ! ಶ್ರೀಕ್ಷೇತ್ರ !" ಎಂದು ಹರ್ಷನಿರ್ಭರಿತರಾಗಿ ನುಡಿದರು. ಮುಂದಿರುವ ಪರ್ವತ "ರತ್ನಗಿರಿ ಗುಹೆ" ಎಂದರು. ಇದು "ಶ್ರೀ ಕ್ಷೇತ್ರ ಉಮಾಮಹೇಶ್ವರಾಶ್ರಮ" ಎಂಧು ಕರೆದರು.

ಸ್ವಸ್ತಿ ಶ್ರೀ ಪ್ಲವಂಗ ನಾಮ ಸಂ|| ವೈಶಾಖ ಶುದ್ಧ ಅಕ್ಷಯತದಿಗಿ ಶುಕ್ರವಾರ 12-5-67 ಶುಭಮುಹೂರ್ತದಲ್ಲಿ ಶ್ರೀ ರತ್ನಗರ್ಭ ಗಣಪತಿ, ಚಂದ್ರಮೌಳೀಶ್ವರ ಮಹಾಲಿಂಗ, ನಂದೀಶ್ವರ, ಶಾರದೆ, ಜಗದ್ಗುರು ಶಂಕರಾಚಾರ್ಯ ಸ್ವಾಮಿ ಮೂರ್ತಿ ಪ್ರತಿಷ್ಠೆಗಳೂ, ಸಾಕ್ಷಿಗಣಪತಿ, ಪಾರ್ವತಿ, ಶ್ರೀಚಕ್ರ ಯಂತ್ರರಾಜ, ಧ್ವಜ ಪ್ರತಿಷ್ಠೆಗಳು ವೇದೋಕ್ತವಾಗಿ ನಡೆದವು. ವೇದ ಮಂತ್ರಮಯವಾದ ಘೋಷದಿಂದ ಪುಷ್ಪವೃಷ್ಟಿ ಆಯಿತು. ಮಂಗಳವಾದ್ಯಗಳು ಭೋರ್ಗರೆದವು. ಪೂರ್ಣಾಹುತಿ ಆಜ್ಯಾವಲೋಕನೆ ಮತ್ತು ಈ ಮಹಾಕಾರ್ಯಕ್ಕೆ ದಯಮಾಡಿಸಿದ ಯತೀಶ್ವರರ ಪೂಜೆ ವಿಧ್ಯುಕ್ತವಾಗಿ ನಡೆಯಿತು.

ತಾ. 8-5-67 ಮೊದಲು ತಾ. 12-5-67ರ ವರಿವಿಗೂ ಐದು ದಿನಗಳು ಪೂಜ್ಯ ಶ್ರೀಗಳವರ ಆಧ್ವರ್ಯದಲ್ಲಿ ಶಿವಪ್ರದವಾಗಿ ಅನುದಿನ ಉದಯ ಸಾಯಂಕಾಲಗಳಲ್ಲಿ ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು, ಶ್ರೀ ಶಿವಪ್ರಕಾಶಾನಂದ ಸ್ವಾಮಿಗಳು, ಬ್ರಹ್ಮಶ್ರೀ N, ಪೇರರಾಜು ಪಂಡಿತರೂ, ಬ್ರಹ್ಮಶ್ರೀ M. ಬಾಲವಿಶ್ವನಾಥ ಶರ್ಮ ಪಂಡಿತರು ಮೊದಲಾದವರಿಂದ ಆಧ್ಯಾತ್ಮಿಕೋಪನ್ಯಾಸಗಳು ಸರ್ವ ಜನಾನಂದಪ್ರದವಾಗಿ ನಡೆದವು.

ಸಣ್ಣ ಮಕ್ಕಳಿಂದ ಶ್ರೀ ತ್ಯಾಗರಾಜಸ್ವಾಮಿ ಕೃತಿಗಳ ಕೀರ್ತನೆಯ ಸೇವೆಗಳಾದವು. ಹರಿಕಥೆ, ಶಿವಕಥೆಗಳು ನಡೆದವು. ಶ್ರೀ ಉಮಾಮಹೇಶ್ವರರ ತಿರ್ಯಗಾಂದೋಲಿಕ (ಪಾಲಕಿ) ಮಹೋತ್ಸವವು ನಡೆದು ಭೂರಿ ಅನ್ನಸಂತರ್ಪಣೆಯಾಯಿತು.

ಈ ಮಹಾಕ್ಷೇತ್ರ, ಆಶ್ರಮ ನಿರ್ಮಾಣಾದಿ ಸರ್ವಕಾರ್ಯಗಳಿಗೆ ಆದವಾನಿ ಶ್ರೀಮಾನ್ ಎಲೇ ಮಲ್ಲೇಶಪ್ಪನವರ ಸತೀಮಣಿ ಶ್ರೀಮತಿ ಎಲೇ ಪಾರ್ವತಮ್ಮನವರ ಸದ್ಭಕ್ತಿ ಭಾವಗಳು, ಮತ್ತು ಶ್ರೀ ಶರಣಮ್ಮನವರ್ಭಕ್ತಿ ಭಾವಗಳು, ಆಶ್ರಮ ವಾಸಿಗಳಾದ ಶ್ರೀ ಶಿವಾನಂದ ಸ್ವಾಮಿಗಳವರ ಅನನ್ಯ ಭಕ್ತಿ ಶ್ರದ್ಧೆಗಳು, ಅವರ ಅಮೋಘವಾದ ಸೇವೆಯು, ಅಷ್ಟೇ ಅಲ್ಲ ಈ ಗ್ರಾಮದ ಎಲ್ಲಾ ಭಕ್ತರ ಸೇವೆಯು ಸಂಸ್ತುತ್ಯವು, ಈಶ್ವರ ಪ್ರೀತಿಕರವು.

ಶ್ರೀಗಳವರು ಶ್ರೀ ಕ್ಷೇತ್ರದಲ್ಲೇ ತಪಸ್ಸಂಪನ್ನರಾಗಿ ಪೂಜಾನುಷ್ಠಾನ ಶಾಸ ಶ್ರವಣಾದಿಗಳಿಂದ ಆನಂದವಾಗಿರುತ್ತಾ ಶ್ರೀ ಶಂಕರ ಜಯಂತಿ ಮಹೋತ್ಸವವನ್ನು ಮಾಡಿದರು. ಜ್ಯೇಷ್ಠ ಪೌರ್ಣಿಮೆಯ ದಿನ ಶ್ರೀ ಚಂದ್ರಮೌಳೀಶ್ವರಾದಿ ಪ್ರತಿಷ್ಠೆ

ಮಂಡಲ ಮಹಾಪೂಜೆ ಮಹನ್ಯಾಸಪೂರ್ವಕ ಏಕಾದಶವಾರ ರುದ್ರಾಭಿಷೇಕ ಸಹಸ್ರಕುಂಭಾಭಿಷೇಕ ಲಕ್ಷಬಿಲ್ವಾರ್ಚನೆ ಶ್ರೀ ಚಕ್ರದಲ್ಲಿ ಲಕ್ಷ ಕುಂಕುಮಾರ್ಚನೆ ಶ್ರೀರುದ್ರ ಸ್ವಾಹಾಕಾರಾದಿ ಕಾರ್ಯಗಳು ಯಥಾಶಾಸ್ತ್ರ ಸಾಂಗೋಪಾಂಗವಾಗಿ ನಡೆದು ಮಹಾಮಂಗಳ, ಮಂತ್ರಪುಷ್ಪವಾಯಿತು.

"ಬ್ರಹ್ಮೈವಾಚಾರ್ಯ ರೂಪೇಣಾವತಿಷ್ಠತೇ" "ಆಚಾರ್ಯವಾನ್ ಪುರುಷೋ ವೇದಃ" "ಆಚಾರ್ಯ ದೇವಾ ವಿದ್ಯಾವಿದಿತಾ ಸ್ಯಾಧಿಷ್ಠಂ ಪ್ರಾಪ್ನೋತು" ಅಂದಹಾಗೆ ಶ್ರೀಗುರುಸನ್ನಿಧಿಯಲ್ಲಿ ಉಪನಿಷತ್ತುಗಳಿಂದ ತಿಳಿಯಬೇಕಾದ ಆರು ವಿಧ ಲಿಂಗಗಳ ಪ್ರತಿಪಾದನೆ :– ಉಪಕ್ರಮ, ಉಪಸಂಹಾರ ಎರಡೂ ಸೇರಿ ಒಂದು ಲಿಂಗ, ಆಮೇಲೆ ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿ, ಹೀಗೆಂದು ಆರು ವಿಧ ಲಿಂಗಗಳ ಸಂಪೂರ್ಣ ವಿವರವನ್ನು ಛಾಂದೋಗ್ಯೋಪನಿಷತ್ತಿನ ಆಧಾರದಿಂದ ಶ್ರೀಗಳವರು ಭಕ್ತಕೋಟಿಗೆ ಪ್ರವಚನಪೂರ್ವಕ ತಿಳುಹಿದರು.

ಅನಂತರ ಪೂಜ್ಯ ಶ್ರೀಗಳವರು ಜ್ಯೇಷ್ಠ ಶುದ್ಧ ಪೂರ್ಣಿಮೆಯಿಂದ ಶ್ರೀಉಮಾ ಮಹೇಶ್ವರ ಗುರುಪೀಠ ಪ್ರತೀಕ ಗುರು ಮಹಾಯಂತ್ರ ಪ್ರತಿಷ್ಠೆ, ಉಮಾಮಹೇಶ್ವರ ಪ್ರತಿಷ್ಠಾದಿ ಕಾರ್ಯರೂಪ ವ್ರತನಿಯಮ ನಿಷ್ಠೆ, ಕೋಟಿ ಜಪಾನುಷ್ಠಾನವನ್ನು ಸಂಯಮಶೀಲರಾಗಿ ಪ್ರಾರಂಭಿಸಿ ನಿಯಮವನ್ನು ತಪ್ಪದೆ ಜಪವನ್ನಾಚರಿಸಿದರು. ಇದು ಒಂದು ಅಪೂರ್ವ.

ಶ್ರೀಗಳವರು ಮಾತೃಗರ್ಭದಿಂದ ಬಂದಿದ್ದು ಮೊದಲುಗೊಂಡು ಇಂದಿನವರಿಗೂ ಹುಟ್ಟಿದವರು ಹುಟ್ಟಿದ ಹಾಗೆಯೇ ನಿರ್ವಿಕಾರವಾಗಿದ್ದಾರೆ. ಇವರ ಹುಟ್ಟಿನಲ್ಲಿ ಇದು ಒಂದು ವಿಶೇಷ ಅಪೂರ್ವತೆ. ಅಲೌಕಿಕವಾದ ಈ ಸ್ಥಿತಿಯನ್ನು ಕಂಡು, ಮಹನೀಯರು "ಇದು ಕಾರಣ ಜನ್ಮ" ವೆನ್ನುತ್ತಿದ್ದರು. ಶ್ರೀಗಳವರ ಗುರುದೇವರು ಶ್ರೀ ಸದಾನಂದ ಸದ್ಗುರು ಸ್ವಾಮಿಗಳು ನಮ್ಮ ಸ್ವಾಮಿಗಳವರನ್ನು ವಿವಿಧ ರೀತಿ ಪರೀಕ್ಷಿಸಿ ನೋಡಿ "ನಿನ್ನ ಹುಟ್ಟುವಿಕೆ ಸನಕ ಸನತ್ಕುಮಾರರಂತೆ ಇದೆಯಪ್ಪಾ!" ಅನ್ನುತ್ತಾ, "ಈ ಗುರು ಪೀಠಕ್ಕೆ ದಕ್ಷಿಣ ದಿಶೆಯಿಂದ ಸ್ವಾಮಿಗಳು ಬರುತ್ತಾರೆ; ಎಂದು ನಮ್ಮ ಗುರುಗಳು ಶ್ರೀ ಸದ್ಗುರು ಪ್ರಣವಾನಂದ ಸ್ವಾಮಿಗಳು ಅನ್ನುತ್ತಿದ್ದರು. ನಿನ್ನ ಹುಟ್ಟುವಿಕೆ, ನೀನಿಲ್ಲಿಗೆ ಬರುವಿಕೆ ದಕ್ಷಿಣ ದಿಶೆಯಿಂದಲೇ ಆಗಿದೆ. ಸ್ವಾಮೀ! ಆದ್ದರಿಂದ ನಿಮ್ಮಲ್ಲಿ ನಮಗೊಂದು ದೃಷ್ಟಿ, ವಿಶ್ವಾಸ, "ನೀವು ಸಹಜವಾಗಿಯೇ ಸ್ವಾಮಿಗಳು. ಸ್ವಾಮಿ ಯಾಗಿಯೇ ಇರಪ್ಪಾ" ಎಂದು ಅನ್ನುತ್ತಿದ್ದರು.

ತಾ॥ 3-7-67 ಶ್ರೀ ಸ್ವಾಮಿಗಳವರ ಪರಮ ಗುರುಗಳು ಶ್ರೀಮತ್ಪರಮ ಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀ ಮತ್ಪೂಜ್ಯಪಾದ ಶ್ರೀಶ್ರೀಶ್ರೀ ಪ್ರಣವಾನಂದ ಸದ್ಗುರು ಸ್ವಾಮಿಗಳವರ ಪುಣ್ಯಾರಾಧನೆ ಮಹೋತ್ಸವವನ್ನು ಯಥಾರೀತಿ ಭಕ್ತಿಯಿಂದ ಆಚರಿಸಿದರು. ಆ ದಿನ ಪರಮ ಗುರುಗಳ ಚರಿತ್ರೆ ಅವರ ಪ್ರಬೋಧೆಗಳು

ಮೊದಲಾದವುಗಳನ್ನು ಎಲ್ಲರಿಗೂ ಬೋಧಿಸಿದರು. ಆಮೇಲೆ ತಾ|| 5-7-67 ನಮ್ಮ ಶ್ರೀಗುರುದೇವರ ಜಯಂತ್ಯುತ್ಸವವನ್ನು ವಿಧ್ಯುಕ್ತವಾಗಿ ಭಕ್ತರೆಲ್ಲರೂ ಸೇರಿ ನಡೆಸಿದರು.

ಈ ವರ್ಷ ಶ್ರೀ ಚಾತುರ್ಮಾಸ್ಯ ಮಹಾವ್ರತ ಗುತ್ತಿ ಪಟ್ಟಣ ಶ್ರೀ ಕನ್ನಿಕಾ ಪರಮೇಶ್ವರಿ ದೇವಸ್ಥಾನದಲ್ಲಿ ನಡೆಸಬೇಕೆಂದು ಗುತ್ತಿಪುರ ಭಕ್ತರು ಕಾರ್ಯಕ್ರಮ ನಿರ್ಧರಿಸಿಕೊಂಡು ಫಲಮಂತ್ರಾಕ್ಷತೆಗಳನ್ನು ಪಡೆದರು.

## 23 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುತ್ತಿ ಪಟ್ಟಣ 17-7-67

ಸ್ವಸ್ತಿ ಶ್ರೀ ಪ್ಲವಂಗ ನಾಮ ಸಂ|| ಆಷಾಢ ಶುದ್ಧ ಏಕಾದಶಿ ಬ್ರಾಹ್ಮ ಮುಹೂರ್ತದಲ್ಲಿ ನಡೆಯಬೇಕಾದ ಕಾರ್ಯಗಳೆಲ್ಲವು ನಡೆದವು. ಸದ್ಬ್ರಾಹ್ಮಣರಿಂದ ವೇದಘೋಷವಾಯಿತು. ಗಂಗಾ ಕಲಶವನ್ನು ತಂದು ಸ್ಥಾಪನೆಗೈದರು. ಸಾಂಗವಾಗಿ ಪೂಜಾ ವಿಧಾನಗಳೆಲ್ಲ ನಡೆದವು. ಪ್ರಸ್ಥಾನತ್ರಯ ಪಾರಾಯಣವಾಯಿತು. ಶ್ರೀಗುರು ದೈವ ಸ್ಮರಣೆಯಿಂದ ಕಠೋಪನಿಷತ್ ಭಾಷ್ಯ ಪ್ರವಚನ ಪ್ರಾರಂಭವಾಗಿ ಮಂಗಳ ವಾಯಿತು. ಸಾಯಂಸಮಯ ಪ್ರದೋಷ ಪೂಜಾನುಷ್ಠಾನಾನಂತರ 7-00 ಗಂಟೆ ಯಿಂದ 8-00 ಗಂಟೆವರಿಗೂ ಶ್ರೀ ಭಗವದ್ಗೀತಾ ಶಾಸ್ತ್ರ ಪ್ರವಚನ ನಡೆಯಿತು. ಸಾವಿರಾರು ಮಂದಿ ಭಕ್ತಾದಿಗಳಿಂದ ಕೂಡಿ 17-7-67 ಮೊದಲು 13-11-67 ವರೆಗೂ ಗುರುಕರುಣೆಯಿಂದ ಮಹಾವ್ರತವು ಶಿವಪ್ರದವಾಗಿ ನಡೆಯಿತು.

ಗುತ್ತಿ ಪಟ್ಟಣ ವಾಸಿಗಳಾದ ಸಹೃದ್ ಜನರು, ಭಕ್ತರು, ದೇವಸ್ಥಾನದ ಕಮೀಟಿಯವರು, ಶ್ರೀ D.V. ನಾಗಮಾಣಿಕ್ಯಂ ಇವರು ಎಲ್ಲ ವಿಧದಿಂದಲೂ ಪರಮ ಭಕ್ತಿಯಿಂದ ಸೇವೆ ಮಾಡಿದರು. ಈ ಕಾರ್ಯಕ್ರಮಕ್ಕೆ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಬ್ರಹ್ಮಶ್ರೀ ಶಂಕರ ಶಾಸ್ತ್ರಿಗಳು, ಶ್ರೀ ಶುದ್ಧ ಚೈತನ್ಯ ಸ್ವಾಮಿ ಪ್ರಭೃತರು ದಯಮಾಡಿಸಿದ್ದರು. ಗೀತಾ ಗಾನಸುಧೆ ಸಮಿತಿಯವರು ಬಂದಿದ್ದರು. ಭಕ್ತಾದಿಗಳೊಡನೆ ಕಲೆತು ಅವರ ಸದ್ಭಕ್ತಿ ಭಾವಾನುಸಾರ ಶ್ರೀ ರಾಮೇಶ್ವರ ಕ್ಷೇತ್ರದಲ್ಲಿ ಶ್ರೀಗಳವರ ದೀಕ್ಷಾ ವಿರಮಣ ವಿಧ್ಯುಕ್ತವಾಗಿ ನಡೆಯಿತು. ಭಕ್ತರಾದ ಶ್ರೀ R. ರಂಗಸ್ವಾಮಿ ಅಯ್ಯಂಗಾರ್ ಅವರು ಈ ಪ್ರಯಾಣದ ಸುವ್ಯವಸ್ಥೆಯನ್ನು ಮಾಡಿದರು.

ಹೀಗೆ ರಾಮೇಶ್ವರ ಕ್ಷೇತ್ರ ಜ್ಯೋತಿರ್ಲಿಂಗ ಸಂದರ್ಶನ ಪೂಜಾದಿ ಕಾರ್ಯಗಳು ನಡೆದವು, ಬ್ರಹ್ಮ ಸಭೆಯಾಯಿತು. ಅನಂತರ ಪರಶಿವನಾದ ಶ್ರೀ ಶಂಕರನು ಭೂಲೋಕದಲ್ಲಿ ಅವತರಿಸಿದ 'ಕಾಲಡಿ' ಎಂಬ ಅಗ್ರಹಾರಕ್ಕೆ ಯಾತ್ರೆಸಾಗಿತು. ಪೂರ್ಣಾ ನದಿ ಸ್ನಾನ, ಶ್ರೀ ಶಂಕರ ದರ್ಶನ, ಚಂದ್ರಮೌಳೀಶ್ವರರ ಪೂಜೆ ಶಾಸ್ತ್ರ ಶ್ರವಣ

ಮುಂತಾದ ಕಾರ್ಯಗಳನ್ನು ಆನಂದವಾಗಿ ನಡೆಯಿಸಿಕೊಂಡು ಅಲ್ಲಿಂದ ಗುತ್ತಿ ಪಟ್ಟಣಕ್ಕೆ ಬಂದರು.

ಆಮೇಲೆ ಶ್ರೀಗಳವರು ತಮ್ಮ ಗುರುದೇವರ ಪುಣ್ಯಾರಾಧನೆ ವಿಧ್ಯುಕ್ತವಾಗಿ ನಡೆಸಿಕೊಂಡು ಭಕ್ತರ ಭಾವನಾನುಸಾರ ಅನಂತಪುರ, ಬೆಳಗುಪ್ಪೆ ಮೊದಲಾದ ಸ್ಥಾನಗಳಿಗೆ ದಯಮಾಡಿಸಿದರು.

ಗುತ್ತಿಯಲ್ಲಿ ಶ್ರೀ ಚಾತುರ್ಮಾಸ್ಯ ಮಹಾವ್ರತ ಕನ್ನಿಕಾಪರಮೇಶ್ವರಿ ಆಲಯದಲ್ಲಿ ನಡೆಯುವಾಗ ಅನಂತಪುರದ ಭಕ್ತಾದಿಗಳು ಶ್ರೀ ಮೇಡಾ ಸುಬ್ಬಯ್ಯ ಶ್ರೇಷ್ಠಿ M. L .C. ಅವರ ಸತೀಮಣಿ ಕುಂ|| ಸೌ|| ಮೇಡಾ ಪಾರ್ವತಮ್ಮ, ಶ್ರೀ ಮೇಡಾ ರಾಮಯ್ಯ ಶ್ರೇಷ್ಠಿ,ಬ್ರಹ್ಮಶ್ರೀ N. ರಾಮರಾವು, ಶ್ರೀ ಯು. ಕೊಂಡಯ್ಯ, ಶ್ರೀ K. C. ವೆಂಕಟಸುಬ್ಬಯ್ಯ ಮೊದಲಾದವರು ಬಂದು ಭಕ್ತಿಯಿಂದ ಮುಂದೆ 24 ನೆಯ ಚಾತುರ್ಮಾಸ್ಯ ಮಹಾವ್ರತ ಅನಂತಪುರ ಮೇಡಾ ಸುಬ್ಬಯ್ಯ ಶ್ರೇಷ್ಠಿಯವರ ದಿವ್ಯ ಸದನವಾದ ಶ್ರೀ ಪಾರ್ವತೀ ನಿಲಯದಲ್ಲೇ ನಡೆಯಬೇಕೆಂದು ನಿರ್ಧರಿಸಿದರು.

ಉತ್ತರ ಶ್ರೀ ಕ್ಷೇತ್ರ ಉಮಾಮಹೇಶ್ವರ ಆಶ್ರಮಕ್ಕೆ ಉರವಕೊಂಡೆಯಿಂದ ಶೃಂಗೇರಿ ಶಾರದಾಪೀಠ ಸಂಸ್ಥಾನ ಶ್ರೀ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ಶ್ರೀ ಪ್ಲವಂಗ ನಾಮ ಸಂ|| ಪುಷ್ಯ ಶುದ್ಧ ಪೌರ್ಣಿಮ ಸೋಮವಾರ 15-1-68 ಸಾಯಂಕಾಲ 5 ಘಂಟೆಗೆ ದಯಮಾಡಿಸಿ ಆಶ್ರಮವನ್ನು ಅವಲೋಕಿಸಿ ಶ್ರೀ ಶಾರದಾ ಶಂಕರ ಶ್ರೀ ಚಂದ್ರಮೌಳೀಶ್ವರರನ್ನು ಸಂದರ್ಶಿಸಿ, ತಮ್ಮ ಸ್ವಹಸ್ತದಿಂದ ದೇವರಿಗೆ ಪುಷ್ಪ ಮಾಲೆಯನ್ನು ಧರಿಸಿ," ಇದು ಶ್ರೀ ಉಮಾ ಮಹೇಶ್ವರ ಗುರುಪೀಠವಾ ! ಬಹಳ ಸಂತೋಷ !", ಎಂದು ಅಮೃತ ವಾಕ್ಯಗಳನ್ನು ಬೋಧಿಸುತ್ತ ಎಲ್ಲರಿಗೂ ಫಲ ಮಂತ್ರಾಕ್ಷತೆಗಳನ್ನು ಪ್ರಸಾದಿಸಿದರು. ಶ್ರೀ ಜಗದ್ಗುರುಗಳ ಶುಭಾಗಮನವು ಸರ್ವರಿಗೂ ಆನಂದವನ್ನುಂಟು ಮಾಡಿತು.

ಅನಂತಪುರದವರು 2-5-68 ಶ್ರೀ ಶಂಕರ ಜಯಂತಿಗೆ ಶ್ರೀಕ್ಷೇತ್ರ ಶ್ರೀ ಉಮಾ ಮಹೇಶ್ವರಾಶ್ರಮಕ್ಕೆ ಬಂದು ಶ್ರೀ ಯು. ಕೊಂಡಯ್ಯ ಶ್ರೀ K. C. ವೆಂಕಟ ಸುಬ್ಬಯ್ಯ ಇವರು ಫಲ ಮಂತ್ರಾಕ್ಷತೆಗಳನ್ನು ಪಡೆದು ಮುಂದೆ ಕಾರ್ಯಕ್ರಮಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು. ಈ ಮಹಾವ್ರತ ನಿರ್ವಹಣಾರ್ಥವಾಗಿ ಉತ್ತಮ ಕಮೀಟಿಯೊಂದು ಏರ್ಪಾಟು ಮಾಡಿದರು.

ಬುಕ್ಕಾಪುರ ಶ್ರೀ ನಿರ್ವಾಣ ಮಠದಲ್ಲಿ ಪರಮಗುರುಗಳ ಆರಾಧನೆ ಜಯಪ್ರದವಾಗಿ ನಡೆಯಿತು. ಅನಂತರ ಗುರು ದೇವರ ಜಯಂತ್ಯುತ್ಸವವು ವೈಭವೋಪೇತವಾಗಿ ಜರುಗಿ ಮಂಗಳವಾಯಿತು.

# 24 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

## ಅನಂತಪುರ 6-7-68

ಸ್ವಸ್ತಿ ಶ್ರೀ ಕೀಲಕ ನಾಮ ಸಂ|| ಆಷಾಡ ಶುದ್ಧ ಏಕಾದಶಿ ಬ್ರಹ್ಮ ಮುಹೂರ್ತ ದಲ್ಲಿ ಪ್ರಭಾತಸೇವೆ, ಬ್ರಾಹ್ಮಣರ ವೇದ ಘೋಷದಿಂದ ಯಥಾವಿಧಿ ಶಾಸ್ತ್ರೀಯವಾಗಿ ಮಹಾವ್ರತವು ಪೂಜಾದಿ ವೈದಿಕ ಕಾರ್ಯಗಳಿಂದ ಮಂಗಳಪ್ರದವಾಗಿ ಪ್ರಾರಂಭಿ ಸಲ್ಪಟ್ಟಿತು. ಪ್ರಸ್ಥಾನತ್ರಯ: ಪಾರಾಯಣ ಈಶಾವಾಸ್ಯೋಪನಿಷತ್ ಶ್ರವಣ ಮಹಾ ಮಂಗಳ ಉದಯ ೨ ಗಂಟೆಗೆ ಆಯಿತು. ಸಾಯಂಸಮಯ ಪೂಜಾನುಷ್ಠಾನಾನಂತರ 7-00 ರಿಂದ 8-00 ಗಂ|| ವರಿವಿಗು ಶ್ರೀಮದ್ಭಗವದ್ಗೀತಾ ಭಾಷ್ಯ ಪ್ರವಚನ, ಈ ಮಧ್ಯದಲ್ಲಿ ಜಗದ್ಗುರು ಶ್ರೀ ಶಂಕರ ಚರಿತ್ರೆ ಪ್ರವಚನ ಮಹಾ ಪ್ರಸನ್ನವಾಗಿ ನಡೆದು ಎಲ್ಲಾ ಜನಗಳಿಗೆ ನಿತ್ಯಾನಂದವನ್ನುಂಟು ಮಾಡಿತು. 6-7-68 ಮೊದಲು ೨-11-68 ವರಿವಿಗೂ ಈ ನಾಲ್ಕು ಮಾಸಗಳು ಮಹಾ ವೈಭವದಿಂದ ಮಂಗಳ ಪ್ರದವಾಗಿ ನಡೆಯಿತು.

ಅನುದಿನ ಶಾಸ್ತ್ರ ಪ್ರವಚನಾದಿಗಳಿಂದಲೂ ಪ್ರತ್ಯೇಕವಾದ ಮುಮುಕ್ಷು ಜನ ಗಳಿಗೆ ಬೋಧಿಸುವ ವೇದಾಂತ ಪ್ರಕ್ರಿಯ ಪಾಠಗಳಿಂದಲೂ, ಈ ಮಹಾವ್ರತದ ಮಧ್ಯ ದಲ್ಲಿ ಆಹೂತರಾಗಿ ದಯಮಾಡಿಸಿದ ಮಹಾತ್ಮರ ಉಪನ್ಯಾಸಗಳಿಂದಲೂ ಕಾರ್ಯ ಕ್ರಮ ಪರಮ ಶಿವಶಂಕರವಾಗಿತ್ತು.

ಶ್ರೋ|| ಬ್ರ|| ನಿಷ್ಠರಾದ ಸುರಪುರ ಶ್ರೀ ಶಂಕರ ಶಾಸ್ತ್ರಿಗಳು, ಶ್ರೀ ರಾಮ ಕೃಷ್ಣಾನಂದ ಸ್ವಾಮಿಗಳು, ಶ್ರೀ ನಿತ್ಯಾನಂದ ಸ್ವಾಮಿಗಳು, ಶ್ರೀ ಶುದ್ಧ ಚೈತನ್ಯ ಸ್ವಾಮಿಗಳು, ಶ್ರೀ ಆತ್ಮಾನಂದ ಸ್ವಾಮಿಗಳು ದಯಮಾಡಿಸಿದ್ದರು. ಅಸಂಖ್ಯಾಕ ಭಕ್ತರೂ ಆ ಪರಿಸರ ಪಟ್ಟಣ ಗ್ರಾಮಗಳಿಂದ ಶ್ರೋತೃಗಳೂ ಬಂದು ಈ ಕಾರ್ಯಕ್ರಮ ದಲ್ಲಿ ಶ್ರವಣ ಪೂಜಾನುಷ್ಠಾನಾದಿ ಕಾರ್ಯಗಳಲ್ಲಿ ಭಾಗವಹಿಸಿ ತೃಪ್ತರಾದರು. ಶ್ರೀ ನಾಗಾನಂದಾಶ್ರಮದ ಭಕ್ತರು ಸಹಕರಿಸಿ ಸೇವೆ ಮಾಡಿದರು. ಆ ಪಟ್ಟಣವಾಸಿಗಳಾದ ಭಕ್ತರು ಆನಂದವಾಗಿ ಇಷ್ಟರವರಿಗೂ ಈ ಅನಂತಪುರ ಪಟ್ಟಣದಲ್ಲಿ 120 ದಿನಗಳು ಅಖಂಡವಾಗಿ ಒಂದೇ ರೀತಿಯಿಂದ ದೀರ್ಘ ಸತ್ರಯಾಗವಾಗಿ ಯಾವ ಕಾರ್ಯವೂ ನಡೆದಿದ್ದಿಲ್ಲ. ಇದು ಶ್ರೀಗಳವರ ತಪಃಫಲವೆಂದು ಸಂತೋಷಪಟ್ಟರು.

ಈ 24 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಪೂರ್ಣಸಭೆ ಮಹಾವೈಭವ ದಿಂದ ಆ ಪುರ ಪ್ರಮುಖರ, ವಿದ್ಯಾವಂತರ, ಅಧಿಕಾರಿಗಳ ಸಂತೋಷಪೂರ್ವಕವಾದ ಉಪನ್ಯಾಸಗಳಿಂದಲೂ, ಅಭಿನಂದನೆಯ ವಿವಿಧ ಪತ್ರಗಳಿಂದಲೂ, ಶ್ರೀಗಳವರ ಆಶೀಃ ಪೂರ್ವಕವಾಗಿ ಈ ಸಭೆ ಸಾಯುಂಕಾಲ 4-00 ಗಂಟೆಯಿಂದ 8-00 ಗಂಟೆಯವರಿಗೂ

ನಡೆದು ವಂದನೆ ಸಮರ್ಪಣೆಯಿಂದ ಪೂರ್ಣವಾಯಿತು. ಆಮೇಲೆ ಪಂಪಾಕ್ಷೇತ್ರ ಯಾತ್ರೆ ಜರುಗಿತು.

"ಉಪನಯನಾದಿ ಸಮಾವರ್ತನ ಪರ್ಯಂತವು ಇರುವದೇ ಬ್ರಹ್ಮಚರ್ಯ. ಸಮಾವರ್ತವೆಂದರೆ ಗುರುಕುಲದಲ್ಲಿ ವೇದಾಧ್ಯಯನ ಮಾಡಿ, ಸುಸಂಸ್ಕೃತನಾಗಿ ಮತ್ತು ತಿರುಗಿ ಬರುವಿಕೆ. ಬ್ರಹ್ಮಚರ್ಯ ಈ ಬ್ರಹ್ಮಪದಕ್ಕೆ ವೇದವೆಂತಲು, ವಿಷ್ಣುವೆಂತಲು, ಪರಮ ಶಿವನೆಂತಲೂ, ಬ್ರಾಹ್ಮಣ ಜಾತಿ ಎಂತಲೂ, ತಪಸ್ಸು, ಪರಮಾತ್ಮ ಸ್ವರೂಪ ವೆಂತಲೂ ಅರ್ಥ. 'ಬ್ರಹ್ಮಾ' ಎಂದು ದೀರ್ಘವಾಗಿ ಉಚ್ಚರಿಸಿದರೆ ಚತುರ್ಮುಖ ಬ್ರಹ್ಮವೆಂದಾಗುವುದು.

ವೇದಾಂಗಗಳಲ್ಲಿ ಶಿಕ್ಷೆ ಅನ್ನುವುದು ವೇದಸ್ವರೂಪನಾದ ಭಗವಂತನ ಘ್ರಾಣೇಂದ್ರಿಯ ಸ್ಥಾನವಂತೆ. ವ್ಯಾಕರಣವು ಮುಖವೆಂತಲೂ, ವಾಕ್ಕೆಂತಲೂ ಹೇಳು ವರು. ವ್ಯಾಕರಣದಲ್ಲಿ ಪಾಣಿನೀಯ ವ್ಯಾಕರಣ ಪ್ರಧಾನ. ನಟರಾಜ ರೂಪದಿಂದ ಪ್ರತ್ಯಕ್ಷನಾದ ಶಿವನಪಾದ ವಿನ್ಯಾಸಮೂಲಕ ಸಂಪ್ರಾಪ್ತವಾದ ಆ ವ್ಯಾಕರಣಕ್ಕೆ ಆದಿ ಶೇಷಾವತಾರನಾದ ಪತಂಜಲಿ ಭಾಷ್ಯವನ್ನು ರಚಿಸಿದನು. ಇದನ್ನು ಮಹಾಭಾಷ್ಯವೆನ್ನು ತ್ತಾರೆ. ಈ ಪಾಣಿನೀಯ ಸೂತ್ರಗಳಿಗೆ ವರರುಚಿ ಎನ್ನುವವರು ವಾರ್ತಿಕವನ್ನು ಬರೆದರು. ಈ ವ್ಯಾಕರಣವೆನ್ನುವದೇ ಇಲ್ಲದ ಪಕ್ಷದಲ್ಲಿ ಬಾಷೆ ಶುದ್ಧವಾಗಿ ಇರುತ್ತಿ ದ್ದಿಲ್ಲ. ಆದ್ದರಿಂದ ಅಭ್ಯಾಸಕರಾದ ಪಾಠಕರು ವ್ಯಾಕರಣ ಸೂತ್ರಸಹಿತವಾಗಿ ಕೆಲವು ಮಟ್ಟಿಗಾದರೂ ಸಂಸ್ಕೃತ ಜ್ಞಾನ ಉಳ್ಳವರಾಗಿರಬೇಕು. ಈಶ್ವರನ ಕೈಯಲ್ಲಿನ ಡಮರುಕ ನಾದವೇ ಶಬ್ದಾನುಶಾಸನ. ಭಗವಂತನ ಕೈ ಆಡಿಸುವದರಿಂದ ಸೂತ್ರಗಳು ಉಂಟಾದವು.

ವೇದಾರ್ಥಗಳನ್ನು ಮನನ ಮಾಡಿದ ಶುಕ, ವಾಮದೇವ, ವಸಿಷ್ಠಾದಿ ಮುನಿ ಗಳೆಲ್ಲರೂ ತಮ್ಮ ಹೃದಯದಲ್ಲಿ ಬ್ರಹ್ಮವನ್ನು ಭಾವಿಸುವವರಾಗಿದ್ದಾರೆ. ಅಂದರೆ ತದನುಭವಸಂಪನ್ನರಾಗಿದ್ದಾರೆ.

'ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂಬುವ ಶ್ರುತಿ, ಬ್ರಹ್ಮತತ್ತ್ವವು ಮನೋವಾಕ್ಕುಗಳಿಗೆ ಅಗೋಚರವೆಂದು ಹೇಳುತ್ತೆ. "ನೈಷಾ ತರ್ಕೇಣ ಮತಿರಾಪನೇಯ" ಎಂಬುದಾಗಿ ಬುದ್ಧಿಯಿಂದೂಹಿಸಲು ಅಸದಳವಾಗಿದ್ದು, ಅತರ್ಕ್ಯ ವಾಗಿದೆ. ಈ ಜಗತ್ತು ಹುಟ್ಟಿದರೂ, ನಾಶವಾದರೂ ಸರ್ವ ವಿಲಕ್ಷಣ ಸಾಕ್ಷಿಯಾದ ಪರಮಾತ್ಮ ಅದರ ಸಂಬಂಧವಿಲ್ಲದವನು. ಉತ್ಪತ್ತಿ, ಸ್ಥಿತಿ, ನಾಶರಹಿತನೆಂದರ್ಥ. ಆ ಪರಮಾತ್ಮನೇ ನಿನ್ನ ಆತ್ಮ (ನೀನಾಗಿದ್ದೀಯಿ) ಎಂದು ತಿಳಿದು ನಿಷ್ಠೆಯಿಂದರಿತು ಧನ್ಯರಾಗಬೇಕು.

ಹೊರಗಿನ ದೃಶ್ಯವಾದ ಘಟಪಟಾದಿ ವಿಷಯಗಳನ್ನು ಅರಿತಂತೆ ಬ್ರಹ್ಮ ಸ್ವರೂಪವನ್ನು ತಿಳಿಯಲು (ಹುಡುಕಲು) ಹೊರಟರೆ ಅದು ಕಾಣಿಸದು. ಅದನ್ನು

ಅನ್ಯವಾಗಿ ಕಾಣಲು ಹೋದಂತೆಲ್ಲಾ ಚಿಂತೆಯೇ ಅಧಿಕವಾಗುವದು. ಆದ್ದರಿಂದ ಬ್ರಹ್ಮ ಜ್ಞಾನಿಯಾಗಬೇಕಾದರೆ ಮೊದಲು ನಾನಾರೆಂದು ತನ್ನನ್ನು ತಾನು ತಿಳಿಯಬೇಕು. ಆಗ 'ಅಯಮಾತ್ಮಾ ಬ್ರಹ್ಮ' ಈ ನಿತ್ಯಾಪರೋಕ್ಷವಾದ ತಾನೇ– ಆತ್ಮವೇ ಬ್ರಹ್ಮ. ತನ್ನ ನಿಜಜ್ಞಾನವಾದರೇ ಬ್ರಹ್ಮಜ್ಞಾನವಾದಂತೆಯೇ.

'ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ' ಎಂಬ ಶ್ರುತಿ ಬ್ರಹ್ಮಾಪರೋಕ್ಷವಾಗಿದೆ (ತಾನಾಗಿದೆ) ಎಂದು ಹೇಳುತ್ತಿದೆ. ಆ ಪರಮಾತ್ಮ ಸ್ಥಿತಿ ಬ್ರಹ್ಮವು, ತನಗಿಂತಲೂ ಅನ್ಯವಾಗಿ ಪರೋಕ್ಷವಾಗಿ ಎಂದಿಗೂ ಗೋಚರವಾಗದು. ಆದ್ದರಿಂದ ತನ್ನನ್ನು ತಾನು ಶಿವನೆಂದು ಬ್ರಹ್ಮವೆಂದು ತಿಳಿದರೆ ಸರ್ವವು ಶಿವಮಯವೇ ಶಿವನೇ ! ಪರಬ್ರಹ್ಮವೇ!

ಕೆಲವು ಕಾಲದವರೆಗೂ ನಿಯಮನಿಷ್ಠೆಗಳಿಂದ ವಿಶೇಷವಾಗಿ ನಡೆಯುವ ಕಾರ್ಯಕ್ಕೆ ಸತ್ರವೆನ್ನುತ್ತಾರೆ. ಪೂರ್ವಕ್ಕೆ ನೈಮಿಶಾರಣ್ಯದಲ್ಲಿ ಸನಕ ಸನಂದನಾದಿ ಮುನಿಗಳಿಗೆ, ಸೂತಋಷಿಗಳು ಸರ್ವಧರ್ಮಗಳನ್ನು ಹೇಳುತ್ತಾ ಸತ್ರಯಾಗವನ್ನು ಸಹಸ್ರ ವರ್ಷ ಗಳು ಆಕುಂಠಿತವಾಗಿ ನಡೆಸಿದರಂತೆ. ಹಾಗೆ ನಿಮ್ಮ ಪಟ್ಟಣದಲ್ಲಿ ನಿಯಮನಿಷ್ಠೆಗಳಿಂದ ವಿಶೇಷವಾಗಿ ನಡೆದ ಈ ಕಾರ್ಯವು ಒಂದು ಸತ್ರವೇ ಎನ್ನಬಹುದು. ನೀವು ಬಹಳ ಪುಣ್ಯಾತ್ಮರು.

ಅನಂತರ ನಮ್ಮ ಪೂಜ್ಯ ಗುರುದೇವರ ಗುರುಗಳ ಪುಣ್ಯಾರಾಧನೆ 6-11-68 ರಲ್ಲಿ ಮೂರು ದಿನಗಳು ಮಂಗಳಮಯವಾಗಿ ನಡೆಯಿತು.

ಸ್ವಾಮಿಗಳವರು ಅನಂತಪುರ ಶ್ರೀ ಪಾರ್ವತೀ ನಿಲಯದಲ್ಲಿರುತ್ತಾ ಪ್ರಸ್ಥಾನ ತ್ರಯದಲ್ಲಿರುವ ದಶೋಪನಿಷತ್ತುಗಳ ಪರೀಕ್ಷೆಗಳು 200 ಮಂದಿ ಭಕ್ತರಿಗೆ, ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮ ಕೇಂದ್ರದಿಂದಲೂ, ಅನಂತಪುರ ಶ್ರೀ ಪಾರ್ವತೀ ನಿಲಯ ಕೇಂದ್ರದಿಂದಲೂ ಪರೀಕ್ಷಾ ಪ್ರಶ್ನೆಪತ್ರಗಳನ್ನು ಎಲ್ಲಾ ಸ್ಥಳಗಳಿಗೆ ಕಳುಹಿಸಿ ಕೊಟ್ಟು ಪರೀಕ್ಷೆಯಲ್ಲಿ ಬರೆದು ಉತ್ತೀರ್ಣರಾದವರಿಗೆಲ್ಲರಿಗೂ ಪೂಜ್ಯ ಶ್ರೀಗಳವರು ಪ್ರಮಾಣಪತ್ರಗಳನ್ನು (ಸರ್ಟಿಫಿಕೇಟ್) ಕೊಟ್ಟರು.

ಅನಂತರ ಇನ್ನೂ ಕೆಲವು ದೂರ ಪ್ರಾಂತಗಳಿಗೆ ಭಕ್ತರ ಪ್ರಾರ್ಥನಾನುಸಾರ ಸ್ವಾಮಿಗಳವರು ದಯಮಾಡಿಸಿ, ದಯ, ಧರ್ಮ, ದಾನ, ಶಾಂತಿ, ಪ್ರೇಮ, ಶೀಲ ಇತ್ಯಾದಿ ಉತ್ತಮ ವಿಷಯಗಳನ್ನು ಕುರಿತು ಹೃದಯಂಗಮವಾಗಿ ಎಲ್ಲರಿಗೆ ಒಂದು ವಿಶಿಷ್ಟವಾದ ದೈವಮಯ ಭಾವನೆಯನ್ನೂ ಸೇವಾಬುದ್ಧಿಯನ್ನೂ ಉಂಟು ಮಾಡಿ ತೃಪ್ತಿಪಡಿಸಿದರು.

## ಕಾಶೀಕ್ಷೇತ್ರ ವಾಸ, ಪಂಡಿತರ-ಮಹಾತ್ಮರ ಸಾಂಗತ್ಯ

ನಂದ್ಯಾಲ ಶ್ರೀ ಉಮಾಮಹೇಶ್ವರ ಗುರುಪೀಠ ಶ್ರೀ ಉಮಾಮಹೇಶ್ವರಾಶ್ರಮ ದೈವಪ್ರತಿಷ್ಠೆಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಕೆಲವು ಕಾಲ ತಪಸ್ಸಂಪನ್ನತೆ

ಯಿಂದ ಅಲ್ಲಿಯೇ ಇದ್ದು ಬರಬೇಕೆಂತಲೂ ಮತ್ತು ಪಂಡಿತರ ಮಹಾತ್ಮರ ಸಾಂಗತ್ಯ ದಿಂದ ಕಾಶೀಕ್ಷೇತ್ರ ವಾಸವಾಗಲೆಂದು ಶ್ರೀಗಳವರು 26-2-69 ಕಾಶೀಕ್ಷೇತ್ರ ಶ್ರೀ ಜಗದ್ಗುರು ಜ್ಞಾನಸಿಂಹಾಸನ ಜಂಗಮವಾಡಿ ಮಠಕ್ಕೆ ಹೋದರು.

ಅಲ್ಲಿ ಪಾವನ ಗಂಗಾಸ್ನಾನ, ವಿಶ್ವನಾಥ ಸಂದರ್ಶನ ನಿತ್ಯನಿಯಮ ಪೂಜಾನು ಷ್ಠಾನಾದಿಗಳಿಂದ ಕೈಲಾಸ ಮಂಟಪದ ಮೇಲಿರುವ ಮೊದಲ ತಮ್ಮ ಏಕಾಂತ ಸ್ಥಾನ ದಲ್ಲಿ ನಿತ್ಯಸುಖಿವಾಗಿರುತ್ತಿದ್ದರು. ಪಂಡಿತವರ್ಯರು ಪೂಜ್ಯ ಮಹಾಸ್ವಾಮಿಗಳ ಸನ್ನಿಧಿಗೆ ಹೋಗುತ್ತ ಉತ್ತಮವಾದ ಪ್ರಸ್ಥಾನತ್ರಯ ಭಾಷ್ಯ, ಹಿಂದೀ ಭಾಷೆಯಲ್ಲಿನ ತತ್ತ್ವಾನುಸಂಧಾನ ಪ್ರಕರಣ ಗ್ರಂಥವನ್ನು ಶ್ರವಣ ಮಾಡುತ್ತಿದ್ದರು. ಅಲ್ಲಿ ವಿದ್ಯಾ ವೈಭವದ ಪಂಡಿತ ಪ್ರಕಾಂಡತೆಯನ್ನು ಕಂಡು ಸಂತೋಷಗೊಳ್ಳುತ್ತಿದ್ದರು. ಆಗಾಗ ಗಂಗಾತೀರದಲ್ಲಿ ವಿಜನವಾದ ಪ್ರಶಾಂತ ಸ್ಥಳದಲ್ಲಿ ಕುಳಿತು ಗಂಟೆಗಳ ಹೊತ್ತು ನಿಷ್ಠೆ ಯಲ್ಲಿರುತ್ತಿದ್ದರು. ಅದು ಸಾಕ್ಷಾತ್ಕೈಲಾಸವೇ ಆಗಿತ್ತು.

ಅಲ್ಲಿಂದ ಭಕ್ತರಿಗೆ ಶ್ರೀಗಳವರು ಕೆಲವು ನೀತಿಪರವಾದ ಮಾತುಗಳು ಪತ್ರ ಮೂಲಕ ತಿಳುಹಿದರು.

ಎಂಥಾ ವಿಪತ್ಕಾಲವಾದರೂ ಸತ್ಯದಿಂದ ಜಾರಬಾರದು. ಸತ್ಯಸ್ವಾದವನ್ನು ನೋಡಿ ವಿನೋದಾರ್ಥವಾಗಿಯಾದರೂ ಸತ್ಯ ವ್ಯತಿರಿಕ್ತ ಮಾತುಗಳನ್ನಾಡಬೇಡ. ನಿನ್ನಲ್ಲಿ ಕೋಪ ಬಂದರೆ ಅದನ್ನು ನೀನು, ಮತ್ತೂ ಕೋಪಿಸಿ ದೂರ ಮಾಡು; ಚಾಪಲ್ಯವನ್ನು ಬಿಡು. ಆತ್ಮಾನುಸಂಧಾನದಿಂದ ಶಾಂತಿಯನ್ನು ಹೊಂದು.

ನಿನ್ನಲ್ಲಿ ನೀನು ಸುಮ್ಮನೆ ಇದ್ದಾಗ ಚಿತ್ಸಾಗರ ರೂಪನೆಂದು ತಿಳಿ. ಹೊರಗೆ ಬಂದು ಏನಾದರೂ ಮಾತನಾಡಿದಾಗ ಆ ಚಿತ್ಸಾಗರದ ಅಲೆಯಾಗಿ ಮಾತನಾಡುತ್ತಿ ದ್ದೇನೆಂದು ಅರಿ. ಪುನಃ ಚಿತ್ಸಾಗರದ ರೂಪನೇ ಆಗಿರು.

ನಿನ್ನ ಮಾತುಗಳಲ್ಲಿ ಅದೇನು? ಎನ್ನುವ ಆಶ್ಚರ್ಯಚಕಿತವಾದ ಬಾವೋದ್ರೇಕವು ಬೇಡ. ಆಶ್ಚರ್ಯಕ್ಕೆ ಎಡೆ ಇಲ್ಲ. ಪರಶಿವ ಪರಮಾತ್ಮನೇ ವಿನಾ ಮತ್ತೇನಿಲ್ಲ. ಪ್ರಶಾಂತವಾಗಿ ಮಾತನಾಡು.

ಸಂಜ್ಞೆಯಿಂದ ತಿಳಿಯಲು ಸಾಧ್ಯವಾಗದಾಗ ಸಂಗ್ರಹವಾದ ಮಾತುಗಳಿಂದ ವಿಷಯವನ್ನು ವ್ಯಕ್ತಪಾಡು. ಮೋಕ್ಷಕ್ಕೆ ವಾಙ್ನಿಯಮವು ಮೊದಲನೆಯ ದ್ವಾರ. "ಅನ್ಯಾವಾಚೊ ವಿಮುಂಚಥ"

ಸಾಧ್ಯವಾದ ಮಟ್ಟಿಗೆ ಪ್ರಾಕೃತ ಜನರ ಸಂಸರ್ಗವಿರಬಾರದು. ಅದು ನಿನ್ನ ಪವಿತ್ರ ಶಕ್ತಿಯನ್ನು ಶಿಥಿಲಗೊಳಿಸುತ್ತೆ.

ಹಾಸ್ಯವಾಗಿ ವಿನೋದವಾಗಿ ಇರುವ ವಾಕ್ಪ್ರಲಾಪಗಳನ್ನು ಹೆಚ್ಚಾಗಿ ಮಾಡ ಬೇಡ. ಅದು ಕ್ರಮವಾಗಿ ಅಶಾಂತಿಗೆ ಕಾರಣವಾಗುವುದು.

ಶಿವಕೇಶವರಲ್ಲಿ ಭೇದಬುದ್ಧಿ ಇಡಬೇಡ. ಯಾವನು ಶಿವನೋ ಆತನೇ ಹರಿ. ಆತನೇ ಗುರುವು. ಅದುವೇ ನೀನು. ನೀನೆಂದರಿತು ಸುಖದಿಂದಿರು.

ನಿನ್ನ ಪಾವನ ಹೃದಯವೇ ನಿಜಬೋಧೆ. ಗುರುವೆಂದರೆ ನಿನ್ನ ಬ್ರಹ್ಮಾನುಸಂಧಾನ ಸಂಪನ್ನವಾದ ಕಾಲವೇ; ಇನ್ನು ನಿನ್ನ ಉತ್ತಮ ಗ್ರಂಥ ಯಾವುದೆಂದರೆ ಈ ಪ್ರಪಂಚವೇ. ಅದೇ ನಿನಗೆ ಉತ್ತಮ ಪಾಠಗಳನ್ನು ಹೇಳುತ್ತದೆ. ಶ್ರೀಗುರುದೇವರೇ ನಿನ್ನ ತಂದೆ. ತಾಯಿ, ದೈವ. ದೇವರೇ ನಿನ್ನಲ್ಲಿದ್ದಾನೆ. ಅದು ನೀನಾಗಿದ್ದೀಯೆ ಎಂಬ ವಿಷಯವನ್ನು ತಿಳುಹಿ ನಿನಗೆ ಶಾಂತಿಯನ್ನೀಯುವನು.

ಲೌಕಿಕ ಜನರ ಸಮ್ಮರ್ದನದಲ್ಲಿ ಸೇರಬೇಡ, ಏಕಾಂತ ವಾಸವಿರಲಿ. ಅದು ಪ್ರತಿದಿನ 3 ಗಂಟೆಯಾಗಲಿ 2 ಗಂಟೆಯಾಗಲಿ ಕನಿಷ್ಠ 1 ಗಂಟೆಯಾಗಲಿ ಸುಮ್ಮನಿರು. ಆಡುವ ಪ್ರಾಣವನ್ನು ನೋಡುತ್ತಿರು. ಮನಸ್ಸು ಸುಮ್ಮನಾಗುವುದು.

ನಿಜದೃಷ್ಟಿ, ಈಶ್ವರ ಭಕ್ತಿ, ವಿದ್ಯಾರ್ಜನಾಸಕ್ತಿಯಿಂದ ಕಾಶೀಕ್ಷೇತ್ರ ವಾಸ ಮಾಡಿದವರಿಗೆ ಎಲ್ಲೆಲ್ಲಿಯೂ ಮಹಾತ್ಮರ ವಾಕ್ಯಾರ್ಥ ಪ್ರಸಂಗಗಳು, ವಿದ್ವಾಂಸರ ವಿದ್ವತ್ತು, ಪುರಾಣ ಪ್ರವಚನಗಳು, ತುಲಸೀ ರಾಮಾಯಣ, ದುರ್ಗಾ ಸಪ್ತಶತಿ, ವೇದಪಾಠ, ಪ್ರವಚನಗಳು, ಸಾಮಗಾನ ಎಲ್ಲಿ ನೋಡಿದರೂ ದೇವರೇ ಕಾಣಿಸುತ್ತಿರುತ್ತಾನೆ! ಹಾಗೆ ಅಲ್ಲದಿದ್ದರೆ ಮಾಮೂಲು ಜಗತ್ತಿನಂತೆ ಕಾಣಿಸುತ್ತಿರುತ್ತೆ. ಸುಸಂಪನ್ನ ಗುಣ, ವಿರಕ್ತಿ, ಈಶ್ವರ ಭಕ್ತಿ, ಜ್ಞಾನದೃಷ್ಟಿಯಿಂದ ನೋಡಿದರೆ ಕಾಶೀ ನಿಜವಾಗಿ ಮುಕ್ತಿ ಪುರಿಯೇ! ಸರ್ವತ್ರ ಶಿವನೇ ಶ್ರೀಗುರುದೇವರೇ ಎಂಬ ಆನಂದದಿಂದ ನಾವಿಲ್ಲಿದ್ದೇವೆ. ಶುಭಮಸ್ತು!

ಅನಂತರ ಪೂಜ್ಯ ಶ್ರೀಗಳವರು ಪ್ರತಿಷ್ಠೆಗೆ ಬೇಕಾದ ವಸ್ತುಗಳನ್ನೆಲ್ಲ ತೆಗೆದುಕೊಂಡು ತಾ॥ 11-4-69 ಶ್ರೀಮಜ್ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ಅಪ್ಪಣೆಯನ್ನು ಪಡೆದು 14-4-69 ಗುಂತಕಲ್ ಆಶ್ರಮಕ್ಕೆ ದಯಮಾಡಿಸಿದರು.

ಲತ್ತವರ ಶ್ರೀಕ್ಷೇತ್ರ ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಶ್ರೀ ಚಂದ್ರಮೌಳೀಶ್ವರನ ಪೂಜೆ ಶ್ರೀ ಶಂಕರ ಜಯಂತ್ಯುತ್ಸವ ಯಥಾರೀತಿ ನಡೆಯಿತು.

"ನಿಯಮ ತಪ್ಪದ ನಿಷ್ಠೆ ಸರ್ವಾರ್ಥಗಳನ್ನೀಯುವುದು. ಪೂಜ್ಯರು, ವೃದ್ಧರು, ಬ್ರಹ್ಮಜ್ಞರಾದ ಬ್ರಾಹ್ಮಣರು, ಗೋವುಗಳು ಭಾರತೀಯ ಸಂಸ್ಕೃತಿಯ ಭಾಗ್ಯನಿಧಿಗಳು.

ನಿಯಮಪೂರ್ವಕವಾಗಿ ಮಾಡುವ ಜಪವು ಸರ್ವ ಪಾಪಗಳನ್ನು ನಿವಾರಿಸಿ ಶಾಂತಿಯನ್ನು ಕೊಡುವುದು. ದುಃಖವೇದರೆ ಪಾಪದ ಫಲವೆ. ಸುಖವೆಂದರೆ ಪುಣ್ಯದ ಫಲವೆ. ಆದ್ದರಿಂದ ಪುಣ್ಯವನ್ನು ಮಾಡು. ಕಡೆಗೆ ಪುಣ್ಯ ಪಾಪವಲ್ಲದ ಬ್ರಹ್ಮ ಸ್ಥಿತಿಯನ್ನು ಹೊಂದು.

ತಪ್ಪಿ ಹೋಗದ ಸಚ್ಛೀಲವಂತನಾಗಿ ಅಷ್ಟವಿಧ ಬ್ರಹ್ಮಚರ್ಯವನ್ನು ಪಾಲಿಸುತ್ತಾ ಪವಿತ್ರ ಚರಿತ್ರನಾಗಿ ಸದ್ಗುರು ದೇವರಿಗೆ ಇದೊಂದು ಜನ್ಮವನ್ನಾದರೂ ಸಮರ್ಪಿಸಿ ಧನ್ಯನಾಗು.

ಭವಾರ್ಣವವನ್ನು ದಾಟಿಸುವ ಕರ್ಣಧಾರನು ಸದ್ಗುರುವು. ಆತ್ಮದ ಅಜ್ಞಾನವೇ ತಮೋರೂಪವಾದ ನಿದ್ರೆ. ಶೋಚನೀಯವಾದ ಜೀವನವೆಂದರೆ ಆತ್ಮವಿಷಯಕವಾದ ಜ್ಞಪ್ತಿ ಇಲ್ಲದಿರುವಿಕೆಯೇ; ಅನರ್ಥ. ಗರ್ವರಹಿತವಾದ ಜ್ಞಾನನಿಷ್ಠೆಯೇ ಸದ್ಯೋಮುಕ್ತಿ. ಈ ಪ್ರಪಂಚಕ್ಕಿಂತಲೂ ಇಂದ್ರಜಾಲವು ಮತ್ತೊಂದಿಲ್ಲ.

ಶ್ರೀ ಸೌಮ್ಯನಾಮ ಸಂ॥ ವೈಶಾಖ ಶುದ್ಧ ಪಂಚಮಿ ಸೋಮವಾರದಿಂದ ಶ್ರೀ ಶಂಕರ ಜಯಂತಿ ಹತ್ತು ದಿನಗಳು ಕ್ರಮವಾಗಿ ಯಮ ನಿಯಮಾದ್ಯಷ್ಟಾಂಗಗಳನ್ನು ಕುರಿತು ಪ್ರಬೋಧಿಸಿ, ಆಚರಿಸಿ ತೋರಿಸಿದರು. ಎಲ್ಲರೂ ಅನುಷ್ಠಾನ ಮಾಡುತ್ತಿರಲು ಇದು ನೋಡಲಿಕ್ಕೆ ನೈಮಿಶಾರಣ್ಯದ ಮುನಿಗಳಾ! ಎಂಬಂತೆ ಆನಂದವಾಗಿ ಕಾಣುತ್ತಿತ್ತು. ಜೀವನ್ಮುಕ್ತಿ, ವಿದೇಹಮುಕ್ತಿ ಎನ್ನುವ ವಿಷಯವನ್ನು ಜೀವನ್ಮುಕ್ತಿ ಪ್ರಕಾಶಕ ಮೂಲವಾಗಿ ವಿವರಿಸಿ ತಿಳಿಸುತ್ತಾ, ಬ್ರಹ್ಮವಿದ, ವಿದ್ವರ, ವಿದ್ವರ್ಯ, ವಿದ್ವರಿಷ್ಠರ ಸ್ಥಿತಿಯನ್ನು ಬೋಧಿಸಿದರು.

ಅನಂತರ 10-6-69 ಶ್ರೀಗಳವರ ಪರಮ ಗುರುಗಳ ಆರಾಧನೆ ಶ್ರೀ ನಿರ್ವಾಣ ಮಠದಲ್ಲಿ ಆನಂದವಾಗಿ ನಡೆಯಿತು. ನಂದ್ಯಾಲ ಆಶ್ರಮದಲ್ಲಿ ಭಕ್ತರು ಶ್ರೀಗುರುಗಳ ಜಯಂತ್ಯುತ್ಸವವನ್ನು ಮಂಗಳಮಯವಾಗಿ ಮಾಡಿದರು.

## 25 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ರಜತಮಹೋತ್ಸವ

### ಶ್ರೀಕ್ಷೇತ್ರ ಉಮಾಮಹೇಶ್ವರಾಶ್ರಮ ಲತ್ತವರೆ

ಸ್ವಸ್ತಿಶ್ರೀ ಸೌಮ್ಯನಾಮ ಸಂ॥ ಆಷಾಢ ಶುದ್ಧ ಏಕಾದಶಿ ಶುಕ್ರವಾರ ಯಥಾರೀತಿ ಪ್ರಭಾತಭೇರಿ, ಅನಂತರ ಪೂರ್ಣಕುಂಭ ಕಲಶಸ್ಥಾಪನೆ. ಶ್ರೀ ಉಮಾಮಹೇಶ್ವರ ಚಂದ್ರಮೌಳೀಶ್ವರ ಗುರು ಪೂಜಾದಿ ಕಾರ್ಯಗಳು, ಪ್ರಸ್ಥಾನತ್ರಯ ಪಾರಾಯಣ, ಶಿವಸಹಸ್ರನಾಮ ಬಿಲ್ವಾರ್ಚನೆ ಇತ್ಯಾದಿ ಕಾರ್ಯಗಳಿಂದ ವಿಧ್ಯುಕ್ತವಾಗಿ ಪ್ರಾರಂಭವಾಯಿತು.

ರಜತೋತ್ಸವ ಪತ್ರಿಕಾ, ರಜತ ಫಲಕ ಆವಿಷ್ಕರಣ, 9-00 ಗಂಟೆಗೆ ಮಾಂಡೂಕ್ಯೋಪನಿಷತ್ಪ್ರವಚನ, ಮಹಾಮಂಗಳ, ಮಂತ್ರಪುಷ್ಪ; ಸಾಯಂಕಾಲ 4-00 ಗಂಟೆಯಿಂದ 5-30 ರ ವರೆವಿಗೂ ಶ್ರೀಮದ್ಭಗವದ್ಗೀತಾ ಪ್ರವಚನ, 7-00 ಗಂಟೆಯಿಂದ 8-30 ಗಂಟೆವರೆವಿಗೂ ಪ್ರದೋಷ ಪೂಜಾ ಮಹಾಮಂಗಳ; 9-00 ಗಂಟೆಯಿಂದ

10-00 ಗಂಟೆವರೆವಿಗೂ ಭಗವನ್ನಾಮ ಭಜನೆ. ಈ ವಿಧವಾಗಿ ಶ್ರೀಗುರುಕೃಪೆಯಿಂದ 25-7-69 ಮೊದಲು 20-11-69 ರ ವರೆವಿಗೂ ಮಂಗಳಪ್ರದವಾಗಿ ಈ ರಜತೋತ್ಸವ ಮಹಾಕಾರ್ಯಕ್ರಮವು ನಡೆದು ಸಾಂಗಮಂಗಳವಾಯಿತು.

ಈ ಮಹಾವ್ರತದಲ್ಲಿ ಅನೇಕ ಮಹನೀಯರ ಶುಭಾಗಮನವೂ. ವಿವಿಧ ಪ್ರಾಂತಗಳಿಂದ ಭಕ್ತರು ಬಂದು-ಹೋಗುವಿಕೆ ನಡೆದೇ ಇತ್ತು. ಎಲ್ಲರು ಜಪ, ತಪ, ಪೂಜಾನುಷ್ಠಾನ ಪಾರಾಯಣ, ಪ್ರಸ್ಥಾನತ್ರಯ ಶ್ರವಣಾದಿಗಳನ್ನು ಮಾಡಿದರು. ಆಗಾಗ ಅಖಂಡ ಭಗವನ್ನಾಮ ಭಜನೆಗಳನ್ನು ನಡೆಯಿಸಿದರು ಮತ್ತು ಎಲ್ಲರೂ ಕೂಡಿ 1,108 ಸಾರಿ ಗೀತಾ ಪುರಶ್ಚರಣ ಮಾಡಿದರು. ಪ್ರಣವ ಪಂಚಾಕ್ಷರ (ಷಡಕ್ಷರ) ಮಹಾಮಂತ್ರದ ಜಪ ಲಿಖಿತ ಪುಸ್ತಕಗಳ ಶೇಕರಣೆ, ಸಂಪೂಜನೆಯು ನಡೆಯಿತು. ವೈದಿಕ ಬ್ರಹ್ಮಜ್ಞರ ವೇದಘೋಷೆಯು ನಡೆಯಿತು. ಆಗಾಗ ರುದ್ರಸ್ವಾಹಾಕಾರ ವಿಧ್ಯುಕ್ತವಾಗಿ ಮಾಡಿದರು ಮತ್ತು ಶ್ರೀಗಳವರು ಶ್ರೀಚಾತುರ್ಮಾಸ್ಯ ಮಹಾವ್ರತ ಪದ್ಧತಿಗಳನ್ನು ವ್ರತಕಲ್ಪೋಕ್ತ ಪೂಜಾವಿಧಾನಗಳನ್ನು, ವಿಷ್ಣು ಧರ್ಮೋತ್ತರ ದಾಲ್ಭ್ಯ ಪುಲಸ್ತ್ಯ ಸಂವಾದಾತ್ಮಕವಾಗಿರುವ, ಇತಿಹಾಸದಲ್ಲಿ ವಿವರಿಸಲ್ಪಟ್ಟ ವಿಷಯಗಳನ್ನು ಸಂಗ್ರಹವಾಗಿ ಎಲ್ಲರಿಗೆ ತಿಳುಹಿದರು.

ಈ ಮಹಾವ್ರತ ಪೂರ್ಣಸಭೆಯಲ್ಲಿ ಸಹಸ್ರಾರು ಮಂದಿ ಭಕ್ತರು ಸಮಾವೇಶವಾಗಿದ್ದರು. ಈ ಕಾರ್ಯಕ್ಕೆ ದಯಮಾಡಿಸ್ಸಿದ ಮಹಾತ್ಮರು ಶ್ರೀ ಶುದ್ಧಚೈತನ್ಯ ಸ್ವಾಮಿಗಳು, ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ನಿತ್ಯಾನಂದ ಸ್ವಾಮಿಗಳು ಉಪನ್ಯಾಸ ಮಾಡಿದರು. ಪಂಡಿತ ಶ್ರೀ ನಾರಾಯಣ ಮೂರ್ತಿಯವರು ಸಂಸ್ಕೃತ ಪದ್ಯ ಸಮರ್ಪಣೆಯನ್ನು ಮಾಡಿದರು. ಇನ್ನಿತರ ಪಂಡಿತರ ಪದ್ಯ ಸಮರ್ಪಣೆಯಾಯಿತು. ಅನಂತರ ಶ್ರೀ ಮೇಡಾ ಸುಬ್ಬಯ್ಯ ಶ್ರೇಷ್ಠಿ M.L.C. ಮತ್ತು ಗುರುದೈವ ಸೇವಾ ದುರಂಧರರು ಶ್ರೀ N. ರಾಮರಾವು ಮೊದಲಾದವರು, ಅನಂತಪುರದ ಪಂಡಿತರು ಉಪನ್ಯಸಿಸಿದರು. ಕಡೆಗೆ ಶ್ರೀಗಳವರ ಭಾಷಣವಾಗಿ ಮಂಗಳವಾಯಿತು. ಶ್ರೀ ಉಮಾಮಹೇಶ್ವರರ ಉತ್ಸವವು ನಡೆಯಿತು.

ಕಾರ್ತಿಕ ಶುದ್ಧ ಪೌರ್ಣಮಿಗೆ ಭಕ್ತಾದಿಗಳೊಡನೆ ಸ್ವಾಮಿಗಳವರು ಗೋಕರ್ಣ ಮಹಾಕ್ಷೇತ್ರವನ್ನು ಸೇರಿ ಅಲ್ಲಿ ಕೋಟಿತೀರ್ಥದಲ್ಲಿ ದೀಕ್ಷಾ ವಿರಮಣ ಮಾಡಿ ಸಮುದ್ರ ಸ್ನಾನವನ್ನಾಚರಿಸಿ, ಮಹಾಗಣಪತಿ, ಶ್ರೀ ಗೋಕರ್ಣೇಶ್ವರ ಸ್ವಾಮಿಗೆ ಮಹಾನ್ಯಾಸ ಪೂರ್ವಕ ರುದ್ರಾಭಿಷೇಕಗಳನ್ನು ಮಾಡಿಸಿ ರಾತ್ರಿ ಕೈಲಾಸ ಪೂಜೆ, ಲಕ್ಷ ದೀಪಾರ್ಚನಾಲಂಕಾರವನ್ನು ದರ್ಶಿಸಿ ಎಲ್ಲರೂ ಆನಂದಭರಿತರಾದರು.

ಅಲ್ಲಿಂದ ಭಕ್ತಾದಿಗಳೊಂದಿಗೆ ಶ್ರೀಗಳವರು ಶೃಂಗೇರಿ ಶಾರದಾ ಪೀಠವನ್ನು ಸಂದರ್ಶಿಸಿ, ಎಲ್ಲರೂ ಶ್ರೀಮಜ್ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿ

ಗಳನ್ನು ಸಂದರ್ಶಿಸಿ ಅಲ್ಲಿ ನಡೆಯುವ ಶ್ರೀ ಚಂದ್ರಮೌಳೀಶ್ವರ ಸ್ಫಾಟಿಕಲಿಂಗ ಪೂಜಾದಿಗಳನ್ನು ನೋಡಿ ಆನಂದಿಸಿದರು.

ಶ್ರೀ ಜಗದ್ಗುರು ಸ್ವಾಮಿಗಳವರು ನಮ್ಮ ಶ್ರೀಗಳವರಿಗೆ ಶ್ರೀ ಶಿವಗೀತಾಭಾಷ್ಯ ಮೊದಲಾದ ಗ್ರಂಥಗಳನ್ನು ಕೊಟ್ಟರು.

ಅಲ್ಲಿಂದ ನಮ್ಮ ಪೂಜ್ಯ ಶ್ರೀಗಳವರು ನಂಜನಗೂಡಿನಲ್ಲಿ 1947 ಇಸ್ವಿಯಲ್ಲಿ, 3ನೆಯ ಶ್ರೀಚಾತುರ್ಮಾಸ್ಯ ಮಹಾವ್ರತವನ್ನು ಮಾಡಿದ ಜೀರ್ಣ ಶಿವಾಲಯ ಸಂದರ್ಶನವನ್ನು ಪಡೆದು, ಎಲ್ಲರೂ ಕಪಿಲಾನದಿ ತೋಯಗಳಿಂದ ಪಾವನರಾಗಿ, ಆ ಆಲಯದಲ್ಲೇ ಬಹಳ ಹೊತ್ತು ಕುಳಿತು ಶ್ರೀಗುರು ಚರಿತ್ರೆಯಲ್ಲಿದ್ದ ಪೂರ್ವ ಸ್ಮೃತಿಗಳನ್ನು ಅನುಸ್ಮರಿಸುತ್ತಾ ಆನಂದಿಸಿದರು.

ಅನಂತರ ಎಲ್ಲರೂ ಲತ್ತವರ ಕ್ಷೇತ್ರಕ್ಕೆ ಬಂದು ಸೇರಿ ಪೂಜಾನುಷ್ಠಾನಗಳನ್ನು ನಡೆಸಿದರು.

5–12–69 ಶ್ರೀಗುರುಗಳ ಗುರುದೇವರ ಆರಾಧನಾ ಕಾರ್ಯಕ್ರಮವು, ತಮ್ಮ ಪರಮ ಗುರುಗಳ ಶ್ರೀ ನಿರ್ವಾಣ ಮಠದಲ್ಲಿ ವಿಧ್ಯುಕ್ತವಾಗಿ 3 ದಿನಗಳು ನಡೆಯಿತು. ಬ್ರಹ್ಮಶ್ರೀ ಶಂಕರಶಾಸ್ತ್ರಿ ಸ್ವಾಮಿಗಳವರು, ಶ್ರೀ ಶುದ್ಧಚೈತನ್ಯ ಸ್ವಾಮಿಗಳವರು, ಶ್ರೀ ಶಿವಪ್ರಕಾಶಾನಂದ ಸ್ವಾಮಿಗಳವರು, ಪಂಡಿತ ಶ್ರೀ ನಾರಾಯಣ ಮೂರ್ತಿಯವರು ದಯಮಾಡಿಸಿದ್ದರು. ಆಧ್ಯಾತ್ಮಿಕ ತತ್ತ್ವೋಪನ್ಯಾಸಗಳು ಎಷ್ಟೋ ಶಿವಪ್ರದವಾಗಿ ನಡೆದವು. ವಿದ್ಯಾ ವಿವೇಕಯುಕ್ತರಾದ ಶ್ರೀಶೆಟ್ಟಿ ಓಬುಲಪತಿ ಅಡ್ವೋಕೇಟ್ ಅವರು ಆಶ್ರಮಕ್ಕೆ ಧರ್ಮಕರ್ತರಾಗಿದ್ದರು. ಎಲ್ಲಾ ಕಾರ್ಯಗಳನ್ನು ಚೆನ್ನಾಗಿ ನೋಡಿಕೊಂಡರು.

ಯಥಾರೀತಿ ಪ್ರತಿ ವರ್ಷದಂತೆ ಉರವಕೊಂಡೆ ಶ್ರೀ ಕನ್ನಿಕಾಪರಮೇಶ್ವರಿ ಆಲಯದಲ್ಲಿ ಶ್ರೀ ಗೀತಾಜಯಂತಿ ಕಾರ್ಯಕ್ರಮ ನಡೆಯಿತು. ಅಲ್ಲಿಂದ ಭಕ್ತಾದಿಗಳೊಂದಿಗೆ ಕೂಡಿ ದಕ್ಷಿಣ ಕಾಶಿ ಎಂಬುದಾಗಿ ಹೇಳಲ್ಪಡುವ ಗಿರಿ, ಗಹ್ವರ, ಸುದೀರ್ಘ ಜಲಸ್ರವಂತಿಗಳುಳ್ಳ ಶ್ರೀ ರಾಮಲಿಂಗೇಶ್ವರ ಕ್ಷೇತ್ರಕ್ಕೆ ಹೋಗಿ 3–4 ದಿನಗಳಿದ್ದು ಬ್ರಹ್ಮಸೂತ್ರಗಳ ಪ್ರವಚನಾದಿಗಳನ್ನು ನಡೆಯಿಸಿ ಶಿವನನ್ನು ಪೂಜಿಸಿದರು.

ಅನಂತರ ಉಂಡಬಂಡೆ ಶ್ರೀ ವೀರಭದ್ರಸ್ವಾಮಿ ಕ್ಷೇತ್ರಕ್ಕೆ ಹೋಗಿ, ಬ್ರಹ್ಮಚಾರಿಗಳು ಮೊದಲಾದ ಅಧಿಕಾರಿ ಮುಮುಕ್ಷುಗಳು ಕೂಡಿ ಎಲ್ಲರೂ ಕೆಲವು ದಿನಗಳ– ಡಿಶಂಬರ್ ತಿಂಗಳ ಅಂತ್ಯದವರಿಗೂ ಬ್ರಹ್ಮಸೂತ್ರ ಪಾಠಗಳು ಮಹೋಪನಿಷತ್ ಶ್ರವಣ ಅನುಷ್ಠಾನಾದಿಗಳಿಂದಲೂ ಮತ್ತು ಆ ಆವರಣದಲ್ಲಿ ಬೆಳೆದ ಅಚ್ಛಿದ್ರವಾದ ಅತ್ಯುತ್ತಮ ಬಿಲ್ವದಳಗಳಿಂದ ಶ್ರೀ ಚಂದ್ರಮೌಳೀಶ್ವರನನ್ನೂ, ಶ್ರೀ ವೀರಭದ್ರ ದೇವರನ್ನೂ ಮನಸಾರೆ ಅರ್ಚನೆಗೈದು ಸಂತೃಪ್ತರಾದರು.

ಅನಂತರ 1-1-70 ರಿಂದ ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಯಥಾರೀತಿ ತಮ್ಮ ನಿಯಮಗಳಿಂದ ಎರಡು ವೇಳೆಗಳಲ್ಲಿ ಶಂಕರಾನಂದೀಯ ಭಗವದ್ಗೀತಾ ಪ್ರವಚನ ನಡೆಸಿದರು. ಮಕರಸಂಕ್ರಾಂತಿ ಗುರುಪೂಜೆ ಅಲ್ಲಿಯೇ ನಡೆಯಿತು.

ಆಮೇಲೆ ಆದವಾನಿ ವಾಸವೀ ಕಲ್ಯಾಣ ಮಂಟಪದಲ್ಲಿ ಭಕ್ತರ ಪ್ರಾರ್ಥನೆಯನ್ನು ಮನ್ನಿಸಿ ಆಚಾರ್ಯರ ಕೃತಿ "ತತ್ತ್ವೋಪದೇಶ" ಎಂಬುವ ಪ್ರಕರಣ ಗ್ರಂಥದ ಮತ್ತು ಮಧುಸೂದನ ಸರಸ್ವತೀ ಭಗವದ್ಗೀತಾ ಗೂಢಾರ್ಥ ದೀಪಿಕೆಯ ವ್ಯಾಖ್ಯಾನವನ್ನು ಮಾಡಿದರು.

"ಬ್ರಹ್ಮಾನುಭವವೆಂಬುವುದು ಬ್ರಹ್ಮನಿಷ್ಠರಿಗೆ ಗೋಚರವಾಗುವುದು. ಕೇವಲ ಪಾಂಡಿತ್ಯ ಪ್ರಕರ್ಷ ಜ್ಞಾನ ಮಾತ್ರ ಚಿತ್ತಕ್ಕೆ ಅರ್ಥವಾಗದು. ಆ ತೃಪ್ತಿಯನ್ನು ಅನುಭವಿಸಿದಾತನಿಗೆ ಸ್ವಾಭಾವಿಕವಾಗಿ ಶಮಾದಿ ಗುಣಾನ್ವಿತವಾದ ಮೈತ್ರಿ, ಕರುಣೆ ಇತ್ಯಾದಿ ಸುಗುಣ ಸಂಶೋಭಿತವಾದ ಹೊರಬೆಳಕು ಕಾಣಿಸುತ್ತೆ.

ಆತ್ಮಜ್ಞಾನದಿಂದ ಜಗತ್ತು ವಸ್ತುತಃ ಇಲ್ಲವೆಂದು ತಿಳಿದ ಮೇಲೆ ಜಗತ್ತು ಕಾಣಿಸಿಕೊಳ್ಳುತ್ತಲೇ ಇರುತ್ತದೆ. ಇದು ನಾಶವಾಗಲಿ ಧ್ವಂಸವಾಗಲಿ ಆಗುವುದಿಲ್ಲ. ಪ್ರತೀತಿಯಾದರು ನಿಜಜ್ಞಾನಕ್ಕೆ ಲೋಪವಿಲ್ಲ. ಅಂದರೆ ಅಪರೋಕ್ಷ ಮಿಥ್ಯಾದೃಷ್ಟಿ. ಇದೆಲ್ಲವು ಶಿವನೇ ಎಂಬ ಅಧಿಷ್ಠಾನ ದೃಷ್ಟಿ. ಹೇಗೆಂದರೆ ಮೃಗಜಲವು ಜಲವಾಗಿ ಕಾಣಿಸುತ್ತಿದ್ದರೂ ತಿಳಿದವರಿಗೆ ಅದು ಜಲವೆಂಬ ದೃಷ್ಟಿಯಿರುವದಿಲ್ಲ. ಇದನ್ನೆ ಬಾಧಿತಾನುವೃತ್ತಿ ಎನ್ನುತ್ತಾರೆ. ಎಲ್ಲಿಂದ ವಾಕ್ಕು ಮನಸ್ಸು ಹಿಂತಿರುಗುವವೋ, ಯಾವ ತತ್ತ್ವವನ್ನು ತತ್ತ್ವವಿದರು ಅರಿತಿದ್ದಾರೋ ಅದನ್ನೇ ಆತ್ಮ, ಬ್ರಹ್ಮ ಇತ್ಯಾದಿ ಮಾತುಗಳಿಂದ ದೊಡ್ಡವರು ಬೋಧಿಸುತ್ತಾರೆ.

ರಾಗದ್ವೇಷ ದೂಷಿತವಾದ ಚಿತ್ತವೇ ಸಂಸಾರ. ಚಿತ್ತವು ಯಾವಾಗ ದೋಷ ರಹಿತವಾಗುವದೋ ಆಗ ಸಂಸಾರವಿಲ್ಲ. ಅದು ದೇವರೇ ಆಗಿ ಕಾಣುತ್ತೆ. ಸರ್ವಾನರ್ಥ ದುಃಖ ನಿವೃತ್ತಿ ಶಾಶ್ವತಾನಂದ ರೂಪ ಮೋಕ್ಷವು, ದುರಾಚಾರ ದುಷ್ಪ್ರವರ್ತನ ಬಿಡದವನಿಗೂ, ಶಾಂತನು, ಸಮಾಧಾನನು ಆಗದವನಿಗೂ, ಮನಸ್ಸು ಉಪಶಮಿಸದೆ, ಕೇವಲ ಬುದ್ಧಿಬಲದಿಂದ ಆತ್ಮಾನುಭವ ಆಗದು. ಶಾಸ್ತ್ರಚಾರ್ಯೋಪದೇಶ ಸಂಜನಿತ ಸುಸಂಸ್ಕೃತ ಬುದ್ಧಿಯುಳ್ಳ ಶ್ರದ್ಧಾಳುವಿಗೆ ತತ್‌ಸ್ವರೂಪ ಕರತಲಾಮಲಕವೆಂದು ತಿಳಿಯುವುದು.

ಜಡಚೇತನವಾದ ಚರಾಚರ ಜಗತ್ತೆಲ್ಲವೂ ಜೀವೇಶ್ವರ ರೂಪದಿಂದ ಭಾಸವಾಗುತ್ತಿದೆ. ಜಡವು ಮಾಯಾಸ್ವರೂಪ; ಪರಿಚ್ಛಿನ್ನ ಜ್ಞಾನವು ಜೀವಸ್ವರೂಪ; ಅಪರಿಚ್ಛಿನ್ನ ಜ್ಞಾನವು ಈಶ್ವರ ಸ್ವರೂಪ.

ಈಕ್ಷಣಾದಿ ಪ್ರವೇಶಾಂತ್ಯವಾದ ಸೃಷ್ಟಿ ಎಲ್ಲವೂ ಈಶ್ವರ ಕಲ್ಪಿತ. ಜಾಗ್ರದವಸ್ಥೆ ಮೊದಲು ಮೋಕ್ಷಪರ್ಯಂತವಾದ ಸಂಸಾರವೆಲ್ಲವು ಜೀವಕಲ್ಪಿತ. ಮುಮುಕ್ಷು

ಗಳಾದವರು ಈ ಜೀವೇಶ್ವರ ಸಂಬಂಧವಾದ ವಿವಾದವನ್ನು ಬುದ್ಧಿಯಲ್ಲಿ ಇಟ್ಟುಕೊಳ್ಳ ಬಾರದು. ನಿರ್ಮಲವಾದ ಬುದ್ಧಿಯಿಂದ ಅದ್ವಿತೀಯವಾದ ಪರಮಾರ್ಥ ತತ್ತ್ವವನ್ನು ಚೆನ್ನಾಗಿ ವಿಚಾರಿಸಿ ತಿಳಿಯಬೇಕು. ಮತಗಳು, ಭಾವಗಳು ಹಲವಾರಿರುತ್ತವೆ. ಆದ್ದರಿಂದ ಸದಾಸರ್ವತ್ರ ಇರುವ ಆತ್ಮ ಅನ್ವಯ. ಅದಕ್ಕೆ ಭಿನ್ನವಾದ ನಾನತ್ವ (ಅನೇಕತ್ವ) ಅನ್ನುವದು ವ್ಯತಿರೇಕ. ಇದನ್ನು ತಿಳಿದು ಮಾತನಾಡುವವನೇ ಶಿವನು.

ಶ್ರೀಮದಾಚಾರ್ಯರ ಮಾತುಗಳಿಂದ ಶ್ರೀಗುರುಕೃಪೆ ಇಲ್ಲದವನಿಗೆ ವಿಷಯತ್ಯಾಗ ವಾಗದು. ತತ್ತ್ವಜ್ಞಾನ, ಸಮ್ಯಕ್‌ದೃಷ್ಟಿ, ಸಹಜಾವಸ್ಥೆ ಎನ್ನುವದು ದುರ್ಲಭ ! ಅರ್ಥಾತ್ ಈ ವಿರಕ್ತಿಯಾಗಲಿ, ಜ್ಞಾನವಾಗಲಿ, ತತ್ಫಲವಾದ ಸಹಜಸ್ಥಿತಿ, ನಿತ್ಯಶಾಂತಿ, ತೃಪ್ತಿ, ಮುಕ್ತಿ ಗುರುಕೃಪೆ ಇಲ್ಲದವನಿಗೆ ಲಭಿಸದು.

ಪರಾಪರ ಸ್ವರೂಪನಾದ ಪರಬ್ರಹ್ಮದ ಜ್ಞಾನವಾದಮೇಲೆ ಆತನ ಹೃದಯ ಗ್ರಂಥಿಗಳು (ಗಂಟುಗಳು) ಬಿಚ್ಚಿಹೋಗುವವು. ಸಂಶಯಗಳು ದೂರಾಗುವವು. ಸಂಚಿತಾಗಾಮಿ ಪ್ರಾರಬ್ಧ ಕರ್ಮಗಳು ನಶಿಸಿ ಹೋಗುವವು. ಅರ್ಥಾತ್ ಪರಬ್ರಹ್ಮವು ಕಾರಣೋಪಾಧಿಯಿಂದ ಪರವೆಂತಲು (ಶ್ರೇಷ್ಠ) ಕಾರ್ಯೋಪಾಧಿಯಿಂದ ಅಪರ ವೆಂತಲು (ನಿಕೃಷ್ಟ) ಒಂದೇ ವಸ್ತುವು ಹಾಗೆ ಹೇಳಲ್ಪಟ್ಟಿದೆ. ಹೀಗೆಂದು ಮುಂಡಕ ಶ್ರುತಿ ಹೇಳುತ್ತೆ.

ಶ್ರೀ ಸ್ವಾಮಿಗಳವರು ಆದವಾನಿಯಿಂದ ಗುತ್ತಿ, ಕರ್ನೂಲು, ದ್ರೋಣಾಚಲ, ಪತ್ತಿಕೊಂಡ ಮೊದಲಾದ ಸ್ಥಳದಲ್ಲಿ ಭಕ್ತರ ಭಾವನಾನುಸಾರ ಅಲ್ಲಲ್ಲಿ ವಾಕ್ಯಸುಧೆ, ವೇದಾಂತ ಡಿಂಡಿಮ, ಆತ್ಮ ಪುರಾಣಾದಿ ಪ್ರಕರಣ ಗ್ರಂಥಗಳನ್ನು ಮತ್ತು ಗೀತಾ ಪ್ರವಚನವನ್ನು ನಡೆಯಿಸಿ, ಆಯಾ ಜನರಿಗೆ ಆಚಾರ, ವಿಚಾರ ಸಂಪನ್ನವಾದ ಆಧ್ಯಾತ್ಮಿಕ ಸಂಸ್ಕಾರವನ್ನು ಕೊಟ್ಟರು.

ಶ್ರೀಕ್ಷೇತ್ರ ಶ್ರೀ ಶಂಕರ ಜಯಂತಿಯಲ್ಲಿ ಛಾಂದೋಗ್ಯೋಪನಿಷತ್ತು, ಶ್ರುತಿ ಸಾರ, ಎಂಬ ಗ್ರಂಥವನ್ನು ಬೋಧಿಸುತ್ತಾ ತಮ್ಮ ಪರಮ ಗುರುಗಳ ಪೂಜಾಕಾರ್ಯ ವನ್ನೂ ಆ ಮಹೋತ್ಸವವನ್ನೂ ಮಂಗಳಪ್ರದವಾಗಿ ನಡೆಸಿದರು. ಅನಂತರ ಪೂಜ್ಯ ಶ್ರೀಗಳವರ ಜಯಂತಿ ಕಾರ್ಯಕ್ರಮವು ಜಯಪ್ರದವಾಗಿ ನಡೆಯಿತು.

ಆಮೇಲೆ ಗುರು ದೈವ ಕಾರ್ಯಕ್ರಮಕ್ಕಾಗಿ ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮಕ್ಕೆ ದಯಮಾಡಿಸಿದರು. ಅನುದಿನ ಸೂತ ಸಂಹಿತೆಯ ವಿಷಯಗಳನ್ನು ಹೇಳುತ್ತಾ ಸಪ್ತಜ್ಞಾನ ಭೂಮಿಕೆಗಳ ವಿವರವನ್ನು ಕೆಲವು ದಿನಗಳು ಅಪೂರ್ವವಾಗಿ ಬೋಧಿಸಿದರು.

## ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮ

### ಕೈಲಾಸ ಶಿವ, ಶ್ರೀ ಚಂದ್ರಮೌಳೀಶ್ವರ ಪ್ರತಿಷ್ಠೆ

ಸ್ವಸ್ತಿ ಶ್ರೀ ಸಾಧಾರಣ ನಾಮ ಸಂ॥ ಜ್ಯೇಷ್ಠ ಶುದ್ಧ ಪಾಡ್ಯಮಿ ಶುಕ್ರವಾರ ಮೊದಲು ಪಂಚಮಿ ಸೋಮವಾರದವರೆಗೆ, ಐದು ದಿನಗಳು ನಂದ್ಯಾಲ ಪಟ್ಟಣ ಸಂಜೀವನಗರ್ ಶ್ರೀ ಉಮಾಮಹೇಶ್ವರ ಗುರುಪೀಠ–ಉಮಾಮಹೇಶ್ವರಾಶ್ರಮದಲ್ಲಿ, ಪೂಜ್ಯ ಶ್ರೀಗಳವರ ಅಧ್ಯಕ್ಷತೆಯಲ್ಲಿ ಕೈಲಾಸ ಶಿವ, ಶ್ರೀ ರತ್ನಗರ್ಭಗಣಪತಿ, ಶ್ರೀ ಚಂದ್ರಮೌಳೀಶ್ವರ ಮಹಾಲಿಂಗ, ಪಾರ್ವತಿ, ಶ್ರೀ ಚಕ್ರರಾಜ, ನಂದಿ, ದಕ್ಷಿಣಾ ಮೂರ್ತಿ, ನವಗ್ರಹ, ಧ್ವಜ, ಉಮಾಮಹೇಶ್ವರ ಗುರುಪೀಠ ಪರಂಪರಾ ಶಾಸನ ಸ್ತುತಿ ಫಲಕ, ಪ್ರತಿಷ್ಠಾ ಮಹೋತ್ಸವ ಕಾರ್ಯಕ್ರಮಗಳು ವೇದೋಕ್ತ ವಿಧಿಗಳಿಂದ ವಿದ್ಯಾನಿಧಿಗಳೂ ವೈದಿಕಾಚಾರ ಸಂಪನ್ನರೂ ಆದ ಸದ್ಬ್ರಾಹ್ಮಣೋತ್ತಮರಿಂದ, ಮೊದಲಿನ ಪ್ರತಿಷ್ಠಾ ಕಾರ್ಯಗಳಂತೆ ಶಾಸ್ತ್ರೀಯವಾಗಿ ಸಾಂಗೋಪಾಂಗವಾಗಿ ನಡೆದು ಪೂರ್ಣವಾದವು. ಈ ಮಹಾಕಾರ್ಯಕ್ಕೆ ಆಗಮಿಸಿದ್ದ ವಿದ್ವಚ್ಛಿರೋಮಣಿ, ವೇದ ವಿದ್ಯಾ ವಿನೀತ, ಭಾಷಾ ಪ್ರವೀಣ ಬ್ರಹ್ಮಶ್ರೀ M. ಬಾಲ ವಿಶ್ವನಾಥ ಶರ್ಮ ಪಂಡಿತರ ಆಚಾರ್ಯತ್ವದಲ್ಲಿ ವೈದಿಕ ಕಾರ್ಯಕ್ರಮಗಳು ನಡೆದವು. ಆಶ್ರಮ ಪ್ರಾಂಗಣ ದಲ್ಲಿ ಸುವಿಶಾಲವಾಗಿ ಸಭಾಮಂಟಪವು ನಿರ್ಮಿಸಲ್ಪಟ್ಟಿತ್ತು. ಅಸಂಖ್ಯಾತ ಭಕ್ತ ಜನ ಗಳು ಕೂಡಿದ್ದರು ಮತ್ತು ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ನಿರಂಜನಾ ನಂದಗಿರಿ ಸ್ವಾಮಿನಿ, ಶ್ರೀ ನಿತ್ಯಾನಂದ ಸ್ವಾಮಿಗಳು, ಶ್ರೀ ಸಿದ್ಧೇಶ್ವರಾನಂದ ಸ್ವಾಮಿ ಗಳು, ಶ್ರೀ ಶಿವಪ್ರಕಾಶ ಸ್ವಾಮಿಗಳು, ಬ್ರಹ್ಮಶ್ರೀ ರಾಮಚಂದ್ರಮೂರ್ತಿ, ಸಾಹಿತ್ಯ ಶಿರೋಮಣಿ ವೇದಾಂತ ಶಿರೋಮಣಿ, ಬ್ರಹ್ಮಶ್ರೀ V. ಚಿದಂಬರ ಶಾಸ್ತ್ರಿಗಳು ವ್ಯಾಕ ರಣ ಶಿರೋಮಣಿ, ಬ್ರಹ್ಮಶ್ರೀ ನಿವರ್ತಿ ವೆಂಕಟ ಸುಬ್ಬಯ್ಯ M.L.C. ಮೊದಲಾದ ವರು ಉಪನ್ಯಾಸ ಮಾಡಿದರು.

ಈ ಮಹಾಸಭೆ ಮಹಾತ್ಮರ ಉಪನ್ಯಾಸಗಳಿಂದಲೂ, ಕವಿ ಪಂಡಿತರ ಕವನ ಗಳಿಂದಲೂ, ಮಹನೀಯರ ಉಪನ್ಯಾಸಗಳಿಂದಲೂ, ಅಸಂಖ್ಯಾತ ಭಕ್ತ ಜನರಿಂದ ಕೂಡಿ, ಆ ಸನ್ನಿವೇಶವು ಕೈಲಾಸವಾಗಿತ್ತು. ಹರಿಕಥೆಗಳು ನಡೆದು ಸರ್ವ ಜನಾನಂದಪ್ರದವಾಗಿರಲು ಸರ್ವರೂ ಗುರುದೈವ ದರ್ಶನವನ್ನು ಹೊಂದಿದರು. ಶ್ರೀ ಉಮಾಮಹೇಶ್ವರರ ಉತ್ಸವವು ನಡೆದು ವಿಶೇಷವಾಗಿ ಅನ್ನ ಸಂತರ್ಪಣೆಗಳಾ ದವು. ಆ ಪಟ್ಟಣದ ಭಕ್ತರು (ನಂದ್ಯಾಲ) ಸುತ್ತಮುತ್ತಲಿನ ಎಲ್ಲಾ ಜನಗಳು ಅನನ್ಯ ಭಕ್ತಿ ಭಾವನೆಗಳಿಂದ ಸೇವೆಯನ್ನು ಮಾಡಿ ಉಮಾಮಹೇಶ್ವರರ ಕೃಪೆಗೆ ಪಾತ್ರರಾದರು.

"ಋಗ್ಯಜುಸ್ಸಾಮಗಳಲ್ಲಿ ಯಜುರ್ವೇದವು ಮಧ್ಯೆಯಿದೆ. ಅದರಲ್ಲಿ ಏಳು ಕಾಂಡಗಳು. ಅವುಗಳ ಮಧ್ಯ ನಾಲ್ಕನೇ ಕಾಂಡ. ಆ ನಾಲ್ಕನೇ ಕಾಂಡದ ಮಧ್ಯಗತ

ವಾಗಿ ಪಂಚಾಕ್ಷರ ಮಹಾಮಂತ್ರವಿದೆ. ಈ ಮಂತ್ರದಲ್ಲಿ "ಶಿವ" ಎಂಬೆರಡಕ್ಷರಗಳು ಅತಿ ಮುಖ್ಯವಾದುವು "ಶಿವ ಇತ್ಯಕ್ಷರ ದ್ವಯಂ". ಆದ್ದರಿಂದ ವೇದದ ಶಿರಸ್ಸು ಓಂಕಾರವು. ವೇದ ಮಧ್ಯದಲ್ಲಿರುವ ಶಿವಶಬ್ದವು ಪರಬ್ರಹ್ಮ (ಪರಮಾತ್ಮ)ನನ್ನು ತಿಳುಹುತ್ತೆ. ಏಕವು ಓಂಕಾರ ಪ್ರತಿಪಾದ್ಯವಾದ ಶ್ರೀ ಶಂಭು ಪರಮಾತ್ಮ. ಆತನೇ ಕೈಲಾಸ ಶಿವ ಶ್ರೀ ಉಮಾಮಹೇಶ್ವರನು, ನಾವು ಪೂಜಿಸುವ ದೇವರು. ಎಲ್ಲರ ಆತ್ಮನಾಗಿ ಬೆಳಗುವ ಶಿವನು.

"ಆಚಾರ್ಯ ಶಾಸ್ತ್ರಾದಿರೂಪೇಣ ಮೋಕ್ಷ ಸುಖಂ ಕರೋತಿ ಇತಿ ಮಯಸ್ಕರಃ" ಮಯಸ್ಸೆಂದರೆ ನಿತ್ಯ ಸುಖ. ಈ ನಿತ್ಯ ಸುಖವನ್ನು ಕೊಡುವುದರಿಂದ ಮಯೋಭುವು. 'ಯದ್ವೈ ಶಿವಂ ತನ್ಮಯಃ' ಹೀಗೆಂದಿದೆ ಯಜುರ್ವೇದ. "ಶಾಂತಂ ಶಿವಂ ಅದ್ವೈತಂ" ಎಂಬುದಾಗಿ ಆ ಪರಬ್ರಹ್ಮವನ್ನೇ ಬೋಧಿಸುತ್ತಿದೆ. "ಶಾಂತಂ ಪದ್ಮಾಸನಸ್ಥಂ" ಅಂದಹಾಗೆ ಶಾಂತಿಯೇ ಸ್ವರೂಪವಾಗಿ ಉಳ್ಳವನು. ನೇತ್ರೋನ್ಮೀಲನ ಮಾಡದೆ ಆ ಪರಶಿವನಲ್ಲಿ ಭಕ್ತಿಯನ್ನಿಟ್ಟು ಭಜಿಸಿದರೆ ಭಾರವು ದೂರವಾಗಿ ಹೋಗುವುದು. ಅಂಥಾ ದೇವರೇ ಈ ನಮ್ಮ ಆಶ್ರಮದಲ್ಲಿ ಪ್ರತಿಷ್ಠಿತನಾಗಿದ್ದಾನೆ.

ವೇದೋಪನಿಷತ್ತುಗಳಲ್ಲಿ ಹೇಳಲ್ಪಟ್ಟ ವಿಷಯಗಳೆಲ್ಲವೂ ಸ್ಮೃತಿಗಳಲ್ಲಿರುವದಿಲ್ಲ. ಅವು ಸ್ಮೃತಿ ಮಾತ್ರಗಳಷ್ಟೇ. ಮಹರ್ಷಿಗಳಲ್ಲಿ ಜ್ಞಾಪಕವಿದ್ದಷ್ಟು ಮಟ್ಟಿಗೆ ಅವರ ಸ್ಮೃತಿಯ ಮೇರೆಗೆ ರಚಿಸಲ್ಪಟ್ಟವು. ಶ್ರುತಿಯನ್ನನುಸರಿಸಿ ಸ್ಮೃತಿ ನಡೆಯುತ್ತೆ. ರಘುವಂಶ ಕಾವ್ಯದಲ್ಲಿ ಕಾಳಿದಾಸನು ಹೇಳುವಂತೆ ದಿಲೀಪ ಚಕ್ರವರ್ತಿ ನಂದಿನೀ ಧೇನುವನ್ನನುಸರಿಸಿ ಅಡವಿಗೆ ಹೋಗುತ್ತಿರಲುಆತನ ಸತೀಮಣಿ ಸುದಕ್ಷಿಣ ತನ್ನ ಪತಿಯನ್ನೇ ನೋಡುತ್ತಾ ಕೆಲವು ದೂರ ಹಿಂದೆ ಹೋಗಿ ಹಿಂದಿರುಗುವಂತೆ, ಶ್ರುತಿಯನ್ನನುಸರಿಸಿ ಸ್ಮೃತಿಗಳು ಹಿಂದಿರುಗುತ್ತವೆ. ಅಂದರೆ (ಶ್ರುತಿ) ಸಮ್ಮತವಾದ ಸ್ಮೃತಿಯು ಪ್ರಮಾಣವೆಂದು ಗ್ರಾಹ್ಯ.

ಶ್ರೀಗಳವರ ಪರಮ ಗುರುಗಳ ಆರಾಧನಾ ಕಾರ್ಯಕ್ರಮವು ಶಿವಪ್ರದವಾಗಿ ನಡೆಯಿತು. 1-7-70 ಶ್ರೀಗುರುದೇವರ ಜಯಂತ್ಯುತ್ಸವವು ನಂದ್ಯಾಲ ಶ್ರೀ ಉಮಾ ಮಹೇಶ್ವರಾಶ್ರಮದಲ್ಲೇ ಮಹಾ ವೈಭವದಿಂದ ನಡೆಯಿತು. ಎಲ್ಲಾ ಭಕ್ತ ಜನರು ಬಂದಿದ್ದರು. ಆಗ ಆ ಭಕ್ತಾದಿಗಳು ಶ್ರೀ ಸ್ವಾಮಿಗಳವರಲ್ಲಿ ಅರಿಕೆ ಮಾಡಿಕೊಂಡಿದ್ದು :-

"ಮಹಾತ್ಮಾ ! ಗುರುದೇವಾ ! ಇಷ್ಟರವರಿಗೂ 25 ವರ್ಷಗಳು ಶ್ರೀ ಚಾತುರ್ಮಾಸ್ಯ ಮಹಾವ್ರತಗಳು ನಾಲ್ಕು ತಿಂಗಳು ಒಂದೇ ಸ್ಥಾನದಲ್ಲಿರುತ್ತಾ ಸ್ವಾಮಿಗಳವರು ಸಾಂಗ ಮಂಗಳವಾಗಿ ನಡೆಯಿಸುವದಾಯಿತು. ಇನ್ನು ಮೇಲೆ ಹಾಗೆಯೇ ನಾಲ್ಕು ತಿಂಗಳು ಒಂದೆಡೆಯಲ್ಲಿಯೇ ಇರದೆ, ಭಕ್ತರಾದ ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಎರಡು ತಿಂಗಳಾಗಲಿ, ಒಂದು ತಿಂಗಳಾಗಲಿ ಅಥವಾ ಭಕ್ತರ ಪ್ರಾರ್ಥನಾನುಸಾರ 15 ದಿನಗಳಾಗಲಿ ಆಯಾ ಸ್ಥಾನಗಳಿಗೆ ದಯಮಾಡಿಸಿ, ಸನ್ನಿಧಿಯವರು

ಪೂಜಾನುಷ್ಠಾನಾದಿಗಳಿಂದ ಆಧ್ಯಾತ್ಮಿಕ ತತ್ತ್ವೋಪದೇಶಗಳನ್ನು ಎಲ್ಲರಿಗೂ ಹಂಚಿ ಕೊಡಲು ಅನುಕೂಲವಾಗುತ್ತೆಂದು ನಮ್ಮ ಪ್ರಾರ್ಥನೆ" ಎಂದು ಅರಿಕೆ ಮಾಡಿ ಕೊಂಡರು. ಆದಕ್ಕೆ ಶ್ರೀಗಳವರು, "ಆಗಲಿ ಈ ರೂಪವಾಗಿಯೂ ಅಲ್ಲಲ್ಲಿ ಕೆಲವು ದಿನಗಳು ಮಾಡುವದು ಶಾಸ್ತ್ರಸಮ್ಮತವೇ ಎಂದು ದೊಡ್ಡವರು ಹೇಳತ್ತಾರೆ. ಪ್ರಯುಕ್ತ ನಿಮ್ಮ ಸದಿಚ್ಛೆಯಂತೆ ನಡೆಯಲಿ ತಥಾಸ್ತು", ಎಂದು ಆಶ್ವಾಸನವನ್ನು ಕೊಟ್ಟರು.

## 26 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ನಂದ್ಯಾಲ 15-7-70

ಶ್ರೀ ಸಾಧಾರಣ ನಾಮ ಸಂ|| ಆಷಾಢ ಶುದ್ಧ ಏಕಾದಶಿ ಬುಧವಾರ ವಿಧ್ಯುಕ್ತ ವಾಗಿ ಪೂರ್ವದಲ್ಲಿ ತಿಳಿಸಿದ ಮಹಾವ್ರತ ಕಾರ್ಯಗಳಂತೆ ಯಥಾ ಶಾಸ್ತ್ರವಾಗಿ ವ್ರತವು ಪ್ರಾರಂಭವಾಯಿತು.

ಪ್ರಾತಃಕಾಲ ಮುಂಡಕೋಪನಿಷತ್ಪ್ರವಚನ, ಸಾಯಂ ಸಮಯ ಶ್ರೀಮದ್ಭಗ ವದ್ಗೀತಾ ಪ್ರವಚನ. ಈ ಸಮಯದಲ್ಲಿಯೇ ಆಶ್ರಮ ದೈವ ಪ್ರತಿಷ್ಠಾ ಮಂಡಲ ಮಹಾಪೂಜೆ ಆಷಾಢ ಶುದ್ಧ ಪೂರ್ಣಿಮ 18-7-70 ವಿಧ್ಯುಕ್ತವಾಗಿ ಸರ್ವೋಪ ಚಾರಗಳಿಂದ ನಡೆಯಿಸಲ್ಪಟ್ಟಿತು. 15-7-70 ಮೊದಲು 11-9-70 ವರಿಗೂ ಎರಡು ಮಾಸಗಳು ಸಮಸ್ತ ವೈದಿಕಾಚಾರ ಸಂಪನ್ನವಾಗಿ ಮತ್ತು ಪರ್ವ ದಿನಗಳಲ್ಲಿ ಇತೋಧಿಕವಾದ ವಿಶೇಷ ಕಾರ್ಯಕ್ರಮಗಳಿಂದ, ಅಧ್ಯಾತ್ಮ ತತ್ತ್ವ ಪ್ರಬೋಧರೂಪ ವಾದ ಬ್ರಹ್ಮಯಜ್ಞವು ಅತ್ಯುತ್ತಮ ರೀತಿಯಿಂದ ನಡೆದು ಪೂರ್ಣವಾಯಿತು.

ಆಮೇಲೆ ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ, ಇದೇ ಪ್ರಕಾರ ತ್ರಿಕಾಲ ಪೂಜಾನುಷ್ಠಾನಗಳಿಂದ ಪ್ರಸ್ಥಾನತ್ರಯ ಭಾಷ್ಯ ಪಾಠ ಪ್ರವಚನಗಳು ಮಿಕ್ಕ ಎರಡು ತಿಂಗಳು ಪ್ರಶಾಂತವಾಗಿ ನಡೆದು, 10-11-70 ರಂದು ಇಪ್ಪತ್ತಾರನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತವು ಪೂರ್ಣವಾಯಿತು. ಹಂಪಿ ಮಹಾಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು.

24-11-70 ರಲ್ಲಿ ತಮ್ಮ ಗುರುದೇವರ ಪುಣ್ಯಾರಾಧನ ಮಹೋತ್ಸವವು ಮೂರು ದಿನಗಳು ಆನಂದಪ್ರದವಾಗಿ ನಡೆಯಿತು.

ಅನಂತರ ಉಲಿಂದಕೊಂಡೆ (ಕರ್ನೂಲು ಜಿಲ್ಲಾ), ಕೊಡುಮೂರು ಮೊದಲಾದ ಸ್ಥಳಗಳಲ್ಲಿ, ಆಯಾ ಭಕ್ತ ಜನರ ಇಷ್ಟದಂತೆ ಅಧ್ಯಾತ್ಮ ರಾಮಾಯಣ ತತ್ತ್ವಾರ್ಥ ವನ್ನು ಬೋಧಿಸಿದರು.

ವೇದಾಧ್ಯಯನ, ಉಪನಿಷದರ್ಥ ಗ್ರಹಣ ಮುಂತಾದ ವೇದಾಂತ ಪ್ರಕ್ರಿಯ ಗಳನ್ನು ಗ್ರಹಿಸಲು ಶಕ್ತಿ ಇಲ್ಲದವರು ಭಕ್ತಿಯಿಂದ ಭಗವದ್ಗೀತೆ, ಭಾಗವತ,

ರಾಮಾಯಣ, ಶಿವಕಥೆ, ಮೊದಲಾದವುಗಳನ್ನು ಓದುವುದೂ, ಮಹಾತ್ಮರಿಂದ ಶ್ರವಣ ಮಾಡುವದೂ ಬಹಳ ಒಳ್ಳೆಯದು. ಶುಭದಾಯಕವಾದುದು" ಎಂದು ಅನೇಕ ನೈತಿಕ, ಧಾರ್ಮಿಕಾದಿ ವಿಷಯಗಳನ್ನು ಅಧ್ಯಾತ್ಮ ರಾಮಾಯಣ ದ್ವಾರಾ ತಿಳುಹಿದರು.

ಅನಂತರ ಕರ್ನೂಲು ಜಿಲ್ಲಾ ಹಾಲರ್ವಿ ಉಮಾಮಹೇಶ್ವರಾಶ್ರಮದಲ್ಲಿ ಕೈಲಾಸ ಶಿವ, ಶ್ರೀ ಚಂದ್ರಮೌಳೀಶ್ವರಾದಿ ದೇವತಾ ಪ್ರತಿಷ್ಠಾರ್ಥವಾಗಿ ಹಾಲರ್ವಿ ಆಶ್ರಮಕ್ಕೆ ಸ್ವಾಮಿಗಳು ದಯಮಾಡಿಸಿದರು.

ಉದಾರಮತಿಗಳಾದ ಭಕ್ತರು ಶ್ರೀಮಾನ್ ಹೆಚ್. ನಾರಾಯಣರೆಡ್ಡಿ ಪುಣ್ಯ ದಂಪತಿಗಳು, ಅವರ ಸೋದರರು-ಮಿನಿಷ್ಟರ್ ಶ್ರೀ ಸೀತಾರಾಮ ರೆಡ್ಡಿಯವರು, ಇನ್ನಿತರರಾದ ಭಾಗ್ಯಮ್ಮ, ಶ್ರೀ ಓಬಣ್ಣ ಮೊದಲಾದ ಹಾಲರ್ವಿ ಎಲ್ಲಾ ಭಕ್ತ ಮಂಡಲಿಯವರು ಮತ್ತು ಚಿಂತಕುಂಟಿ ಶ್ರೀ K. ಗಾದಿಲಿಂಗಪ್ಪ, ಶ್ರೀ R. ಕೃಷ್ಣಪ್ಪ, ಶಿರಗಾಪುರದ ಶ್ರೀ K. ಬಸವಣ್ಣ ಮೊದಲಾದ ಭಕ್ತಾದಿಗಳು ಈ ದೈವ ಪ್ರತಿಷ್ಠಾ ಕಾರ್ಯಗಳಲ್ಲಿ ಉತ್ತಮವಾದ ಸೇವೆಯನ್ನು ಮಾಡಿದರು. ಆಶ್ರಮವಾಸಿಗಳಾದ ಶ್ರೀ ಶಾಂತಾನಂದ ಸ್ವಾಮಿಗಳು ಪೂಜಾದಿ ಕಾರ್ಯಗಳ ಭಕ್ತಿಪೂರ್ವಕ ಸೇವೆ ಮಾಡುತ್ತ ಆಶ್ರಮದಲ್ಲಿದ್ದರು.

## ಶ್ರೀ ಉಮಾಮಹೇಶ್ವರಾಶ್ರಮ ಹಾಲರ್ವಿ

### ಕೈಲಾಸ ಶಿವಾದಿ ದೈವ ಪ್ರತಿಷ್ಠಾ

ಸ್ವಸ್ತಿ ಶ್ರೀ ಸಾಧಾರಣ ನಾಮ ಸಂ॥ ಮಾಘ ಶುದ್ಧ ಷಷ್ಠಿ 1-2-71 ಮೊದಲು 5-2-71 ದಶಮಿವರಿಗೂ ಹಾಲರ್ವಿ ಶ್ರೀ ಉಮಾಮಹೇಶ್ವರಾಶ್ರಮ ದೈವ ಪ್ರತಿಷ್ಠಾ ಮಹೋತ್ಸವವು ಪೂರ್ವ ಪ್ರತಿಷ್ಠೆಗಳಂತೆ ಋತ್ವಿಗ್ವರಣ, ಆಚಾರ್ಯತ್ವಪೂರ್ವಕ ಸಮಸ್ತ ವೇದೋಕ್ತ ವಿಧಾನಗಳಿಂದ ಶ್ರೀ ಕೈಲಾಸ ಶಿವ, ಶ್ರೀ ಚಂದ್ರಮೌಳೀಶ್ವರ, ಶ್ರೀ ಗಣಪತಿ, ಪಾರ್ವತಿ, ಶ್ರೀ ಚಕ್ರರಾಜ, ನಂದೀಶ್ವರ, ಧ್ವಜ, ನವಗ್ರಹ, ಗುರುಪೀಠ ಪರಂಪರಾ ಶಾಸನ ಸ್ತುತಿಯ ಶಿಲಾಫಲಕ ಪ್ರತಿಷ್ಠಾದಿ ಕಾರ್ಯಗಳು ಶ್ರೀ ಗುರುದೇವರ ನೇತೃತ್ವದಲ್ಲಿ ವೇದೋಕ್ತವಾಗಿ ಭೂಸುರರಿಂದ ನಡೆಯಿತು. ಅಸಂಖ್ಯಾತ ಭಕ್ತರು ಸೇರಿದ್ದರು. ಮಹಾತ್ಮರು, ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಸುರಪುರ ಶ್ರೀ ಶಂಕರಾನಂದ ಸ್ವಾಮಿಗಳು ಇನ್ನಿತರ ಮಹನೀಯರು ದಯಮಾಡಿಸಿದ್ದರು. ಪೂರ್ಣಕುಂಭದಿಂದ ಸ್ವಾಗತವಾಯಿತು. ಉತ್ತಮವಾದ ಆ ಸಭಾ ಮಂಟಪದಲ್ಲಿ ಸ್ವಾಮಿಗಳ ಅಮೋಘವಾದ ಉಪನ್ಯಾಸಗಳು ನಡೆದವು. ಸರ್ವ ವೈದಿಕ ವಿಧಿ ವಿಧಾನಗಳಿಂದಲೂ ಕಾರ್ಯಕ್ರಮವು ಸಾಂಗಮಂಗಳವಾಗಿ ನಡೆಯಿತು. ವಿಶೇಷವಾದ ಅನ್ನಸಂತರ್ಪಣೆಗಳಾದವು. ಉಮಾಮಹೇಶ್ವರರ ಉತ್ಸವವು ವಿಜೃಂಭಣೆಯಿಂದ ನಡೆಯಿತು. ಮಹಾತ್ಮರ ಪೂಜೆ, ಮಹಾಮಂಗಳವಾಯಿತು.

"ಮಹಾ ಮೇಧಾವಿ ಅಪ್ಪಯ್ಯ ದೀಕ್ಷಿತರು "ಶಂಭೋ ಸುಸ್ವಾಗತಮ್" ಎಂದು ಹೀಗೆ ಕರೆದಿದ್ದಾರೆ.

"ಹಿಮಗಿರಿ ತನಯಾ, ಹಿಮಾಂಶು ಲೇಖಾ, ಸರಿದತಿ ಶೀತಲ ಸುರಾಣಾಂ, ತ್ರಿಭಿರೇ ತೈರಪಿ ವೇಪಿತೋಸಿ ಶಂಭೋ ಮಮಹೃದಿ ವಿವಿಶ ತ್ರಿತಾಪಯುಕ್ತೇ"

"ಶಂಭೋ ನಿನಗೆ ಸ್ವಾಗತ ಸುಸ್ವಾಗತ ! ಶಂಭೋ ನಿನಗೆ ಎಲ್ಲವು ತಂಡಿಯೇ ತಂಡಿ ! ಚಂದ್ರಕಳೆ ತಂಡಿ, ಗಂಗೆ ತಂಡಿ. ಹಿಮಗಿರಿ, ಹಿಮಗಿರಿ ನಂದಿನಿ ತಂಡಿ. ಈ ಚಳಿಯಿಂದ ನೀನು ಬಾಧೆ ಪಡುವುದೇಕೆ ? ನನ್ನ ಹೃದಯದಲ್ಲಿ ಬಂದು ಕುಳಿತುಕೊ. ನನ್ನಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬುವ ಮೂರು ಅಗ್ನಿಗಳಿವೆ. ಆದ್ದರಿಂದ ನಿನಗೆ ಬೆಚ್ಚಗಾಗುವದು, ನನಗೆ ತಣ್ಣಗಾಗುವದು. ಹೀಗೆಂಬುವದಾಗಿ ಸ್ವಾಗತವನ್ನು ಹೇಳಿದ್ದಾರೆ. ಅಂದರೆ ಅರ್ಥವೇನು ? ಸದಾ ನಮ್ಮಲ್ಲಿ ಶಿವಸ್ಮರಣೆ, ಶಿವನು ಇದ್ದರೆ ತಾಪತ್ರಯವೆಂಬ ಅಗ್ನಿ ಇರುವುದಿಲ್ಲವೆಂದು ಭಾವ. ಪ್ರಯುಕ್ತ ಎಲ್ಲರೂ ಶಿವಸ್ಮರಣ ಸಂಪನ್ನರಾಗಿ ನಿತ್ಯ ಶಾಂತಿಯನ್ನು ಪಡೆಯಬೇಕೆಂದರ್ಥ. ಈ ನಿಮ್ಮ ಆಶ್ರಮದಲ್ಲಿ ಅಂಥ ಪರಮ ಶಿವನು ಪ್ರತಿಷ್ಠಿತನಾಗಿ ಬೆಳಗುತ್ತಿದ್ದಾನೆ. ಶಿವಂ ಶಾಂತಂ."

"ಅಪ್ಪಾ ಭಕ್ತರೇ ! ತಂಗಲು ಬಟ್ಟೆಯನ್ನು ಭುಜದ ಮೇಲೆ ಹಾಕಿಕೊಂಡಾಗಲಿ; ಮೈಮೇಲೆ ಧರಿಸಿಕೊಂಡಾಗಲಿ, ಶ್ರೀ ಉಮಾಮಹೇಶ್ವರನನ್ನು ಅಂದರೆ ಕೈಲಾಸ ಶಿವ, ಚಂದ್ರಮೌಳೀಶ್ವರನ, ಸದ್ಗುರುವಿನ ಪೂಜಾದ್ಯನುಷ್ಠಾನಗಳನ್ನು ಮಾಡಬಾರದು.

ನಿಮ್ಮ ಪೂಜಾನುಷ್ಠಾನ ಸಮಯದಲ್ಲಿ ಕೋಪಿಸಿಕೊಳ್ಳುವದಾಗಲಿ ಅಥವಾ ಮಾತನಾಡುವದಾಗಲಿ ಇರಬಾರದು. ಮೌನವಾಗಿ ಪ್ರಶಾಂತ ಶಿವಮಯ ಭಾವನೆಯಿಂದ ಮಾಡಬೇಕು. ಧೂಪ, ದೀಪ, ಗಂಗಾಜಲಪಾತ್ರೆ ಮುಂತಾದ ಯಾವ ವಸ್ತುಗಳನ್ನಾಗಲಿ ಲಿಂಗಪೀಠದ ಮೇಲೆ ಇಡಬಾರದು. ಪಾರ್ವತೀ ಪರಮೇಶ್ವರರು ಅಂದರೆ ಉಮಾಮಹೇಶ್ವರರು ತಾಯಿ, ತಂದೆ, ಗುರು, ದೈವಸ್ವರೂಪವೆಂದು ಭಾವಿಸಿ ಪೂಜಿಸಬೇಕು.

ವಿಭೂತಿ ಎಂದರೆ ಅದೊಂದು ಅಪೂರ್ವವಾದ ಐಶ್ವರ್ಯ. ಪಂಚ ಮಲಗಳು ಸುಟ್ಟ ಮೇಲೆ ಶೇಷವಾಗುಳಿಯುವುದು ಭಸ್ಮ. ಶೇಷ ವಸ್ತುವು ಪರಮಾತ್ಮನೇ. ತತ್ಪ್ರತೀಕವೇ ಇದೆಂದರಿಯಬೇಕು. ಸರ್ವ ಕಲ್ಮಷಗಳನ್ನು ದೂರ ಮಾಡುವದು. ಸಂಪತ್ಸ್ವರೂಪವಾದುದು. ರಾಕ್ಷಸರಿಂದ ದೂರಮಾಡಿ ರಕ್ಷಿಸುವದು. ಭಸ್ಮಸ್ನಾನ ತದಂಗನ್ಯಾಸ ಕರನ್ಯಾಸಗಳು ಮಾಡುತ್ತಾರೆ. ಆಯಾ ಸ್ಥಾನಗಳಲ್ಲಿ ತತ್ ನಾಮಸ್ಮರಣ ಪೂರ್ವಕವಾಗಿ ಭಸ್ಮವನ್ನು ತ್ರಿಪುಂಡ್ರ ರೇಖಾವಳಿಯಾಗಿ ಧರಿಸಬೇಕು.

ಅಗ್ನಿ, ಜಲ, ವೇದಗಳು, ಸೂರ್ಯ, ಚಂದ್ರರು, ಕಾಶ್ಯಾದಿ ಪುಣ್ಯಕ್ಷೇತ್ರ ತೀರ್ಥಗಳು ಪವಿತ್ರವಾದ ಆ ಪೂಜಾನುಷ್ಠಾನ ಫಲ,ದಕ್ಷಿಣ ಕರ್ಣದಲ್ಲಿ ಇರುತ್ತೆ.ಕಾರಣಾಂತರ

ದಿಂದ ಮೌನಭಂಗವಾದರೆ, ಆಚಮನವನ್ನು ಮಾಡಿ ದಕ್ಷಿಣ ಕರ್ಣವನ್ನು ಸ್ಪರ್ಶಿಸ ಬೇಕು. ಆದ್ಯಂತ್ಯಗಳಲ್ಲಿ ಮುಖ್ಯವಾಗಿ ಘಂಟಾನಾದವನ್ನು ಮಾಡಬೇಕು. "ತಚ್ಛಂ ಯೋರಾ ವೃಣೀಮಹೇ" ಎಂಬ ಶಾಂತಿಯನ್ನು ಹೇಳಬೇಕು.

ಭಕ್ತರು ಶ್ರೀ ಚಂದ್ರಮೌಳೀಶ್ವರನಿಗೆ, ಶ್ರೀ ಉಮಾಮಹೇಶ್ವರರಿಗೆ ಪ್ರದಕ್ಷಿಣ ವನ್ನು ಮಾಡುವಾಗ ದಕ್ಷಿಣಾವೃತ್ತದಿಂದ ನೆಮ್ಮದಿಯಾಗಿ ಮಾಡಬೇಕು. ಅಭಿಷೇಕ ಪೂಜಾದಿಗಳನ್ನು ಆರಂಭಿಸುವಾಗ ಗುರು ದೈವ ಸನ್ನಿಧಿ "............ ಭಕ್ತಿ ಜ್ಞಾನ ವೈರಾಗ್ಯಪೂರ್ವಕ ಬ್ರಹ್ಮಾತ್ಮೈಕ್ಯರೂಪ ಅಭೇದ ಜ್ಞಾನ ಸಿದ್ಧ್ಯರ್ಥಂ, ನಿತ್ಯನಿರ್ವಿ ಕಾರಾಸಂಗಾದ್ವಿತೀಯ ಸಚ್ಚಿದಾನಂದ ಚಿದೇಕರಸ ಬ್ರಹ್ಮಾನುಭವ ಸಿದ್ಧ್ಯರ್ಥಂ, ಪ್ರಜ್ಞಾನಂ ಬ್ರಹ್ಮ-ಅಹಂಬ್ರಹ್ಮಾಸ್ಮಿ-ತತ್ತ್ವಮಸಿ-ಅಯಮಾತ್ಮ ಬ್ರಹ್ಮೇತಿ ವಾಕ್ಯಾರ್ಥ ಜ್ಞಾನ ಸಿದ್ಧ್ಯರ್ಥಂ, ಶ್ರೀಮದುಮಾಮಹೇಶ್ವರ ಚಂದ್ರಮೌಳೀಶ್ವರ ಪ್ರಸಾದ ಸಿದ್ಧ್ಯರ್ಥಂ............" ಇತ್ಯಾದಿ ಪವಿತ್ರ ಭಾವದಿಂದ ಸಂಕಲ್ಪ ಮಾಡಿ ಪೂಜಾನುಷ್ಠಾನಗಳನ್ನು ಮಾಡತಕ್ಕದ್ದು.

ಸರ್ವವ್ಯಾಪಿಯಾದ ಈಶ್ವರನು ಏಕ, ಒಬ್ಬನೆ. ಆತನೇ ಸಗುಣ, ನಿರ್ಗುಣ ರೂಪನಾಗಿ ಅದ್ವಿತೀಯನಾಗಿದ್ದಾನೆಂದು ಯಾರು ತಿಳಿಯುವರೋ ಅವರು ಧನ್ಯರು. "ಏಕೋ ದೇವಸ್ಸರ್ವ ಭೂತೇಷು ಗೂಢಃ"

ನರ್ಮದಾ ಬಾಣಲಿಂಗದಲ್ಲಿಯೂ, ಸಾಲಿಗ್ರಾಮದಲ್ಲಿಯೂ, ಪ್ರತಿಷ್ಠಿತವಾದ ಶಿವಲಿಂಗದಲ್ಲಿಯೂ, ಆವಾಹನ ವಿಸರ್ಜನಗಳನ್ನು ಮಾಡಬೇಕಾದುದಿಲ್ಲ. ಅವು ಸ್ಥಿರ ಗಳು, ಸ್ವಯಂಭು ಎಂದು ತಿಳಿಯಬೇಕು. ಸಪ್ತಕೋಟಿ ಮಹಾಮಂತ್ರಗಳೆಲ್ಲವೂ ಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ಉದ್ಭವಿಸಿದವೆಂದು ಸೂತಸಂಹಿತೆ ತಿಳುಹುತ್ತೆ.

ರುದ್ರಾಕ್ಷಿ ಮೂಲಂ ತದ್ಬ್ರಹ್ಮ ತನ್ನಾಳಂ ವಿಷ್ಣುರುಚ್ಯತೇ ।<br>
ತನ್ಮುಖಂ ರುದ್ರ ಇತ್ಯಾಹುಃ ತದ್ಬಿಂದು ಸರ್ವ ದೇವತಾಃ॥"

ರುದ್ರಾಕ್ಷಿ ಮೂಲ ಬ್ರಹ್ಮವು; ರುದ್ರಾಕ್ಷಿ ರಂಧ್ರ ವಿಷ್ಣುವು; ರುದ್ರಾಕ್ಷಿ ಮುಖವೇ ರುದ್ರನು; ರುದ್ರಾಕ್ಷಿಯಲ್ಲಿರುವ ಬಿಂದುಗಳೆ (ಚುಕ್ಕೆಗಳೆ, ಸಮಸ್ತ ದೇವತಾ ಸ್ವರೂಪ ವೆಂದು ಹೇಳುತ್ತಾರೆ.

ವಿಷ್ಣುವನ್ನು ಅಕ್ಷತೆಗಳಿಂದಲೂ, ವಿಘ್ನೇಶ್ವರನನ್ನು ತುಳಸಿಯಿಂದಲೂ ಪೂಜಿಸ ಬಾರದು. ಬಿಲ್ವದಳಗಳು ಸರ್ವದಾ ಪೂಜಾರ್ಹಗಳು. ಒಂದು ಸಲ ಪೂಜಿಸಲ್ಪಟ್ಟದ್ದು ಮತ್ತೂ ಬಳಸಿಕೊಳ್ಳಬಹುದು. ಪರಮೇಶ್ವರನಿಗೆ ನೈವೇದ್ಯವು ಸದ್ಯೋಜಾತಾದಿ ಮುಖಗಳಿಂದ ಅರ್ಪಣೆ ಮಾಡಬೇಕು. ಪ್ರಾಣಾಯಸ್ವಾಹಾ ಎಂದು ಪ್ರಾಣಾದಿಗಳಲ್ಲಿ ಅಲ್ಲ.

ಗರ್ಭಾಲಯದಲ್ಲಿ ಶಿವನಿಗೆ ಪ್ರದಕ್ಷಿಣೆ ಮಾಡಬಾರದು. ಅಲ್ಲಿ ತುರೀಯ ಸ್ಥಿತಿಯೇ ನಮಸ್ಕಾರವೆಂದು ಭಾವ. "ತುರೀಯಾವಸ್ಥಾ ನಮಸ್ಕಾರಃ". ಶಿವಾಭಿಷೇಕಾನಂತರ ಭಕ್ತಿಯಿಂದ ತೀರ್ಥ ಪ್ರಸಾದಗಳನ್ನು ತೆಗೆದುಕೊಳ್ಳಬೇಕು. ಶಿವ ನಿರ್ಮಾಲ್ಯವೆಂದರೆ ನಿರ್ಮಲತ್ವವನ್ನು ಪ್ರಸಾದಿಸುವದೆಂದು ಭಾವ. ಸ್ವಯಂಪ್ರಕಾಶಮಾನವಾದ ಲಿಂಗ ದಲ್ಲಿಯೂ, ಬಾಣಲಿಂಗದಲ್ಲಿಯೂ, ಸ್ವಯಂಭೂ ಲಿಂಗದಲ್ಲಿಯೂ, ಜ್ಞಾನಸಿದ್ಧರಿಂದ ಪ್ರತಿಷ್ಠಿತವಾದ ಶಿವಲಿಂಗದಲ್ಲಿಯೂ ಚಂಡಾಧಿಕಾರವಿಲ್ಲ. ಅಂದರೇ ಚಂಡೀಶ್ವರನಿಗೆ ಸಮರ್ಪಿಸಬೇಕಾಗಿಲ್ಲ. ಬಾಣಲಿಂಗವೆಂದರೆ ಸ್ವಯಂಭೂ ಲಿಂಗವೆಂದೇ ಅರ್ಥ. ಶೈಲ ಲಿಂಗದಲ್ಲಿ ಸಮರ್ಪಿಸಿದ ಪತ್ರ, ಪುಷ್ಪ, ಫಲಾದಿಗಳು ಮಾತ್ರ ಚಂಡೀಶ್ವರನಿಗೆ ಸಮರ್ಪಿಸಬೇಕು."

ಅನಂತರ ಶ್ರೀಗಳವರು ಅಲ್ಲಿಯೇ ಇರುತ್ತಾ ದೇವತಾ ಪ್ರತಿಷ್ಠಾ ಮಹೋತ್ಸವ, ಮಂಡಲಪೂಜಾದಿ ಕಾರ್ಯಗಳನ್ನು 17-3-71 ರಂದು ವಿಧ್ಯುಕ್ತವಾಗಿ ನಡೆಯಿಸಿದರು. ಲಕ್ಷ ಬಿಲ್ವಾರ್ಚನ, ಅನ್ನ ಸಂತರ್ಪಣಾದಿ ಕಾರ್ಯಗಳಿಂದ ಪೂರ್ಣವಾಯಿತು.

ಆಮೇಲೆ ಶ್ರೀ ಸ್ವಾಮಿಗಳವರು ಪ್ರೊದ್ದುಟೂರು ಶ್ರೀ ಗೀತಾಶ್ರಮಕ್ಕೆ ದಯ ಮಾಡಿಸಿದರು. ಪ್ರವಚನಾದಿ ಕಾರ್ಯಗಳು ನಡೆದವು. ಅನಂತರ ಅನಂತಪುರ ಶ್ರೀ ಪಾರ್ವತೀ ನಿಲಯದಲ್ಲಿ ಭಕ್ತರ ಇಚ್ಛಾನುಸಾರ ಸಾಂಖ್ಯ, ಪಾತಂಜಲಿ ಸೂತ್ರಗಳನ್ನು ವಿವರಿಸಿದರು. ಪ್ರತ್ಯೇಕವಾಗಿ ಪಾಠಗಳನ್ನು ಹೇಳಿದರು.

ನಂದ್ಯಾಲ ಆಶ್ರಮದಲ್ಲಿ ದಕ್ಷಿಣಾಮೂರ್ತಿ ಸ್ತೋತ್ರ ವ್ಯಾಖ್ಯೆಯನ್ನು ಶ್ರವಣ ಮಾಡಿಸಿದರು. "ದಕ್ಷಿಣಾಮೂರ್ತಿ ಎಂದರೆ ತಿಳಿಯಲು ಅಶಕ್ಯವಾದ ಪರಬ್ರಹ್ಮ ತತ್ತ್ವವನ್ನು ಸಮರ್ಥತೆಯಿಂದ ಬೋಧಿಸಿದ, ತಿಳಿಯ ಹೇಳಿದ ಪರಶಿವನು; ಉಮಾ ಮಹೇಶನು. ಜೀವನು ಬೇರೆ, ದೇವರು ಬೇರೆ ಎನ್ನುವ ಭೇದಬುದ್ಧಿಯನ್ನು ನಿವಾರಿ ಸಲು ಚಿನ್ಮುದ್ರೆಯನ್ನು ಧರಿಸಿ, ಪೂರ್ಣವಸ್ತು ಸ್ವರೂಪನು ನೀನೆಂದು ಅಂಗುಷ್ಠ ಮಾತ್ರ ಪರಿಮಾಣ ಉಳ್ಳ ಆತ್ಮನೇ ವ್ಯಾಪಕವಾದ ಪರಬ್ರಹ್ಮನೆಂಬ ಅನುಭವವನ್ನು ಪ್ರಸಾದಿಸಿದ ಶಿವನೇ ಶ್ರೀ ದಕ್ಷಿಣಾಮೂರ್ತಿ. ಯಾವ ಕುಂದು ಕೊರತೆಯು ಇಲ್ಲದ ವಸ್ತುವೇ ಎಲ್ಲರ ಕುಂದು ಕೊರತೆಗಳನ್ನು ತೀರಿಸಬಲ್ಲದ್ದು. ವಟವೃಕ್ಷ ಛಾಯೆಯಲ್ಲಿ ದಕ್ಷಿಣಾಭಿಮುಖವಾಗಿ ಕುಳಿತಿರುವ ಶ್ರೀ ದಕ್ಷಿಣಾಮೂರ್ತಿಯು ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ಋಷಿಗಳಿಗೆ ಸ್ವರೂಪ ವಿಷಯಕವಾದ ಸಂದೇಹ ವನ್ನು ನಿವಾರಿಸಿದವನು. ಬೋಧ್ಯವಾಗದ ಆಶ್ಚರ್ಯಕರವಾದ (ತಮ್ಮ ಸ್ವರೂಪ ಭೂತವೇ ಆಗಿದ್ದ)ಪರಬ್ರಹ್ಮ ತತ್ತ್ವವನ್ನು ಮೌನಮುದ್ರೆಯಿಂದ ತಿಳುಹಿ ಧನ್ಯರನ್ನಾಗಿ ಮಾಡಿದ ಆ ಶ್ರೀ ದಕ್ಷಿಣಾಮೂರ್ತಿಯೇ, ಈ ನಮ್ಮ ಆಶ್ರಮದ ಮೇಲ್ಭಾಗದಲ್ಲಿ ವೇದಮಂತ್ರಗಳಿಂದ ಪ್ರತಿಷ್ಠಿಸಲ್ಪಟ್ಟು ದಕ್ಷಿಣಾಭಿಮುಖವಾಗಿರುವ ದೇವರು. ಆಶ್ರಮಕ್ಕೆ ಬಂದ ಕೂಡಲೇ ಮೇಲೆ ಕಾಣಿಸುವ ಸ್ವಾಮಿ.

ಆತ್ಮಲಾಭಕ್ಕಿಂತಲು ಅಧಿಕವಾದ ಲಾಭವು ಮತ್ತೊಂದಿಲ್ಲವೆಂದು ಮುನಿಗಳು ತಿಳಿಸಿದರು. ಆತ್ಮಲಾಭಾರ್ಥವಾಗಿ ತನ್ನ ಆತ್ಮ ಸ್ವರೂಪವಾದ ಪರಮೇಶ್ವರನನ್ನು ಪೂಜಿಸುತ್ತಾನೆ. ಯಾವನು ತನ್ನ ಇಚ್ಛೆಯಿಂದ ಸೃಷ್ಟಿಯನ್ನು ರಚಿಸಿ "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬುದಾಗಿ ಇದರಲ್ಲಿ-ಮನಸ್ಸಿನಲ್ಲಿ (ಸೃಷ್ಟಿಯಲ್ಲಿ) ಪ್ರವೇಶಿಸಿದ್ದಾನೋ ಅಂಥಾ ಪರಬ್ರಹ್ಮ ತತ್ತ್ವವೇ ಈ ಸ್ತೋತ್ರದಲ್ಲಿ ನುತಿಸಲ್ಪಡುತ್ತದೆ; ಪ್ರತಿಪಾದಿತವಾಗಿದೆ. "ವಿಶ್ವಂ ದರ್ಪಣ ದೃಶ್ಯಮಾನ ನಗರೀ ತುಲ್ಯಂ........" ಇತ್ಯಾದಿಯಾಗಿ ಈ ಸ್ತೋತ್ರಾರ್ಥವನ್ನು ಮಾನಸೋಲ್ಲಾಸಿನಿ ಎಂಬ ವ್ಯಾಖ್ಯೆಯಿಂದ ವಿವರಿಸಿದರು.

ಈ ವರ್ಷ ಪೂಜ್ಯ ಶ್ರೀ ಗುರುದೇವರು ಸಂಪೂರ್ಣವಾದ ಉತ್ತರ ಯಾತ್ರೆಗೆ ದಯಮಾಡಿಸಬೇಕೆಂದು ಭಕ್ತಾದಿಗಳು ಎಲ್ಲರೂ ಭಕ್ತಿಯಿಂದ ಒತ್ತಾಯಪಡಿಸಿ ಶ್ರೀ ಸನ್ನಿಧಿಯಲ್ಲಿ ಬಿನ್ನವಿಸಿಕೊಂಡರು.ಅನಿವಾರ್ಯವಾದ ಅವರ ಭಕ್ತಿ ಭಾವನಾನುಸಾರ ಕೇದಾರ್, ಬದರಿ, ನೇಪಾಲ್, ಪಶುಪತಿನಾಥ, ಶ್ರೀಕಾಶೀ ವಿಶ್ವನಾಥ ಮೊದಲಾದ ಈ ಉತ್ತರ ಯಾತ್ರೆಗೆ ಶಿವಸಂಕಲ್ಪವನ್ನು ಮಾಡಿ ಶ್ರೀಗಳವರು ದಯಮಾಡಿಸಿದರು.

ಒಂದನೂರಾ ಹತ್ತು ಮಂದಿ ಭಕ್ತರು ಬ್ರಹ್ಮಶ್ರೀ R. ರಂಗಸ್ವಾಮಿ ಅಯ್ಯಂಗಾರವರ ಜಯಾ ಟ್ರಾವೆಲ್ ಸರ್ವೀಸು ಗಾಡಿಯಲ್ಲಿ ತಾ॥. 23-4-71 ಶುಕ್ರವಾರ ಪ್ರವಾಸವನ್ನು ಕೈಗೊಂಡರು. ಮೊದಲನೆಯ ತರಗತಿಯ ಪೆಟ್ಟಿಗೆಯಲ್ಲಿ ಶ್ರೀಗಳವರ ಪೂಜಾನುಷ್ಠಾನಾದಿಗಳಿಗೆ ಎಲ್ಲಾ ಅನುಕೂಲವಾಗುವಂತೆ ವಸತಿಯನ್ನು ಮಾಡಿದರು.

ಈ ಯಾತ್ರಿಕರೆಲ್ಲರೂ ಅಧ್ಯಾತ್ಮ ವಿಷಯಕ ಸಂಸ್ಕಾರ ಭಯ ಭಕ್ತಿ ಉಳ್ಳವರಾದ್ದರಿಂದ ಶ್ರೀಗಳವರಿಗೆ ಆಶ್ರಮದಲ್ಲಿಯೇ ಇದ್ದಂತೆ ಅನುಕೂಲವಾಗಿತ್ತು. 75 ದಿನಗಳು ಆಯಾ ಕ್ಷೇತ್ರಗಳನ್ನು ಸಂದರ್ಶಿಸಿ ಆನಂದವಾಗಿ 7-7-71 ಕ್ಕೆ ಗಾಡಿ ಪುನಃ ಗುಂತಕಲ್ ಸ್ಟೇಷನ್ನಿಗೆ ಸುಖವಾಗಿ ಬಂದು ಸೇರಿತು. ಗುಂತಕಲ್ ಸ್ಟೇಷನ್‌ನಲ್ಲಿ ಭಕ್ತರ ಸಮಕ್ಷಮದಲ್ಲಿ ಬ್ರಹ್ಮಶ್ರೀ ಅಯ್ಯಂಗಾರ್ ಅವರಿಗೆ "ಸರ್ವ ಸಮರ್ಥ" ಎಂಬ ಬಿರುದನ್ನೂ, ಫಲ ಮಂತ್ರಾ ಕ್ಷತೆಗಳನ್ನೂ ಶ್ರೀಗಳವರು ಪ್ರಸಾದಿಸಿದರು.

ಗುಂತಕಲ್ಲು ಶ್ರೀ ಉಮಾಮಹೇಶ್ವರ ಆಶ್ರಮದಲ್ಲಿ ಪ್ರತಿಷ್ಠಿತವಾಗುವ ಶ್ರೀ ಗೀತಾಮೂರ್ತಿ,ಶ್ರೀ ಚಂದ್ರಮೌಳೀಶ್ವರ ಮಹಾಲಿಂಗ ಇವುಗಳ ಪಟ್ಟಣೋತ್ಸವವನ್ನು ಆನಂದಪ್ರದವಾಗಿ ನಡೆಸಿದರು.

## 27 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಶ್ರೀ ಉಮಾಮಹೇಶ್ವರಾಶ್ರಮ ಗುಂತಕಲ್ಲು 7-7-71

ಶ್ರೀ ವಿರೋಧಿಕೃತ ಸಂ॥ ಆಷಾಢ ಶುದ್ಧ ಪೌರ್ಣಮಿ ಗುರುವಾರ ಯಥಾವಿಧಿ ಪೂರ್ವದಂತೆ ಮಹಾವ್ರತ ಪ್ರಾರಂಭವಾಯಿತು. ಅನಂತಪುರ, ಆದೋನಿ ಮೊದಲಾದ

ಪಟ್ಟಣಗಳಲ್ಲಿ ಕಾರ್ಯಕ್ರಮ ನಡೆದು 7-7-71 ಮೊದಲು 2-11-71 ರ ವರೆಗೂ ಮಹಾಕಾರ್ಯವು ಶಿವಪ್ರದವಾಗಿ ಜರುಗಿ, ಅಖಂಡ ಭಜನಾದಿ ಕಾರ್ಯಗಳಿಂದ ಸಾಂಗಮಂಗಳವಾಯಿತು. ಪ್ರಥಮ ನಂದಿ ಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು.

13-11-71 ಶ್ರೀಗಳವರ ಗುರುದೇವರ ಪುಣ್ಯಾರಾಧನೆ ಯಥಾರೀತಿ ಮೂರು ದಿನಗಳು ಮಹಾತ್ಮರ ಉಪನ್ಯಾಸಗಳಿಂದ ಆನಂದಪ್ರದವಾಗಿ ನಡೆದು ಮಹಾಮಂಗಳ ವಾಯಿತು.

ಪುಣ್ಯಾತ್ಮರಾದ ಸುಧೀವರ ಶ್ರೀ ವಂಕದಾರು ರಾಮಕೃಷ್ಣಯ್ಯನವರು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ "ಶ್ರೀ ರಾಮಕೃಷ್ಣ ಗೀತಾ ಸದನ" ವೆಂಬುದಾಗಿ ಒಂದು ದಿವ್ಯವಾದ ಭವನವನ್ನು (ಹಾಲನ್ನು) ಕಟ್ಟಿಸಿದರು. ಉದಾರ ಮತಿಗಳಾದ ಶ್ರೀ ಗೌರಾ ಶ್ರೀ ರಾಮಯ್ಯ ಶ್ರೇಷ್ಠಿಯವರು ಈ ದಿವ್ಯ ಭವನದಲ್ಲಿ ಶ್ರೀ ಚಂದ್ರಮೌಳೀಶ್ವರ, ಶ್ರೀ ಗೀತಾಚಾರ್ಯ ಮೂರ್ತಿ ಪ್ರತಿಷ್ಠೆಗೆ ಬೇಕಾದ ಒಂದು ಗರ್ಭಾಲಯವನ್ನು ಉತ್ತಮ ರೀತಿಯಿಂದ ಕಟ್ಟಿಸಿದರು ಮತ್ತು ವಲ್ಲಂಕೊಂಡ ಶ್ರೀ ರಾಮ ಸುಬ್ಬಯ್ಯ ಶ್ರೇಷ್ಠಿಯವರು ಘನವಾದ ಸೇವೆಯನ್ನು ಸಲ್ಲಿಸಿದರು. ಇಷ್ಟೇ ಅಲ್ಲ, ಗುಂತಕಲ್ಲು ಪುರವಾಸಿಗಳಾದ ಅನೇಕ ಭಕ್ತರು ಶ್ರದ್ಧಾ ಭಕ್ತಿಗಳಿಂದ ಆಶ್ರಮ ದೈವ ಪ್ರತಿಷ್ಠಾದಿ ಕಾರ್ಯಗಳಿಗೆ ಅತ್ಯುತ್ತಮ ತ್ಯಾಗಪೂರ್ವಕವಾದ ಸೇವೆಯನ್ನು ಮಾಡಿದರು. ಶ್ರೀ ವೆಂಕಟ ಸುಬ್ಬಯ್ಯ ಸ್ವಾಮಿಗಳವರು (ಆಶ್ರಮವಾಸಿ) N. M. ಶಂಕರಯ್ಯ ಮೊದಲಾದ ಅನೇಕರು ಭಕ್ತಿಯಿಂದ ಭಾಗವಹಿಸಿ ಸೇವೆಯನ್ನು ಸಲ್ಲಿಸಿದರು. ಸಂಸ್ತುತ್ಯ.

## ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮ ದೈವ ಪ್ರತಿಷ್ಠೆ

ಹಿಂದಿನ ಪ್ರತಿಷ್ಠಾ ಮಹೋತ್ಸವಗಳಿಗೆ ದಯಮಾಡಿಸಿದ ವಿದ್ವಾಂಸರಾದ ವೈದಿಕರೆಲ್ಲರು ಸಕಾಲಕ್ಕೆ ಗುಂತಕಲ್ಲು ಆಶ್ರಮಕ್ಕೆ ಬಂದರು. ಆಹ್ವಾನಿತರಾದ ಪೂಜ್ಯ ಮಹನೀಯರು ದಯಮಾಡಿದರು. ನಾನಾ ದಿಕ್ಕುಗಳಿಂದ ಅನೇಕ ಭಕ್ತರು ಬಂದಿಳಿದರು. ಸ್ವಸ್ತಿ ಶ್ರೀ ವಿರೋಧಿಕೃತ ನಾಮ ಸಂ॥ ಮಾಘ ಶು॥ ಪಾಡ್ಯಮಿ ಸೋಮವಾರ 17-1-72 ಮೊದಲು ಶುದ್ಧ ಪಂಚಮಿ 21-1-72 ರ ವರೆಗೂ ವೇದೋಕ್ತವಾಗಿ ಶ್ರೀ ಪ್ರಸನ್ನ ಗಣಪತಿ, ಶ್ರೀ ಚಂದ್ರಮೌಳೀಶ್ವರ ಮಹಾಲಿಂಗ, ಪಾರ್ವತಿ, ಶ್ರೀ ಗೀತಾಚಾರ್ಯಸ್ವಾಮಿ ಮೂರ್ತಿ, ಶ್ರೀ ಚಕ್ರರಾಜ, ನಂದೀಶ್ವರ, ಧ್ವಜ ಪ್ರತಿಷ್ಠಾ ಮಹೋತ್ಸವವು ಶುಭಮುಹೂರ್ತದಲ್ಲಿ ಸಾಂಗೋಪಾಂಗವಾಗಿ ನಡೆದು ಪೂರ್ಣಾಹುತಿ ಆಯಿತು. ಶ್ರೀ ಉಮಾಮಹೇಶ್ವರ ಗುರುಪೀಠ ಶಾಸನಸ್ತುತಿ ಶಿಲಾಫಲಕವು ಸ್ಥಾಪಿಸಲ್ಪಟ್ಟಿತು.

ಈ ಮಹಾಕಾರ್ಯಕ್ಕೆ ದಯಮಾಡಿಸಿದ ಮಹಾತ್ಮರು ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ಕೇಶವತೀರ್ಥ ಸ್ವಾಮಿಗಳು (ಗುಂಟೂರು), ಶ್ರೀ ನಿತ್ಯಾನಂದ ಸ್ವಾಮಿಗಳು, ಶ್ರೀಮಾತಾ ನಿರಂಜನಾನಂದಗಿರಿ, ಶ್ರೀ ಶಿವಪ್ರಕಾಶಾನಂದ ಸ್ವಾಮಿಗಳು ಮೊದಲಾದ ಮಹನೀಯರು ದಯಮಾಡಿಸಿದ್ದರು. ವಿಧ್ಯುಕ್ತವಾಗಿ ಪೂರ್ಣ ಕುಂಭ ದೊಡನೆ ವೇದ ಮಂತ್ರಗಳಿಂದ ಸ್ವಾಗತವನ್ನಿತ್ತು, ಪೂಜ್ಯ ಶ್ರೀಗಳವರ ಅಧ್ವರ್ಯದಲ್ಲಿ ಪ್ರತಿಷ್ಠಾ ಮಹೋತ್ಸವದ ಐದು ದಿನಗಳು ಅಖಂಡವಾಗಿ ಮಹಾತ್ಮರ ಆಧ್ಯಾತ್ಮಿಕ ದಿವ್ಯೋಪನ್ಯಾಸಗಳು ನಡೆದವು. ಆ ಸಭೆಯು ನೋಡಲು ಮಹಾಮಂಗಳಪ್ರದವಾಗಿ ಶಿವಲೋಕದಂತಿತ್ತು. ಬೃಹದ್ರೂಪವಾಗಿ ಜನರಿಂದ ಕಿಕ್ಕಿರಿದಿತ್ತು. ಅನೇಕ ಪಂಡಿತರು, ಕವಿಗಳು, ಅಭಿನಂದನ ಪತ್ರಗಳನ್ನು ಭಕ್ತಿ ಪುಷ್ಪಾಂಜಲಿ ಕವನಗಳನ್ನು ಸಮರ್ಪಿಸಿ ದರು. ವಿಶೇಷವಾಗಿ ಅನ್ನದಾನ ನಡೆಯಿತು.

1–3–72 ಬುಧವಾರ ಈ ಪ್ರತಿಷ್ಠಾ ಮಹೋತ್ಸವದ ಮಂಡಲಪೂಜೆ, ಮಹನ್ಯಾಸಪೂರ್ವಕ ರುದ್ರಾಭಿಷೇಕ, ಅನ್ನಸಂತರ್ಪಣೆ ನಡೆಯಿತು.

“ಕರ್ಮವನ್ನು ಆಚರಿಸುವ ಜ್ಞಾನಿಗೆ ವಿಹಿತವಾದ ಯಾವ ಇಚ್ಛೆಯಿದೆಯೋ ಅದು ಅವನಿಗಾಗಿ ಅಲ್ಲ. ಅದು ಕೇವಲ ಲೋಕಾನುಗ್ರಹಾರ್ಥವಾದ ಮಹಾಕಾರ್ಯ. ಸ್ವೀಯ ಕರ್ತೃತ್ವ ಆತನಿಗಿಲ್ಲ.

ಅಧ್ಯಾಸವೆಂದರೆ ಅದಲ್ಲದ ವಸ್ತುವಿನಲ್ಲಿ ಅದೆಂಬುವ ತಪ್ಪು ತಿಳುವಳಿಕೆ. ಅದೇ ಅಜ್ಞಾನ. ಶುಕ್ತಿಕೆಯನ್ನು ರಜತವೆಂದಂತೆ ಆತ್ಮನಾದ ನಿನ್ನಲ್ಲಿ ಅಹಂಕಾರಾದಿ ಗುಣಗಳು ಸೇರಿ ನಿಜವಾ! ಎನಿಸಿಕೊಂಡಂತೆ, ಉಪಾಧಿ ಸಂಬಂಧವಾದ ಸಂಸಾರ ದ್ವಂದ್ವವು ವಸ್ತುತಃ ನಿನ್ನಲ್ಲಿ ಇಲ್ಲ. “ಅಸ್ಯ ಜೀವತ್ವಂ” ಅಂದಹಾಗೆ ಇದು ಆರೋಪಿತವೇ ವಿನಾ ನಿಜವಲ್ಲ.

ಸಂಚಿತಾಗಾಮಿ ಕರ್ಮಗಳು ಆತ್ಮಜ್ಞಾನ, ಅಕರ್ತೃತ್ವಾತ್ಮ ಬುದ್ಧಿಯಿಂದ ನಿವೃತ್ತಿಯಾಗಲು ದೇಹಾಭಿಮಾನವಿಲ್ಲದೆ ಪ್ರಾರಬ್ಧ ಕರ್ಮಾನುಭವದಿಂದಿರುವುದೇ ಮುಕ್ತಿ. ಅರ್ಥಾತ್ ಕರ್ತನು ಹೋದ ಮೇಲೆ, ಕರ್ತನೆನ್ನಿಸಿಕೊಂಡಿದ್ದ ತನ್ನನ್ನು ಬ್ರಹ್ಮವನ್ನಾಗಿ ಅರಿತ ಮೇಲೆ, ಇನ್ನು ಕರ್ಮತ್ರಯವೆಲ್ಲಿಯದು? ಇಲ್ಲವೇ ಇಲ್ಲ. ಪ್ರಾರಬ್ಧವೆನ್ನುವದು ಪರರ ದೃಷ್ಟಿಯಿಂದ ಹೇಳಿದ ಮಾತು.

ಅನಂತರ ಹಾಲರ್ವಿಯಲ್ಲಿ ಭಕ್ತರ ಇಷ್ಟಾನುಸಾರ ತುಲಸೀ ರಾಮಾಯಣ, ಪ್ರಾತಃಕಾಲ ಶ್ವೇತಾಶ್ವತರೋಪನಿಷತ್ತು ಶ್ರವಣ ನಡೆಯಿತು.

9–4–72 ಶ್ರೀ ಕ್ಷೇತ್ರದಲ್ಲಿ ಶ್ರೀ ಶಂಕರ ಜಯಂತಿ ವಿಧ್ಯುಕ್ತವಾಗಿ ನಡೆದು ಎಲ್ಲಾ ಜನಗಳಿಗೆ ಬೇಕಾದಂತೆ ಬಹಿರಂಗ ಸಭೆಯಾಗಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಧರ್ಮಗಳನ್ನು ತಿಳಿಸಿದರು.

ಅನಂತರ ಅಡ್ವೊಕೇಟ್ ಶ್ರೀ ಶೆಟ್ಟಿ ಓಬುಲಪತಿಯವರ ಪ್ರಾರ್ಥನಾನುಸಾರ ಆಳ್ಳಗಡ್ಡ ತಾಲೂಕ ಆಲಮೂರು ಗ್ರಾಮದಲ್ಲಿ, ಸನಾತನವಾದ ಜೀರ್ಣ ಶಿವಾಲಯ ದಲ್ಲಿ ಶ್ರೀ ಚಂದ್ರಮೌಳೀಶ್ವರಾದಿ ಪರಿವಾರ ದೇವತೆಗಳೊಡನೆ, ಶ್ರೀ ಆಂಜನೇಯ ಸ್ವಾಮಿ ಪ್ರತಿಷ್ಠೆಯು ವೇದೋಕ್ತವಾಗಿ ನಡೆಯಿಸಿದರು. ಇದೇ ಶ್ರೀ ಉಮಾ ಮಹೇಶ್ವರಾಶ್ರಮವೆಂದು ಕರೆಯಲ್ಪಡುತ್ತಿದೆ. ಮೊದಲಿನ ಸದ್ಬ್ರಾಹ್ಮಣರೆಲ್ಲರೂ ಬಂದು ಈ ಕಾರ್ಯವನ್ನು ನಿರ್ವಹಿಸಿದರು. ಶ್ರೀಗುರುದೇವರ ನೇತೃತ್ವದಲ್ಲಿ 3 ದಿನಗಳು ಚೆನ್ನಾಗಿ ನಡೆದು ಮಹಾತ್ಮರ ಉಪನ್ಯಾಸಗಳಾದವು. ಅನ್ನದಾನವಾಯಿತು. ಶ್ರೀ ಓಬುಲಪತಿಯವರ ತ್ಯಾಗ ಪ್ರಶಂಸನೀಯ.

ಪೂಜ್ಯ ಶ್ರೀಗಳವರ ಪರಮ ಗುರುಗಳ ಪುಣ್ಯಾರಾಧನ ಮಹಾಕಾರ್ಯವು ಮೂರು ದಿನಗಳು ಆನಂದವಾಗಿ ನಡೆಯಿತು. ೬–7–72 ಶ್ರೀಗುರುದೇವರ ಜಯಂತಿ ವಿಧ್ಯುಕ್ತವಾಗಿ ಜರುಗಿ ಕವಿ ಪಂಡಿತರ ಕವನಗಳು, ಶಾಸ್ತ್ರಾರ್ಥ ಪ್ರಸಂಗಗಳು ಅಪೂರ್ವವಾಗಿ ನಡೆದವು.

॥ ಶ್ರೀಮದುಮಾಮಹೇಶ್ವರೋ ವಿಜಯತೇ ॥

ಶ್ರೀ ಶ್ರೀ ಶ್ರೀಮದುಮಾಮಹೇಶ್ವರ ಪೀಠಾಧಿಪತಿ ಪರಮಹಂಸ ಪರಿವ್ರಾಜಕಾಚಾರ್ಯವರ್ಯ

**ಶ್ರೀ ಶಂಕರಾನಂದಗಿರಿ ಸ್ವಾಮಿನಾಂ ಜನ್ಮದಿನೋತ್ಸವ ಸಂದರ್ಭೇ ಸಮರ್ಪಿತ**

## ಭಕ್ತಿ ಕುಸುಮಾಂಜಲಿಃ

ಶ್ರೀಮದ್ಭಾರತ ಭೂತಲ ಪ್ರಥಿತ ಸತ್ಪೀಠಾಧಿಪಾ ಧೀಯುತಾ ।
ವೇದೋಕ್ತೋತ್ತಮ ಧರ್ಮಕರ್ಮ ನಿರತಾಸ್ಸಚ್ಛಾಸ್ತ್ರ ಪಾರಂಗತಾ ॥
ವಿದ್ವಚ್ಛೇಖರ ಸಂಸ್ತುತ ವ್ರತಿವರಾಸ್ಸದ್ವಂದನೀಯಾ ಭವ ।
ದ್ಭಕ್ತಾ ಭಕ್ತಿಯುತಾ ವಯಂ ಹಿ ಸತತಂ ಕುರ್ಮೋ ಭವದ್ಭ್ಯೋನತೀಃ ॥

ಭಕ್ತಾಸ್ಸಮುದ್ಧರ್ತು ಮಿಹಾಂಧ್ರ ದೇಶೇ ।
ಸದಾ ಭವಂತಃ ಕೃಪಯಾ ಚರಂತಿ ॥
ಜ್ಞಾನಂ ಲಭಂತೇ ಹಿ ಜನಾಶ್ಚ ಸರ್ವೇ ।
ಪೀತ್ವಾ ಭವದ್ವಾಗಮೃತಂ ಚ ದಿವ್ಯಮ್ ॥

ಅದ್ವೈತಂ ಖಲು ತತ್ತ್ವಸಾರಮಿತಿ ತತ್ಸಿದ್ಧಾಂತ ಮೇವಾನಿಶಮ್ ।
ಲೋಕೇ ಬೋಧಯಿತುಂ ಪ್ರವೃತ್ತ ಗುರವೋ ಯೂಯಂ ದಯಾಶಾಲಿನ ॥
ಸ್ಸತ್ಯಂ ಸತ್ಯಮಶೇಷ ಭಕ್ತಜನತಾ ಧನ್ಯಾಭವತ್ಸ್ವಾಮಿನಃ ।
ಕಿಂ ಬ್ರೂಮೋ ಭವದೀಯ ದಿವ್ಯ ಮಹಿಮಾ ಪ್ರಾಶಸ್ತ್ಯಮತ್ಯದ್ಭುತಂ ॥

ಶ್ರೀ ಚಂದ್ರಮೌಳೀಶ್ವರ ಪೂಜನಂ ಚ ।
ಗೀತೋಪದೇಶೋ ಹಿ ಮಹಾಜನೇಭ್ಯೋ ॥
ಭವ್ಯಂ ತಪಃ ಪಂಡಿತ ಪೋಷಣಂ ಚ ।
ಮುದಾ ಕ್ರೀಯಂತೇ ಗುರುಭಿರ್ಭವದ್ಭಿಃ ॥

ಪೂಜ್ಯಾ ಜನ್ಮದಿನೋತ್ಸವೋ ಹಿ ಭವತಾಂ ಶಾಸ್ತ್ರೋಕ್ತರೀತ್ಯಾ ಮಹಾ ।
ಭಕ್ತಾನಾಂ ಚ ಸದಿಚ್ಛಯಾ ಪ್ರಚಲಿತೀತ್ಯದ್ಯಾಗತಾ ಸ್ವಾಧವ ॥
ಶ್ರೀಮಂತೋ ವಣಿಜಸ್ತಥೇತರಜನಾಃಪ್ರೀತ್ಯಾಮಹಾತ್ಯಾಽದರಾತ್ ।
ಯೋಗೀಂದ್ರಾ ವಿತರಸ್ತು ಸತ್ಕರುಣಯಾ ತೇಷಾಮುಪರ್ಯಾಶಿಷಃ ॥

ರಚಯಿತರು: ಜೋಯಿಸ್ ದಕ್ಷಿಣಾಮೂರ್ತಿ ಇತ್ಥಮ್
ಭಕ್ತ ವೃಂದಮ್

## 28 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುತ್ತಿ, ಗೂಳಪಾಳ್ಯಂ, ಗುತ್ತಿ ಕನ್ನಿಕಾಪರಮೇಶ್ವರಿ ದೇವಾಲಯ 22–7–72

ಶ್ರೀ ಪರಿಧಾವಿ ಸಂ॥ ಭಕ್ತರ ಪ್ರಾರ್ಥನಾನುಸಾರ ಗುತ್ತಿ ಶ್ರೀಗುರುದೇವಾಶ್ರಮ ಮೊದಲಾದ ಸ್ಥಳಗಳಲ್ಲಿ ಅತ್ಯುತ್ತಮ ರೀತಿ ಯಥಾಶಾಸ್ತ್ರವಾಗಿ ತ್ರಿಕಾಲ ಪೂಜಾನುಷ್ಠಾನಾದಿ ವೈದಿಕ ಕಾರ್ಯಗಳು, ಶಾಸ್ತ್ರ ಶ್ರವಣಗಳು ನಡೆದು ಮಹಾವ್ರತವು 20–11–72 ರಂದು ಸಾಂಗಮಂಗಳವಾಗಿ ಪೂರ್ಣವಾಯಿತು. ಶ್ರೀಶೈಲ ಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು. ಶ್ರೀ ಭ್ರಮರಾಂಬ ಸಹಿತ ಮಲ್ಲಿಕಾರ್ಜುನ ಸ್ವಾಮಿಗೆ, ಶ್ರೀಗಳವರು ವೇದೋಕ್ತವಾಗಿ ಪೂಜಾದಿಗಳನ್ನು ನಡೆಸಿದರು.

ಶ್ರೀಶೈಲದಲ್ಲಿ "ಯೋಗ ತಾರಾವಳಿ" ಎಂಬ ಪ್ರಕರಣ ಗ್ರಂಥವು ಮೂರು ದಿನಗಳು ಶಾಸ್ತ್ರ ಶ್ರವಣವಾಯಿತು.

## ಜೀವನ್ಮುಕ್ತ

"ಜೀವನ್ಮುಕ್ತನಿಗೆ ಯಾವ ಕರ್ಮಬಂಧವಿಲ್ಲ. ಅಜ್ಞಾನವೆಂಬ ಮಾತೆಯು ಗತಿಸಿ ಸುಜ್ಞಾನವೆಂಬುವ ಪುತ್ರೋದಯವಾಗಿದೆ. ಅಂದಾಗ ಯಾವ ಕರ್ಮಗಳಿರುತ್ತೆ?

ಬ್ರಹ್ಮಾತ್ಮನಾ ಸಂಸ್ಥಿತಿಯಲ್ಲಿರುತ್ತಾನೆ ಅಲ್ಲಿ ಕರ್ಮ ತಾದಾತ್ಮ್ಯವಿಲ್ಲೆಂದರ್ಥ "ಮೃತಾ ಮೋಹಮಯೀ ಮಾತಾ ಜಾತೋ ಬೋಧಮಯಸ್ಸುತಃ । ಸೂತಕದ್ವಯ ಸಂಪ್ರಾಪ್ತೌ ಕಥಂ ಸಂಧ್ಯಾಮುಪಾಸ್ಮಹೇ ॥" ಹೀಗೆಂದು ಮೈತ್ರೇಯಿ ಉಪನಿಷತ್ತು ಹೇಳುತ್ತೆ. ಜ್ಞಾನಸೂರ್ಯನು ಉದಯಾಸ್ತಮಗಳಿಲ್ಲದೆ ಪ್ರಕಾಶಿಸುತ್ತಿರುವಾಗ ಕರ್ಮವಿಧಿ ಎಲ್ಲಿಯದೆಂದು ಉಪನಿಷತ್ತನ್ನುತ್ತೆ. ಆತನು ನಿತ್ಯ ಮುಕ್ತನೆಂದು ಭಾವ.

ಆ ಮಹನೀಯ ಪಾದವಿಟ್ಟು ನಡೆದಿದ್ದೇ ಪಾವನವಾದ ತೀರ್ಥಯಾತ್ರೆ. ಆತನು ನಿಂತ ಸ್ಥಾನವೇ ಕಾಶೀಕ್ಷೇತ್ರ, ಆತನ ಪವಿತ್ರ ದೃಷ್ಟಿಯೇ ಉತ್ತಮವಾದ ಮತ. ಆ ಮಹಾತ್ಮನ ಮಾತುಗಳೇ ಮಂತ್ರಗಳು, ವೇದವಾಕ್ಕುಗಳು. ಆತನಿಗೆ ಜನ್ಮವೇ ಇಲ್ಲದ್ದರಿಂದ ಮತ್ತೇನೂ ಇಲ್ಲ. ಶಿವನೇ ಆತನು!

ಮೋಕ್ಷವು ಉತ್ಪತ್ತಿ, ಪ್ರಾಪ್ತಿ, ವಿಕಾರ್ಯ, ಸಂಸ್ಕಾರ್ಯಗಳೆಂಬ ಕರ್ಮ ಫಲ ರೂಪವಲ್ಲ. ಅದು ಅಜವು, ವ್ಯಾಪಕವು, ನಿತ್ಯವು, ನಿತ್ಯಶುದ್ಧವು,

ಮರದಲ್ಲಿ ಅಗ್ನಿ ಇದೆ. ಅದು ಅದನ್ನು ಸುಡುವದಿಲ್ಲ. ಅಗ್ನಿಯಲ್ಲಿ ಮರ ವಿದ್ದರೆ ಸುಟ್ಟು ಹೋಗುತ್ತೆ. ಹಾಗೆಯೇ ಜ್ಞಾನಿ ತನ್ನ ಶೇಷ ಪ್ರಾರಬ್ಧವನ್ನು ಜಗತ್ತಿನಲ್ಲಿ ಅನುಭವಿಸುವನು. ಜಗದ್ವಂದ್ವಗಳು ಆತನಲ್ಲಿ ನಿಲ್ಲಲಾರವು. ಬೆಳಕು, ಕತ್ತಲನ್ನು ಆಕಾಶವು ವಹಿಸಿದ್ದರೂ, ಅವುಗಳ ಸ್ಪರ್ಶ ಆಕಾಶವನ್ನು ಸೋಂಕುವದಿಲ್ಲ. ಹಾಗೆ ಆತ್ಮಾನುಭವಿಯಾದ ಜ್ಞಾನಿಯಲ್ಲಿ ಯಾವ ಸಂಬಂಧವು ಇರುವದಿಲ್ಲ. "ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮ ಸಾತ್ಕುರುತೇ ತಥಾ" "ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ"

ಆತನಿಗೆ ಉತ್ತರಾಯಣ ದಕ್ಷಿಣಾಯನ ಎಂಬ ಕಾಲನಿಯಮವಿಲ್ಲ. "ವಿಮುಕ್ತಶ್ಚ ವಿಮುಚ್ಯತೇ", ನಿತ್ಯಮುಕ್ತನು!

ಆಧ್ಯಾತ್ಮಿಕಾನುಷ್ಠಾನದಲ್ಲಿ ಅನನ್ಯವಾದ ಭಕ್ತಿಭಾವನೆಗಳಿದ್ದು ಅನುಷ್ಠಿಸಿದರೆ ಬೇಗನೆ ಪ್ರಗತಿಯಾಗುವುದು. ಸರ್ವ ಮೋಹಗಳು ಐಹಿಕ ವಾಂಛೆಗಳು ದೂರಾಗಿ ಗುರು, ದೈವ ಶರಣಾಗತಿಯಿಂದ ಎಲ್ಲವೂ ಮಂಗಳಮಯವಾಗುವವು.

ಜೀವನದಲ್ಲಿ ಕೇವಲ ಮಾತುಕತೆಗಳಿಗಿಂತಲೂ ಪವಿತ್ರ ಭಾವಯುಕ್ತವಾದ ಉತ್ತಮ ಹೃದಯವು, ಹೇಳುವ ಮಾತುಗಳಿಗಿಂತಲೂ ಸುದೂರವಾಗಿ ಪಯಣಿಸಿ ಅಡ್ಡಿಯನ್ನು ದೂರ ಮಾಡಿ ಶಾಂತಿಯನ್ನೀಯುವುದು. ಉತ್ತಮ ಸಚ್ಛೀಲವಂತನಿಗೆ ದೈವಾತ್ಮ ಜ್ಞಾನವು ಅತಿ ಸಮೀಪವಾಗಿರುತ್ತದೆ. ಅಂದರೆ ದೇವರು ಇರಬಹುದು, ಅವನನ್ನು ತಿಳಿಯುವ ಶಕ್ತಿ ಕಡಿಮೆ. ಶೀಲವಂತನಿಗೆ ಅದು ತಾನೇ ಅರ್ಥವಾಗುತ್ತೆ.

ಹಿರಣ್ಯಕಶ್ಯಪನು ದೇವರನ್ನು ಅನ್ಯವಾಗಿ ಕಾಣುತ್ತಾ; ಎಲ್ಲೆಲ್ಲೋ ನೋಡುತ್ತಾ "ನಿನ್ನ ದೇವರು ಕಾಣಲಿಲ್ಲವಲ್ಲಾ?" ಎಂದನು. ಪ್ರಹ್ಲಾದನು "ಎಲ್ಲೆಲ್ಲಿಯೂ ಆತನೇ ಇದ್ದಾನೆ ತಂದೇ!" ಎಂದು ಸ್ತಂಭದಲ್ಲಿ ತೋರಿಸಿದ. ಪ್ರಹ್ಲಾದನು ಇದ್ದ ಶ್ರೀಹರಿ ಯನ್ನು ತನ್ನ ರೂಪದಿಂದಲೂ ವಿಶ್ವರೂಪದಿಂದಲೂ ಕಂಡನು. ಹೀಗಿದ್ದರೂ ಹಿರಣ್ಯಕಶ್ಯಪನು ಕಾಣಲಿಲ್ಲ. ದೇವರು ದೃಶ್ಯವಲ್ಲ ಪರಿಶುದ್ಧಾಂತಃಕರಣಕ್ಕೆ ಸ್ವ ಸುವೇದ್ಯನು.

ಅಲಾತವನ್ನು ಅಂದರೆ ಕೊಳ್ಳಿಯನ್ನು ಹಿಡಿದುಕೊಂಡು ತಿರುವಿದರೆ ರುಜು ವಕ್ರಾದಿ ಭಾವಗಳು ಕಾಣಿಸುವವು. ಆದರೆ ಅವು ಕೊಳ್ಳಿಯಲ್ಲಿಲ್ಲ. ಹಾಗೆ ನಿಶ್ಚಲ

ವಾಗಿರುವ ಸಾಕ್ಷಿಯಾದ ತನ್ನನ್ನು ತಿಳಿದರೆ ಅನ್ಯವಾದ ಸಂಚಲನೆಯು ಭ್ರಮೆ ಎಲ್ಲಿಯೂ ಇಲ್ಲ. ಜೀವಿತದಲ್ಲಿ ಉಂಟಾಗುವ ಸುಖ ದ:ಖಾದಿ ದ್ವಂದ್ವಗಳನ್ನು ನೀತಿಕೋವಿದರಾದ ಸದಾಚಾರ ಪರರು, ಇಲ್ಲದವವುಗಳಾಗಿ ತಿಳಿದು ತಾಳಿಕೊಳ್ಳುವದೇ ಘನತೆ.

## ಮೌನ

ಮೌನನಿಷ್ಠೆ ಬಹಳ ಒಳ್ಳೆಯದು. ಮೌನದಿಂದ ಆಧ್ಯಾತ್ಮಿಕ ಶಕ್ತಿ ಅಧಿಕವಾಗುವುದು. ಚಿತ್ತದಲ್ಲಿ ಸಂಕಲ್ಪ ವಿಕಲ್ಪಾತ್ಮಕವಾದ ಮಾರ್ಪಾಡುಗಳನ್ನು ಮಾಡಗೊಳಿಸದಿರಬೇಕು. ಮಾಲಿನ್ಯ ದೋಷವೆಂಬವುಗಳನ್ನು ನಿನ್ನ ಸಮೀಪಕ್ಕೆ ಬರಗೊಡಿಸದಿದ್ದರೂ, ಎಷ್ಟು ಕಡಿಮೆಯಾಗಿ ಮಾತನಾಡಿದರೆ ಅಷ್ಟು ಒಳ್ಳೆಯದು. ಮನೋವೃತ್ತಿಗಳಿಲ್ಲದಿರುವಿಕೆಯೇ ಮೌನ. ಲೌಕಿಕಾಭಿಮಾನಗ್ರಸ್ತವಾದ ಊಹೆಗಳನ್ನು ಊಹಿಸಬಾರದು. ನಿನ್ನ ಆಧ್ಯಾತ್ಮಿಕ ಶಕ್ತಿ ಕಡಿಮೆಯಾಗುತ್ತೆ.

ಪ್ರಪಂಚದ ಜನರನ್ನು ಸರಿಗೊಳಿಸಬೇಕೆಂಬುವ ತೀವ್ರವಾದ ಕಲ್ಪನೆ ಮಾಡಬೇಡ. ತ್ರಿಗುಣಾತ್ಮಕವಾದ ಈ ಜಗತ್ತಿನಲ್ಲಿ ಅದು ಸಂಪೂರ್ಣ ಸಾಧ್ಯವಲ್ಲ. ಕರ್ಮದ ವೈಚಿತ್ರ್ಯ ಇದಕ್ಕೆ ಬೆಂಬಲವಿರುತ್ತೆ. ಯಾವದೋ ಸ್ವಲ್ಪವಾದರೆ ಆಗಬಹುದು. ಪ್ರಯತ್ನ ಒಳ್ಳೆಯದೇ. ಆದರೆ ಅರಿತುಮಾಡು.

ಜಲಬಿಂದುವು ಸಮುದ್ರದಲ್ಲಿ ಬಿದ್ದರೆ ಅದು ಸಮುದ್ರವೇ ಆಗುವದು. ಹೊರಗೆ ಬಿದ್ದರೆ ಒಣಗಿ ಹೋಗುವದು. ನೀನು ಬ್ರಹ್ಮವೇ ಆಗಿದ್ದು ಬ್ರಹ್ಮನಾಗು. ಸಹನ ಸಂಪತ್ತು ವಿವೇಕಕ್ಕೆ ಸಾಧನ. ಅಚಂಚಲವಾದ ದೀಕ್ಷೆ ಇರಲಿ. ಕಾಮಿನೀ ಕಾಂಚನಗಳಲ್ಲಿ ಆಸಕ್ತಿ ಬೇಡ. ಸತ್ಯಸಂಧತೆ ನಿರ್ವಕ್ರವಾದ ಬುದ್ಧಿ ಜೀವನ ಪಾಥೇಯಗಳು.

ಶೈವ ಸಾಹಿತ್ಯದಲ್ಲಿ ಮನಸ್ಸಿನೊಡನೆ ಪಂಚಜ್ಞಾನೇಂದ್ರಿಯಗಳನ್ನು ಶಿವಸ್ವರೂಪವಾದ ಲಿಂಗಗಳೆಂದು ಕರೆಯುತ್ತಾರೆ. ಮನಸ್ಸು ಮಹಾಲಿಂಗ, ಶ್ರೋತ್ರೇಂದ್ರಿಯ ಪ್ರಸಾದಲಿಂಗ, ತ್ವಗಿಂದ್ರಿಯ ಜಂಗಮಲಿಂಗ, ನೇತ್ರೇಂದ್ರಿಯವು ಶಿವಲಿಂಗ, ಜಿಹ್ವೆ ಗುರುಲಿಂಗ, ಘ್ರಾಣೇಂದ್ರಿಯವು ಆಚಾರಲಿಂಗವೆಂದು ಹೇಳುತ್ತಾರೆ.

ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಅಜ್ಞೇಯ, ಸಹಸ್ರಾರ, ಈ ಷಟ್ಚಕ್ರಗಳನ್ನು ಕುರಿತು ಆಯಾ ಸ್ಥಾನಗಳು, ಪೃಥಿವ್ಯಾದಿ ಭೂತಗಳು, ವರ್ಣಗಳು, ತನ್ಮಾತ್ರೆಗಳು, ಅಕ್ಷರಗಳು, ದಳಗಳು, ಅಧಿದೇವತೆ ಈ ಮೊದಲಾದವುಗಳನ್ನು ತಿಳಿದು, ಅನುಷ್ಠಾನ ಮಾಡುವ ಪದ್ಧತಿ ಗುರುವಿನಿಂದ ಆರಂಭದಲ್ಲಿ ತಿಳಿದು ಅನುಷ್ಠಿಸಬೇಕು. ಇದು ಒಂದು ಪ್ರಕ್ರಿಯೆ.

## ಬ್ರಹ್ಮಚರ್ಯ

ಇಂದ್ರಿಯ ನಿಗ್ರಹವನ್ನು ಅಭ್ಯಾಸ ಮಾಡುವದು ಜೀವನದಲ್ಲಿ ಬಹು ಜನರಿಗೆ ಕಷ್ಟವಾದುದೆ. ಆದರೇನು ಈಶ್ವರ ಕೃಪಾ ಪಾತ್ರತೆ, ದೃಢ ನಿಶ್ಚಯ, ಸಹನವಿದ್ದರೆ ಸಾಧ್ಯವೇ.

ಬ್ರಹ್ಮಚರ್ಯವೆಂದರೆ ಭಾವದಲ್ಲಿ, ವಾಕ್ಕಿನಲ್ಲಿ, ಮನಸ್ಸಿನಲ್ಲಿ, ಕರ್ಮದಲ್ಲಿಯೂ ಶಾಸ್ತ್ರ ಸಮ್ಮತವಾಗಿ ಮನಸ್ಸಾಕ್ಷಿಯಾಗಿ ಪರಿಶುದ್ಧನಾಗಿರುವಿಕೆ. ಬ್ರಹ್ಮಚರ್ಯೇನ ತಪಸಾದೇವ ಮೃತ್ಯುಮುಪಘ್ನತಾ"

ಬ್ರಹ್ಮ ಮತ್ತು ಚರ್ಯ ಎಂಬ ಇವೆರಡು ಶಬ್ದಗಳು ಸೇರಿ ಬ್ರಹ್ಮಚರ್ಯ ಶಬ್ದವಾಗುತ್ತೆ. ಬ್ರಹ್ಮ ಶಬ್ದಾರ್ಥವೇನೆಂದರೆ ಪರಬ್ರಹ್ಮ, ವೇದ, ವೀರ್ಯ, ವೇದ ಸೂಕ್ತ, ಓಂಕಾರ, ಜ್ಞಾನ, ತಪಸ್ಸು, ಪವಿತ್ರತೆ, ಮೋಕ್ಷ, ಧರ್ಮ, ಬ್ರಾಹ್ಮಣ, ಸೂರ್ಯ, ಸತ್ಯ, ಸ್ವತಂತ್ರ, ಪವಿತ್ರವಾದ ಮಂತ್ರರಾಜ, ಗುರು, ಆತ್ಮ, ಪರಮಾತ್ಮ, ಅನ್ನ, ಜಲ, ಸಾಧನ ಇತ್ಯಾದಿಯಾಗಿ ಅರ್ಥ.

ಇನ್ನು ಚರ್ಯ ಶಬ್ದಾರ್ಥವೇನೆಂದರೆ, ಚಿಂತಿಸುವಿಕೆ, ಅಧ್ಯಯನ ಮಾಡುವಿಕೆ, ರಕ್ಷಣೆ ಮಾಡುವಿಕೆ, ವಿವೇಚನೆ, ಸೇವೆ, ನಿಯಮ, ಉಪಾಯ, ಹಿತ, ಧ್ಯೇಯ, ಪ್ರಗತಿ, ಪ್ರಸಾರ, ಸಂಯಮನ, ಸಾಧನ, ಕಾರ್ಯ ಎಂಬಿತ್ಯಾದಿ ಅರ್ಥಗಳು.

ವೇದ ಮತ್ತು ಬ್ರಹ್ಮತತ್ತ್ವವನ್ನು ತಿಳಿದುಕೊಳ್ಳುವ ನಿಮಿತ್ತ, ಮಾಡುವ ವ್ರತಕ್ಕೆ ಬ್ರಹ್ಮಚರ್ಯವೆಂದು ಹೆಸರು. ಅದೇ ಜೀವನಾಧಾರ. ಬ್ರಹ್ಮಚರ್ಯ ವ್ರತಪಾಲನೆಯಿಂದ ಮಹಾತ್ಮರಾಗುವರು. ಯಜ್ಞವೆಂದು ಶಿಷ್ಟರಾದ ಯಜಮಾನರು ಯಾವದನ್ನು ಕರೆಯುವರೋ ಅದು ಬ್ರಹ್ಮಚರ್ಯ; ಅನೇಕ ಯಜಮಾನರು ಸೇರಿ ಮಾಡುವ ವೈದಿಕ ಕಾರ್ಯವನ್ನು ಸತ್ರಾಯಣವೆನ್ನುವರು. ಪರಂಪರೆಯಾಗಿ ತನ್ನನ್ನು ಸಂರಕ್ಷಿಸಿಕೊಳ್ಳುವ ಯಜ್ಞ ಪರಂಪರೆಯೂ ಬ್ರಹ್ಮಚರ್ಯವೇ. ಯಾವದನ್ನು ಮೌನವೆನ್ನುವರೋ ಆ ಧ್ಯಾನವು ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದ ಹೊಂದಲ್ಪಡುವ ಆತ್ಮತತ್ವವು ನಾಶವಾಗದು. ಅಮೃತವನ್ನೀಯುವುದು. ಯಾವ ವಿಷಯ ಚಿಂತನೆಯೂ ಇಲ್ಲದೆ ಶಾಸ್ತ್ರಾಚಾರ್ಯೋಪದೇಶಾನುಸಾರ ವರ್ತಿಸುವದು ಬ್ರಹ್ಮಚರ್ಯವೇ, ಇತ್ಯಾದಿಯಾಗಿ ಏತದರ್ಥಗಳಿವೆ.

ಶ್ರೀಗುರು ಕೃಪೆಯಿಂದ ಶ್ರೀ ಪ್ರಮಾದೀಚ ನಾಮ ಸಂ|| ಜ್ಯೇಷ್ಠ ಶುದ್ಧ ಪೌರ್ಣಮೆಗೆ ಶ್ರೀಗಳವರು ಪ್ರತ್ಯೇಕವಾಗಿ ಸನಾತನವಾದ ಉಮಾಮಹೇಶ್ವರ ಗುರು ಪೀಠದಲ್ಲಿ ಮಾಡಬೇಕಾದ ಅನುಷ್ಠಾನವನ್ನು ಮಾಡಿ ಕೋಟಿ ಮಹಾಮಂತ್ರ ಜಪ ಪೂರ್ಣ ಮಾಡಿದರು.

## ಸನಾತನ ಶ್ರೀಮದುಮಾಮಹೇಶ್ವರ ಗುರುಪೀಠ ಮೂರ್ತಿ, ಮಹಾಯಂತ್ರ ಪ್ರತಿಷ್ಠೆ

### ಶ್ರೀ ಕ್ಷೇತ್ರ ಉಮಾಮಹೇಶ್ವರಾಶ್ರಮ, ಉತ್ತವರ. (ರತ್ನಗಿರಿ)

### 14–6–73 ಮೊದಲು 18–6–73 ವರೆಗೆ

ಸ್ವಸ್ತಿ ಶ್ರೀ ಪ್ರಮಾದೀಚ ನಾಮ ಸಂ|| ಜ್ಯೇಷ್ಠ ಬಹುಳ ತದಿಯ ಕನ್ಯಾಲಗ್ನ ಶುಭ ಪುಷ್ಕರಾಂಶದಲ್ಲಿ ವೇದೋಕ್ತವಾಗಿ ಪೂರ್ವದಂತೆ ಸದ್ಬ್ರಾಹ್ಮಣೋತ್ತಮರಿಂದ

ಶ್ರೀಮದುಮಾಮಹೇಶ್ವರ ಗುರುಪೀಠ ಮೂರ್ತಿ ಮಹಾಯಂತ್ರ ಪ್ರತಿಷ್ಠೆ, ಶ್ರೀ ಉಮಾಮಹೇಶ್ವರ ದಿವ್ಯ ಮಂಗಳಮಯ ಮೂರ್ತಿ ಪ್ರತಿಷ್ಠೆ,ನವಗ್ರಹ ಪ್ರತಿಷ್ಠೆ, ಪರಮೇಷ್ಠಿ ಗುರು, ಪರಮಗುರು, ಶ್ರೀಗುರುಮೂರ್ತಿ ಪ್ರತಿಷ್ಠೆ, ಗುರುಪೀಠಶಾಸನ ಸ್ತುತಿ ಶಿಲಾಫಲಕ ಸ್ಥಾಪನಾದಿ ಮಹಾಕಾರ್ಯಗಳು ವಿಧ್ಯುಕ್ತವಾಗಿ ಪೂಜ್ಯ ಶ್ರೀಗುರು ದೇವರ ಆಧ್ವರ್ಯದಲ್ಲಿ ನಡೆದವು. ಜಯ ಜಯ ಧ್ವನಿಗಳಿಂದ ಸರ್ವ ವಾದ್ಯ ವಿಶೇಷ ಗಳಾದವು, ಪುಷ್ಪವೃಷ್ಟಿಯಾಯಿತು. ಯತೀಶ್ವರರ ಪೂಜೆ, ಋತ್ವಿಕ್ಕುಗಳ ಸನ್ಮಾನ ಸಂತರ್ಪಣೆಗಳು ನಡೆದು ಶ್ರೀ ಉಮಾಮಹೇಶ್ವರರ ಉತ್ಸವವು ಆನಂದವಾಗಿ ನಡೆಯಿತು.

ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ಶುದ್ಧ ಚೈತನ್ಯ ಸ್ವಾಮಿ ಗಳು, ಶ್ರೀ ಸಿದ್ಧೇಶ್ವರಾನಂದ ಸ್ವಾಮಿಗಳು ಮೊದಲಾದ ಮಹಾತ್ಮರು, ಬ್ರಹ್ಮಶ್ರೀ M. ಬಾಲವಿಶ್ವನಾಥಶರ್ಮ ಪಂಡಿತರು, ಗಂಧರ್ವಾಂಶಸಂಭೂತ ಜೋಳದರಾಶಿ ಶ್ರೀ ದೊಡ್ಡನಗೌಡರು, ಪಂಡಿತರು, ಕವಿಗಳು ಆಗಮಿಸಿದ್ದರು. ಐದು ದಿನಗಳು ಸಾಲಂಕೃತ ಸುವಿಶಾಲ ಸಭಾಮಂಟಪದಲ್ಲಿ ಅತ್ಯಂತ ಆನಂದಪ್ರದವಾಗಿ ಉಪನ್ಯಾಸಗಳು ನಡೆದವು.

ಈ ಸಮಯದಲ್ಲಿ ಶ್ರೀಮಾನ್ ಡಿ. ಪುಲ್ಲಯ್ಯ M.P. ಯವರು ಭಕ್ತಿಪೂರ್ವಕ ವಾಗಿ ಆಶ್ರಮಕ್ಕೆ ಊರ ಬಾವಿಯಿಂದ ಪೈಪುಗಳನ್ನು ಹಾಕಿಸಿ ನೀರಿನ ಸೌಕರ್ಯ ವನ್ನು ಮಾಡಿಸಿದರು. ಮತ್ತೊಂದು ಶ್ರೇಷ್ಠವಾದ ಗಂಗೆಯುಳ್ಳ ಬೋರ್‌ವೆಲ್ಲನ್ನು ಶ್ರೀ ಉಮಾಮಹೇಶ್ವರರ ಕೃಪೆಯಿಂದ ಭಕ್ತರು ಹಾಕಿಸಿದರು. ಎಲ್ಲಾ ಭಕ್ತರು ಅಖಂಡ ವಾಗಿ ಸೇವೆಯನ್ನು ಸಲ್ಲಿಸಿದರು. ಇವರ ಮಹಾಸೇವೆ, ಭಕ್ತಿ, ಪ್ರಪತ್ತಿಗಳು ಸಂಸ್ತುತ್ಯ. ಶ್ರೀ ಉಮಾಮಹೇಶ್ವರ ಪರಮಾತ್ಮನ ಪ್ರೀತಿಕರವಾದುದು.

ಶ್ರೀ ಗುರುದೇವರು ಶ್ರೀ ಕ್ಷೇತ್ರದಲ್ಲಿರುತ್ತಾ ಶ್ರೀಗುರು ಪ್ರತಿಷ್ಠ ಮಂಡಲ ಪೂಜಾದಿ ಕಾರ್ಯಗಳನ್ನು ನಡೆಸಿದರು. ಈ ಸಂದರ್ಭದಲ್ಲಿ ಶ್ರೀಗಳವರು ಅನನ್ಯ ವಾದ ಭಕ್ತಿಯಿಂದ ಶ್ರೀಗುರು, ಉಮಾಮಹೇಶ್ವರರ ಸ್ತುತಿ ಮಾಡಿದರು.

## ಉತ್ತರಾಧಿಕಾರ ವಿಧಿ

ಶ್ರೀಗುರು ಅನುಗ್ರಹ ಕಾರ್ಯಕ್ಕೆ ಶುಭಸಮಯ ತಿಥಿ, ವಾರ, ನಕ್ಷತ್ರ, ಯೋಗ, ಕರಣ ಇತ್ಯಾದಿ ಒಳ್ಳೆಯ ಮುಹೂರ್ತವನ್ನು ನೋಡುವದು ವಿಧ್ಯುಕ್ತ. ಒಂದಾನೊಂದು ಸಮಯದಲ್ಲಿ ಶ್ರೀಗುರುದೇವರ ಪ್ರೀತಿಕರವಾದ ದೇಶ ಕಾಲಗಳು ಶುಭಪ್ರದವೆಂದು ಆಗಮಗಳಲ್ಲಿ ಪರಮೇಶ್ವರನ ಆಜ್ಞೆಯಾಗಿ ಹೇಳಲ್ಪಟ್ಟಿದೆ.

ಶ್ರೀಗಳವರು ಪ್ರಾಯಶಃ ಉತ್ತಮವಾದ ಮುಹೂರ್ತವನ್ನು ನಿರ್ಣಯಿಸಿಯೇ ಈ ಕಾರ್ಯಗಳನ್ನು ಮಾಡುತ್ತಾರೆ. ಬ್ರಹ್ಮಚಾರಿ ಎಂದರೆ ಗುರುವನುಗ್ರಹಕ್ಕೆ ಪಾತ್ರ ನಾಗಿ, ಸುಸಂಸ್ಕೃತನಾಗಿ ವೇದಾಧ್ಯಯನವನ್ನು ಮಾಡುವವನೆಂದರ್ಥ. ವಿಧ್ಯುಕ್ತ

ರೀತಿ ಉಪನೀತನಾಗಿ ನಿಯಮ ನಿಷ್ಠೆಗಳಿಂದ ಗುರುಸೇವೆ, ಆಶ್ರಮ ಸೇವೆ (ಸ್ಥಾನ) ಮೊದಲಾದ ಕಾರ್ಯಗಳನ್ನಾಚರಿಸುತ್ತಾ ಶ್ರದ್ಧೆಯಿಂದ ಅಧ್ಯಯನ ಶೀಲ ಸಂಪನ್ನನಾಗಿ ವರ್ತಿಸುವ ಆತನೇ ಬ್ರಹ್ಮಚಾರಿ-ಶಿಷ್ಯನು ಎಂದು ಹೇಳಲ್ಪಡುವನು.

ಉತ್ತಮನು, ಸದ್ಭಕ್ತನು, ಸಚ್ಛೀಲವಂತನಾದವನಿಗೆ ಉತ್ತರಾಧಿಕಾರವನ್ನು ಪ್ರಸಾದಿಸುವಾಗ, ಆ ಪವಿತ್ರವಾದ ಮಂದಿರ ಅಥವಾ ಭವನದಲ್ಲಿ ಪೂರ್ವ ಭಾಗದಲ್ಲಿ ಗೋಮಯದಿಂದ ಸಾರಣೆಯನ್ನು ಮಾಡಿ ಮಂಡಲವನ್ನು ರಚಿಸಿ, ಅದರಲ್ಲಿ ವಿವಿಧ ಬಣ್ಣಗಳಿಂದ ಅಲಂಕರಿಸಿ ಭದ್ರಾಸನವನ್ನಿಟ್ಟು (ಸರ್ವತೋಭದ್ರ) ವೇದೋಕ್ತ ಪೂಜೆಗಳನ್ನಾಚರಿಸಿ, ಆ ಸಭೆಗೆ ದಯಮಾಡಿಸಿದ ಸಜ್ಜನರು ಸದ್ಭಕ್ತರ ಅನುಮತಿ ಅಂಗೀಕಾರದಿಂದ ಯಥಾಶಕ್ತಿ ಫಲ, ಪುಷ್ಪ, ಮಂತ್ರಾಕ್ಷತೆಗಳನ್ನು ಕೊಟ್ಟು ಅನಂತರ ಪಾವನ ಗಂಗೆಯಿಂದ ಪೂರ್ಣವಾದ ಸುವರ್ಣ ಕಲಶವೋ ಅಥವಾ ರಜತ ಕಲಶವೋ ಅದು ಇಲ್ಲದಾಗ ಮೃಣ್ಮಯ ಕಲಶವಾಗಲಿ ನಾಲ್ಕು ದಿಕ್ಕುಗಳಲ್ಲಿಯೂ ಮತ್ತು ಕೋಣಗಳಲ್ಲಿಯೂ ಮಂತ್ರಪೂತವಾಗಿ ಸ್ಥಾಪಿಸಿ, ಕಲಶಗಳನ್ನು ಪತ್ರ, ಪುಷ್ಪ, ಗಂಧ ಮಾಲೆಗಳಿಂದ ಅಲಂಕರಿಸಿ ಆ ಕಲಶೋದಕದಲ್ಲಿ ಶತೌಷಧಿ ಮೂಲಗಳನ್ನು (ಬೇರನ್ನು) ರತ್ನ, ಸುವರ್ಣ, ಸದ್ಬೀಜಗಳನ್ನು ಪಂಚಪಲ್ಲವಗಳನ್ನಿಟ್ಟು ಆಮೇಲೆ ಐದು ಸ್ಥಾನಗಳಲ್ಲಿ ಮುತ್ತು, ಗಜದಂತ, ಗೋರೋಜನ, ಕಮಲ, ಚಂದನ, ಕುಂಕುಮ, ಕೇಸರಿ, ಬಿಳೇಸಾಸಿವೆ, ಜೇನು, ದೇವದಾರು ಮೊದಲಾದವುಗಳನ್ನು ಹಾಕಿ ಅನಂತರ ದೈವಸತ್ವವೆಂಬ ಮಂತ್ರದಿಂದ ಆಯುಷ್ಯ, ಪುಷ್ಟಿ, ಕೀರ್ತಿ, ಅಭಿವೃದ್ಧಿಯನ್ನುಂಟು ಮಾಡುವ ವರುಣ ದೇವತಾಪರವಾದ ವೇದ ಮಂತ್ರಗಳಿಂದ, ಶುಭಲಗ್ನ ಶುಭಾಂಶದಲ್ಲಿ ಭದ್ರಾಸನೋಪವಿಷ್ಟರಾದ ಸದ್ಗುರು ದೇವರಿಂದ ಅಭಿಷಿಂಚನ ಮಾಡಿಸಿ, ಪಂಚಬ್ರಹ್ಮ ಸ್ವರೂಪಗಳಾಗಿ ಪೂಜಿಸಲ್ಪಟ್ಟ ಪಂಚಕಲಶಗಳ ಉದಕದಿಂದ ಶ್ರೀಗುರುವು, ಋತ್ವಿಜರು ವೇದ ಮಂತ್ರಗಳನ್ನು ಹೇಳುತ್ತಿರುವಾಗ ವಟು (ಬ್ರಹ್ಮಚಾರಿ) ವಿಗೆ ಕೂರ್ಚದಿಂದ ಸಂಪ್ರೋಕ್ಷಿಸಬೇಕು.

ಅನಂತರ ಶಿಷ್ಯನು ತನ್ನ ಗುರುದೇವರನ್ನು ಪಂಚಾಮೃತ, ರಸಪಂಚಕ, ಫಲ ಪಂಚಕ ಮೊದಲಾದವುಗಳಿಂದ ಸಂಪ್ರದಾಯಾನುಸಾರವಾಗಿ ಗುರು ಪರಂಪರಾ ಕ್ರಮವಾಗಿ ಪೂಜಿಸಬೇಕು. ಸದ್ಗುರುವು ಆಗ ಶ್ವೇತ ವಸ್ತ್ರವನ್ನು ಧರಿಸಿದ ಆ ವಟುವಿಗೆ (ಬ್ರಹ್ಮಚಾರಿಗೆ) ಹೂಮಾಲೆಯನ್ನು ಧಾರಣೆ ಮಾಡಿಸಿ, ಶಿಷ್ಯನನ್ನು ತನ್ನ ಸಮ್ಮುಖದಲ್ಲಿ ಕುಳ್ಳಿರಿಸಿಕೊಂಡು ಮಹಾಮಂತ್ರವನ್ನುಪದೇಶಿಸಿ, ತಮ್ಮ ಅಮೃತ ಹಸ್ತದಿಂದ ಸ್ವರ್ಣ ಲಾಂಚಿತವಾದ ರುದ್ರಾಕ್ಷಿ ಕಿರೀಟವನ್ನು ಶಿಷ್ಯನ ಮಸ್ತಕದ ಮೇಲೆ ಧರಿಸಿ, ಮಂತ್ರಪೂತವಾದ ಕಾಷಾಯಾಂಬರ ಕಾಂಚನ ಚೇಲಗಳನ್ನು ಕೊಟ್ಟು ಉತ್ತರಾಧಿಕಾರ ಯೋಗಪಟ್ಟ ಶ್ರೀ ಉಮಾಮಹೇಶ್ವರ ಗುರುಪೀಠ ಪರಂಪರಾ ಸಂಸ್ತುತಿ ಸ್ಮರಣೆ ಮಾಡಿಸುವದು.

ಅನಂತರ ಸರ್ವವಿಧ ಮಂಗಳವಾದ್ಯ ವಿಶೇಷಗಳು, ಋತ್ವಿಜರ ವೇದಮಂತ್ರ ಪಠನೆಯಾಗುತ್ತಿರಲು, ಉತ್ತರಾಧಿಕಾರಿಯಾದ ಬ್ರಹ್ಮಚಾರಿಯನ್ನು ದರ್ಭ ಕೂರ್ಚ ದಿಂದ ಪಾವನಗಂಗಾ ಕಲಶಗಳಿಂದ ಸಂಪ್ರೋಕ್ಷಣೆ ಮಾಡಿ, ಶ್ರೀ ರುದ್ರ ಮಂತ್ರಗಳನ್ನು ಹೇಳುತ್ತಾ ಭಸ್ಮರುದ್ರಾಕ್ಷಿಗಳನ್ನು ಧಾರಣ ಮಾಡಿಸಿ ಸರ್ವವಿಧೋಪಚಾರಗಳಿಂದ ಉತ್ತರಾಧಿಕಾರವನ್ನು ಶಾಸ್ತ್ರೀಯವಾಗಿ ಸಮರ್ಪಿಸುವದು.

ಆಗ ಆತನು ಗುರುಸ್ಥಾನವನ್ನು ಅಲಂಕರಿಸಿದವನಾಗಿ ಸಂತತವು ಮಹಾಮಂತ್ರ ವನ್ನು ಜಪಿಸುತ್ತಾ ಧ್ಯಾನಾನುಷ್ಠಾನ ಸಂಪನ್ನನಾಗಿ ಗುರುಸಂಪ್ರದಾಯದಲ್ಲಿ ಪರಮ ಭಕ್ತಿ ವಿಶ್ವಾಸವುಳ್ಳವನಾಗಿ ವೇದ, ಆಗಮ, ಶಾಸ್ತ್ರಾರ್ಥವನ್ನರಿತವನಾಗಿ ಶಾಸ್ತ್ರೀಯ ವಾದ ಆಚಾರ ವಿಚಾರ ಸಂಪತ್ತಿನಿಂದ ಸದ್ಭಕ್ತರು ಸಚ್ಛಿಷ್ಯರಿಗೆ ಉಪದೇಶ ವನ್ನೀಯುವುದು.

ಇಂಥಾ ಉತ್ತಮವಾದ ಗುರು ಸಂಪ್ರದಾಯ ಉತ್ತರಾಧಿಕಾರಿಗಳಾಗಲು ರೋಗಿ ಗಳಾಗಲಿ, ಕುರುಡರಾಗಲಿ, ಕುಂಟರಾಗಲಿ, ಅತ್ಯಂತ ಕಾಮುಕರಾಗಲಿ, ವಿಶ್ವಾಸಹೀನ ರಾಗಲಿ, ದುರಹಂಕಾರಿಗಳಾಗಲಿ, ದುಷ್ಟ ಸ್ವಭಾವಿಗಳಾಗಲಿ, ಅಶ್ರದ್ಧಾಳುಗಳಾಗಲಿ, ರಹಸ್ಯ ಪರಸ್ತ್ರೀ, ಪರದ್ರವ್ಯಾಸಕ್ತಿ ಮೊದಲಾದ ಕೆಟ್ಟ ಗುಣಗಳುಳ್ಳವರಾಗಲಿ ಯಾವ ಪ್ರಕಾರದಿಂದಲೂ ಅರ್ಹರಲ್ಲ. ಅಂಥವರನ್ನು ಅವರ ಗುಣಗಳೇ ಹೊರಗೆಡಹುವವು. ಇವು ಧರ್ಮಸೂತ್ರ.

ಇದನ್ನು ಗಮನಿಸಿ ಉತ್ತಮರಾದವರಿಗೆ ಆ ಉತ್ತರಾಧಿಕಾರವನ್ನು ಶಾಸ್ತ್ರೀಯ ವಾಗಿ ಸಂಪ್ರದಾಯ ಗುರು, ದೈವ ಸಮಕ್ಷಮದಲ್ಲಿ ಪ್ರಸಾದಿಸುವುದು ವಿಧ್ಯುಕ್ತ. ಆದ್ದರಿಂದ ಸದಾಚಾರಿಯು, ಅಹಂಕಾರ ಇಲ್ಲದವನು, ಸತ್ಯಸಂಭಾಷಣ ಶುದ್ಧ ಮನಸ್ಸಂಪನ್ನನು, ಬ್ರಹ್ಮಜ್ಞಾನ ಶಾಸ್ತ್ರಾರ್ಥ ಸಂಪನ್ನನು, ಆತ್ಮಜ್ಞಾನ ಬೋಧೆಗೆ ಸಾಮರ್ಥ್ಯ ಉಳ್ಳವನು, ಸಂಪ್ರದಾಯ ಸದ್ಭಕ್ತಿಯುಳ್ಳವನಿಗೆ ಗುರುಪೀಠ ಸಮಾ ರೋಹಣ ಯೋಗ್ಯವು; ಮಂಗಳಪ್ರದವು; ಲೋಕಾನುಗ್ರಹ, ಭಕ್ತಾನುಗ್ರಹ, ಶಿಷ್ಯಾನುಗ್ರಹಕಾರವು. ಸಮಬುದ್ಧಿ, ಬ್ರಹ್ಮಾತ್ಮತತ್ವ ದೃಷ್ಟಿ, ನಿಜನಿಷ್ಠೆಯುಳ್ಳವನು ಸದ್ಗುರುವು.

## ಶ್ರೀ ರುದ್ರಾಧ್ಯಾಯ ಪ್ರಶಸ್ತಿ

ಶ್ರೀ ರುದ್ರನೆಂದರೆ ತೇಜಸ್ವಾಂತನಾದ ಮಹಾದೇವನು. ಆತನೇ ಶಿವನು, ಶಂಕರನು, ಪಶುಪತಿ, ಉಮಾಮಹೇಶ್ವರ, ಭವ ಈ ಮೊದಲಾದ ಅಸಂಖ್ಯಾತ ಅನ್ವರ್ಥ ನಾಮಗಳಿಂದ ಒಪ್ಪುವ ಶ್ರೀ ರುದ್ರನು ಕರುಣಾಸಾಗರ, ಸರ್ವಜ್ಞ, ಸರ್ವೇ ಶ್ವರ, ಸರ್ವಾಂತರ್ಯಾಮಿ, ಸಂತತ ಉಪಾಸ್ಯನಾದ ಮನೋಹರ ನಿರ್ವಿಕಾರ

ಶಿವರೂಪನು. ಅನುದಿನ ಶ್ರೀ ರುದ್ರಾರ್ಚನೆ ವೈದಿಕ ವಿಧಿಗಳಿಂದ ಮಾಡುವದು ಮುಕ್ತಿಪ್ರದ.

ಶ್ರೀ ರುದ್ರಾಧ್ಯಾಯವೆಂದರೆ ನಮಕ, ಚಮಕಗಳಿರುವ ರುದ್ರ ಪ್ರಕರಣ. ಇದು ಕೃಷ್ಣ ಯಜುರ್ವೇದ ತೈತ್ತರೀಯ ಸಂಹಿತೆಯಲ್ಲಿ ಚತುರ್ಥಕಾಂಡ ಪಂಚಮ ಪ್ರಪಾಠಕದಲ್ಲಿ ನಮಕ "ನಮಸ್ತೇ ರುದ್ರಮನ್ಯವ" ಎಂದು ಪ್ರಾರಂಭವಾಗಿ "ಜಂಭೇ ದಧಾಮಿ" ಎಂದು ಪೂರ್ಣವಾಗುವದು. ಹನ್ನೊಂದು ಅನುವಾಕಗಳಿಂದ ಕೂಡಿದೆ. ಇನ್ನು ಚಮಕ ಸಪ್ತಮ ಪ್ರಪಾಠಕದಲ್ಲಿದೆ. ಇದು ಏಕಾದಶಾನುವಾಕಗಳಾಗಿದೆ. "ರುದ್ರಸ್ಯೇದಂ ರುದ್ರೀಯಂ" ರುದ್ರನಿಗೆ ಸಂಬಂಧವಾದ್ದರಿಂದ ರುದ್ರೀಯವೆನ್ನಲ್ಪಡುತ್ತೆ. ಇದರಲ್ಲಿ ಅನೇಕ ರುದ್ರನಾಮಗಳು ಇದ್ದುದರಿಂದ ಇದಕ್ಕೆ ಶತರುದ್ರೀಯವೆಂದು ಹೆಸರಾಯಿತು.

"ರುತಂ (ಧಂ) ಸಂಸಾರ ದುಃಖಂ ದ್ರಾವಯತೀತಿ ರುದ್ರಃ" ಅಂದರೆ ಸಂಸಾರ ದುಃಖವನ್ನು ನಾಶಮಾಡುವದರಿಂದ ರುದ್ರನೆಂದು ಅರ್ಥ. "ರುತೌ ನಾದಾಂತೇ ದ್ರವತಿ ದ್ರಾವಯತೀತಿ ರುದ್ರಃ". ನಾದದ ಅಂತ್ಯದಲ್ಲಿ ದ್ರವಿಸುವನಾದ್ದರಿಂದ ರುದ್ರನೆಂದು ಹೆಸರು. "ರುತ್ಯಾ ವೇದರೂಪಯಾ ಧರ್ಮಾದೀ ನವಲೋಕಯತಿ ಪ್ರಾಪಯತೀತಿ ರುದ್ರಃ" ಪ್ರಣವ ರೂಪದಿಂದ ಅಂದರೆ ಓಂಕಾರದಿಂದ ತನ್ನನ್ನು ಹೊಂದುವಂತೆ ಮಾಡುವನಾದ್ದರಿಂದ ರುದ್ರನೆಂದು ಅರ್ಥ. "ರುತಿಂ ಶಬ್ದಂ ವೇದಾತ್ಮಾನಂ ಬ್ರಹ್ಮಣೇ ದಧಾತಿ ಕಲ್ಪಾದಾವಿತಿ ರುದ್ರಃ" ಕಲ್ಪಾದಿಯಲ್ಲಿ ಬ್ರಹ್ಮನಿಗೆ ವೇದಗಳನ್ನು ಕೊಟ್ಟವನು ರುದ್ರ. "ಶತಮನಂತಾನಿ ರುದ್ರ ನಾಮಧೇಯಾನಿ ಯಸ್ಮಿನ್ ತಚ್ಛತ ರುದ್ರೀಯಂ" ಇಲ್ಲಿ ಶತವೆಂದರೆ ಅಸಂಖ್ಯಾತ ರುದ್ರನಾಮಧೇಯ ಪ್ರಶಂಸೆ ಇದ್ದುದರಿಂದ ಶತರುದ್ರೀಯ ಅನ್ನಲ್ಪಡುವುದು. ಯಜುರ್ವೇದ ಶಾಖೆಗಳಲ್ಲಿ ಪಠಿಸಲ್ಪಡುವುದರಿಂದ ಇದನ್ನು ಶತರುದ್ರೀಯವೆನ್ನುವರು. "ಶತೇ ಶಾಖಾಸು ಪಠ್ಯತೇ ರುದ್ರೀಯಂ ಶತರುದ್ರೀಯಂ" "ಸರ್ವೋಪನಿಷದಂ ಸಾರೋರುದ್ರಾಧ್ಯಾಯಃ"

ಎಲ್ಲಾ ಉಪನಿಷತ್ತುಗಳ ಸಾರಸರ್ವಸ್ವವೇ ರುದ್ರಾಧ್ಯಾಯ. ಪಂಚಮ ವೇದವಾದ ಮಹಾಭಾರತ ದ್ರೋಣಪರ್ವ, ಅನುಶಾಸನಿಕ ಪರ್ವಗಳಲ್ಲಿ ಈ ಶತರುದ್ರೀಯೋತ್ತಮತ್ತ್ವವು ವರ್ಣಿಸಲ್ಪಟ್ಟಿದೆ. "ನಮಕಂ ಚಮಕಂ ಚೈವ ಪೌರುಷಂ ಸೂಕ್ತಮೇವಚ, ನಿತ್ಯಂತ್ರಯಂ ಪ್ರಯುಂಜ್ಯಾನಾಂ ಬ್ರಹ್ಮಲೋಕೇ ಮಹೀಯತೇ". ನಮಕ ಚಮಕ ಪುರುಷ ಸೂಕ್ತಗಳನ್ನು ನಿತ್ಯಪಾರಾಯಣ ಮಾಡುತ್ತಾ ಶಿವಾಭಿಷೇಕವನ್ನು ಮಾಡುವಾತನು ಬ್ರಹ್ಮಲೋಕವನ್ನು ಅಂದರೇ ಬ್ರಹ್ಮತ್ವವನ್ನು ಹೊಂದುವನು. "ಸತತಂ ರುದ್ರ ಜಾಪ್ಯೋಽಸೌ ಪರಾಂ ಮುಕ್ತಿಮವಾಪ್ಸ್ಯತಿ" ನಿರಂತರ ರುದ್ರಾಧ್ಯಾಯನವನ್ನು ಜಪಿಸುವ, ಪಠಿಸುವ ಮಾನವನು ಮುಕ್ತಿಯನ್ನೊಂದುವನು ಎಂದು ಶ್ರುತಿಗಳು ಹೇಳುತ್ತವೆ.

ಶ್ರೀ ರುದ್ರವನ್ನು ಮಹಾನ್ಯಾಸಪೂರ್ವಕವಾಗಿ ಹನ್ನೊಂದು ಅನುವಾಕಗಳುಳ್ಳ ನಮಕವನ್ನು ಹೇಳಿ, ಚಮಕದಲ್ಲಿನ ಒಂದು ಅನುವಾಕ ಹೇಳಿ ಷೋಡಶೋಪಚಾರ ಗಳನ್ನು ಮಾಡಿದರೆ ಇದು ಒಂದು ಆವೃತ್ತಿ ಎನ್ನುತ್ತಾರೆ. ಹೀಗೆ ಹನ್ನೊಂದು ಸಾರಿ ಚಮಕದಲ್ಲಿನ ಒಂದೊಂದು ಅನುವಾಕವನ್ನು ಅಧ್ಯಯನ ಮಾಡುತ್ತಾರೆ. ಹೀಗೆ ಮಾಡುವುದನ್ನು ಏಕಾದಶವಾರ ರುದ್ರಾಭಿಷೇಕವೆನ್ನುತ್ತಾರೆ. "ಏಕಪಾಠೋ ನಮಕಸ್ತ್ವಸ್ಯಹ್ಯನುವಾಕಃ ಪರಸ್ಯಚ" ಇತ್ಯಾದಿ ಅನೇಕ ರುದ್ರಾಭಿಷೇಕ ವಿಷಯಗಳನ್ನು ಶ್ರೀಯವರು ತಿಳಿಸಿದರು. "ಶ್ರೀ ರುದ್ರದ ಸಪ್ತಮಾನುವಾಕದಲ್ಲಿ ಸಾಯಣಾಚಾರ್ಯ ಭಾಷ್ಯರೀತಿ ಧ್ಯಾನಶ್ಲೋಕ ಒಂದಿದೆ. ಅಂದರೆ ನಟರಾಜ ರೂಪನಾದ ಶಿವನ ಸ್ತುತಿ. ಸನಕಾದಿ ಸಿದ್ಧರು, ಪಾಣಿನ್ಯಾದಿ ಆಚಾರ್ಯರೂ ನಟರಾಜ ರೂಪದಿಂದ ಉದ್ಭವಿಸಿದ್ದ ಶಿವನನ್ನು ಕಂಡರು."

"ನೃತ್ತಾವಸಾನೇ ನಟರಾಜ ರಾಜೋ ನನಾದಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಃ ಸನಕಾದಿ ಸಿದ್ಧಾನ್, ಏತದ್ವಿಮರ್ಶೇ ಶಿವಸೂತ್ರಜಾಲಂ ॥"

1) ಅ ಇ ಉಣ್ 2) ಋ ಲೃಕ್ 3) ಏ ಓ ಙ್ 4) ಐ ಔ ಚ್ 5) ಹಯವರಟ್ 6) ಲ ಣ್ 7) ಞ ಮಙಣನಮ್ 8) ಝ ಭ ಞ್ 9) ಘ ಢ ಧ ಷ್ 10) ಜ ಬ ಗ ಡ ದ ಶ್ 11) ಖ ಫ ಛ ಠ ಥ ಚ ಟ ತ ವ್ 12) ಕ ಪ ಯ್ 13) ಶ ಷ ಸ ರ್ 14) ಹ ಲ್..

ಇತಿ ಮಾಹೇಶ್ವರಾಣಿ ಸೂತ್ರಾಣಿ ಅಣ್, ಅಕ್ ಇತ್ಯಾದಿ ಸಂಜ್ಞಾರ್ಥಾನಿ ॥

ಹೀಗೆ ನಟರಾಜ ರೂಪದಿಂದಿದ್ದ ರುದ್ರನ ವಿಶೇಷಗಳು ಇವೆ.

ನಮಕದ 8ನೆಯ ಅನುವಾಕದಲ್ಲಿ ಸಮಸ್ತಲೋಕ ಶಿವಂಕರವು ಉಪಾಸ್ಯವು ಆದ ಶ್ರೀ ರುದ್ರ ಭಗವಂತನ ನಮಸ್ಕಾರವು ಹೇಳಲ್ಪಟ್ಟು, ಮುಖ್ಯವಾಗಿ ಶ್ರೀ ಶಿವ ಪಂಚಾಕ್ಷರ ಮಹಾಮಂತ್ರವು ಈ ಅನುವಾಕದಲ್ಲಿ ಗರ್ಭಿತವಾಗಿರುವದರಿಂದ ಶ್ರೀ ರುದ್ರಾಧ್ಯಾಯವೆಂಬ ಮಣಿಹಾರದಲ್ಲಿ ನಾಯಕಮಣಿಯಂತೆ ಇದೆ. ಶ್ರೀ ರುದ್ರನು ಮೋಕ್ಷವನ್ನು ಕೊಡುವನಾದ್ದರಿಂದ ಮುಮುಕ್ಷುಗಳು ಈ ರುದ್ರಾಧ್ಯಾಯವನ್ನು ಮುಖ್ಯ ವಾಗಿ ಉಪಾಸಿಸುವದು ಒಳ್ಳೆಯದು.

"ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ।
ತತ್ರ ಪಂಚಾಕ್ಷರೀ ತಸ್ಯಾಂ ಶಿವಂ ಇತ್ಯಕ್ಷರ ದ್ವಯಮ್॥ "

## 29 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಶ್ರೀಕ್ಷೇತ್ರ ಉಮಾಮಹೇಶ್ವರಾಶ್ರಮ, ಲತ್ತವರ 10–7–73.

ಈ ಮಹಾವ್ರತವು ಮೊದಲಿನಂತೆ ಯಥಾರೀತಿ ವಿಧ್ಯುಕ್ತವಾಗಿ ಆಯಾ ಸ್ಥಾನ ಗಳಲ್ಲಿ ಪೂಜಾನುಷ್ಠಾನ ಶಾಸ್ತ್ರ ಶ್ರವಣಾದಿಗಳಿಂದ 10–7–73 ಮೊದಲು

10-11-73ರ ವರೆಗೆ ಶಿವಪ್ರದವಾಗಿ ನಡೆದು ಸಾಂಗಮಂಗಳವಾಯಿತು. ಗುಂತಕಲ್ಲು ಶ್ರೀ ಉಮಾಮಹೇಶ್ವರ ಆಶ್ರಮದಲ್ಲಿ ಶ್ರೀಗಳವರ ಗುರುದೇವರ ಪುಣ್ಯಾರಾಧನ ಕಾರ್ಯಕ್ರಮವು 3 ದಿನಗಳು ಆನಂದಪ್ರದವಾಗಿ ನಡೆಯಿತು.

ಅನಂತರ ಕರ್ನೂಲು ಭಕ್ತರು ಬ್ರಹ್ಮಶ್ರೀ ತಾಂಡ್ರ ಕೃಷ್ಣಮೂರ್ತಿ, ಶ್ರೀ V. ಶೇಷಪ್ಪ, ಶ್ರೀ C. ವೀರಣ್ಣ ಶೆಟ್ಟಿ, ಶ್ರೀ ಪುಲ್ಲಪ್ಪ. *B.A.* ಶ್ರೀ K. ಶಂಕರಯ್ಯ, ಶ್ರೀ P. ಪುಲ್ಲಯ್ಯ ಇನ್ನಿತರರ ಪ್ರಾರ್ಥನಾನುಸಾರ ಇಸ್ಕಾಲ ಸತ್ರ ಮತ್ತು ವಾಸವೀ ಗೀತಾ ಮಂದಿರದಲ್ಲಿ ಶ್ರೀಗಳವರ ಗುರುಪೀಠದೊಡನೆ ಪೂಜಾನುಷ್ಠಾನಾದಿಗಳಿಂದ ಒಂದು ತಿಂಗಳು ಪ್ರಸ್ಥಾನತ್ರಯ ವಿವರಣ ಉಪನ್ಯಾಸಗಳನ್ನು ಮಾಡಿದರು. ಈ ಮಧ್ಯದಲ್ಲಿ ವಿಶ್ವ ಹಿಂದೂ ಪರಿಷತ್ತು ಸಭೆ ಆಯಿತು.

ಶ್ರೀಗಳವರು ಅಪೂರ್ವವಾದ ಸಂದೇಶವನ್ನು ಕೊಟ್ಟರು. ಅನಂತರ ಕಡಪ, ಗುತ್ತಿ, ಜಮ್ಮಲಮಡುಗು ಮೊದಲಾದ ಸ್ಥಾನಗಳಿಗೆ ಭಕ್ತರ ಭಾವನಾನುಸಾರ ಸ್ವಾಮಿಗಳವರು ದಯಮಾಡಿಸಿ ಆಧ್ಯಾತ್ಮಿಕೋಪನ್ಯಾಸಗಳನ್ನು ಮಾಡಿದರು.

ಆಮೇಲೆ ಶ್ರೀ ಶಂಕರ ಜಯಂತ್ಯುತ್ಸವವು, ಪರಮಗುರುಗಳ ಆರಾಧನೆ, 18-6-74 ಪೂಜ್ಯ ಶ್ರೀಗಳವರ ಜಯಂತ್ಯುತ್ಸವವು ವಿಧ್ಯುಕ್ತವಾಗಿ ನಡೆದವು.

## 30 ನೆಯ ಶ್ರೀಚಾತುರ್ಮಾಸ್ಯ ಮಹಾವ್ರತ

### ನಂದ್ಯಾಲ, ಗುತ್ತಿ. 30-6-74.

ಸ್ವಸ್ತಿ ಶ್ರೀ ಆನಂದ ನಾಮ ಸಂ॥ ಆಷಾಢ ಶುದ್ಧ ಏಕಾದಶಿ 30-6-74 ಮೊದಲು ಕಾರ್ತಿಕ ಶುದ್ಧ ದ್ವಾದಶಿ 26-11-74 ರವರಿಗೂ ವಿಧ್ಯುಕ್ತವಾಗಿ ಹಾಲಹರ್ವಿ, ನಂದ್ಯಾಲ, ಗುತ್ತಿ ಇತ್ಯಾದಿ ಸ್ಥಳಗಳಲ್ಲಿ ಭಾಷ್ಯಪಾಠ ಪ್ರವಚನಾದಿಗಳಿಂದ ಅತ್ಯುತ್ತಮ ರೀತಿಯಲ್ಲಿ ನಡೆಯಿತು.

ಅಧ್ಯಸ್ತಸ್ಯ ಕುತಃ ಸತ್ವಂ, ಅಸತಸ್ತು ಕುತೋಜನಿಃ ।
ಅಜಾತಸ್ಯ ಕುತೋ ಮೃತ್ಯುಃ, ಪ್ರಾರಬ್ಧಮಸತಃ ಕುತಃ ॥

"ಅಹಂ ಹಿ ಸರ್ವಂ ನಕಿಂಚಿದನ್ಯತ್" ॥ "ಆತ್ಮಾನಂ ವಿದ್ಧಿ ಬ್ರಹ್ಮಾಸ್ಮೀತಿ........" "ಸಚ್ಚಿದಾನಂದಮಾಹಾತ್ಮಾನಮದ್ವಿತೀಯಂ ಬ್ರಹ್ಮಭಾವಯೇತ್" ॥ "ಅಹಂ ಬ್ರಹ್ಮಾಸ್ಮೀತ್ಯನುಸಂಧಾನಂ ಕುರ್ಯಾತ್" ॥"ಆಕಾಶವತ್ ಸರ್ವಗತಶ್ಚ ನಿತ್ಯಃ" ॥ "ಏಕಸ್ತಥಾ ಸರ್ವ ಭೂತಾಂತರಾತ್ಮ" ॥ "ಏಕೋ ದೇವಃ ಸರ್ವಭೂತೇಷು ಗೂಢಃ"॥ "ಅವಿಕಾರೀ ವಾಽಯಮಾತ್ಮಾ" ॥ "ಮನಸೈವೇದ ಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ" ॥ "ಅಂಗುಷ್ಠ ಮಾತ್ರಃ ಪುರುಷೋಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ" ॥ "ಸಬಾಹ್ಯಾಭ್ಯಂತರೋಹ್ಯಜಃ". ಈ ಮೊದಲಾದ ವಾಕ್ಯಗಳನ್ನು

ವಿವರಿಸಿದರು. ಈ ಉಪನಿಷದ್ವಾಕ್ಯಾರ್ಥಗಳನ್ನು ನಾಲ್ಕು ತಿಂಗಳು ಅಪೂರ್ವವಾಗಿ ಬೋಧಿಸಿದರು.

ಶ್ರೀ ಗೋಕರ್ಣ ಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು. ಇಲ್ಲಿಯಿಂದಲೇ ದಕ್ಷಿಣಯಾತ್ರೆ ಹೊರಟರು. ಈ ದಕ್ಷಿಣ ಯಾತ್ರೆಯಲ್ಲಿ ತಮ್ಮ ಗುರುಗಳ ಪುಣ್ಯಾರಾಧನೆಯನ್ನು ವೈಭವದಿಂದ ಶಿವಪ್ರದವಾಗಿ ನಡೆಸಿ ಮಹಾಮಂಗಳಗೊಳಿಸಿದರು. ಶ್ರೀಗುರು ಶ್ರೀ ಉಮಾಮಹೇಶ್ವರರನ್ನು ಪೂರ್ಣ ಗಂಗೆಯಿಂದ ಅಭಿಷೇಕವಂ ಗೈದು ಗಂಗೆಯ ಮಹಾತ್ಮ್ಯೆಯನ್ನು ಬೋಧಿಸಿದರು. ಅನಂತರ ಶ್ರೀಗಳವರು ನಂದ್ಯಾಲ, ಚಿಂದಕೂರು, ಕಡಪ, ಮೊದಲಾದ ಸ್ಥಳಗಳಲ್ಲಿ ಉತ್ತಮ ರೀತಿಯಿಂದ ತಾತ್ವಿಕ ಪ್ರಬೋಧೆಯನ್ನು ಮಾಡಿದರು. ಕಡಪದಲ್ಲಿ ಸೆಂಟ್ರಲ್ ಬ್ಯಾಂಕು ಆಫೀಸರರಾದ ಶ್ರೀ A. ಆನಂದಂ "ಗುರು ಸೇವಾ ದುರಂಧರ" ಇವರ ಸೇವೆ ಸಂಸ್ತುತ್ಯವಾದದ್ದು. ಪರಮಭಕ್ತಿ ಸಂಪನ್ನವು. ಅನಂತರ ಶ್ರೀ ಗಂಡಿಕ್ಷೇತ್ರ ರಾಮಕೃಷ್ಣಾನಂದ ಸ್ವಾಮಿಗಳ ಭೂಮಾನಂದಾಶ್ರಮಕ್ಕೆ ದಯಮಾಡಿಸಿದರು.

ಅಜ್ಜಂಪುರ (ಮೈಸೂರು ರಾಜ್ಯ) ಪೂಜ್ಯ ಶ್ರೀ ಶಂಕರಾನಂದಾಶ್ರಮ ಟ್ರಸ್ಟು ಕಮೀಟಿಯವರ ಭಕ್ತಿಭಾವಾನುಸಾರ ಅಜ್ಜಂಪುರ ಶ್ರೀ ಶಂಕರಾನಂದಾಶ್ರಮಕ್ಕೆ ದಯ ಮಾಡಿಸಿ ಶ್ರೀ ಶಂಕರಾನಂದ ಸ್ವಾಮಿಗಳವರ ಪುಣ್ಯಾರಾಧನ ಕಾರ್ಯಕ್ರಮವನ್ನು ನೋಡಿಕೊಂಡು, ಶ್ರೀಗಳವರು ಮೊದಲಿದ್ದ ಹೊಗರೇಖಾನ್‌ಗಿರಿ ಪುಣ್ಯಕ್ಷೇತ್ರ ಶ್ರೀ ಶಿವಾನಂದ ಸೇವಾಶ್ರಮವನ್ನು ಸಂದರ್ಶಿಸಿ ಅಜ್ಜಂಪುರ ಆಶ್ರಮಕ್ಕೆ ಬಂದರು. ಅಜ್ಜಂಪುರದಲ್ಲಿ ಮಹಾತ್ಮರ ಉಪನ್ಯಾಸ ಕಾರ್ಯಕ್ರಮ ಎಷ್ಟೋ ಅಪೂರ್ವವಾಗಿ ನಡೆದು ಪೂರ್ಣವಾಯಿತು. ಅಜ್ಜಂಪುರದ ಮತ್ತು ಶ್ರೀಗಿರಿ ಆಶ್ರಮದ ಸರ್ವಭಕ್ತರ ಮತ್ತು ಶ್ರೀ ಸುಬ್ಬಯ್ಯ ಇಂಜಿನಿಯರ್ ಮೊದಲಾದವರ ಬೀಳ್ಕೊಡಿಗೆಯನ್ನು ಪಡೆದು ಲತ್ತವರ ಶ್ರೀ ಕ್ಷೇತ್ರಕ್ಕೆ ದಯಮಾಡಿಸಿದರು. 16–5–75 ಶ್ರೀ ಶಂಕರ ಜಯಂತಿ ಮಹೋತ್ಸವವು ಜಯಪ್ರದವಾಗಿ ನಡೆಯಿತು. ಪರಮ ಗುರುಗಳ ಆರಾಧನೆಯು ನಡೆಯಿತು. ಶ್ರೀಗಳವರ ಜಯಂತ್ಯುತ್ಸವವು ವಿಧ್ಯುಕ್ತವಾಗಿ ಜರುಗಿತು. ಉಪನಿಷದ್ಭಾಷ್ಯ ಪ್ರವಚನಗಳಾದವು.

## 31 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಕರ್ನೂಲು, ಅನಂತಪುರ 19-7-75

ಶ್ರೀ ರಾಕ್ಷಸ ನಾಮ ಸಂ|| ಆಷಾಢ ಶುದ್ಧ ಏಕಾದಶಿ ಮಹಾವ್ರತವು ಪ್ರಾರಂಭವಾಗಿ ಕಾರ್ತಿಕ ಶುದ್ಧ ದ್ವಾದಶಿವರಿಗೂ ಮೊದಲಿನಂತೆ ಯಥಾ ಶಾಸ್ತ್ರವಾಗಿ ಕಾರ್ಯಕ್ರಮಗಳು ನಡೆದು ಸಾಂಗಮಂಗಳವಾಯಿತು.

ಉತ್ತಮ ಭಕ್ತರಿರುವ ಚಿಂದುಕೂರಿನಲ್ಲಿ ಪಶ್ಚಿಮವಾಹಿನಿ ಕುಂದ ನದಿಯಲ್ಲಿ ವಿಧ್ಯುಕ್ತವಾಗಿ ದೀಕ್ಷಾ ವಿರಮಣವಾಯಿತು. 29-11-75 ರಂದು ಶ್ರೀಗಳವರ ಪುಣ್ಯಾರಾಧನೆ ವಿಧ್ಯುಕ್ತವಾಗಿ ನಡೆಯಿತು.

ಅನಂತರ ಶ್ರೀಗಳವರು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮಕ್ಕೆ ದಯ ಮಾಡಿಸಿ ವಾಕ್ಯಸುಧೆ, ಬ್ರಹ್ಮಸೂತ್ರಗಳ ಪ್ರವಚನ ಮಾಡಿಸಿದರು.

15-12-75 ಡಿವೈನ್ ಲೈಫ್ ಸೊಸೈಟಿ ಕಾರ್ಯಕರ್ತರು ಶ್ರೀ P. ವೆಂಕಣ್ಣ ಶೆಟ್ಟಿ ಮೊದಲಾದ ಪುರ ಪ್ರಮುಖರು ಭಕ್ತಿಯಿಂದ ಸ್ವಾಮಿಗಳನ್ನು ಬಳ್ಳಾರಿಗೆ ಕರೆದು ಕೊಂಡು ಹೋಗಿ ಬಳ್ಳಾರಿ ಶ್ರೀ ವಾಸವೀ ಭವನದಲ್ಲಿ ಶ್ರೀಗಳವರ ಉಪನ್ಯಾಸ ಕಾರ್ಯಕ್ರಮಗಳು ನಡೆಯುವಂತೆ ಎಲ್ಲಾ ಏರ್ಪಾಟುಗಳು ಮಾಡಿದರು.

ಪ್ರಾತಃಕಾಲ ಪೂಜಾನುಷ್ಠಾನಾನಂತರ ಅಲ್ಲಿಯವರು ಬಯಸಿದ ಪ್ರಕಾರ ಆತ್ಮ ಬೋಧೆ ಪ್ರವಚನವು. ಸಾಯಂಸಮಯ ಪ್ರದೋಷ ಪೂಜಾನಂತರ 7 ಗಂ|| ಇಂದ 8 ಗಂ|| ವರಿವಿಗೂ ಭಗವದ್ಗೀತಾ ಪ್ರವಚನ ಕನ್ನಡ ಭಾಷೆಯಲ್ಲಿ ಮಾಡಿದರು. ಸಹ ಸ್ರಾರು ಜನ ಭಕ್ತಾದಿಗಳು ಬಂದು ಶ್ರೀಗಳವರ ಬೋಧೆಯನ್ನು ಆಲಿಸಿದರು. 10 ದಿನಗಳು ಈ ಕಾರ್ಯಕ್ರಮವು ಅಖಂಡವಾಗಿ ನಡೆಯಿತು.

ಪರಮ ಭಕ್ತರಾದ ಶ್ರೀ ರಾಮಕೃಷ್ಣ ಟ್ರೇಡರ್ಸ್ ಶ್ರೀ ನಂದಿಪಿ ನಾರಾಯಣಪ್ಪ ಸೋದರರು ಮೊದಲಾದವರೆಲ್ಲಾ ಭಕ್ತಿ ಶ್ರದ್ಧೆಗಳಿಂದ ಎಲ್ಲಾ ವಿಧವಾದ ಸೇವೆಯನ್ನು ಸಲ್ಲಿಸಿದರು.

ಅನಂತರ ಉತ್ತಮ ಭಕ್ತರಾದ ಹೈದರಾಬಾದ್ ಉಸ್ಮಾನ್‌ಗಂಜ್ ಶ್ರೀ ಕೆ. ನರ ಸಿಂಹರಾವು, ಅವರ ಸಹೋದರರು ಮತ್ತು ಶ್ರೀ ದಾಚೇಪಲ್ಲಿ ನರಸಿಂಹರಾವು ಮೊದ ಲಾದವರ ಭಕ್ತಿ ಭಾವಗಳನ್ನು ಮನ್ನಿಸಿ 25-12-75 ಹೈದರಾಬಾದಿಗೆ ದಯ ಮಾಡಿಸಿದರು.

ಶ್ರೀಗಳವರಿಗೆ ಯಥಾರೀತಿ ತಮ್ಮ ಪೂಜಾನುಷ್ಠಾನಾದಿಗಳಿಗೆ ಬೇಕಾದ ಅನು ಕೂಲಗಳನ್ನು ಮಾಡಿದರು. ಉದಯ ಸಾಯಂಕಾಲ ದೊಡ್ಡದಾದ ಬಹಿರಂಗ ಸಭೆ ಯಲ್ಲಿ ಶ್ರೀಗಳವರು ಆಧ್ಯಾತ್ಮತತ್ತ್ವ ಪ್ರವಚನಗಳನ್ನು ನಡೆಯಿಸಿದರು. ಅಲ್ಲಿ ನೆರೆದ ಭಕ್ತಾದಿಗಳು ಮಹದಾನಂದ ಹೊಂದಿದರು.

ಅನಂತರ ಇದೇ ಪ್ರಕಾರ ಫೀಲ್‌ಖಾನಾದಲ್ಲಿನ ಕನ್ನಿಕಾಪರಮೇಶ್ವರೀ ಆಲಯ ದಲ್ಲಿ ಪ್ರವಚನಾದಿ ಕಾರ್ಯಗಳನ್ನು ನಡೆಸಿದರು. ಎಲ್ಲಾ ಜನರು ಶ್ರದ್ಧೆಯಿಂದ ಶ್ರವಣ ಪೂಜಾದಿಗಳಲ್ಲಿ ಭಾಗವಹಿಸಿ ಆನಂದಭರಿತರಾದರು.

"ಇದೇ ಜನ್ಮದಲ್ಲಿ ಬ್ರಹ್ಮಜ್ಞಾನವನ್ನು ಅಂದರೆ ಸ್ವಸ್ವರೂಪ ನಿಷ್ಠೆಯನ್ನು ಭಕ್ತಿ ಶ್ರದ್ಧೆಗಳಿಂದಲೂ ಮಹಾವಾಕ್ಯ ಶ್ರವಣ ಮನನದಿಂದಲೂ ಚೆನ್ನಾಗಿ ತಿಳಿದು ಧನ್ಯರಾಗ ಬಹುದು. ಪರಿದೃಶ್ಯಮಾನವಾದ ಕ್ಷೇತ್ರವನ್ನು, ಕ್ಷೇತ್ರಾಧ್ಯಾಸವನ್ನು ವಿವೇಕದಿಂದ

ನೇತಿಗಳೆದು, ನಿಷೇದಾವಧೀಭೂತ ಕ್ಷೇತ್ರಜ್ಞಾತ್ಮನೇ ಎಲ್ಲಾ ಕ್ಷೇತ್ರಗಳಲ್ಲಿರುವ (ತಾನು) ಪರಬ್ರಹ್ಮವೆಂದು ತಿಳಿಯಬೇಕು. ಕ್ಷೇತ್ರಜ್ಞನೇ ಅಸಂಸಾರಿಯಾದ ಪರಮಾತ್ಮನು. ಬ್ರಹ್ಮ ಮೊದಲು ಪಿಪಿಲಿಕ ಪರ್ಯಂತ ಅನೇಕ ಉಪಾಧಿಗಳಲ್ಲಿ ಏಕವಾದ ತಾನು ಭಿನ್ನ ವಾಗಿದ್ದಂತೆ ಕಾಣಿಸುವದು; ಯಾವ ಉಪಾದಿ ವಿಶೇಷಗಳು ಆತನಲ್ಲಿಲ್ಲ. ನಿರ್ವಿಶೇಷ ಚೈತನ್ಯ ಪರಮಾತ್ಮನೇ ತಾನು. ನೀವೆಲ್ಲರೂ ಅದೇ ಆಗಿದ್ದೀರಿ," ಎಂಬುದಾಗಿ ಬೋಧಿ ಸುತ್ತಾ ಅದಕ್ಕೆ ಅನುಷ್ಠಾನ ಸ್ಥಾನಗಳಾದ ಗುಣಗಳನ್ನು, ಆಚಾರ, ವಿಚಾರ, ವರ್ತ ನೆಯ ವಿಧಾನಗಳನ್ನು ಹೇಳಿ ಆಮೇಲೆ ಸ್ಥಿತಪ್ರಜ್ಞ ಲಕ್ಷಣಗಳನ್ನು ವಿವರಿಸಿದರು.

## ಶ್ರೀ ಗುರುದೇವಾಶ್ರಮ ಗುರುದೈವ ಪ್ರತಿಷ್ಠೆ

ಅನಂತರ ಶ್ರೀಗಳವರು ಗೂಳಪಾಳ್ಯಂ ಶ್ರೀಗುರುದೇವಾಶ್ರಮಕ್ಕೆ ದಯಮಾಡಿಸಿ ದರು. ಪ್ರತಿಷ್ಠಾ ಮಹಾಕಾರ್ಯಕ್ಕೆ ಬೇಕಾದ ವ್ಯವಸ್ಥೆಗಳನ್ನು ಶ್ರೀ ರಾಚನಗೌಡ, ಶ್ರೀ ದೊಡ್ಡನಗೌಡ, ಶ್ರೀ ನಾಗನಗೌಡ, ಶ್ರೀ ಮಲ್ಲನಗೌಡ, ಶ್ರೀ ವೀರಭದ್ರಗೌಡ, ಶ್ರೀ H. V. ಗೌಡ, ಶ್ರೀ K. ಗೋವಿಂದಪ್ಪ ಇತ್ಯಾದಿ ಪುರಪ್ರಜೆಗಳೆಲ್ಲರೂ ಚೆನ್ನಾಗಿ ವ್ಯವಸ್ಥೆ ಮಾಡಿದ್ದರು. ಶ್ರೀ ರಾಮಾನಂದ ಸ್ವಾಮಿಗಳು, ಶ್ರೀ ಆಚಾರಿ ಸ್ವಾಮಿಗಳು ಆಶ್ರಮವಾಸಿಗಳಾಗಿ ಭಕ್ತಿಯಿಂದ ನೋಡಿಕೊಂಡು ಸರ್ವಕಾರ್ಯಗಳನ್ನು ಮಾಡಿದರು.

ಹಿಂದಿನ ಪ್ರತಿಷ್ಠಾ ಮಹೋತ್ಸವಗಳಿಗೆ ಬಂದ ಸದ್ಬ್ರಾಹ್ಮಣೋತ್ತಮರು ಮತ್ತು ಮಹಾತ್ಮರು ದಯಮಾಡಿಸಿದರು. ಶ್ರೀ ರಾಕ್ಷಸ ನಾಮ ಸಂ॥ ಮಾಘ ಶುದ್ಧ ಬಿದಿಗೆ ಸೋಮವಾರ 2-2 76 ಮೊದಲು 5-2-76 ಗುರುವಾರದವರೆಗೆ ಈ ಪ್ರತಿಷ್ಠಾ ಮಹಾಕಾರ್ಯ ವೇದೋಕ್ತವಾಗಿ ಶ್ರೀಗುರು, ಶ್ರೀ ಚಂದ್ರಮೌಳೀಶ್ವರ, ಶ್ರೀ ರತ್ನಗರ್ಭ ಗಣಪತಿ, ಪಾರ್ವತಿ, ನಂದೀಶ್ವರ, ಉಮಾಮಹೇಶ್ವರ ಗುರುಪೀಠ ಪರಂಪರಾ ಶಾಸನ ಸ್ತುತಿಯ ಶಿಲಾಫಲಕ, ಧ್ವಜ ಪ್ರತಿಷ್ಠ ಮಹಾಕಾರ್ಯಗಳು ಸಾಂಗೋಪಾಂಗವಾಗಿ ನಡೆದು ಪೂರ್ಣಾಹುತಿಯಾಯಿತು. ಮಹಾತ್ಮರ ಉಪನ್ಯಾಸ ಗಳು ನಡೆದವು. ಉಮಾಮಹೇಶ್ವರರ ಉತ್ಸವವು ಅನ್ನಸಂತರ್ಪಣೆಗಳಾದವು. ಆಮೇಲೆ ಪ್ರತಿಷ್ಠಾ ಮಂಡಲ ಪೂಜೆಯು ಸಾಂಗವಾಗಿ ಜರುಗಿತು.

ಗುಂತಕಲ್ಲು ವಲ್ಲಂಕೊಂಡ ಶ್ರೀ ರಾಮ ಸುಬ್ಬಯ್ಯ, ಕುಂ॥ ಸೌ॥ ಲಕ್ಷ್ಮಿದೇವಮ್ಮ ಪುಣ್ಯ ದಂಪತಿಗಳು ಈ ಆಶ್ರಮದಲ್ಲಿ ದೊಡ್ಡದಾದ ಬಾವಿಯನ್ನು ತೋಡಿಸಿ ಕಟ್ಟಿಸಿ ದರು. ಇವರ ಸೇವೆ ಶಿವ ಪ್ರೀತಿಕರವಾದದು. ಸಂಸ್ತುತ್ಯವು.

ಅನಂತರ ಶ್ರೀ ಜಗದ್ಗುರು ಶಂಕರ ಜಯಂತಿ ಮಹೋತ್ಸವವು ಯಥಾರೀತಿ ಪೂಜಾ ಪಾರಾಯಣಗಳು, ಪ್ರಸ್ಥಾನತ್ರಯ ಶಾಸ್ತ್ರ ಶ್ರವಣಗಳು ನಡೆದವು. ಶ್ರೀಗಳವರ ಪರಮ ಗುರುಗಳ ಪುಣ್ಯಾರಾಧನೆ ಮಂಗಳಮಯವಾಗಿ ನಡೆಯಿತು. 25-6-76 ಪೂಜ್ಯ ಶ್ರೀಗಳವರ 57 ನೆಯ ಜಯಂತ್ಯುತ್ಸವವು ವಿಧ್ಯುಕ್ತವಾಗಿ ನಡೆಯಿತು.

## 32 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಶ್ರೀ ಕ್ಷೇತ್ರ, ಹಾಲರ್ವಿ ಆಶ್ರಮ, ನಿರ್ವಾಣ ಮಠ 7-7-76

ಸ್ವಸ್ತಿ ಶ್ರೀ ನಳನಾಮ ಸಂ|| ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರೆಗೂ 3-11-76 ಯಥಾಶಾಸ್ತ್ರವಾಗಿ ಆಯಾ ಸ್ಥಾನಗಳಲ್ಲಿ ಕಾರ್ಯಕ್ರಮಗಳು ಮಂಗಳಮಯವಾಗಿ ನಡೆದವು.

ಶ್ರೀಗಳವರು ಈ ವ್ರತ ಮಧ್ಯದಲ್ಲಿ K. ಗಾಯಿತ್ರಮ್ಮಗೆ ಶ್ರೀಮಾತೆ ಎಂಬ ಶುಭನಾಮವನ್ನು ಕೊಟ್ಟರು. ಮತ್ತೊಂದು ಮುಹೂರ್ತದಲ್ಲಿ ಶ್ರೀಗುರುದೇವಾ ಶ್ರಮದ ಶ್ರೀ ರಾಮಾನಂದ ಸ್ವಾಮಿ, ಆಚಾರಿ ಸ್ವಾಮಿ ಮತ್ತು ಹಾಲರ್ವಿ ಆಶ್ರಮದ ರಾಮಪ್ಪ ಸ್ವಾಮಿ ಇವರಿಗೆ ವಿಧ್ಯುಕ್ತವಾಗಿ 1) ಶ್ರೀ ಪರಮೇಶ್ವರಾನಂದ ಸ್ವಾಮಿ 2) ಶ್ರೀ ದೇವಾನಂದ ಸ್ವಾಮಿ 3) ಶ್ರೀ ನಿರ್ಮಲಾನಂದ ಸ್ವಾಮಿ ಎಂಬ ಶುಭ ನಾಮಗಳಿಂದ ತುರೀಯಾಶ್ರಮವನ್ನು ಪ್ರಸಾದಿಸಿದರು.

ಅನಂತರ ಶ್ರೀ ನಿರ್ವಾಣ ಮಠದಲ್ಲಿ ವೇದೋಕ್ತವಾಗಿ ಪರಮ ಗುರುಗಳ ಅಧಿ ಷ್ಠಾನದಲ್ಲಿ ಶ್ರೀ ಉಮಾಮಹೇಶ್ವರ ಶಿವಲಿಂಗ ಪ್ರತಿಷ್ಠೆ, ಪರಮ ಗುರು ಶ್ರೀ ಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಶ್ರೀ ಶ್ರೀ ಪ್ರಣವಾನಂದ ಸದ್ಗುರು ಸ್ವಾಮಿ ಮೂರ್ತಿ ಪ್ರತಿಷ್ಠೆ, ಗಣಪತಿ, ಪಾರ್ವತಿ, ನಂದಿ, ಗುರುಪೀಠ ಶಾಸನ ಸ್ತುತಿಯ ಶಿಲಾ ಫಲಕ, ಧ್ವಜ ಪ್ರತಿಷ್ಠೆ ಈ ಮಹಾಕಾರ್ಯಗಳು ವೇದೋಕ್ತವಾಗಿ ವಿಧಿಗಳಿಂದ ಯಥಾ ಶಾಸ್ತ್ರವಾಗಿ ನಡೆದವು. ವೈದಿಕರೆಲ್ಲರು ಬಂದಿದ್ದರು. ಶ್ರೀ ನಿರ್ವಾಣ ಮಠದ ಫಿಟ್ ಪರ್ಸನ್ ಶ್ರೀ ಶೆಟ್ಟಿ ಓಬುಲ ಪತಿಯವರು ಭಕ್ತಿ ಪ್ರಪತ್ತಿಗಳಿಂದ ಸೇವೆ ಮಾಡಿದರು. ನಂದ್ಯಾಲ ಚಿಂದಕೂರು. ಪೋಲೂರು, ಗಡಿವೇಮೂಲ, ಕರ್ನೂಲು ಮೊದಲಾದ ಎಲ್ಲಾ ಪ್ರಾಂತದ ಭಕ್ತರು ಬಂದು ಮಹಾಕಾರ್ಯದಲ್ಲಿ ಭಾಗವಹಿಸಿದರು. ಭಕ್ತಿಯಿಂದ ನೋಡಿಕೊಂಡರು.

32 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತವು 3-11-76 ಪೂರ್ಣವಾಗಿ ಶ್ರೀ ಉಮಾಮಹೇಶ್ವರ ಗುರು ಕ್ಷೇತ್ರದಲ್ಲಿ ದೀಕ್ಷಾ ವಿರಮಣವಾಯಿತು. 17-11-76 ಶ್ರೀ ಸ್ವಾಮಿಗಳವರ ಗುರುಗಳ ಆರಾಧನ ಕಾರ್ಯಕ್ರಮವು 3 ದಿನಗಳು ಸಾಂಗವಾಗಿ ನಡೆಯಿತು. ಕರ್ನೂಲಿನಲ್ಲಿ ಭಕ್ತರ ಇಚ್ಛೆಯಂತೆ ಸೂತಸಂಹಿತೆ ಯಜ್ಞ ವೈಭವಖಂಡ ವಿಷಯಗಳನ್ನು ಪ್ರವಚನ ಮಾಡಿದರು.

ಅನಂತರ ಹಿಂದೂಪುರ ಭಕ್ತರ ಪ್ರಾರ್ಥನಾನುಸಾರ ಬ್ರಹ್ಮಶ್ರೀ ಸಿಂಹಾದ್ರಿ ಸ್ವಾಮಿಗಳ ಪ್ರೇಮಪೂರ್ವಕವಾದ ಆಹ್ವಾನದಿಂದ ಶ್ರೀಯವರು ಶ್ರೀ ನರಹರಿ ಆಶ್ರಮಕ್ಕೆ ದಯಮಾಡಿಸಿ ಅಲ್ಲಿ ನಡೆಯುವ ಗುರುಕಾರ್ಯದಲ್ಲಿ ಭಾಗವಹಿಸಿ ಉಪ ನ್ಯಾಸಗಳನ್ನು ಮಾಡಿದರು. ಅಲ್ಲಿ ಕಾರ್ಯವು ಪೂರ್ಣವಾಯಿತು.

ಆಮೇಲೆ ಕರ್ನಾಟಕ ರಾಜ್ಯ ಬಳ್ಳಾರಿ ಸಮೀಪವಿರುವ ವೇಣೀವೀರಾಪುರ ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಉಮಾಮಹೇಶ್ವರ ಪ್ರತಿಷ್ಠಾ ಮಹೋತ್ಸವ ಕಾರ್ಯಕ್ಕೆ ಅಲ್ಲಿಗೆ ದಯಮಾಡಿಸಿದರು. ಭಕ್ತಾದಿಗಳು ಸರ್ವವು ಸಂಸಿದ್ಧಪಡಿಸಿದ್ದರು.

## ವೇಣೀವೀರಾಪುರ ಶ್ರೀ ಉಮಾಮಹೇಶ್ವರಾಶ್ರಮ
### ದೈವ ಪ್ರತಿಷ್ಠೆ

ಸ್ವಸ್ತಿ ಶ್ರೀ ನಳನಾಮ ಸಂ|| ಮಾಘ ಶುದ್ಧ ಬಿದಿಗಿ 21–1–77 ಶುಕ್ರವಾರ ಮೊದಲು 24–1–77 ಸೋಮವಾರದವರೆಗೂ ವೇದೋಕ್ತವಾಗಿ ಶ್ರೀ ಮಹಾ ಗಣಪತಿ, ಶ್ರೀ ಚಂದ್ರಮೌಳೀಶ್ವರ ಮಹಾಲಿಂಗ, ಪಾರ್ವತಿ, ನಂದಿ, ಶ್ರೀ ಸೀತಾ, ರಾಮ, ಲಕ್ಷ್ಮಣ, ಆಂಜನೇಯ, ಗುರುಪೀಠ ಶಾಸನಸ್ತುತಿ ಶಿಲಾಫಲಕ, ಧ್ವಜ ಪ್ರತಿಷ್ಠೆ ಮಹಾಕಾರ್ಯಗಳು 24–1–77 ಉದಯ 9–15 ಗಂ|| ಕುಂಭಲಗ್ನ ಶುಭ ಪುಷ್ಕರಾಂಶದಲ್ಲಿ ಯಥಾಶಾಸ್ತ್ರವಾಗಿ ಪೂರ್ವದಂತೆ ಈ ಪ್ರತಿಷ್ಠಾಕಾರ್ಯವು ನಡೆಯಿತು. ಹಿಂದಿನ ವೈದಿಕರೆಲ್ಲರು ಬಂದಿದ್ದರು. ಉದಯ ಸಾಯಂಕಾಲಗಳಲ್ಲಿ ಆಧ್ಯಾತ್ಮಿಕ ತತ್ತ್ವ ಪ್ರವಚನ ನಡೆಯಿತು. ಅನೇಕ ಪಟ್ಟಣಗಳಿಂದ, ಗ್ರಾಮಗಳಿಂದ ಭಕ್ತರು ಬಂದು ಭಾಗವಹಿಸಿ ಗುರುದೈವ ಕೃಪೆಗೆ ಪಾತ್ರರಾದರು.

ಅನಂತರ ಶ್ರೀಗಳವರು ಶ್ರೀಕ್ಷೇತ್ರಕ್ಕೆ ಬಂದು ಉಮಾಮಹೇಶ್ವರ ಗುರುಪೀಠ ಆಚಾರ್ಯರ ಸನ್ನಿಧಿ ಶ್ರೀಮದ್ಭಗವದ್ಗೀತಾ ಶಾಂಕರಭಾಷ್ಯ ಆಂಧ್ರಾನುವಾದವನ್ನು ಮಾಡಬೇಕೆಂಬ ಈಶ್ವರ ಪ್ರೇರಣೆಯನ್ನು ಪಡೆದು ನಿಯಮಪೂರ್ವಕವಾಗಿ ಮೂರು ತಿಂಗಳೊಳಗೆ ಭಾಷ್ಯಾನುವಾದ ಮಾಡಿ ಶ್ರೀ ಶಂಕರರಿಗೆ ಅರ್ಪಿಸಿದರು.

ತದನಂತರ ವೇಣೀವೀರಾಪುರ ಆಶ್ರಮ ದೈವ ಪ್ರತಿಷ್ಠಾ ಮಂಡಲ ಪೂಜಾದಿ ಗಳು ಯಥಾ ಶಾಸ್ತ್ರವಾಗಿ ನಡೆದು ಪೂರ್ಣವಾಯಿತು. ಅಲ್ಲಿಂದ ಡೋಣೇಕಲ್ಲು ಭಕ್ತರ ಭಕ್ತಿಯನ್ನನುಸರಿಸಿ ಅಲ್ಲಿ ಆಂಜನೇಯ ಸ್ವಾಮಿ ಆಲಯದಲ್ಲಿ, ವಿದ್ಯಾರ್ಥಿಗಳ ನಿಲಯ ದಲ್ಲಿ ಯಥಾರೀತಿ ಪೂಜಾನುಷ್ಠಾನಾದಿ ಕಾರ್ಯಗಳೊಂದಿಗೆ ಭಗವದ್ಗೀತಾ ಶಾಸ್ತ್ರ ಪ್ರವಚನವನ್ನು ಮಾಡಿದರು. ಅನಂತರ ಹಾಲರ್ವಿ ಆಶ್ರಮದಲ್ಲಿ ಆಧ್ಯಾತ್ಮ ರಾಮಾಯಣ ಪ್ರವಚನ ನಡೆಯಿತು.

ಶ್ರೀ ರತ್ನಗಿರಿ ಶ್ರೀಕ್ಷೇತ್ರದಲ್ಲಿ ಶ್ರೀ ಶಂಕರ ಜಯಂತಿ, ಶ್ರೀಗಳವರ ಪರಮ ಗುರುಗಳ ಪುಣ್ಯಾರಾಧನೆ, ಪೂಜ್ಯ ಶ್ರೀ ಚರಣರ 58 ನೆಯ ಜಯಂತ್ಯುತ್ಸವವು ವಿಧ್ಯುಕ್ತವಾಗಿ ನಡೆದು ಯಥಾರೀತಿ ಶ್ರೀ ರುದ್ರಸ್ವಾಹಾಕಾರಾದಿ ವಿಶೇಷ ವೈದಿಕ ಕಾರ್ಯಕ್ರಮಗಳು ನಡೆದು ತತ್ತ್ವಜ್ಞರ,ಪಂಡಿತರ ಪ್ರವಚನಗಳಾದವು. ಶಿವಪ್ರದವಾಗಿ ನಡೆದು ಪೂರ್ಣವಾಯಿತು.

## 33 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ನೆಲ್ಲೂರು ಪಟ್ಟಣ, ಗುಂತಕಲ್ಲು, ನಂದ್ಯಾಲ

### 27-6-77 to 22-11-77

ಸ್ವಸ್ತಿ ಶ್ರೀ ಪಿಂಗಳನಾಮ ಸಂ॥ ಆಷಾಢ ಶುದ್ಧ ಏಕಾದಶಿ ಯಥಾರೀತಿ ಮಹಾ ವ್ರತವು ಪ್ರಾರಂಭವಾಗಿ ಅಧಿಕ ಶ್ರಾವಣದೊಡನೆ ಐದು ಮಾಸಗಳು ಆನಂದಪ್ರದವಾಗಿ ನಡೆದು ಸಾಂಗವಾಗಿ ಪೂರ್ಣವಾಯಿತು. ನೆಲ್ಲೂರು ಸ್ಟೋನ್ ಹೌಸ್‌ನ ಭಗವದ್ಗೀತಾ ಮಂದಿರದಲ್ಲಿ ಶ್ರೀಗಳವರ ಪ್ರವಚನಗಳು ನಡೆದವು. ಸ್ವಾಮಿಗಳವರ ಬಿಡದಿ ಪೂಜಾ ನುಷ್ಠಾನಗಳು ಅಮ್ಮಣ್ಣಮ್ಮನವರ ಛತ್ರದಲ್ಲಿ ನಡೆದವು. ಸರ್ವವು ಮಹದಾನಂದ ಪ್ರದವಾಗಿತ್ತು. ಹಂಪೀ ಕ್ಷೇತ್ರದಲ್ಲಿ ವಿಧ್ಯುಕ್ತವಾಗಿ ದೀಕ್ಷಾವಿರಮಣ ಕಾರ್ಯವು ಮುಗಿಯಿತು. ವಿರೂಪಾಕ್ಷೇಶ್ವರನಿಗೆ ಪೂಜಾದಿಗಳು ಸಮರ್ಪಿಸಿದರು. ಯಥಾರೀತಿ ಶ್ರೀಗುರು ಕ್ಷೇತ್ರಕ್ಕೆ ಬಂದು "ವೈರಾಗ್ಯಸ್ಯ ಫಲಂ ಬೋಧೋ; ಬೋಧಸ್ಯೋಪರತಿಃ ಫಲಂ; ಸ್ವಾನಂದಾನುಭವಾಚ್ಛಾಂತಿ ರೇಷೈವೋಪರತೇಃ ಫಲಮ್" ಎಂಬುದಾಗಿ ಪೂಜ್ಯ ಶ್ರೀಗುರುಗಳು ಬ್ರಹ್ಮನಿಷ್ಠೆಯಲ್ಲಿದ್ದರು.

ಶ್ರೀಗಳವರ ಶ್ರೀಗುರುಗಳ ಪುಣ್ಯಾರಾಧನ ಕಾರ್ಯಕ್ರಮವನ್ನು ಮೂರು ದಿನ ಗಳು ವಿಧ್ಯುಕ್ತವಾಗಿ ನಡೆಸಿದರು ಮತ್ತು ಶ್ರೀ ಗೀತಾ ಜಯಂತಿ ಮಹೋತ್ಸವವು ಉರವಕೊಂಡೆ ಶ್ರೀ ಕನ್ನಿಕಾಪರಮೇಶ್ವರಿ ಆಲಯದಲ್ಲಿ ಹತ್ತು ದಿನಗಳು ಆನಂದವಾಗಿ ಗೀತಾರ್ಥ ಪ್ರತಿಪಾದನೆ ಶಿವಪ್ರದವಾಗಿ ನಡೆಯಿತು ಮತ್ತು ಶ್ರೀಮದುತ್ತರಾಯಣ ಪುಣ್ಯ ಕಾಲ ಗುರುಪೂಜಾದಿಗಳು ನಡೆದವು.

ಶ್ರೀ ನಿರ್ವಾಣ ಮಠದಲ್ಲಿ ಮಹಾಶಿವರಾತ್ರಿ ಕಾರ್ಯಕ್ರಮವು ಶಿವಪುರಾಣ ಕಥಾಶ್ರವಣ, ಮಹಾಶಿವರಾತ್ರಿ ಮಹಾತ್ಮ್ಯ ಪ್ರಬೋಧೆ ಪೂಜಾದಿಗಳು ನಡೆದು ಲಕ್ಷ ಬಿಲ್ವಾರ್ಚನೆ ಆಯಿತು.

## 34 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಅನಂತಪುರ, ನಂದ್ಯಾಲ 16-7-78

ಸ್ವಸ್ತಿ ಶ್ರೀ ಕಾಳಯುಕ್ತಿ ನಾಮ ಸಂ॥ 16-7-78 ಮೊದಲು ಆಷಾಢ ಶುದ್ಧ ಏಕಾದಶಿಯಿಂದ ಕಾರ್ತಿಕ ಶುದ್ಧ ದ್ವಾದಶಿವರೆಗೂ ಈ ನಾಲ್ಕು ಮಾಸಗಳು ಯಥಾ ರೀತಿ ಯಥಾ ಶಾಸ್ತ್ರವಾಗಿ ಆಯಾ ಸ್ಥಾನಗಳಲ್ಲಿ ಮಹಾವ್ರತವು ಶ್ರೀ ಉಮಾಮಹೇಶ್ವರ ಗುರುಪೀಠಾಚಾರ್ಯರಾದ ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮತ್ ಪೂಜ್ಯಪಾದ ಶ್ರೀಶ್ರೀಶ್ರೀ ಶಂಕರಾನಂದಗಿರಿ ಗುರುಸ್ವಾಮಿಯವರಿಂದ ವಿಧ್ಯುಕ್ತವಾಗಿ ಆಚರಿಸಲ್ಪಟ್ಟಿತು. ವ್ರತ ಮಹಾಕಾರ್ಯಗಳೆಲ್ಲವು ಶಿವಪ್ರದವಾಗಿ ನಡೆದವು.

ಶ್ರೀ ಕಾಳಯುಕ್ತಿ ನಾಮ ಸಂ|| ಕಾರ್ತಿಕ ಬಹುಳ ದಶಮಿ, ಏಕಾದಶಿ, ದ್ವಾದಶಿ ಮೂರು ದಿನಗಳು ಪೂಜ್ಯ ಶ್ರೀಗಳವರ ಅಧ್ಯಕ್ಷತೆಯಲ್ಲಿ ಶ್ರೀಗಳವರ ಗುರುಗಳ ಪುಣ್ಯಾರಾಧನೆ ರಜತೋತ್ಸವವು ಗೂಳಪಾಳ್ಯ ಶ್ರೀಗುರುದೇವಾಶ್ರಮದಲ್ಲಿ ವೈದಿಕ ಪೂಜಾ ಕಾರ್ಯಕ್ರಮಗಳಿಂದ ಅತ್ಯಂತ ವೈಭವವಾಗಿ ಮಹಾತ್ಮರ ಮಹೋಪನ್ಯಾಸ ಗಳೊಡನೆ ಕಾರ್ಯಕ್ರಮಗಳು ಶಿವಪ್ರದವಾಗಿ ನಡೆದು ಪೂರ್ಣವಾದವು.

ಈ ಮಹಾಕಾರ್ಯಕ್ರಮಕ್ಕೆ ಪೂಜ್ಯಶ್ರೀ ರಾಮಕೃಷ್ಣಾನಂದ ಸ್ವಾಮಿಗಳು ದಯಮಾಡಿಸಿ ಅವರ ಪವಿತ್ರ ಹಸ್ತಗಳಿಂದ ಆಶ್ರಮದ ನೂತನ ಭವನದ ಪ್ರವೇಶೋ ತ್ಸವವು, ಋಷಿಕೇಶದ ಶ್ರೀ ದೇವಾನಂದ ಸ್ವಾಮಿಗಳವರ ಪಾವನ ಹಸ್ತಗಳಿಂದ ಪೂಜ್ಯಪಾದ ಶ್ರೀ ಸದಾನಂದ ಸದ್ಗುರು ಸ್ವಾಮಿಗಳವರ ರಜತ ದಿವ್ಯಮೂರ್ತಿ ಆವಿಷ್ಕರಣ ವಿಧ್ಯುಕ್ತವಾಗಿ ನಡೆಯಿತು ಮತ್ತು ಶ್ರೀ ಪೂರ್ಣಾನಂದ ಸ್ವಾಮಿಗಳು, ಶ್ರೀ ಸಿದ್ಧೇಶ್ವರಾನಂದ ಸ್ವಾಮಿಗಳು ದಯಮಾಡಿಸಿದ್ದರು. ಬ್ರಹ್ಮಶ್ರೀ ಬಾಲವಿಶ್ವನಾಥ ಶರ್ಮ ಪಂಡಿತರು, ಶ್ರೀ R. ಬಾಲರಾಜು M.A.,Ph.D. ಪಂಡಿತರು ಆಗಮಿಸಿದ್ದರು. ಕಾರ್ಯಕ್ರಮವು ಸರ್ವಜನಾನಂದಪ್ರದವಾಗಿ ನಡೆದು ಭಕ್ತರು ಭಕ್ತಿಯಿಂದ ಆಚರಿಸಿದ ಜಪ ನಿಯಮನಿಷ್ಠಾ ವಿಧಾನವು ಶ್ರೀ ಸನ್ನಿಧಿಯಲ್ಲಿ ಅರ್ಪಿಸಿ ಬಿನ್ನವಿಸಿದರು.

ಆ ಗ್ರಾಮದ ಸುತ್ತುಮುತ್ತಲಿನ ಭಕ್ತಾದಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿ ಸೇವೆ ಮಾಡಿದರು. ಪ್ರಶಂಸನೀಯ.

ಶ್ರೀ ಶಂಕರ ಜಯಂತಿ ಅಪೂರ್ವವಾಗಿ ನಡೆಯಿತು. ಈ ದಿನವೇ ಉರವಕೊಂಡೆ ಶ್ರೀ K. ಜಾನಪ್ಪ ಶ್ರೇಷ್ಠಿಯವರು ಮುದ್ರಣ ಮಾಡಿಸಿದ ಶ್ರೀ ಜಗದ್ಗುರು ಶಂಕರ ಚರಿತ್ರೆ ದ್ವಿತೀಯಾವೃತ್ತಿ ಪವಿತ್ರ ಗ್ರಂಥಾವಿಷ್ಕರಣವಾಯಿತು. ಶ್ರೀ ಕಾಳಯುಕ್ತಿ ನಾಮ ಸಂ|| ಜ್ಯೇಷ್ಠ ಶುದ್ಧ ಪೌರ್ಣಮಿಯಲ್ಲಿ ನಮ್ಮ ಪೂಜ್ಯ ಶ್ರೀಗುರುಗಳು ಉಮಾ ಮಹೇಶ್ವರ ಗುರುಪೀಠ ಸಮಾರೋಹಣ, ರಜತೋತ್ಸವವು ಮಂಗಳಪ್ರದವಾಗಿ ವೈದಿಕ ಪೂಜಾದಿ ಕಾರ್ಯಗಳಿಂದ ಶಾಸ್ತ್ರೀಯವಾಗಿ ನಡೆದು, ಅನೇಕ ಮಹನೀಯರ ಉಪನ್ಯಾಸಗಳಾದವು.

## ಬ್ರಹ್ಮ ಸಭಾಭವನ

1–2–79 ಮೊದಲು 3–2–79 ವರಿಗೂ ನಂದ್ಯಾಲ ಶ್ರೀ ಉಮಾಮಹೇಶ್ವರ ಆಶ್ರಮದಲ್ಲಿ ಪೂಜ್ಯ ಶ್ರೀಗಳವರ ಅಧ್ವರ್ಯದಲ್ಲಿ ಶಾಸ್ತ್ರೋಕ್ತವಾಗಿ ನೂತನ ಬ್ರಹ್ಮ ಸಭಾ ಭವನ ಪ್ರವೇಶೋತ್ಸವ ಉಮಾಮಹೇಶ್ವರ ಗುರುಪೀಠ ಪರಂಪರಾಚಾರ್ಯರಾದ ಶ್ರೀ ಶ್ರೀ ಶ್ರೀ ಪ್ರಣವಾನಂದ ಸದ್ಗುರು ಮಹಾಸ್ವಾಮಿ ಶ್ರೀಪಾದರ ಅಮೃತ ಶಿಲಾ ಮೂರ್ತಿ ಆವಿಷ್ಕರಣೋತ್ಸವ ಕಾರ್ಯಕ್ರಮವು ಆನಂದಪ್ರದವಾಗಿ ನಡೆಯಿತು.

ಪೂಜ್ಯ ಶ್ರೀ ಬೋಧಾನಂದಪುರೀಸ್ವಾಮಿ ಮಹರಾಜ್‌ವಿಶ್ವನಾಥ ಮಠ್ ಪ|| ಗೋ|| ಇವರ ಅಮೃತ ಹಸ್ತಗಳಿಂದ ಬ್ರಹ್ಮ ಸಭಾ ಭವನ ಪ್ರವೇಶೋತ್ಸವ ಶ್ರೀ ಪರಮೇಷ್ಠಿ ಗುರು ಅಮೃತ ಶಿಲಾಮೂರ್ತಿ ಆವಿಷ್ಕರಣೋತ್ಸವವು ನಡೆಯಿತು.

ಶ್ರೀ ಉಮಾಮಹೇಶ್ವರ ಗುರುಪೀಠಾಚಾರ್ಯರಾದ ಶ್ರೀ ಗುರುಗಳ ಗುರುಪೀಠ ಸಮಾರೋಹಣ ರಜತೋತ್ಸವ ಮಹಾಸಭೆಯು ಪ್ರಾರಂಭವಾಗಿ ಶ್ರೀ ಭದ್ರಿಶೆಟ್ಟಿ ಶಂಕರಪ್ಪ *B.A.* ಇವರಿಂದ ಸ್ವಾಗತೋಪನ್ಯಾಸವಾಯಿತು. ಅಡ್ವೊಕೇಟ್ ಶ್ರೀ S. ಓಬುಲಪತಿಯವರು ಪರಿಚಯ ವಾಕ್ಯಗಳನ್ನು ನುಡಿದರು.

ಈ ಮಹಾಸಭೆಗೆ ಆಹ್ವಾನಿತರಾಗಿ ದಯಮಾಡಿಸಿದ ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳೂ, ಶ್ರೀ ಬೋಧಾನಂದ ಪುರಿ ಸ್ವಾಮಿಗಳು (ಪ || ಗೊ ||), ಶ್ರೀ ಪೂರ್ಣಾನಂದ ಸ್ವಾಮಿಗಳು ನೆಲ್ಲೂರು, ಶ್ರೀಸಿದ್ಧೇಶ್ವರಾನಂದ ಸ್ವಾಮಿಗಳು ಮೊದಲಾದ ಮಹನೀಯರು, ಬ್ರಹ್ಮಶ್ರೀ M. ಬಾಲವಿಶ್ವನಾಥ ಶರ್ಮಾ, ಬ್ರಹ್ಮಶ್ರೀ ರಾಮಚಂದ್ರ ಮೂರ್ತಿ ಇವರೆಲ್ಲ ಅಪೂರ್ವವಾದ ಆಧ್ಯಾತ್ಮಿಕ ಉಪನ್ಯಾಸ ಮಾಡಿದರು. ಎಲ್ಲರಿಗೂ ಮಹದಾನಂದವಾಯಿತು. ಈ ಮಹಾಕಾರ್ಯಕ್ರಮದ ನಿರ್ವಾಹಕ ಸಂಘ ಸದಸ್ಯರೆಲ್ಲ ಮತ್ತು ಸದ್ಭಕ್ತರು ಅನನ್ಯ ಭಕ್ತಿ ಶ್ರದ್ಧೆಗಳಿಂದ ಕಾರ್ಯವನ್ನು ಸಾಂಗಗೊಳಿಸಿದರು. ಶ್ರೀ ಕುಮ್ಮಿತ ಶಂಕರಯ್ಯ, S.ಮೋಹನರಾವು, ಶ್ರೀ ಜ್ಞಾನಾನಂದ ಇವರುಗಳ ಸೇವೆ ಅಪೂರ್ವವಾದದ್ದು, ಸಂಸ್ತುತ್ಯವಾದದ್ದು.

## 35ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಶ್ರೀಕ್ಷೇತ್ರ ಲತ್ತವರ (ರತ್ನಗಿರಿ), ಉರವಕೊಂಡೆ 6–6–79

ಸ್ವಸ್ತಿ ಶ್ರೀ ಸಿದ್ಧಾರ್ಥಿ ನಾಮ ಸಂ|| ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರೆವಿಗೂ ಈ ನಾಲ್ಕು ಮಾಸಗಳು ಯಥಾರೀತಿ ವಿಧ್ಯುಕ್ತವಾಗಿ ತ್ರಿಕಾಲ ಪೂಜಾನುಷ್ಠಾನಗಳೊಂದಿಗೆ ಸಾಂಗೋಪಾಂಗವಾಗಿ ಜರುಗಿತು.

ಅನುದಿನ ವೈದಿಕ ಪೂಜಾನುಷ್ಠಾನಗಳಿಂದ ಕೋಟಿ ಬಿಲ್ವಾರ್ಚನ ನಿಯಮ, ಪ್ರಸ್ಥಾನತ್ರಯ ಪಾರಾಯಣ, ಎರಡು ವೇಳೆಗಳಲ್ಲಿ ವಿಚಾರಸಾಗರ ಮತ್ತು ಗೀತಾ ಭಾಷ್ಯ ಶ್ರವಣವು ಎರಡು ತಿಂಗಳು ಅಪೂರ್ವವಾಗಿ ನಡೆಯಿತು.

ಈ ಮಹಾವ್ರತ ಮಧ್ಯದಲ್ಲಿ ಸ್ಕಾಂದಪುರಾಣಾಂತರ್ಗತ ಶಿವಮಹಾಪುರಾಣ ಪ್ರತ್ಯೇಕವಾಗಿ ಒಂದು ವೇಳೆಯಲ್ಲಿ ಪ್ರವಚನ ನಡೆದು 1–9–79 ತೇದಿಗೆ ಶಾಸ್ತ್ರೋಕ್ತವಾಗಿ ಸಹಸ್ರ ಘಟಾಭಿಷೇಕ, ಶ್ರೀ ಚಂದ್ರಮೌಳೀಶ್ವರನಿಗೆ ಕೋಟಿ ಬಿಲ್ವಾರ್ಚನೆ, ರಾಜೋಪಚಾರಾದಿ ಕಾರ್ಯಗಳು ವಿಧ್ಯುಕ್ತವಾಗಿ ನಡೆದು ಮಹಾಮಂಗಳವಾಯಿತು.

ಈ ಬಗ್ಗೆ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಿಂದ ದಿನಾಂಕ 18–8–89 ಶ್ರೀಮುಖವು ಪ್ರಸಾದಿಸಲ್ಪಟ್ಟಿತು.

"ಆತ್ಮೀಯರು ಶ್ರೀಕ್ಷೇತ್ರ ಉಮಾಮಹೇಶ್ವರಾಶ್ರಮದ ಅಧ್ಯಕ್ಷರಾದ ಬ್ರಹ್ಮರ್ಷಿ ಶ್ರೀಶ್ರೀಶ್ರೀ ಶಂಕರಾನಂದಗಿರಿ ಸ್ವಾಮಿಗಳವರಿಗೆ ಅನಂತ ಶುಭಾಶೀರ್ವಾದಗಳು.

"ತಪೋನುಷ್ಠಾನದಿಂದ ಜಗತ್ಕಲ್ಯಾಣಕ್ಕಾಗಿ ಆಯುಷ್ಯವನ್ನೇ ಧಾರೆಯೆರೆದಿರುವ ನಿಮ್ಮ 35 ನೆಯ ಚಾತುರ್ಮಾಸ್ಯ ಪೂಜಾನುಷ್ಠಾನಾದಿಗಳು ಕೋಟಿ ಬಿಲ್ವಾರ್ಚನೆ ಯಿಂದ 1–9–79ಕ್ಕೆ ಸಾಂಗಗೊಳ್ಳುತ್ತಿರುವುದು ವೇದ್ಯವಾಗಿ ಪರಮಾನಂದವಾಯ್ತು.

ಇತ್ಯಾಶಿಷಃ

ಇದೇ ಪ್ರಕಾರ ಅವ್ಯಾಜ ಕೃಪಾಕಟಾಕ್ಷದಿಂದ ಶ್ರೀಕ್ಷೇತ್ರ ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಿಯಿಂದಲೂ ಶುಭಾಶೀಃಪೂರ್ವಕವಾದ ಶ್ರೀಮುಖವು ಬಂತು ಮತ್ತು ಶ್ರೀಶ್ರೀಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ ದಕ್ಷಿಣಾಮ್ನಾಯ ಶ್ರೀ ಶಾರದಾಪೀಠ ಶೃಂಗೇರಿ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರ ಸನ್ನಿಧಿಯಿಂದ ಶುಭಾಶೀಃಪೂರ್ವಕವಾದ ಶ್ರೀಮುಖವು ಬಂತು. ಈ ಕಾರ್ಯಗಳಲ್ಲಿ ಜಗದ್ಗುರುಗಳ ಕೃಪಾಶೀರ್ವಾದ ಶ್ರೀಮುಖಗಳು ಎಲ್ಲರಿಗೂ ಮಹದಾನಂದವನ್ನುಂಟು ಮಾಡಿತು.

ಲತ್ತವರ ಶ್ರೀಕ್ಷೇತ್ರ ಶ್ರೀ ಉಮಾಮಹೇಶ್ವರಾಶ್ರಮದಲ್ಲಿ 27–1–80 ಮೊದಲು 31–1–80ರ ವರೆಗೂ 5 ದಿನಗಳು ಬ್ರಹ್ಮಜ್ಞಾನ ಸತ್ರಮಹೋತ್ಸವವು ಮತ್ತು ನಮ್ಮ ಗುರುದೇವರ ಷಷ್ಟ್ಯಬ್ಧಿ ಮಹೋತ್ಸವವು ಭಕ್ತಾದಿಗಳಿಂದ ಅನನ್ಯ ಭಕ್ತ್ಯುತ್ಸಾಹಗಳೊಡನೆ ಬೃಹದ್ರೂಪವಾಗಿ ನಡೆಯಿತು.

ಈ ಮಹಾಕಾರ್ಯಕ್ಕೆ 'ಕಾವ್ಯತೀರ್ಥ' 'ಸಾಹಿತ್ಯಾಚಾರ್ಯ' 'ವೇದಾಂತಾಚಾರ್ಯ' ವರಕವೀಶ್ವರರು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ 1008 ಶ್ರೀಮಜ್ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ದಯೆಯಿಂದ 30–1–80 ತಾರೀಖು ಶ್ರೀಕ್ಷೇತ್ರಕ್ಕೆ ದಯಮಾಡಿಸಿ ಅನುಗ್ರಹ ಭಾಷಣವನ್ನು ಮಾಡಿದರು.

ಈ ಕಾರ್ಯಕ್ಕೆ ಶ್ರೀ ಬೋಧಾನಂದ ಪುರಿ ಸ್ವಾಮಿಗಳು, ಶ್ರೀ ರಾಮಕೃಷ್ಣಾನಂದ ಸ್ವಾಮಿಗಳವರು, ಶ್ರೀ ಪೂರ್ಣಾನಂದ ಸ್ವಾಮಿಗಳವರು, ಶ್ರೀ ಯೋಗಿನೀಮಾತೆ ವಿಶ್ವನಾಥಮಠ (ಚಿಂತಲಪೂಡಿ), ಶ್ರೀ ದೇವಾನಂದ ಸ್ವಾಮಿಗಳವರು (ಋಷಿಕೇಶ್), ಶ್ರೀ ಸದಾನಂದ ಸ್ವಾಮಿಗಳವರು, ಶ್ರೀ ತ್ರಿವಿಕ್ರಮಾನಂದ ಸ್ವಾಮಿಗಳವರು, ಶ್ರೀ ಭೂಮಾನಂದ ಸ್ವಾಮಿಗಳು, ಶ್ರೀ ಸೋಮನಾಥಾನಂದ ಸ್ವಾಮಿಗಳು (ಸುರಪುರ), ಶ್ರೀ ದೇವರಾಯ ಕುಲಕರ್ಣಿ ಸ್ವಾಮಿಗಳು ಮೊದಲಾದ ಮಹನೀಯರು ದಯಮಾಡಿಸಿ ಅವ್ಯಾಜ ಪ್ರೇಮದಿಂದ ಅಪೂರ್ವವಾದ ಆಧ್ಯಾತ್ಮಿಕೋಪನ್ಯಾಸಗಳನ್ನು ಮಾಡಿ ಎಲ್ಲರಿಗೂ ನಿತ್ಯಾನಂದವನ್ನುಂಟು ಮಾಡಿದರು. ಆಶ್ರಮವಾಸಿಗಳಾದ ಶ್ರೀ ಶಿವಾನಂದ ಸ್ವಾಮಿಗಳವರ ಸೇವೆ ಅನಂತವಾದುದು.

ಈ ಮಹಾಕಾರ್ಯದ ಎಲ್ಲಾ ವೈದಿಕಕಾರ್ಯಗಳೂ ಅನಂತಪುರದ ಬ್ರಹ್ಮಶ್ರೀ M, ಬಾಲವಿಶ್ವನಾಥ ಶರ್ಮ ಪಂಡಿತರು ತಮ್ಮ ಪರಿವಾರದೊಡನೆ ನಿರ್ವರ್ತಿಸಿದರು.

ಈ ಮಹೋತ್ಸವ ಕಾರ್ಯನಿರ್ವಾಹಕ ಸಂಘದ ಅಧ್ಯಕ್ಷರು ಗುಂತಕಲ್ಲು 'ಸುಧೀವರ' ಶ್ರೀ ವಂಕದಾರು ರಾಮಕೃಷ್ಣಯ್ಯನವರು ಸ್ವಾಗತೋಪನ್ಯಾಸವನ್ನು ಮಾಡಿದರು.

ನಾನಾ ಪ್ರದೇಶಗಳಿಂದ ಬಂದ ಎಲ್ಲಾ ಭಕ್ತಮಂಡಲಿಯವರು ಈ ಮಹಾಕಾರ್ಯದಲ್ಲಿ ಭಕ್ತಿಯಿಂದ ಸೇವೆಯನ್ನು ಮಾಡಿದರು.

ಬಹಿರ್ಮುಖ ವೃತ್ತಿಯೇ ಬಂಧ. ಗುರುತತ್ತ್ವವು ಆತ್ಮವೇ ಎಂಬ ಅಂತರ್ಮುಖ ವೃತ್ತಿಯೇ ಮುಕ್ತಿ.

ವೇದಗಳು ತ್ರಿಗುಣಾತ್ಮಕವಾದ ಕಾರ್ಯಪ್ರಪಂಚವನ್ನೇ ಹೇಳುತ್ತವೆ. ಬ್ರಹ್ಮತತ್ತ್ವವು ಅವಾಙ್ಮನಸ ಗೋಚರವು. ವೇದಗಳು ಈ ಕರ್ಮಾನುಷ್ಠಾನಗಳು ನಿನ್ನನ್ನು ದಾಟಿಸುವವರೆಗೂ ಇರುತ್ತವೆ; ಅರ್ಥಾತ್ ಭ್ರಾಂತಿ ದೂರವಾಗುವವರೆಗೂ ಉಪಯೋಗವಾಗಿ ವಿರಾಮವಾಗುವವು.

"ಅಭಯಂ ವೈಜನಕ ಪ್ರಾಪ್ತೋಸಿ" ಓ ಜನಕಾ! ನೀನು ಅಭಯತ್ವವನ್ನು ಪಡೆದೆ, ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರಯೋಗಿಸಿದ ಅಭಯ ಶಬ್ದಕ್ಕೆ ಪರಬ್ರಹ್ಮವೆಂಬ ಅರ್ಥವನ್ನೇ ಹೇಳಿಕೊಳ್ಳಬೇಕು. ಎರಡನೆಯ ಪದಾರ್ಥವಿದ್ದಾಗಲೇ ಭಯ. ಬ್ರಹ್ಮತತ್ತ್ವವು ಅದ್ವಿತೀಯವಾದ್ದರಿಂದ ಭಯಕ್ಕೆ ಅವಕಾಶವಿಲ್ಲ; ಅದೇ ನೀನು. ಮಾಭೀಃ !

ಬ್ರಹ್ಮಜ್ಞಾನಿ ಬ್ರಹ್ಮವೇ ಆದ್ದರಿಂದ ಆತನಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬುವ ಅವಸ್ಥೆಗಳಿಲ್ಲ. ಬ್ರಹ್ಮಾನುಭವ ಸ್ವರೂಪವೇ ಆತನ ಸ್ಥಿತಿ.

"ಯಸ್ಯತ್ವಸ್ಯ ಸರ್ವಮಾತ್ಮೈವಾ ಭೂತ್ತತ್ಕೇನ ಕಂಪಶ್ಯೇತ್" ಅಂದಹಾಗೆ ಸರ್ವವೂ ತಾನೇಯಾದ (ಆತ್ಮನೇಯಾದ) ತಾನು ಯಾವುದನ್ನು ಯಾವುದರಿಂದ ನೋಡುವನು. ಸಾಧ್ಯ ಸಾಧನಗಳಿಲ್ಲ. ಕಣ್ಣು ಮುಚ್ಚಿದರೂ ತೆರೆದರೂ ಅಸ್ತಿ, ಭಾತಿ ಪ್ರಿಯ ಸ್ವರೂಪವಾದ ತನ್ನನ್ನೇ ಕಾಣುತ್ತಾನೆ. "ಬ್ರಹ್ಮವೇದ ಬ್ರಹ್ಮೈವಭವತಿ" ಬ್ರಹ್ಮವನ್ನರಿತಾತನು ಬ್ರಹ್ಮವೇ ಆಗುವನು.

ಒಂದೇ ಚಿತ್ತು ಚಲವಾಗಿಯೂ, ಅಚಲವಾಗಿಯೂ ಕಾಣಿಸುತ್ತೆ. ಧ್ಯಾನಾನುಷ್ಠಾನಗಳಿಂದ ಚಿತ್ತವು ಅಂತರ್ಧಾನವಾಗಲು ಚಿದ್ರೂಪನಾದ ಬ್ರಹ್ಮವೇ ನೀನು. "ಪ್ರಜ್ಞಾನಂ ಬ್ರಹ್ಮ !"

ನಿನ್ನ ಚಿತ್ತವು ಸಂಕಲ್ಪಾಕಾರ ವೃತ್ತಿಯಾಗದಿದ್ದರೆ ನೀನು ಪರಮಾತ್ಮನೇ. ನಿನ್ನ ಆಲೋಚನೆಗಳು ನಿನ್ನನ್ನು ಮುಚ್ಚುತ್ತವೆ. ಅಹಂವೃತ್ತಿ ನಿಶ್ಚಲವಾಗುವುದೇ ಬ್ರಹ್ಮತ್ವ. ಆತ್ಮದೇವರಿಗಿಂತಲೂ ಸಮೀಪವಾದ ದೇವರು ಇನ್ನೊಬ್ಬರಿಲ್ಲ. ಅದೇ ನೀನು. ಚಿತ್ತವೃತ್ತಿ ಸುಮ್ಮನಾದರೆ ಇರುವುದೇ ಆತ್ಮ. ಆದರೆ ನಿದ್ದೆ ಎಂದು ತಿಳಿಯಬಾರದು. ಅದು ನಿರಾವರಣ "ಬ್ರಹ್ಮಾತ್ಮನಾ ಸಂಸ್ಥಿತಿ."

## ಶ್ರೀ ಶಂಕರ ಸೇವಾಸಮಿತಿಃ, ಅನಂತಪುರಮ್

## ಸನ್ಮಾನ ಪತ್ರಿಕಾ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಾಣಾಂ ಮುಮುಕ್ಷುಜನ ಮಂದಾರಾಣಾಂ ಶ್ರೀಮತ್ಪೂಜ್ಯಪಾದ ಶ್ರೀ ಶಂಕರಾನಂದಗಿರಿ ಗುರುಮಹೋದಯಾನಾಂ ದಿವ್ಯಸನ್ನಿಧಾನೇ ಷಷ್ಟ್ಯಬ್ಧಿಪೂರ್ತಿ ಮಹೋತ್ಸವಾವಸರೇ ಸಮರ್ಪ್ಯ ಪರಸ್ಕೃತಂ ನಮಾಂಸಿ, ಅನಂತಪುರಸ್ಥ ಶ್ರೀ ಶಂಕರ ಸೇವಾಸಮಿತ್ಯಾಸ ಪ್ರಶ್ರಯಂ ಸಮರ್ಪಿತಂ **ಸನ್ಮಾನ ಪತ್ರಮ್**

**ಮನೀಷಿಣೋ ಮಹಾನುಭಾವಾಃ !**

ಮಹದಿದಂ ಸಂತೋಷ ಸ್ಥಾನಂ ಯತ್ ಶ್ರೀಮದುಮಾಮಹೇಶ್ವರ ಪೀಠಾಧ್ಯಕ್ಷಾಃ ಸ್ವಾಮಿನಃ, ಶ್ರೀ ಶಂಕರಾನಂದಗಿರಿ ಗುರುಯತೀಂದ್ರಾಃ, ಅತಿನಿಶಿತ ಮೇಧಾಮಂಥಾನ ಸಮಾಲೋಡಿತ ಸರ್ವವೇದಾಂತ ಶಾಸ್ತ್ರಸಾರಾಃ, ಸಕಲ ಲೌಕಿಕಾಲೌಕಿಕ ವಿಜ್ಞಾನ ಪಾರಂಗತಾಃ, ಯದ್ಯದ್ವೇದೇಷು ವೇದಾಂಗೇಷುಚ, ವರೀವರ್ತಿ ರತ್ನಜಾತಂ ದೇಶಕ್ಷೇಮೌಪಯಿತಂ ತತ್ತತ್ಸರ್ವಂ ಸ್ವಕೀಯ ಮನೀಷಾ, ಪೇಟಿಕಾಯಾಂ ವಿನಿಕ್ಷಿಪ್ಯ ತತ್ತನ್ಮಹೋಪನ್ಯಾಸೇಷು ಪ್ರವರ್ತಯಂತಃ ॥ ಪ್ರಮುಖತೋಯಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ, ತದ್ವಿಜ್ಞಾಯ ಪ್ರವೃತ್ತಿ ಧರ್ಮಾವಲಂಬಕಾಃ, ಸತ್ರಮಿದಂ ಬ್ರಹ್ಮಜ್ಞಾನ ನಾಮಕ ಮಾಚಿಕೀರ್ಷವಃ ಶ್ರೀಕ್ಷೇತ್ರಮಧಿವಸಂತೀತಿ ॥

**ಉಮಾಮಹೇಶ್ವರ ಪೀಠಾಧ್ಯಕ್ಷಾಃ !**

ಇದಂ ಪರಂ ಸಮ್ಮೋದಪದಂ ಯದ್ಬ್ರಹ್ಮ ವಿದ್ಯಾಮುಖರಿತ ಮುಖಾರವಿಂದಾಸ್ತತ್ರಭವಂತಃ ಲೋಕಕ್ಷೇಮಮಾಕಾಂಕ್ಷಂತಃ ಅನುಜಿಘೃಕ್ಷವಃ ಪ್ರಜಾಃ ಉಪದಿದಿಕ್ಷವೋಹಿತಂ ಅಭಿವಿವರ್ಧ ಇಷವೋ ದೇವಾಯತನಾನಿ ಉದ್ದಿಧೀರ್ಷವಶ್ಚ ಸನಾತನಂ ಧರ್ಮಂ ದೇಶೇ ಸಮಂತತಸ್ಸಂಚರಂತೋ ವಿಭ್ರಾಜಂತ ಇತಿ ॥ ಜಗದ್ಭದ್ರೈಕ ಲಕ್ಷ್ಯಾಣಾಂ ಭವಾದೃಶಾನಾಂ ಪುರಃ ಅವಿದ್ಯಾಯಾಮಂತರೇ . ವರ್ತಮಾನಾನಾಂ ಮಾದೃಶಾನಾಂ ವಚೋವಿಧಾನಾಂ ಕೇವಲಮೌಪಚಾರಿಕಮೇವ ಭವತಿ । ನ ಸ್ತುತಿ ಪರಂ ॥

**ಸಂಯಮೀಂದ್ರ ಸಾರ್ವಭೌಮಾಃ !**

ತತ್ರಭವಂತಸ್ಸರ್ವತ್ರ ದೇಶೇ ಶ್ರೀಮದುಮಾಮಹೇಶ್ವರ ಗುರುಪೀಠ ಪರಂಪರಾ ಸುಪ್ರತಿಷ್ಠಿತಾಃ । ಕೃತ್ವಾ ಪ್ರಜಾಜಾಲಂ ಸನ್ಮಾರ್ಗಗಾಮಿನಂ ಕುರ್ವಂತಿ । ರಜಸ್ಸಂಸರ್ಗೇ ಪ್ಯರಜಸಾಂ ಹೃದಯೇ ವಿಹರಂತಿ । ಅನುರಕ್ತಾ ಇವ ರಾಜಂತೋಪಿ ವಿರಕ್ತ್ಯೈಕ ಸುಲಭಾ ಭವಂತಿ ॥ ಮಂದಗತಿತಾಂ ವಹದಪಿಗಮನಂ ಮಂದಾನಾಮಲಭ್ಯಮೇವ ಭವತಿ । ಯುಷ್ಮಾಕಂ ಪ್ರವೃತ್ತಿ ಲೋಕಕ್ಷೇಮೈಕ ಲಕ್ಷ್ಯಾಃ ಬಹಿಶ್ವರೀಂ ಪ್ರಜಾವೃತ್ತಿ ಮಂತಶ್ಚರೀಂ ಕರ್ತುಂ ಕೃತ ಯತ್ನಾವಿಧಾತಿ ॥ ವೇದವಿದ್ಯಾ ಮುಖರಿತ ಮುಖಾರ ವಿಂದಾನನ ವದ್ಯಂ ಸಮ್ಮಾನಯತಿ । ತತ್ರ ಭವಂತ ಸ್ಫೂರ್ತೀ ಗೃಹಾ ವೇದಾಂತ ವಿದ್ಯಾಯಾ ಇತ್ಯೇತದಾನಂದಸ್ಯ ಪರಾಂಕೋಟಿ ಮಾಟೀಕ ತೇನಶ್ಚೇತಃ ॥

**ಆಶ್ರಿತ ಜನಮಂದಾರಾಸ್ಸದ್ಗುರು ಪರಮೇಷ್ಠಿನಃ !**

ಮಹೋತ್ಸವೇಸ್ಮಿನ್ ಬ್ರಹ್ಮಜ್ಞಾನ ಸತ್ರಸಮಾರಂಭೇ ಷಷ್ಟ್ಯಬ್ಧಿ ಪೂರ್ತಿ ಸಂದರ್ಭೇಚ ಭವತಸ್ತತ್ರ ಭವತಾಂ ಲೋಕ ಕಲ್ಯಾಣಕಾರ ಕಾನ್ ಸಮುದ್ಯಮಾಂಶ್ಚ ಭಗವಾನ್ ಸಾಂಗಸ್ಸಪರಿವಾರಸ್ಸಾಂಬಶಿವ ಶ್ರೀಮದುಮಾಮಹೇಶ್ವರಸ್ಸತತಂ ಸ್ಸಮನು ಗೃಷ್ಣನ್ ವಿಜಯೋನ್ಮುಖಾಂಶ್ಚ ಕುರ್ಯಾದಿತ್ಯಾ ಶಾಸ್ಮಹೇ ॥ ಸಗ್ರಹಾಸ್ಸಪ್ತಚಿರಂ ಜೀವಿನಃ ವಾಸ್ತುರೂಪೋ ಮೃತ್ಯುಂಜಯಃ ಸಂವತ್ಸರ ಮಾಸಾಯನ ಪಕ್ಷಾದಿ ದೇವತಾ ಸುಪ್ರೀತಾಸ್ಸುಪ್ರಸನ್ನಾ ವರದಾ ಭವಂತ್ವಿತಿ ಚಾಭ್ಯರ್ಥಯಾಮಃ । ಶ್ರೀ ಚರಣಾನಾ ಮಾಶಿಃ ಕಿರಣಾ ಸರ್ವದಾ ಪ್ರಸರಂತು । ಸಕಲ ಕಲ್ಮಷಘ್ನಾಭವಂತು । ಕರ್ಮಸು ಕಾಶ್ಮಲ್ಯಂ ಕಬಳಯಂತು । ವಾಚಾಮಾರ್ಜವಂ ಸಂಪಾದಯಂತು । ಭವಸಾಗರಂ ತಾರಯಂತು । ಅಮೀನಃ ಪ್ರಣಾಮ ಕುಸುಮಾಂಜಲಯಃ ॥

ಶ್ರೀ ಶಂಕರಾನಂದ ಯಂತೀಂದ್ರ ಗುರುಂ ನತೋಸ್ಮಿ
ಶ್ರೀ ಚಂದ್ರಮೌಳಿ ಪದಪಂಕಜ ಮತ್ತಭೃಂಗಂ
ಶ್ರೀ ಶಾ–ಕರೇಪತಿ ವಸಂತ ಮುಮಾಮಹೇಶಂ
ಪೀಠಂ ವಿತತ್ಯ ಮತಮಾತ್ಮನಿ ಸಂರಮಂತವ್ ||

ಏವಂ
**ಶ್ರೀ ಶಂಕರ ಸೇವಾ ಸಮಿತಿಂ, ಅನಂತಪುರಂ**
**29–1–80**

ರಚಯಿತಾ :
**M. ಬಾಲವಿಶ್ವನಾಥ ಶರ್ಮ**
ಸಂಸ್ಕೃತೋಪನ್ಯಾಸಕಃ

# 36 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

## ಬಳ್ಳಾರಿ 23-7-80 To 19-11-80

ಸ್ವಸ್ತಿ ಶ್ರಿ ರೌದ್ರಿ ನಾಮ ಸಂ॥ ಆಷಾಢ ಶುದ್ಧ ದ್ವಾದಶಿ ಬುಧವಾರ 19-11-80 ವರಿಗೂ ಈ ನಾಲ್ಕು ತಿಂಗಳು 3ಪಟ್ಟಗಳು 12 × 3 = 36 ಈ ಮೂರು ಪಟ್ಟಗಳು ಅಂದರೆ 12 + 12 + 12 ವರ್ಷಗಳು ಆದ್ದರಿಂದ ಈ 36 ನೆಯ ಚಾತುರ್ಮಾಸ್ಯ ಮಹಾವ್ರತವು ಒಂದೇ ಸ್ಥಾನದಲ್ಲಿ ನಾಲ್ಕು ತಿಂಗಳು ಬಳ್ಳಾರಿ ತೇರುಬಜಾರ್ ಶ್ರೀ ರಾಮಾನುಜ ನಿವಾಸ ಧರ್ಮನಿಲಯದಲ್ಲಿ ತ್ರಿಕಾಲ ಪೂಜಾನುಷ್ಠಾನಗಳಿಂದ ಶಾಸ್ತ್ರೋಕ್ತವಾಗಿ ಮಹಾವ್ರತ ಪ್ರಾರಂಭಿಸಲ್ಪಟ್ಟು ಸಾಂಗ ಮಂಗಳವಾಗಿ ನಡೆಯಿತು.

ಪ್ರಾತಃಕಾಲ ಉಪನಿಷದ್ಭಾಷ್ಯ ಪ್ರವಚನ, ಸಾಯಂಸಮಯದಲ್ಲಿ 7-00 ಗಂಟೆಯಿಂದ 8-00 ಗಂಟೆಯವರಿಗೂ ಶ್ರೀ ಬಾಲಾಂಜನೇಯ ಸ್ವಾಮಿ ದೇವಸ್ಥಾನದಲ್ಲಿ ಗೀತಾಭಾಷ್ಯ ಪ್ರವಚನವು ನಡೆಯಿತು.

ಈ ಮಹಾವ್ರತ ಮಧ್ಯದಲ್ಲಿ ಶ್ರೀ ಚಂದ್ರಮೌಳೀಶ್ವರನಿಗೆ ಸಹಸ್ರ ಘಟಾಭಿಷೇಕ ಸರ್ವೋಪಚಾರ ಪೂಜೆಗಳು ನಡೆದವು.

17-11-80 ಸೋಮವಾರ ಮಹನ್ಯಾಸಪೂರ್ವಕ ಏಕಾದಶವಾರ ಶ್ರೀ ರುದ್ರಾಭಿಷೇಕ, ರುದ್ರತ್ರಿಶತಿ ನಾಮಪೂಜಾ, ಲಘುರುದ್ರ, ಸ್ವಾಹಾಕಾರ, ನವಗ್ರಹ ಶಾಂತಿ ಹೋಮ, ಪೂರ್ಣಾಹುತಿ ಮೊದಲಾದ ಕಾರ್ಯಕ್ರಮಗಳು ವಿಧ್ಯುಕ್ತವಾಗಿ ಅನಂತಪುರದ ಬ್ರಹ್ಮಶ್ರೀ ಬಾಲವಿಶ್ವನಾಥಶರ್ಮ ಪಂಡಿತರಿಂದ ನಿರ್ವಹಿಸಲ್ಪಟ್ಟಿತು.

17-11-80 ಸಾಯಂಕಾಲ ಶ್ರೀ ಬಾಲಾಂಜನೇಯ ಸ್ವಾಮಿ ಆಲಯದಲ್ಲಿ ಪೂಜ್ಯ ಶ್ರೀಗಳವರಿಂದ ಆಂಧ್ರೀಕರಿಸಲ್ಪಟ್ಟ ಶ್ರೀ ಮದ್ಭಗವದ್ಗೀತಾ ಶಾಂಕರಭಾಷ್ಯ ಮಾಹಾಗ್ರಂಥಾವಿಷ್ಕರಣವು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಮತ್ಪೂಜ್ಯಪಾದ ಋಷಿಕೇಶ್ ಶ್ರೀ ಶಿವಾನಂದಾಶ್ರಮದ ಶ್ರೀ ದೇವಾನಂದ ಮಹಾಸ್ವಾಮಿಗಳವರ ಅಮೃತ ಹಸ್ತದಿಂದಾಯಿತು.

ಆ ಮಹಾಸಭೆಯಲ್ಲಿ M. ಬಾಲವಿಶ್ವನಾಥಶರ್ಮ ಪಂಡಿತರು, ಬ್ರಹ್ಮಶ್ರೀ ನೀಲಕಂಠ ಶಾಸ್ತ್ರಿಗಳು, ಬ್ರಹ್ಮಶ್ರೀ ಭಾಸ್ಕರ ಸಿದ್ಧಾಂತಿ ಪಂಡಿತರು, ಷಡ್ಬ್ರಹ್ಮ ಶ್ರೀ. ಶಿ॥ವ॥ ಚನ್ನಬಸವೇಶ್ವರ ಸ್ವಾಮಿ ಪಂಡಿತರು ಮೊದಲಾದವರು ತಮ್ಮ ಅಪೂರ್ವವಾದ ಧಾರ್ಮಿಕ ಆಧ್ಯಾತ್ಮಿಕವಾದ ಮತ್ತು ಭಾಷ್ಯ ವಿಷಯಕವಾದ ಉಪನ್ಯಾಸಗಳು ಮಾಡಿದರು. ಶ್ರೀಗಳವರ ಅಧ್ಯಕ್ಷತೆಯಲ್ಲಿ ಈ ಮಹಾಕಾರ್ಯವು ಎಷ್ಟೋ ಯಶಸ್ವಿಯಾಗಿ ನಡೆಯಿತು.

ಬಳ್ಳಾರಿ ಶ್ರೀ N. ನಾರಾಯಣಪ್ಪನವರು ಎಲ್ಲಾ ಪಂಡಿತರಿಗೆ ಸನ್ಮಾನವನ್ನು ಮಾಡಿದರು.

ಡಿವೈನ್ ಲೈಫ್ ಸಂಸ್ಥೆಯ ಶ್ರೀ P. ವೆಂಕಯ್ಯ ಶ್ರೇಷ್ಠಿಯವರು ಅನನ್ಯವಾದ ಭಕ್ತಿಯಿಂದ ನಡಕೊಂಡು ಸೇವೆ ಮಾಡಿದರು. ಬಳ್ಳಾರಿ ಪಟ್ಟಣದ ಅನೇಕ ಭಕ್ತರು ನಾಲ್ಕು ತಿಂಗಳು ಅಖಂಡವಾಗಿ ಸೇವೆಯನ್ನು ಮಾಡುತ್ತಾ ಅವ್ಯಾಹತವಾಗಿ ಪೂಜಾನುಷ್ಠಾನ ಶಾಸ್ತ್ರ ಶ್ರವಣಾದಿಗಳಿಂದ ಸಂತೃಪ್ತರಾದರು. ಅನ್ನದಾನ ಮಾಡಿದರು. ಅವರೆಲ್ಲರೂ ಎಷ್ಟೋ ಪುಣ್ಯವಂತರು.

## ನಿವೇದನ ಪತ್ರಿಕಾ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಇತ್ಯಾದಿ ಬಿರುದಾಂಕಿತ ಶ್ರೀ ಶಂಕರಾನಂದಗಿರಿ ಗುರುವರ ಸ್ವಾಮಿನಾಂ ಪಾದಸನ್ನಿಧೌ ಸಮರ್ಪಿತೇಯಂ ಸನ್ಮಾನ ಪತ್ರಿಕಾ:—

ಶ್ಲೋ|| ಅಭಿಯುಕ್ತಂ ಮಹಾಭಕ್ತಂ ವಿರಕ್ತಂ ಮುಕ್ತಮೇವಚ ।
ವಂದೇ ಶ್ರೀ ಶಂಕರಾನಂದ ಗಿರ್ಯಾಖ್ಯಂ ಸದ್ಗುರುಂ ಮುಹುಃ||

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ, ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ, ಯಮ, ನಿಯಮಾಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಾಣಾ, ಧ್ಯಾನ, ಸಮಾಧ್ಯಷ್ಟಾಂಗ ಯೋಗನಿಷ್ಠಾಗರಿಷ್ಠ, ಸರ್ವಮಂತ್ರ ಸರ್ವ ತಂತ್ರ ಸ್ವತಂತ್ರಾದಿ ರಾಜಧಾನೀ ಶ್ರೀಮದ್ವಾರಣಾಶ್ರೀ ಶ್ರೀ ಮಹಾಕ್ಷೇತ್ರಮಧ್ಯ ವಿದ್ಯೋತ್ಯಮಾನ ವಿಶ್ವೇಶ್ವರ ಲಿಂಗಾವಿರ್ಭೂತ ಶ್ರೀಮತ್ ಜಗದ್ಗುರು ವಿಶ್ವಾರಾಧ್ಯ ಗುರುಪರಂಪರಾಗತ, ಹರಿಕೇಶನಂದನವನ ವಿರಾಜಮಾನ ಜಂಗಮವಾಟಿಕಾ ಮಹಾ ಮಠಾದಿಷ್ಠಿತ ಜ್ಞಾನಸಿಂಹಾಸನ ಶಾಖಾ ಮಠಾಧೀಶ್ವರ, ಉರವಕೊಂಡ ಮಂಡಲಾಂತರ್ಗತ ಲತ್ತವರ ಶ್ರೀಕ್ಷೇತ್ರೇ ವಾಸಿನಾಂ. ಶ್ರೀ ಸದ್ಗುರು ಸದಾನಂದ ಗುರುಕರಕಮಲ ಸಂಜಾತ ಶ್ರೀ ಜಗದ್ಗುರು ಲತ್ತವರ ಕ್ಷೇತ್ರ ಶ್ರೀಮತ್ ಶಂಕರಾನಂದಗಿರಿ ಸ್ವಾಮಿನಾಂ ಚರಣ ಸರಸಿಜ ಸನ್ನಿಧಾನೇ ಬಲಾರೀ ಪುರವಾಸಿಭಿಃ ಅಶೇಷ ಶಿಷ್ಯ ಸಂದೋಹೈಃ ಸ ಭಕ್ತ್ಯ ನ್ಮೇಷಂ ಸಾಂಜಲಿಬದ್ಧಂ ಸುಪ್ರಣಾಮಂ ಸುಸ್ವಾಗತೋಕ್ತಿ ಪುರಸ್ಸರಂ ಸಮರ್ಪಿತೇಯಂ ಸನ್ಮಾನ ಸುಮಮಾಲಿಕಾ ಪತ್ರಿಕಾ ||

### ಜಗದ್ಗುರೋ-ಭಗವನ್

ಬಹುತರ ಪೂರ್ವಪುಣ್ಯ ಪರಿಪಾಕವಶಾತ್ ಸಂಪ್ರಾಪ್ತಂ ಚಾತುರ್ಮಾಸ್ಯ ವ್ರತಾನಂತರಂ ಸಂಪ್ರಾಪ್ತಂ ತತ್ರಭವತಾಂ ದಿವ್ಯ ಸಂದರ್ಶನಂ ಅಸ್ಮದಿದಾನೀಂ ತನದುಃ ತೌಘಂ ದೂರೀಕೃತ್ಯ ಆಸ್ಮಾಕೀನ ಭಾವಿ ಭಾಗ್ಯೋದಯಾಂ-ಕುರಸ್ಯ ಬೀಜವತ್ ವರಿವರ್ತಿ ಇತಿವಯಂ ಮನ್ಯಾಮಹೇ ॥

## ವೈದಿಕಮಾರ್ಗ ಪ್ರವರ್ತಕಾಚಾರ್ಯವರ್ಯ ಶ್ರೀ ಶಂಕರಾನಂದಗಿರೇ !

ಕಲಿ ಪ್ರೇರಣಯಾವಾ, ವಿದೇಶ ವಿದ್ಯಾಭ್ಯಾಸಜನ್ಯ ಕುಸಂಸ್ಕಾರೇಣವಾ ಸ್ವೀಯ ಜಾತೀಯ ಸಂಸ್ಕೃತಿಂ ಸ್ವಧರ್ಮಂಚ ವಿಸ್ಮೃತ್ಯ, ನಿಶ್ಶಂಕಂ ನಿರ್ಭಯಂಚ ವರ್ಣಾಶ್ರಮ ಧರ್ಮ ವಿಪ್ಲವಂ ಕುರ್ವತೋ ಜನಾನ್ ಬುಬೋಧಿಷಯಾಃ ಸರ್ವ ಪುಣ್ಯ ಕ್ಷೇತ್ರ ಯಾತ್ರಾಮಿಷೇಣ ಧರ್ಮೋದ್ಧರಣ ಪರಾಯಣಾಃ ತತ್ರ ಭವಂತೋ ಭವಂತಃ|| ಆಸೇತು ಶೀತಾಚಲಾವಧಿಕಾನ್ ದೇಶಾನ್ ಅಟತ್ವಾ ತತ್ರ ವಿಚರದ್ಭಿಃ ಶ್ರೀಮದ್ಭಿಃ ಕೃತಂ ವೈದಿಕ ಧರ್ಮ ಮಾರ್ಗೋಪದೇಶಂ ವಾರ್ತಾ ಪತ್ರಿಕಾಮುಖೇನ ಶ್ರಾವಂ ಶ್ರಾವಂ ವಯಂ ಅಮಂದಾನಂದ ಕಂದಳಿತಾಂ ತರಂಗಾಭವಾಮಃ.

ಶ್ರೀ ಉಮಾಮಹೇಶ್ವರ ಗುರುಪರಂಪರಾಪ್ರಾಪ್ತ ಪೀಠಾಧಿಷ್ಠಿತ ಶಂಕರಾನಂದ ಗಿರೀಂದ್ರ ಏಭಿರೇವ ಉಪನ್ಯಾಸ ಸಾರೈಃ ಭಜಂತು ಭಾರತೀಯಾಂ ಸ್ವಧರ್ಮೇಷು ಶ್ರದ್ಧಧಂತು, ವೈದಿಕ ಮಾರ್ಗೇಷು ವರ್ಧಯಂತು, ವೇದ ವೇದ್ಯೋಭಗವಾನ್ ಭವತಾಂ ಆಯುಷಂ ಅಭಿವರ್ಧಯತು. ಭವದೀಯಾಂ ಭಾವ ವಿಭಾವಂ ವರೀವರ್ಧಯತು. ಭವದುಪನ್ಯಾಸ ಸಾರಾಂ, ಇತ್ಥಂ ನಿತ್ಯಂ ನಿರಂತರಂ ಚಿರಂತನಂ ಸಮಂತತಃ ಸ್ತುವಂತೊ ಸಪ್ರಶ್ರಯಂ ಸಾಂಜಲಿ ಬದ್ಧಂ ಪ್ರಣಮ್ಯ.

ವಿರಮಾಮ ಃ

ಇತ್ಥಂ
ದಿವ್ಯಜೀವನ ಸಮಾಜ ಭಕ್ತಿ ಮಂಡಲಿ

ರಚಯಿತಾ

ವೇದಾಂತ ಶಿರೋಮಣಿ ಃ
ವಿದ್ವಾನ್ P. ನೀಲಕಂಠಶಾಸ್ತ್ರೀ
ಬಳ್ಳಾರಿ (ಬಲಪುರಿ)
ತಾ|| 17-11-80

ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ 2-12-80 ಮೊದಲು 3 ದಿನಗಳು ಗುರುದೇವರ ಗುರುಗಳ ಪುಣ್ಯಾರಾಧನೆ ಮಹೋತ್ಸವವು ಶ್ರೀ ಪೂರ್ಣಾನಂದ ಸ್ವಾಮಿಗಳು, ಶ್ರೀ ದೇವಾನಂದ ಸ್ವಾಮಿಗಳು, ಶ್ರೀ ಶಾರದಾ ಪ್ರಿಯಾನಂದ ಸ್ವಾಮಿನಿ ಅಮ್ಮನವರು (ಚಿನ್ಮಯ ಮಿಷನ್), ಶ್ರೀ M. ಬಾಲವಿಶ್ವನಾಥಶರ್ಮ, ಶ್ರೀ ಅಡವಿ ಸ್ವಾಮಿಗಳು, ಶ್ರೀ N. ರಾಮರಾವು ಮೊದಲಾದ ಮಹನೀಯರ ಉಪನ್ಯಾಸಗಳು ಬೃಹದ್ರೂಪವಾದ ಮಹಾಸಭೆಯಲ್ಲಿ ನೋಡಲು ಕೇಳಲು ಶಿವಸಭೆಯಾಗಿ ಬೆಳಗಿತು.

ಶ್ರೀ ದುರ್ಮತಿನಾಮ ಸಂ|| ವೈಶಾಖ ಶುದ್ಧ ಪಂಚಮಿ ಶ್ರೀ ಶಂಕರ ಜಯಂತಿ ಮಹೋತ್ಸವವು ಆನಂದಪ್ರದವಾಗಿ ನಡೆಯಿತು.

ಶ್ರೀಗಳವರ ಪರಮ ಗುರುಗಳ ಪುಣ್ಯಾರಾಧನೆ ನಿರ್ವಾಣ ಮಠದಲ್ಲಿ ಮಂಗಳ ಪ್ರದವಾಗಿ ಜರುಗಿತು.

ಅನಂತರ ನಮ್ಮ ಶ್ರೀ ಗುರುದೇವರ ಜಯಂತ್ಯುತ್ಸವವು ಶಿವಪ್ರದವಾಗಿ ನಡೆಯಿತು.

ನಮಗೆ ಸರ್ವಸಾಧಾರಣವಾಗಿ ಅನುಭವದಲ್ಲಿರುವ ಆನಂದವೇನಿದೆಯೋ ಅದು ನಿಜವಾದ ಆನಂದವಲ್ಲ. ಈ ವಿಷಯ ಬುದ್ಧಿವಂತರಾದವರಿಗೆ ಅರ್ಥವಾಗದೇ ಇರದು. ಹೇಗೆಂದರೆ ಅದೇ ಪೂರ್ಣವಾದ ಆನಂದವಾಗಿದ್ದ ಪಕ್ಷದಲ್ಲಿ ಆತನಲ್ಲಿ ಅತೃಪ್ತಿಗೆ, ಅಸೂಯೆಗೆ ಅವಕಾಶವಿರುತ್ತಿದ್ದಿಲ್ಲ. ಆದ್ದರಿಂದ ಅದು ನಿಜವಾದ ಆನಂದವಲ್ಲ. ನಿಜಾನಂದವೆಂಬುದು ಇರುವುದೂ ಹೋಗುವದೂ ಅಲ್ಲ. ಅದು ಸಹಜಸ್ಥಿತಿ.

ಅವಿದ್ಯೆ ಎನ್ನುವದು ತತ್ತ್ವತಃ ಇಲ್ಲದ್ದೇ. ಆದ್ದರಿಂದ ಈ ವಿಷಯದಲ್ಲಿ ಅವಿದ್ಯೆ ಬ್ರಹ್ಮಾಶ್ರಯವಾದದ್ದೆಂದರೂ ಸರಿ, ಇಲ್ಲದ್ದೆಂದರೂ ಸರಿ. ಇಲ್ಲದ ಪದಾರ್ಥವು ಒಂದನ್ನು ಆಶ್ರಯಿಸಿ ಇದೆ ಅಥವಾ ಇಲ್ಲ ಎಂಬುವ ವ್ಯವಹಾರವು ವಸ್ತುತಃ ಸಮಂಜಸವಲ್ಲ. ಬ್ರಹ್ಮಸ್ವರೂಪದಲ್ಲಿ ಯಾವ ಸಂಬಂಧವೂ ಇಲ್ಲವೆಂದು ಮುಮುಕ್ಷುಗಳು ತಿಳಿಯಬೇಕು. "ಅಹಮಜ್ಞಃ" ಎಂಬ ವ್ಯವಹಾರಿಕ ಅನುಭವದ ಆಧ್ಯಾಸಿಕ ಬುದ್ಧಿಯಿಂದ ಹೀಗೆಲ್ಲಾ ಹೇಳಿ, ವಸ್ತುತಃ ಇಲ್ಲವೆಂದಿದ್ದಾರೆ. ಮಾಯೆ ಎಂಬುವದು ಇದರಿಂದ ಉಂಟಾಗುವ ಸುಖ ದುಃಖ ರೂಪ ಸಂಸಾರವೆಂಬುದು, ತಪ್ಪು ತಿಳುವಳಿಕೆಯಿಂದ ಮುಮುಕ್ಷುಗಳಿಗೆ ತಮ್ಮಲ್ಲಿದ್ದಂತೆಯೇ ಭಾಸವಾಗುತ್ತೆ. ಜ್ಞಾನೋದಯಾನಂತರ ಅದು ಕಾಣಿಸುವದಿಲ್ಲ. ಎಂಥಾ ದುಃಖವಾಗಲಿ ಸುಖವಾಗಲಿ ತನಗೆ ಪರಿತಾಪವನ್ನು ಕೊಡಲಾರದು. ಪ್ರತೀಕಾರ ಬುದ್ಧಿ ಉಂಟಾಗದು. ಭೇದವು ಛಾಯಾಮಾತ್ರವಾಗಿ ಕಾಣಿಸಿದರೂ ಬಂಧವನ್ನುಂಟು ಮಾಡಲಾರದು.

## 37 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗೂಳಪಾಳ್ಯಂ, ಕಣೇಕಲ್ಲು, ನಂದ್ಯಾಲ.

ಸ್ವಸ್ತಿ ಶ್ರೀ ದುರ್ಮತಿ ನಾಮ ಸಂ || ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರಿಗೂ ಅಂದರೆ 12-7-81 ರಿಂದ 9-11-81 ವರೆಗೂ ಈ ನಾಲ್ಕು ಮಾಸಗಳು ಮಹಾವ್ರತ ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟು ಮಂಗಳಮಯವಾಗಿ ನಡೆದು ಪೂರ್ಣವಾಯಿತು. ಕಣೇಕಲ್ಲು ಸ್ವಯಂಭೂ ಈಶ್ವರಾಲಯದಲ್ಲಿ ಶ್ರೀಗಳವರ ಪೂಜಾ ಪ್ರವಚನಾದಿ ಕಾರ್ಯಗಳು ಮಹದಾನಂದವಾಗಿ ನಡೆದವು. ಪಂಡಿತ ಮಹೋದಯರು ಎಷ್ಟೋ ಪ್ರಿಯವಾಗಿ ಶ್ರೀ ಸನ್ನಿಧಿಗೆ ಬಂದು ಶ್ರವಣ ಮಾಡಿದರು. ಕಡೆಯದಿನ ಅವರು ಉತ್ತಮ ರೀತಿ ಉಪನ್ಯಾಸಗಳನ್ನು ಮಾಡಿದರು. ಗುಣವಂತರು ಗುರು ಭಕ್ತರಾದ ಬ್ರಹ್ಮಚಾರಿ ಶ್ರೀ ಪ್ರಣವಾನಂದ (ತೆಲಗು ಪಂಡಿತರು)

ಮತ್ತು ಶ್ರೀ N. ಕ್ರಿಷ್ಣಯ್ಯ ಶೆಟ್ಟಿ, ಶ್ರೀ R. ರಾಮಚಂದ್ರಯ್ಯ, ಶ್ರೀ ವಿಶ್ವನಾಥ ಮೊದಲಾದವರು ಭಕ್ತಿಯಿಂದ ನೋಡಿಕೊಂಡರು. ಕಾರ್ತಿಕ ಶುದ್ಧ ಪೌರ್ಣಮಿಗೆ ಶ್ರೀ ಕ್ಷೇತ್ರದಲ್ಲಿ ವ್ರತ ದೀಕ್ಷಾವಿರಮಣ, ಪೂಜಾ, ಲಕ್ಷ ದೀಪಾರ್ಚನಾದಿ ಕಾರ್ಯಗಳು ನಡೆದವು.

ಶ್ರೀಗಳವರ ಗುರುಗಳ ಪುಣ್ಯಾರಾಧನೆ ಗುಂತಕಲ್ಲು ಆಶ್ರಮದಲ್ಲಿ 3 ದಿನಗಳು ಅತ್ಯಂತ ವೈಭವವಾಗಿ ಜರುಗಿತು. ಮೊದಲಿನಂತೆ ಮಹಾತ್ಮರು ಆಗಮಿಸಿದ್ದರು.

"ಬ್ರಹ್ಮಾನುಭವ ಉಂಟಾಗಲು ನಿಜನಿಷ್ಠೆ (ಸರ್ವಸಾಕ್ಷಿತ್ವಭಾವ) ದೃಢವಾದ ಮೇಲೆ ಯಾವದೂ ಸಂಬಂಧವಿರುವದಿಲ್ಲ. ಸಾಕ್ಷಿಯಾದ ತಾನು ಬ್ರಹ್ಮವೇ ಆಗಿರುತ್ತಾನೆ. ಕರ್ತೃತ್ವಾಭಿಮಾನಗಳಿಲ್ಲದಾಗ ಆತನನ್ನು ಪುಣ್ಯ ಪಾಪಗಳು ಮುಟ್ಟುವುದಕ್ಕೆ ಸ್ಥಳವಿಲ್ಲ".

## 38 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಶ್ರೀಶೈಲ ಮಹಾಕ್ಷೇತ್ರ– ಶ್ರೀ ವಾಸವೀಸತ್ರ 1–7–82

ಸ್ವಸ್ತಿ ಶ್ರೀ ದುಂದುಭಿನಾಮ ಸಂ॥ ಆಷಾಢ ಶುದ್ಧ ಏಕಾದಶಿ ಗುರುವಾರ 1–7–82 ಮೊದಲು ಭಾದ್ರಪದ ಶುದ್ಧ ದ್ವಾದಶಿ 31–8–82 ವರಿಗೂ 2 ಮಾಸಗಳು ಸತ್ರ ಶ್ರೀಶೈಲ ಶ್ರೀ ಮಲ್ಲಿಕಾರ್ಜುನ ಜ್ಯೋತಿರ್ಲಿಂಗ ಮಹಾಸನ್ನಿಧಿಯಲ್ಲಿ ಶ್ರೀ ವಾಸವೀ ಪವಿತ್ರ ಸ್ಥಾನದಲ್ಲಿ ವಿಧ್ಯುಕ್ತವಾಗಿ ತ್ರಿಕಾಲಪೂಜಾನುಷ್ಠಾನ ಪ್ರಸ್ಥಾನತ್ರಯ ಶಾಸ್ತ್ರ ಪ್ರವಚನಗಳಿಂದ ಈ ಮಹಾವ್ರತವು ಕೈಲಾಸಪ್ರದವಾಗಿ ನಡೆಯಿತು.

ವಾಸವೀ ಸತ್ರದ ಪುಣ್ಯಾತ್ಮರಾದ ಯಜಮಾನರು ಮತ್ತು ಆ ಪರಿವಾರದ ಎಲ್ಲಾ ಜನರು ಶ್ರೀ ಗುರುಗಳನ್ನು ಅತ್ಯಂತ ಭಕ್ತಿ ಶ್ರದ್ಧೆಗಳಿಂದ ನೋಡಿಕೊಂಡರು.

ಶ್ರೀ ಭ್ರಮರಾಂಬಾ ಸಹಿತ ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವಾಲಯದ ಚೇರ್ಮನ್ ಡಾಕ್ಟರ್ ಪೈಡಿ ಲಕ್ಷ್ಮಯ್ಯನವರು ಎಷ್ಟೋ ಪ್ರೇಮದಿಂದ ಶ್ರೀಗಳವರು ವ್ರತವನ್ನಾಚರಿಸುತ್ತಿದ್ದ ವಾಸವೀ ಸತ್ರಕ್ಕೆ ಬಂದು ತಾವು ಉಪನ್ಯಾಸಮಾಡಿ ಶ್ರೀಗಳವರು ಈ ವರ್ಷವೇ ಅಲ್ಲ, ಇನ್ನು ವರ್ಷದ್ವಯ ಮುಂದೆ 3 ವರ್ಷಗಳು ಈ ಶ್ರೀ ಶೈಲ ಮಹಾಕ್ಷೇತ್ರದಲ್ಲೆ ತಾವು ಚಾತುರ್ಮಾಸ್ಯ ಮಹಾವ್ರತವನ್ನು ನಡಿಸಬೇಕೆಂದು ಪ್ರೇಮೋದ್ಗಾರ ಮನದಿಂದ ಬಯಸುತ್ತಾ ಕಾಣಿಕೆಯನ್ನು ಸಮರ್ಪಿಸಿ "ಶೀತಾಂ ಶೋರ ಮೃತಾರ್ಪಣಮ್ಮನು ಕ್ರಿಯನ್ ಜೇಕೊಮ್ಮು ಪ್ರಜ್ಞಾನಿಧೀ !" ಅನ್ನುತ್ತ ಭಕ್ತಿಯಿಂದ ಮಾತನಾಡಿದರು. ಆ ಸಭೆಯಲ್ಲಿದ್ದ ಸರ್ವಭಕ್ತರು ಸಂತೋಷಪಟ್ಟರು.

ಈ ಮಹಾವ್ರತವು ಶ್ರೀಶೈಲ ಮಹಾಕ್ಷೇತ್ರದಲ್ಲಿ ನಡೆದುದು ಒಂದು ಅಪೂರ್ವ. ಅಸಂಖ್ಯಾಕ ಭಕ್ತಾದಿಗಳು ಶ್ರೀಶೈಲ ಕ್ಷೇತ್ರಕ್ಕೆ ಶ್ರೀ ಸನ್ನಿಧಿಗೆ ಬಂದು ಹೋಗುತ್ತಾ ಶ್ರವಣ ಪೂಜಾದಿಗಳಿಂದ ಮಹಾಪರ್ವವಾಗಿ ಭಾವಿಸಿ ಆನಂದಿಸುತ್ತಿದ್ದರು.

ಇಲ್ಲಿ ಶ್ರೀ ಮಲ್ಲಿನಾಥನ ಕೃಪೆಯಿಂದ 3 ತಿಂಗಳು ವ್ರತವು ಅವಿಚ್ಛಿನ್ನವಾಗಿ ನಡೆದು ವಿಶೇಷ ಅನ್ನದಾನದಿಂದಲೂ, ನಿಯಮ ನಿಷ್ಠೆಯಿಂದಲೂ ಸರ್ವರಿಗೆ ಮಹದಾನಂದವನ್ನುಂಟುಮಾಡುತ್ತಾ ಸಾಂಗಮಂಗಳವಾಯಿತು.

ಅನಂತರ ನಿಯಮಿತ ಆಯಾಸ್ಥಾನಗಳಲ್ಲಿ ಮಿಕ್ಕ ಅಧಿಕ ಮಾಸದಿಂದ ಮೂರು ತಿಂಗಳು ಶಿವಪ್ರದವಾಗಿ ನಡೆದು ಪೂರ್ಣವಾಯಿತು. ಶ್ರೀಕ್ಷೇತ್ರ ಆಶ್ರಮದಲ್ಲಿ ದೀಕ್ಷಾ ವಿರಮಣವಾಗಿ ಪೂಜಾದಿ ಕಾರ್ಯಗಳು ನಡೆದವು.

ಶ್ರೀಗಳವರ ಅಧ್ಯಕ್ಷತೆಯಲ್ಲಿ ಗುರುದೇವರ ಗುರುಗಳ ಆರಾಧನೆ ಕಾರ್ಯಕ್ರಮ ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಶಿವಪ್ರದವಾಗಿ ನಡೆಯಿತು. ಸುವಿಶಾಲ ಪ್ರಾಂಗಣ ಸಭಾಮಂಟಪದಲ್ಲಿ ಆಗಮಿಸಿದ ಮಹಾತ್ಮರನ್ನು ಪೂರ್ಣ ಕುಂಭದಿಂದ ಸ್ವಾಗತಿಸಿ ಸಭಾ ಕಾರ್ಯಕ್ರಮ ಸ್ವಾಮಿಗಳ ದಿವ್ಯೋಪನ್ಯಾಸಗಳು ಮೂರು ದಿನ ಅಪೂರ್ವವಾಗಿ ನಡೆದು, ಮಹಾಮಂಗಳ ಅನ್ನಸಂತರ್ಪಣೆಯಾಯಿತು.

## 39 ನೆಯ ಶ್ರೀಚಾತುರ್ಮಾಸ್ಯ ಮಹಾವ್ರತ

### ವೇಣಿ ವೀರಾಪುರ (ಕರ್ನಾಟಕ), ನಿರ್ವಾಣ ಮಠ

### 20-7-83 ಮೊದಲು 17-11-83 ವರೆಗೆ

ಸ್ವಸ್ತಿ ಶ್ರೀ ರುಧಿರೋದ್ಗಾರಿ ನಾಮ ಸಂ॥ ಆಷಾಢ ಶುದ್ಧ ಏಕಾದಶಿ ಮೊದಲ್ಗೊ ಕಾರ್ತಿಕ ಶುದ್ಧದ್ವಾದಶಿವರೆವಿಗೂ ಶಾಸ್ತ್ರೀಯವಾಗಿ ನಾಲ್ಕು ಮಾಸಗಳು ಮಹದಾನಂದದಿಂದ ಮುಮುಕ್ಷು ಜನೋದ್ಧಾರಕವಾದ ಸಾಧನ, ಸಿಧ್ಧಾವಸ್ಥೆ ವಿಷಯಕವಾದ ಬ್ರಹ್ಮತತ್ತ್ವ ಪ್ರಬೋಧೆಯೂ ತ್ರಿಕಾಲ ಪೂಜಾನುಷ್ಠಾನಗಳೂ ಮತ್ತು ಜೀವನ್ಮುಕ್ತಿ ಪ್ರಕಾಶಕ ಗ್ರಂಥ ಪ್ರವಚನವೂ ಗೀತಾ ಶಾಸ್ತ್ರ ಶ್ರವಣದಿಂದಲೂ ಮಂಗಳಪ್ರದವಾಗಿ ನಡೆದು ಪೂರ್ಣವಾಯಿತು.

ಈ ಮಹಾವ್ರತದ ಮಧ್ಯಕಾಲದಲ್ಲಿ ವೇಣೀವೀರಾಪುರ ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಮಹಾಗಣಪತಿ, ಪಾರ್ವತಿ, ಶ್ರೀ ಚಕ್ರನವಗ್ರಹಾದಿ ಪ್ರತಿಷ್ಠೆ ವೇದೋಕ್ತವಾಗಿ ನಡೆಯಿತು. ಬಳ್ಳಾರಿ ಲಿಂಗಾರೆಡ್ಡಿ ಇವರ ಸತೀಮಣಿ ಶ್ರೀ ಸುವೇಣಮ್ಮನವರು ಈ ಕಾರ್ಯವನ್ನು ತ್ಯಾಗಪೂರ್ವಕ ಭಕ್ತಿ ಭಾವಗಳಿಂದ ಗುರುಸೇವೆಯಾಗಿ ಮಾಡಿದರು, ಸಂಸ್ತುತ್ಯ ಮಿಕ್ಕ ಸರ್ವ ಭಕ್ತರು ಅತ್ಯುತ್ತಮ ರೀತಿ ಸಹಕರಿಸಿ ಸೇವೆ ಮಾಡಿದರು.

ಶ್ರೀ ಕ್ಷೇತ್ರದಲ್ಲಿ ಕಾರ್ತಿಕ ಶುದ್ಧ ಪೂರ್ಣಿಮೆಗೆ ದೀಕ್ಷಾ ವಿರಮಣ ಕಾರ್ಯಕ್ರಮವು ನಡೆಯಿತು. ಪೂಜಾರ್ಚನಾದಿ ಕಾರ್ಯಗಳು ಲಕ್ಷದೀಪಾರ್ಚನೆ ಬಿಲ್ವಾರ್ಚನೆಯಾಯಿತು.

ಶ್ರೀಗಳವರ ಗುರುಗಳ ಆರಾಧನೆ ಪೂಜಾಕಾರ್ಯವು ಮಹಾತ್ಮರ ಉಪನ್ಯಾಸಗಳಿಂದ ಅಪೂರ್ವವಾಗಿ ಮೂರು ದಿನಗಳು ನಡೆಯಿತು.

## 40 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗಂಜಿಗುಂಟೆ ಶ್ರೀಮಠ ನಂದ್ಯಾಲ 9-7-84 to 5-11-84

ಸ್ವಸ್ತಿಶ್ರೀ ರಕ್ತಾಕ್ಷಿ ನಾಮ ಸಂ॥ ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರೆಗೂ ಈ ನಾಲ್ಕು ಮಾಸಗಳು ಪೂರ್ವ ಮಹಾವ್ರತಗಳಂತೆ ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟು ತ್ರಿಕಾಲ ಪೂಜಾನುಷ್ಠಾನ ಪ್ರಸ್ಥಾನತ್ರಯ ಶಾಸ್ತ್ರಪ್ರವಚನಗಳೊಡನೆ ಮಹದಾನಂದಪ್ರದವಾಗಿ ನಡೆಯಿತು.

ಗಂಜಿಗುಂಟೆ ಶ್ರೀಮಠದಲ್ಲಿ ಉಪನಿಷತ್ತುಗಳು ಭಗವದ್ಗೀತಾ ಭಾಷ್ಯ ಪ್ರವಚನಗಳು ಅಪೂರ್ವವಾಗಿ ನಡೆದವು. ಇದೇ ಪ್ರಕಾರ ಎಲ್ಲಾ ಸ್ಥಾನಗಳಲ್ಲಿ ಕಾರ್ಯಕ್ರಮವು ಶಿವಪ್ರದವಾಗಿ ನಡೆದು ಮಹಾವ್ರತ ಸಮಾಪ್ತಿಯಾಯಿತು.

ಮಿಕ್ಕ ಕಾರ್ಯಗಳೆಲ್ಲಾ ಮೊದಲಿನಂತೆ ನಡೆದವು. ಗಂಜಿಗುಂಟೆ ಶ್ರೀಮಠದಲ್ಲಿ ಶ್ರೀಗಳವರ ಗುರುದೇವರ ಪುಣ್ಯಾರಾಧನೆ ಮಹೋತ್ಸವವು ಶ್ರೀಗಳವರ ಆಧ್ವರ್ಯದಲ್ಲಿ ಆನಂದಪ್ರದವಾಗಿ ನಡೆಯಿತು.

ಪೂಜ್ಯಶ್ರೀ ರಾಮಕೃಷ್ಣಾನಂದ ಸ್ವಾಮಿಗಳು, ಶ್ರೀ ಪೂರ್ಣಾನಂದ ಸ್ವಾಮಿಗಳು, ಋಷಿಕೇಶದ ಶ್ರೀ ದೇವಾನಂದ ಸ್ವಾಮಿಗಳು, ಶ್ರೀ ನಿರ್ಮಲಾನಂದ ಸ್ವಾಮಿಗಳು ತೆನಾಲಿ, ಶ್ರೀ ರಮಣಾನಂದ ಸ್ವಾಮಿಗಳು ಹೈದರಾಬಾದು ಮೊದಲಾದ ಮಹಾತ್ಮರು ದಯಮಾಡಿಸಿದ್ದು ಇವರ ಮಹೋಪನ್ಯಾಸಗಳು ಶ್ರೋತೃ ಜನಾನಂದಕರವಾಗಿ ಆಧ್ಯಾತ್ಮಿಕ ತತ್ವೋಪದೇಶಗಳಿಂದ ಅಮೋಘವಾಗಿ ಕಾರ್ಯ ಜರುಗಿತು.

ಅನಂತರ ಗೀತಾ ಜಯಂತಿ ಮಹೋತ್ಸವವು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಗೀತಾ ಮೂರ್ತಿಯ ಸನ್ನಿಧಿಯಲ್ಲಿ ಶಿವಪ್ರದವಾಗಿ ನಡೆಯಿತು.

ಆಮೇಲೆ ಶ್ರೀಗಳವರು ನಂದ್ಯಾಲ ಶ್ರೀ ಉಮಾಮಹೇಶ್ವರಾಶ್ರಮಕ್ಕೆ ದಯಮಾಡಿಸಿದರು. ಅಲ್ಲಿ ಶ್ರೀ ಸದಾಶಿವ ಎನ್ನುವ ಬ್ರಹ್ಮಚಾರಿಗೆ ಒಂದು ಸುಮುಹೂರ್ತದಲ್ಲಿ ವಿಧ್ಯುಕ್ತವಾಗಿ ಶ್ರೀ ಸದಾನಂದಸ್ವಾಮಿ ಎನ್ನುವ ಶುಭನಾಮದಿಂದ ತುರೀಯಾಶ್ರಮವನ್ನು ಪ್ರಸಾದಿಸಿದರು.

17-2-84 ರುಧಿರೋದ್ಗಾರಿ ಮಾಘ ಶುದ್ಧ ಪೂರ್ಣಿಮ ಶುಕ್ರವಾರ ಮೊದಲು ಬಹುಳ ತದಿಗೆಯವರೆಗೂ ನಂದ್ಯಾಲ ಪಟ್ಟಣ ಶ್ರೀ ಉಮಾಮಹೇಶ್ವರಾಶ್ರಮ ಬ್ರಹ್ಮ ಸಭಾಮಂಟಪದಲ್ಲಿ ಪೂಜ್ಯ ಸ್ವಾಮಿಗಳವರಿಂದ ರಚಿಸಲ್ಪಟ್ಟ ಪ್ರಸ್ಥಾನತ್ರಯ ಮಹಾ ಗ್ರಂಥ ದ್ವಿತೀಯ ಮುದ್ರಣ ಆವಿಷ್ಕರಣ ಮಹೋತ್ಸವವು ವೈಭವದಿಂದ ನಡೆಯಿತು. ಮಹಾತ್ಮರೆಲ್ಲರೂ ದಯಮಾಡಿಸಿದ್ದರು.

19-2-84 ಆದವಾನಿ ಪಾಡಾಗಲ್ಲು ಗಿರೆಪ್ಪ ಶೆಟ್ಟಿಯವರ ಗುಣವಂತನಾದ ಮಗ ಶ್ರೀ P. ಸತ್ಯನಾರಾಯಣ ಬ್ರಹ್ಮಚಾರಿಗೆ ಶಾಸ್ತ್ರೋಕ್ತವಾಗಿ ಶ್ರೀ ಚಂದ್ರ ಶೇಖರಾನಂದಸ್ವಾಮಿ ಎಂಬ ಶುಭನಾಮದಿಂದ ತುರೀಯಾಶ್ರಮವು ಪ್ರಸಾದಿಸಲ್ಪಟ್ಟಿತು. ಇವರ ಸೋದರರು ಯಾವತ್ತು ಕುಟುಂಬದವರು ಭಕ್ತಿಶ್ರದ್ಧೆಗಳಿಂದ ಈ ಕಾರ್ಯಕ್ಕೆ ದೊಡ್ಡದಾಗಿ ಖರ್ಚು ಮಾಡಿ ಪುಣ್ಯಾತ್ಮರಾದರು. ಈ ಕಾರ್ಯಕ್ರಮವನ್ನು ಕಲ್ಪೋಕ್ತ ವಾಗಿ ನಿರ್ವಹಿಸಿದ ಪಂಡಿತರು M. ಬಾಲವಿಶ್ವನಾಥ ಶರ್ಮ, ಶ್ರೀ ಚಿದಂಬರಶಾಸ್ತ್ರಿ ವ್ಯಾಕರಣ ಶಿರೋಮಣಿ ಆಸ್ಥಾನ ವಿದ್ವಾಂಸರು, ಬ್ರಹ್ಮಶ್ರೀ ಮಾಡುಗ್ಗಲ ವೆಂಕಟ ಶಿವಶಾಸ್ತ್ರಿ ಜ್ಯೋತಿರ್ವಾಸ್ತು ಜಾತಕ ವಿದ್ಯಾನಿಪುಣ ಉಭಯಶಾಖ ಪ್ರಯೋಕ್ತ, ಬ್ರಹ್ಮಶ್ರೀ ಯನ್. ಸುಬ್ರಹ್ಮಣ್ಯಶಾಸ್ತ್ರಿ ಪಂಡಿತರು ಆದವಾನಿ).

ಮಹಾತ್ಮರು ಪೂಜ್ಯ ಶ್ರೀ ಪೂರ್ಣಾನಂದ ಸ್ವಾಮಿಗಳು(ನೆಲ್ಲೂರು), ಪೂಜ್ಯಶ್ರೀ ದೇವಾನಂದ ಸ್ವಾಮಿಗಳು (ಹೃಷಿಕೇಶ್), ಬ್ರಹ್ಮಶ್ರೀ ಕುಲಕರ್ಣಿ ಸ್ವಾಮಿಗಳು (ಬೆಂಗಳೂರು), ಬ್ರಹ್ಮಶ್ರೀ ರಾಮಚಂದ್ರಮೂರ್ತಿ ಸಂಸ್ಕೃತ ಪಂಡಿತರು (ಆದೋನಿ), ಬ್ರಹ್ಮಶ್ರೀ N. ರಾಮರಾವು ಇವರೆಲ್ಲರೂ ಕಾರ್ಯಕ್ರಮಕ್ಕೆ ದಯಮಾಡಿಸಿದ್ದರು.

ಪುರ ಪ್ರಮುಖರು ಭಕ್ತರು ಇನ್ನಿತರ ಎಲ್ಲಾ ಜನರು ಭಕ್ತಿಶ್ರದ್ಧೆಗಳಿಂದ ಮಹಾ ಸಭೆಗೆ ಬಂದು ಉಕ್ತಮಹನೀಯರ ಬ್ರಹ್ಮ ವಿದ್ಯೋಪದೇಶಾತ್ಮಕವಾದ ಉಪನ್ಯಾಸ ಗಳನ್ನು ಶ್ರವಣ ಮಾಡಿ ತೃಪ್ತರಾದರು. ಎಲ್ಲಾ ಭಕ್ತರು ಉತ್ತಮ ರೀತಿಯಿಂದ ಸೇವೆ ಸಲ್ಲಿಸಿದರು.

ಪ್ರಸ್ಥಾನತ್ರಯ ಮಹಾಗ್ರಂಥಗಳನ್ನು ಅನೇಕ ಪಂಡಿತರಿಗೂ ಭಕ್ತರಿಗೂ ಕೊಡಲಾಯಿತು.

ಅನಂತರ ಲತ್ತವರ ಶ್ರೀಕ್ಷೇತ್ರದಲ್ಲಿ ಶ್ರೀ ಶಂಕರ ಜಯಂತಿ, ಶ್ರೀ ನಿರ್ವಾಣ ಮಠದಲ್ಲಿ ಪರಮ ಗುರುಗಳ ಪೂಜೆ ಮತ್ತು ಶ್ರೀ ಗುರುದೇವರ ಜಯಂತಿ ಉತ್ಸವ ಶಿವಪ್ರದವಾಗಿ ನಡೆದವು.

ಆಳ್ಳಗಡ್ಡೆ ತಾಲೂಕಾ ಆಲಮೂರು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ 27-4-85 ಶ್ರೀ ಸದ್ಗುರು ಕುಟೀರ ಪ್ರವೇಶ ಕಾರ್ಯಕ್ರಮ ನಡೆಯಿತು ಮತ್ತು ಶ್ರೀ ಕ್ರೋಧನನಾಮ ಸಂ॥ ವೈಶಾಖ ಶುದ್ಧ 9॥ 29-4-85 ಮೊದಲು ಏಕಾದಶಿ 1-5-85 ರ ವರೆಗೂ ಯಥಾ ಶಾಸ್ತ್ರವಾಗಿ ಶ್ರೀಗುರುಗಳ ಆಧ್ವರ್ಯದಲ್ಲಿ ವೈದಿಕ ರಿಂದ ವೇದೋಕ್ತ ರೀತಿ ಶ್ರೀ ಚಂದ್ರಮೌಳೀಶ್ವರ ಮಹಾಲಿಂಗ, ಕೈಲಾಸ ಶಿವ, ನವಗ್ರಹ ಪ್ರತಿಷ್ಠೆ ಮಹೋತ್ಸವವು ಶಿವಪ್ರದವಾಗಿ ನಡೆಯಿತು. ಮಹಾತ್ಮರ ಉಪ ನ್ಯಾಸ ಕಾರ್ಯಕ್ರಮಗಳು ನಡೆದವು. ಶ್ರೀ ಶೆಟ್ಟಿ ಓಬುಲಪತಿಯವರು ಗುರು ದೈವ ಭಕ್ತಿ ಭಾವನೆಗಳಿಂದ ಈ ಮಹಾಕಾರ್ಯವನ್ನು ಮಾಡಿಸಿದರು. ಭಕ್ತರೆಲ್ಲರೂ ಸಹ ಕರಿಸಿದರು. ನಿತ್ಯಪೂಜಾನುಷ್ಠಾನಗಳಿಂದ ಸರ್ವವು ಸುಸಂಪನ್ನ.

ಈ 41 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ ಪೂಜ್ಯ ಶ್ರೀಗಳವರು ಆಲ ಮೂರು ಆಶ್ರಮದಲ್ಲಿ ವಿಧ್ಯುಕ್ತವಾಗಿ ತ್ರಿಕಾಲ ಪೂಜಾನುಷ್ಠಾನ ಶಾಸ್ತ್ರ ಶ್ರವಣಾದಿ ಗಳೊಂದಿಗೆ ಕೆಲವು ದಿನಗಳು ಶುಭಪ್ರದವಾಗಿ ನಡೆಸಿದರು. ಶ್ರೀ ಯಸ್. ಓಬುಲ ಪತಿಯವರು ಇಲ್ಲಿ ವ್ರತಶೀಲರಾಗಿದ್ದರು. ಇವರಿಗೆ ಶ್ರೀ ಗುರುದೇವರು 'ವಿವೇಕ ಭೂಷಣ' ಎಂಬ ಬಿರುದನ್ನು-ಸರ್ಟಿಫಿಕೆಟ್ ಆಫ್ ಮೆರಿಟ್‌ನ್ನು ಪ್ರಸಾದಿಸಿದರು.

## 41 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

ಆಲಮೂರು ರಾಯದುರ್ಗ

**ಗಂಜಿಗುಂಟೆ 28-6-85 To 24-11-85**

ಸ್ವಸ್ತಿ ಶ್ರೀ ಕ್ರೋಧನ ನಾಮ ಸಂ॥ ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರಿವಿಗು ಅಧಿಕ ಶ್ರಾವಣ ಮಾಸದಿಂದ ಕೂಡಿ ಈ 5 ಮಾಸ ಗಳು ಯಥಾ ಶಾಸ್ತ್ರವಾಗಿ ಮಹಾವ್ರತ ಪ್ರಾರಂಭಿಸಲ್ಪಟ್ಟು ತ್ರಿಕಾಲ ಪೂಜಾನುಷ್ಠಾನ ಗಳೊಂದಿಗೆ ಪ್ರಸ್ಥಾನತ್ರಯ ಶಾಸ್ತ್ರ ಪ್ರವಚನಾದಿ ಕಾರ್ಯಗಳು ಶುಭಪ್ರದವಾಗಿ ನಡೆದು ಪೂರ್ಣಗೊಂಡವು.

ಗಂಜಿಗುಂಟೆ ಶ್ರೀ ಮಠದಲ್ಲಿ ಪರಮ ಗುರು ಶ್ರೀ ಪ್ರಣವಾನಂದ ಸದ್ಗುರು ಸ್ವಾಮಿಗಳವರಿಂದ ವಿರಚಿತವಾದ ಕೈವಲ್ಯ ನವನೀತ ಸಾರಸಂಗ್ರಹ ಗ್ರಂಥ ಪ್ರವಚನವು ಅಪೂರ್ವವಾಗಿ ನಡೆಯಿತು.

ರಾಯದುರ್ಗ ಪೇರ್ಮಿ ತಿಮ್ಮಪ್ಪ ಎಂಬ ಭಕ್ತರು ವಿವೇಕಿಗಳಾದ ಇವರು ಮತ್ತು ರಾಯದುರ್ಗದ ವಾಸವೀ ಕಲ್ಯಾಣಮಂದಿರದ ಆರ್ಯ ವೈಶ್ಯ ಸಂಘದವರು, ಪುರಪ್ರಮುಖರು, ಮತ್ತೆಲ್ಲರು ಅನನ್ಯವಾದ ಭಕ್ತಿ ಶ್ರದ್ಧೆಗಳಿಂದ ಕಲ್ಯಾಣ ಮಂದಿರದಲ್ಲಿ 41 ನೆಯ ಮಹಾವ್ರತ ಕಾರ್ಯಕ್ರಮವು ನಡೆಯುವಂತೆ ಏರ್ಪಾಟುಗಳನ್ನು ಮಾಡಿ ದರು. ಅತ್ಯುತ್ತಮ ರೀತಿ ವ್ರತವು ನಡೆದು ಮಂಗಳವಾಯಿತು. ಉಪನಿಷದ್ ಗೀತಾ ಶಾಸ್ತ್ರ ಪ್ರವಚನಗಳು ಭಾಷ್ಯ ಸಮ್ಮತವಾಗಿ ವಿಪುಲ ವಿವರಣೆಯಿಂದ ನಡೆದು ಸರ್ವರಿಗೂ ಆನಂದವಾಯಿತು.

ಗಂಜಿಗುಂಟೆ ಶ್ರೀ ಮಠದಲ್ಲಿ ಶ್ರೀಗಳವರ ಗುರುಗಳ ಪುಣ್ಯಾರಾಧನೆ ಕಾರ್ಯ ಕ್ರಮವು ಮೊದಲಿನಂತೆ ಯಥಾವಿಧಿ ಸುಖಪ್ರದವಾಗಿ ನಡೆಯಿತು. ಮುನ್ನಿನ ಮಹ ನೀಯರೆಲ್ಲರು ದಯಮಾಡಿಸಿದ್ದರು. ಅನಂತರ ಈ ವರುಷ ಶ್ರೀಗಳವರ ದೀಕ್ಷಾ ವಿರ ಮಣ ಗುಂಟೂರು-ಅಮರಾವತಿ ಕ್ಷೇತ್ರದಲ್ಲಿ ನಡೆಯಿತು. ಶ್ರೀಗಳವರಿಂದ ರಚಿತವಾದ 'ಶ್ರೀ ಶಿವಕವಚ' ಆಂಧ್ರಾನುವಾದ ಪವಿತ್ರ ಗ್ರಂಥ ಆವಿಷ್ಕರಣ ಗುಂಟೂರು "ಭಕ್ತ ರತ್ನ" ಶ್ರೀ A. ಶಾಂತಾರಾಂ ಅವರ ಪವಿತ್ರ ಗೃಹ, ಶ್ರೀ ಸದ್ಗುರು ಸದನದಲ್ಲಿ ಶಿವಪ್ರದವಾಗಿ ನಡೆಯಿತು. ಇವರ ಸೇವೆ ಎಷ್ಟು ಸಂಸ್ತುತ್ಯವು. ಶ್ರೀ ಗೀತಾ ಜಯಂತಿ ಉತ್ಸವವು ಇಲ್ಲೇ ಜರುಗಿತು.

30-5-76 ನೆಲ್ಲೂರು ಪೂಜ್ಯಶ್ರೀ ಪೂರ್ಣಾನಂದ ಸ್ವಾಮಿಗಳವರ ಶ್ರೀ ರಾಮ ಕೃಷ್ಣಾಶ್ರಮ ಪ್ರವೇಶೋತ್ಸವಕ್ಕೆ ಪೂಜ್ಯ ಶ್ರೀ ಗುರುಗಳು ದಯಮಾಡಿಸಿದರು. ಕಾರ್ಯವು ಶಿವಪ್ರದವಾಗಿ ನಡೆಯಿತು.

"ಪೂರ್ವ ಮಹರ್ಷಿಗಳು ಭೂತ ಭವಿಷ್ಯದ್ವರ್ತಮಾನ ಕಾಲಗಳನ್ನು ಅರಿಯುತ್ತಿದ್ದರೆನ್ನುವ ಮಾತು. ಅದು ಅವರ ತಪಃಪ್ರಭಾವವೇ ಆಗಲಿ, ಆತ್ಮ ಜ್ಞಾನಕ್ಕೆ ಸಂಬಂಧವಾದ ಲಕ್ಷಣವೆಂದು ಮುಮುಕ್ಷುಗಳು ತಿಳಿಯಬಾರದು. ಈ ಸರ್ವಕ್ಕೂ ಸ್ವರೂಪವು ಆತ್ಮವೇ, ಬ್ರಹ್ಮವೇ.

ಸರ್ವತ್ರವ್ಯಾಪಕವಾಗಿರುವ ಬ್ರಹ್ಮವೇ ದೇಹದಲ್ಲಿ ಬುದ್ಧಿವೃತ್ತಿ ಸಾಕ್ಷಿಯಾಗಿ ನೋಡುತ್ತಾ, ನಡೆಯುತ್ತಾ, ಪ್ರಕಾಶಿಸುತ್ತಾ, ನಾನು ನಾನು ಎಂಬ ಪದದಿಂದ ಹೇಳಲ್ಪಡುತ್ತೆ. ಆದ್ದರಿಂದ ನಾನು ಅಂದರೆ ಬ್ರಹ್ಮವೇ, ದೇಹಾದಿಗಳಲ್ಲ. ಪ್ರಜ್ಞಾನಂ ಬ್ರಹ್ಮ !

## 42 ನೆಯ ಶ್ರೀ ಚಾತುರ್ಮಾಸ್ಯ ಮಹಾವ್ರತ

### ಗುಂಟೂರು, ಪತ್ತಿಕೊಂಡ, ಆದವಾನಿ, ಕರ್ನೂಲು.

### 17-7-86 To 13-11-86

ಸ್ವಸ್ತಿ ಶ್ರೀ ಅಕ್ಷಯನಾಮ ಸಂ|| ಆಷಾಢ ಶುದ್ಧ ಏಕಾದಶಿ ಮೊದಲು ಕಾರ್ತಿಕ ಶುದ್ಧ ದ್ವಾದಶಿವರೆಗು ಈ ನಾಲ್ಕು ಮಾಸಗಳು ಮಹಾವ್ರತವು ಪದ್ಧತಿಯಂತೆ ವಿಧ್ಯುಕ್ತವಾಗಿ ಪ್ರಾರಂಭಿಸಲ್ಪಟ್ಟು ಉತ್ತಮೋತ್ತಮ ರೀತಿಯಿಂದ ಶ್ರೀಮದು ಮಾನಾಥನ ಕೃಪಾವಿಶೇಷದಿಂದ ಸಾಂಗಮಂಗಳವಾಯಿತು.

ಗುಂಟೂರಿಗೆ ಶ್ರೀ ಶಿವಾನಂದ ಸ್ವಾಮಿ ಮೊದಲಾದ ಬ್ರಹ್ಮಚಾರಿಗಳೊಡನೆ ಶ್ರೀಗಳವರು 'ಭಕ್ತರತ್ನ' ಶ್ರೀ A. ಶಾಂತರಾಂ ಇಂಜನೀಯರ್-ಸುಗುಣ ಸಂಪನ್ನರ ಪವಿತ್ರ ಗ್ರಹ ಶ್ರೀ ಸದ್ಗುರು ಸದನಕ್ಕೆ ದಯಮಾಡಿಸಿದರು. ಆ ಪುಣ್ಯ ದಂಪತಿಗಳು ಮತ್ತು ಅವರ ಸಹೋದರರು ಶ್ರೀ ಕೋಟೇಶ್ವರರಾವು ಮತ್ತು ಕು||ಸೌ||ರಾಜ್ಯ ಲಕ್ಷ್ಮಮ್ಮ ಇವರು ಶ್ರೀಗಳವರ ಪೂಜಾನುಷ್ಠಾನಶಾಸ್ತ್ರ ಪ್ರವಚನಾದಿ ಮಹಾವ್ರತ ಕಾರ್ಯಗಳಿಗೆ ಅನುಕೂಲವಾಗಿ ವ್ಯವಸ್ಥೆ ಮಾಡಿ ನೋಡಿಕೊಂಡರು.

ಶ್ರೀ K. V. ಚೈತನ್ಯ-ವಸುಂಧರಾದೇವಿ ಪುಣ್ಯದಂಪತಿಗಳ 'ಶ್ರೀ ಗುರುಕೃಪ' ಎಂಬುವ ಇವರ ನೂತನ ಗ್ರಹ ಪ್ರವೇಶ ಕಾರ್ಯವು ಸುಮುಹೂರ್ತದಲ್ಲಿ ನಡೆಯಿತು. ಶ್ರೀಗಳವರು ಇಲ್ಲಿಯೇ ಶ್ರೀ ಗುರುಪೀಠದಿಂದ ಪೂಜಾನುಷ್ಠಾನ ಶಾಸ್ತ್ರ ಪ್ರವಚನಾದಿಗಳನ್ನು ನಡೆಸಿದರು.

ವಿಶೇಷವಾಗಿ ಈ ನೂತನ ಗ್ರಹದಲ್ಲಿ ಉಮಾಮಹೇಶ್ವರ-ಶ್ರೀ ಚಂದ್ರ ಮೌಳೀಶ್ವರನಿಗೆ ಲಕ್ಷ ಬಿಲ್ವಾರ್ಚನೆ ಪೂಜೆ ವಿಧ್ಯುಕ್ತವಾಗಿ ಜರುಗಿತು.

ಗುಂಟೂರು ಭಕ್ತರು ಭಕ್ತಿಯಿಂದ ಶ್ರೀ ಜಗದ್ಗುರು ಶಂಕರ ಚರಿತ್ರೆ 3 ನೆಯ ಮುದ್ರಣ ಮಾಡಿಸಿದರು. ಇದೇ ಸುಸಮಯದಲ್ಲಿ ಆ ಗ್ರಂಥಾವಿಷ್ಕರಣವಾಗಿ ಭಕ್ತಾದಿಗಳಿಗೆ ಹಂಚುವದಾಯಿತು.

ಪ್ರಸ್ಥಾನತ್ರಯ ಪ್ರವಚನ ಕಾರ್ಯವು ಮಹದಾನಂದಪ್ರದವಾಗಿ ನಡೆದು ಶ್ರೋತೃಗಳೆಲ್ಲರು ಪರಮ ಸಂತೋಷವನ್ನೊಂದಿ ಇದು ಅನುಷ್ಠಾನ ಸಂಪನ್ನವಾದ ಭಾಷ್ಯ ಶ್ರವಣವಾಗಿದೆ. ನಾವೆಲ್ಲರು ಧನ್ಯರೆಂದು ಸಂತೋಷಪಟ್ಟರು.

ಗುಂಟೂರು ಕಾಯಕ್ರಮ ಮುಗಿದ ನಂತರ ಪತ್ತಿಕೊಂಡ, ಶ್ರೀ ಜಡೇ ಕುಮಾರ ಸ್ವಾಮಿಯವರು ಮತ್ತು ಶ್ರೀ K. ಶಿವಶರಣಪ್ಪನವರು ಭಕ್ತಿ ಪ್ರೇಮಾತಿಶಯ ಗಳಿಂದ ಅವರ ಪವಿತ್ರ ಗೃಹದ ಪ್ರತ್ಯೇಕ ಭವನದಲ್ಲಿ ಪೂಜಾನುಷ್ಠಾನಗಳು, ಪ್ರಾತಃಕಾಲ ಶಾಸ್ತ್ರ ಪ್ರವಚನಗಳು ನಡೆದು, ಸಾಯಂಕಾಲ ಶ್ರೀ ವಾಸವೀ ಕನ್ನಿಕಾಪರಮೇಶ್ವರಿ ದೇವಸ್ಥಾನದಲ್ಲಿ ಗೀತಾಶಾಸ್ತ್ರ ಶ್ರವಣ ಶಿವಪ್ರದವಾಗಿ ನಡೆಯಿತು.

ಭಕ್ತಾದಿಗಳು ಪರಮ ಸಂತೋಷಗೊಂಡರು. ಪತ್ತಿಕೊಂಡೆಯ ಅನೇಕ ಭಕ್ತರು ಅತ್ಯುತ್ತಮವಾಗಿ ಈ ಕಾರ್ಯದಲ್ಲಿ ಭಾಗವಹಿಸಿ ಸೇವೆ ಮಾಡಿದರು.

ಇನ್ನು ಆದವಾನಿ ಶ್ರೀಗುರು ನಿಲಯದಲ್ಲಿ ಆದವಾನಿ ಪಟ್ಟಣದ ಭಕ್ತರೆಲ್ಲರು ಪರಮ ಭಕ್ತಿಯಿಂದ ನಡಕೊಂಡು ಪೂಜಾನುಷ್ಠಾನ ಶಾಸ್ತ್ರ ಶ್ರವಣಾದಿಗಳಲ್ಲಿ ಭಾಗ ವಹಿಸಿ ಧನ್ಯರಾದರು. ಮಾತೃ ಶ್ರೀ ಎಲೇ ಮಲ್ಲೇಶಪ್ಪರವರ ಸತೀಮಣಿ ಗುಣವತಿ ಶ್ರೀ ಪಾರ್ವತಮ್ಮನವರು ಮತ್ತು ಅವರ ಕುಟುಂಬದವರೆಲ್ಲಾ,ಮಾತೃ ಶ್ರೀ ಶರಣಮ್ಮ ಅಮ್ಮ ಮೊದಲಾದವರು ಅನನ್ಯ ಭಕ್ತಿಯಿಂದ ಸೇವೆ ಸಲ್ಲಿಸಿ ಬ್ರಹ್ಮಯಜ್ಞವನ್ನು ಮಾಡಿಸಿದರು.

ಕರ್ನೂಲು ಪಟ್ಟಣ ಸೀತಾರಾಂ ನಗರದಲ್ಲಿ ಅಯಿತಾ ಶ್ರೀ ವೆಂಕಟ ಶೇಷಯ್ಯ, ಶ್ರೇಷ್ಠಿ ಗುಂಡಾ ಶ್ರೀ ಕ್ರಿಷ್ಣಮೂರ್ತಿ, ಶ್ರೀ ನಾರಾಯಣ ಶೆಟ್ಟಿ, ವಿಸನಕರ್ರ ಶ್ರೀ ಶೇಷಯ್ಯ.ವಿಜ್ಞಾನ ಮಂದಿರದ ಭಕ್ತರು ಪರಮ ಭಕ್ತಿಯಿಂದ ಶ್ರೀಗಳವರ ಪೂಜಾನು ಷ್ಠಾನ ಶಾಸ್ತ್ರ ಪ್ರವಚನಾದಿಗಳಿಗೆ ಬೇಕಾದ ಪದ್ಧತಿಯಂತೆ ಎಲ್ಲಾ ವ್ಯವಸ್ಥೆಯನ್ನು ಮಾಡಿ, ಈ ಮಹಾವ್ರತ ಕಾರ್ಯವನ್ನು ಒಂದು ದೊಡ್ಡ ಹಬ್ಬ-ಪರ್ವದಿನಗಳಾಗಿ ಆನಂದದಿಂದ ನಡೆಯಿಸಿ ಸಾಂಗಮಂಗಳ ಮಾಡಿದರು. ಕುಂದನಗುರ್ತಿ ಮಹೇಶ್ವರ ಬ್ರಹ್ಮಚಾರಿಗೆ ಶ್ರೀ ಪ್ರಣವಾನಂದ ಮುನಿ ಎಂಬ ಶುಭನಾಮದಿಂದ ತುರೀಯಾಶ್ರಮವು ಪ್ರಸಾದಿಸಲ್ಪಟ್ಟಿತು. ದೀಕ್ಷಾ ವಿರಮಣ ಮಹಾಕಾರ್ಯ ಶ್ರೀ ಕ್ಷೇತ್ರದಲ್ಲಿ ನಡೆದು ಶ್ರೀ ಉಮಾಮಹೇಶ್ವರ ಪೂಜಾದಿಗಳಿಂದ ಲಕ್ಷ ದೀಪಾರ್ಚನೆ ಬಿಲ್ವಾರ್ಚನೆಯಾಯಿತು.

"ವೇದೋಽಖಿಲ ಧರ್ಮ ಮೂಲಮ್" "ಅಪೌರುಷೇಯಂ ವಾಕ್ಯಂವೇದ ಬ್ರಹ್ಮದೇವಾನಾಂ ಪ್ರಥಮಂ ಸಂಬಭೂವ ವಿಶ್ವಸ್ಯ ಕರ್ತಾ ಭುವಸ್ಯಗೋಪ್ತಾ"

ಸನಾತನವಾದ ಧರ್ಮಗಳಿಗೆಲ್ಲಾ ವೇದವು ಮೂಲ. ನಮ್ಮ ಸನಾತನ ಸತ್ಯ ಧರ್ಮಗಳು ಪರಮಾತ್ಮನ ಮುಖಾರದಿಂದಲೇ ಬಂದವುಗಳು. ಎರಡು ಸಾವಿರ ಮೂರು ಸಾವಿರ ವರ್ಷಗಳೆಂಬ ಯಾವ ಕಾಲ ನಿಯಮಗಳಿಗೆ ಒಳಪಟ್ಟವಲ್ಲ. ಉತ್ಪತ್ತಿ, ಸ್ಥಿತಿ, ಲಯ ಕಾರಣವಾದ ಬ್ರಹ್ಮ ಹಿರಣ್ಯ ಗರ್ಭನು ಸೃಷ್ಟಿಗೆ ಮೊದಲು ಆವಿರ್ಭವಿಸಿದನು. "ಯೋ ಬ್ರಹ್ಮಾಣಂವಿದ ಧಾತಿ ಪೂರ್ವಂ ಯೋವೈವಾದಾಂಶ್ಚ ಪ್ರಹಿಣೋತಿ ತಸ್ಮೈ". ಪರಮಾತ್ಮ ಮೊದಲು ಬ್ರಹ್ಮದೇವನನ್ನು ಸೃಜಿಸಿ ಆತನಿಗೆ ಸೃಷ್ಟಿರಚನ ಸಾಮರ್ಥ್ಯ ಉಂಟಾಗಲು ವೇದಗಳನ್ನು ದಯಪಾಲಿಸಿದನು. ಅಂದಾಗ ಭಾರತೀಯ ದಿವ್ಯ ಸಂಸ್ಕೃತಿಯ ಧರ್ಮವು ಸನಾತನವಾದುದು. ಪರಮಾತ್ಮನ ಸ್ವರೂಪದ ಜ್ಞಾನ ವನ್ನುಂಟು ಮಾಡುವ ಧರ್ಮಕ್ಕೆ ಸನಾತನ ವೈದಿಕ ಧರ್ಮವೆಂದು ಹೆಸರು.

"ಕಾಂಡತ್ರಯಾತ್ಮಕೋ ವೇದಃ" ವೇದವು ಕರ್ಮ, ಉಪಾಸನೆ, ಜ್ಞಾನವೆಂಬೀ ಮೂರು ಕಾಂಡಗಳಿಂದ ಕೂಡಿದೆ. ಕರ್ಮೋಪಾಸನೆಗಳು ಕೂಡ ವಸ್ತುತಃ ನೀನು ನಿತ್ಯನು ಅವಿನಾಶಿ, ದೇಹಾದಿ ಸಂಘಾತ ಈ ದೃಶ್ಯಗಳು ನಾಶಶೀಲ, ಜ್ಯೋತಿಷ್ಟೋ ಮಾದಿ ಯಜ್ಞಾದಿಗಳಿಂದ ಫಲ ಉಂಟಾಗುವದು ಎನ್ನುವ ಉಪಾಯದಿಂದ ಉಪೇಯ ವಾದ ತನ್ನ ಇರುವಿಕೆ, ಸತ್ಯಜ್ಞಾನಾನಂದ ಸ್ವರೂಪವಾದ ಆತ್ಮ ಜ್ಞಾನಕ್ಕೆ ಸಾಧಕ ವಾಗಿ ಸನಾತನ ಪರಮಾತ್ಮ ಸ್ವರೂಪ ಧರ್ಮವನ್ನೇ ತಿಳುಹುತ್ತಿವೆ. "ಅವಿನಾಶೀ ವಾರೇಃ ಯಮಾತ್ಮಾ" ಎನ್ನುವದಾಗಿ ಜ್ಞಾನಕಾಂಡ ವಿಷಯವನ್ನೇ, ಕರ್ಮಕಾಂಡ ವಾಕ್ಯದಲ್ಲಿಯೂ ಗುಪ್ತವಾಗಿ ನಿನದಿಸುತ್ತಿದೆ. "ಸೋಹಂಭಾವೇನ ಪೂಜಯೇತ್", "ಸೋಹಂ ಭಾವೋಃ ನಮಸ್ಕಾರಃ", "ಸೋಹಂ ವಾಚಕಾಃ ಮಂತ್ರಃ" ಆತನೇ ನಾನೆಂದು ಪೂಜಿಸಬೇಕು. ಆತನೇ ನಾನೆಂಬ ಜ್ಞಾನವೇ ನಮಸ್ಕಾರ. ಆತನೇ ನಾನೆಂಬ ಈ ಅರ್ಥವನ್ನೆ ಎಲ್ಲಾ ಮಂತ್ರಗಳು ಬೋಧಿಸುತ್ತಿವೆ.

"ಧಾರಣಾದ್ಧರ್ಮಃ" ಧಾರಣೆ, ಪೋಷಣೆ ಮಾಡುವಂಥಾದ್ದೇ ಧರ್ಮ, "ಧರ್ಮೋಃರಕ್ಷತಿ ರಕ್ಷಿತಃ" ಧರ್ಮವನ್ನು ರಕ್ಷಿಸಿದರೆ, ಅದನ್ನು ಕೇಳಿ ತಿಳಿದು ಆಚರಣ ಶೀಲರಾಗಿ ನಡೆದುಕೊಂಡರೆ, ಆ ಧರ್ಮವು ನಮ್ಮನ್ನು ರಕ್ಷಿಸುವದು.ಧರ್ಮದ ಸ್ವರೂಪ ವೇನಂದರೆ ಆನಂದ. ಆನಂದದಿಂದಲೇ ಧಾರಣ. "ಆನಂದೇನ ಜಾತಾನಿ ಜೀವಂತ" ಆನಂದದಿಂದಲೇ ಜನ ಜೀವನವು ಜೀವಿಸುತ್ತಿದೆ. "ಆನಂದೋಬ್ರಹ್ಮ" ಆನಂದವೇ ಬ್ರಹ್ಮವಸ್ತು. ಆದ್ದರಿಂದ ಧರ್ಮದ ಸ್ವರೂಪವೆಂದರೆ ಆನಂದವೇ.

ಶ್ರುತಿ ಹೇಳುತ್ತೆ, 'ಏಕ ಮೇವಾ ದ್ವಿತೀಯಂ ಬ್ರಹ್ಮಂ." ಬ್ರಹ್ಮವಸ್ತು (ಪರ ಮಾತ್ಮ) ಸಜಾತೀಯ ವಿಜಾತೀಯ ಸ್ವಗತ ಭೇದವಿಲ್ಲದ ಒಂದೇ ವಸ್ತು ಬ್ರಹ್ಮ ಸ್ವರೂಪ "ಯತ್ರನಾನ್ಯತ್ಪಶ್ಯತಿ ನಾನ್ಯಚ್ಛ್ರುಣೋತಿ ನಾನ್ಯದ್ವಿಜಾನಾತಿ ಸಭೂಮಾ, ಭೂಮೈವ ಸುಖಮ್"! ಎಲ್ಲಿ ಅನ್ಯವು ನೋಡಲು, ಕೇಳಲು, ತಿಳಿಯಲು ಮತ್ತೊಂದು

ಬೇರಿಲ್ಲವೊ, ತ್ರಿಪುಟಿರಹಿತವಾದ ಅದೇ ಭೂಮ. ಈ ಭೂಮಾ ಸ್ವರೂಪವೇ ಸುಖ. ಆ ಬ್ರಹ್ಮದ ವಿವರ್ತವೇ ಈ ಸಮಸ್ತ ಜಗತ್ತು ಜಗತ್ತಾಗಿ ಕಾಣಿಸುವದೆಲ್ಲವು ಆತನೇ. ಘಟವೆನಿಸಿಕೊಂಡದ್ದು ಮೃತ್ತಿಕೆಯೇ. ಮೃತ್ತಿಕೆಗೆ ವಿನಾ ಘಟವಿಲ್ಲದ ಹಾಗೆ "ಇದಗ್ಂ ಸರ್ವಂ ಯದಯಮಾತ್ಮ" ಎಂಬುದಾಗಿ ಶ್ರುತಿ. ಆದ್ದರಿಂದ ನಿರ್ಮೋಹವಾದ ಬ್ರಹ್ಮ (ದೈವ) ಬುದ್ಧಿಯಿಂದ ತಿಳಿದು ವರ್ತಿಸುವದೇ ನಿಜಧರ್ಮ. "ತತ್ತ್ವಮಸಿ", ನೀನು ಅದಾಗಿದ್ದೀಯಿ ಎಂಬುದಾಗಿ ವೇದವಾಕ್ಯ ಬೋಧಿಸುತ್ತಿದೆ.

"ಸನಾ ಆತನೋತೀತಿ ಸನಾತನಃ" ಶಾಶ್ವತವಾದ ಪರಮಾತ್ಮ ಸ್ವರೂಪ, ವಿಚಾರ, ಪ್ರಚಾರ, ಆಚಾರವನ್ನರುಹಿ ಜನ ಜೀವನವನ್ನು ಧನ್ಯರನ್ನಾಗಿ ಮಾಡುವುದೇ ಧರ್ಮವೆಂದು ಹೇಳಲ್ಪಡುತ್ತೆ. ಮತ್ತು, "ತ್ಯಜ ಧರ್ಮಮಧರ್ಮಂಚ" ಎಂದು ಹೇಳಿದಾಗ ಇಲ್ಲಿ ನಿಷ್ಠೆ ಎಂದರ್ಥ, ನೈತಿಕ, ಧಾರ್ಮಿಕ, ಸಾಮಾಜಿಕ ನೀತಿ ನಿಯಮಗಳನ್ನು ಕೊಟ್ಟು, ನಿನ್ನನ್ನು ಪರಬ್ರಹ್ಮ ಸ್ವರೂಪನನ್ನಾಗಿ ಮಾಡುವುದು. ಅದೇ ನೀನೂ ನಾನೂ ಸರ್ವವೂ ಆಗಿದೆ.

ಮಹಾವ್ರತ ಪೂರ್ಣಾನಂತರ ಶ್ರೀಗಳವರು ತಮ್ಮ ಗುರುಗಳ ಆರಾಧನೆ ಪೂಜಾ ಕಾರ್ಯಕ್ರಮವು ಗಂಜಿಗುಂಟೆ ಶ್ರೀ ಮಠದಲ್ಲಿ ಶಿವಪ್ರದವಾಗಿ ನಡೆಸಿದರು. ಮಹಾತ್ಮರೆಲ್ಲರೂ ದಯಮಾಡಿಸಿದ್ದರು, ಅವರ ದಿವ್ಯವಾದ ಉಪನ್ಯಾಸಗಳು ನಡೆದು ಮಹಾ ಮಂಗಳವಾಯಿತು. ಅನಂತರ ಗೀತಾ ಜಯಂತಿ ಮಹೋತ್ಸವವು ಗುಂತಕಲ್ಲು ಶ್ರೀ ಉಮಾಮಹೇಶ್ವರಾಶ್ರಮದಲ್ಲಿ ಮಹಾ ಶಿವಪ್ರದವಾಗಿ ನಡೆಯಿತು. ಶ್ರೀಗಳವರು ಬ್ರಹ್ಮ ನಿಷ್ಠೆಯಿಂದಿಲ್ಲೇ ವಿರಾಜಿಸುತ್ತಿದ್ದಾರೆ.

ಓಂ ತತ್ಸತ್

# ಶ್ರೀಗುರು ಅಷ್ಟೋತ್ತರ ಶತನಾಮಾವಳಿಃ

(ಪ್ರತಿ ನಾಮಕ್ಕು ಮೊದಲು "ಓಂ" ಎಂದು ಹೇಳಿ, ಕಡೆಗೆ "ನಮಃ" ವನ್ನು ಸೇರಿಸಿ ಪೂಜೆ ಮಾಡಬೇಕು.)

ಓಂ ಆನಂದವಪುಷೇ ನಮಃ
ಆಚಾರ್ಯಾಯ
ಆದಿಮಧ್ಯಾಂತರಹಿತಾಯ
ದಯಾ ನಿಧಯೇ
ಸತ್ಯಜ್ಞಾನಾನಂದರೂಪಾಯ
ಸದಾಚಾರಾಯ
ಯೋಗಯೋನಯೇ
ಪ್ರಜ್ಞಾನಘನಾಯ
ಪಂಚಕೋಶ ವಿಲಕ್ಷಣಾಯ
ಕೋಟಿ ಕಂದರ್ಪ ಸುಂದರಾಯ
ಕೃಪಾವೀಕ್ಷಣಾಯ
ಅತನವೇ
ಆನಂದಾಯ
ಅಜಾಯ
ಇಚ್ಛಾನಿಚ್ಛಾ ಪ್ರಹಿತಾಯ
ಅಭೋಕ್ತ್ರೇ
ಅದ್ವಂದ್ವಾಯ
ಅಚಿಂತ್ಯಾಯ
ಗುಣತ್ರಯ ವಿವರ್ಜಿತಾಯ
ಗುಹಾಶಯಾಯ
ಜ್ಞಾತೃಜ್ಞಾನಜ್ಞೇಯ ಸಾಕ್ಷಿಣೇ
ನಿರಂಜನಾಯ
ನಿತ್ಯಬುದ್ಧಾಯ
ಅಗ್ರಗಣ್ಯಾಯ
ಅಕ್ಷರಾಯ
ಉದಾಸೀನಾಯ
ಉಪದೇಷ್ಟ್ರೇ
ಅಮಲಾಯ
ಜ್ಞಾನದೇಶಿಕಾಯ
ತತ್ವಮಸ್ಯಾದಿವಾಕ್ಯಾರ್ಥ ಲಕ್ಷ್ಯಾಯ
ನಿಷ್ಕಲಾಯ
ತಾರಕಾಯ
ತತ್ವಬೋಧಕಾಯ
ನಿತ್ಯಶುದ್ಧಾಯ
ನಿತ್ಯ ಮುಕ್ತಾಯ
ಜ್ಞಾನಲಿಂಗಾಯ
ಸ್ವಯಂ ಪ್ರಕಾಶಾಯ
ಜನ್ಮಜರಾಮೃತ್ಯುನಿವಾರಕಾಯ
ನಿರ್ಲೇಪಾಯ
ಅದ್ಭುತ ಚಾರಿತ್ರಾಯ
ಅದ್ವೇಷ್ಟ್ರೇ
ಊರ್ಧ್ವರೇತಸೇ
ಸದಸದ್ರಹಿತಾಯ
ಸಾಧುಗಮ್ಯಾಯ
ಸರ್ವಾತ್ಮನೇ
ಶಾಂತಾಯ
ಅನಂತ ಶಕ್ತಯೇ
ನಿಷ್ಪ್ರಪಂಚಾಯ
ಈಶ್ವರಾಣಾಮಧೀಶಾಯ
ವೇದಾಂತ ವೇದ್ಯಾಯ
ಷಡೂರ್ಮಿ ವರ್ಜಿತಾಯ
ಷಡ್ಭಾವ ರಹಿತಾಯ
ಅಮೃತಾಯ
ಅಂತರ್ಯಾಮಿಣೇ

ಅಪರಿಚ್ಛೇದ್ಯಾಯ
ಕ್ಷಮಿಣೇ
ಕೂಟಸ್ಥಾಯ
ಕೈವಲ್ಯದಾಯಕಾಯ
ಕಪಟವರ್ಜಿತಾಯ
ಕಾಲಾತೀತಾಯ
ಅವಸ್ಥಾತ್ರಯ ಸಾಕ್ಷಿಣೇ
ಅಪ್ರಮೇಯಾಯ
ಅದ್ವಯಾಯ
ಅವ್ಯಕ್ತಾಯ
ಕೂಟಾಯ
ಗ್ರಂಥಿತ್ರಯ ವಿಮೋಕ್ಷಣಾಯ
ಚಿನ್ಮಾತ್ರಾಯ
ಜ್ಞಾನಗಮ್ಯಾಯ
ಬ್ರಹ್ಮಾನಂದಾಯ
ಭವಾಬ್ಧಿತಾರಣಾಯ
ಪರಾತ್ಪರಾಯ
ತತ್ವಮರ್ಥಾಯ
ದುಷ್ಟದೂರಾಯ
ದುರಾಚಾರ ನಾಶನಾಯ
ಆಭಾಸ್ವರಾಯ
ವಿಧಿ ವಿಷ್ಣು ಶಿವಾಕೃತಯೇ
ಅಜಹಲ್ಲಕ್ಷಣಾ ವಿಲಕ್ಷಣಾಯ
ಅಜಡಾಯ
ಅಪಾರ ಸಂಸಾರಾರ್ಘ ವಿಘಟನಾಯ
ಅಮನ್ಯವೇ
ಅಮೋಘ ವೈಭವಾಯ
ಅಭಯಂಕರಾಯ
ವರದಾಯ
ಮುಕ್ತಿರೂಪಾಯ
ಶಾಸ್ವತಾಯ
ಅಖಂಡ ಮಹಿಮಾಂಬೋದಯೇ
ಅಖಂಡ ಬೋಧಾಯ
ಮನೋವಾಚಾಮಗೋಚರಾಯ
ಪರಿಪೂರ್ಣಾತ್ಮನೇ
ಬಾಹ್ಯಾಂತರ ಸ್ಥಿತಾಯ
ಭಕ್ತಿ ಶ್ರದ್ಧಾಧ್ಯಾನಗಮ್ಯಾಯ
ನಿರಹಂಕೃತಯೇ ನಮಃ
ನಿರ್ವಿಕಾರಾಯ ನಮಃ
ನಿರ್ವೈರಾಯ
ಲಕ್ಷ್ಯಾಲಕ್ಷ ವರ್ಜಿತಾಯ
ನಿರ್ವಿಕಲ್ಪಾಯ
ಅವ್ಯಯಾಯ
ಅನಂತರೂಪಾಯ
ಅನುತ್ತಮಾಯ
ದಕ್ಷಿಣಾಭಿಮುಖಾಯ
ಅದ್ಭುತಾಯ
ಅಲಿಂಗಾಯ
ನಿಸ್ಸಂಗಾಯ
ನಿರ್ವಾಣ ಸುಖದಾಯ
ನಿಗಮಾತೀತಾಯ
ನಿತ್ಯಾಯ
ಧರ್ಮವತಾಂವರಾಯ
ಶ್ರೀ ಗುರುಮೂರ್ತಯೇ ನಮಃ

ಇತಿ ಶ್ರೀಗುರು ಅಷ್ಟೋತ್ತರ ಶತ ನಾಮಾವಳಿ ಸಂಪೂರ್ಣಂ

ಓಂ ತತ್ ಸತ್

## ಶ್ರೀ ಉಮಾಮಹೇಶ್ವರ ಗುರುಪೀಠ ಮಹಾ ಮಂಗಳ

ಮಂಗಳ ಮದ್ವಯ ಮಹಿತ ಸ್ವಯಂಪ್ರಭ ಮಾಂ ಪಾಲಯುಮುಮಾಮಹೇಶಾ।
ಸಂಗವಿದೂರಾ ಸಚ್ಚಿತ್ಸುಖಮಯ ಸಾಕ್ಷಿ ಸ್ವರೂಪಾ ಸರ್ವೇಶಾ ॥ಪ॥

ಲೋಕ ಚತುರ್ದಶ ಹೇತು ಜಗನ್ಮಯ ಶೋಕಹರಾ ಘನಚಿನ್ಮಾತ್ರಾ ।
ನಾಕಾಧಿಪ ಅಜಹರಿ ವರಮುನಿ ಸುರಲೋಕ ಪೂಜ್ಯ ಶಿವಾಮಹೇಶಾ ॥೧॥

ನಿರ್ಗುಣ ನಿಷ್ಕ್ರಿಯ ನಿರ್ಮಲ ನಿರುಪಮ ನಿರುಪಾಧಿಕ ವರನಿಜ ಸುಖದಾ ।
ನಿರ್ಗಮನಾಮನ ಶಂಕರ ಕಿಂಕರ ನಿತ್ಯಸುಖಂಕರ ನಿತ್ಯಾತ್ಮಾ ॥೨॥

ಆರಯ ಬುಧನುತ ಕಾರಣ ಜನನ ನಿವಾರಣ ಸಂಸೃತಿ ಪರಿಪೂರ್ಣಾ ।
ಸಾರಸಾರ ವಿಚಾರ ಸಮನ್ವಯಧೀರಾ ಸದ್ಗುರು ಪಾಹಿಶಿವಾ ॥೩॥

## ಶ್ರೀ ಚಂದ್ರಮೌಳೀಶ್ವರ ಮಂಗಳ

ಜಯ ಮಂಗಳಂ ನಿತ್ಯ ಶುಭಮಂಗಳಂ ।
ಜಯತು ಜಯ ಜಯ ಚಂದ್ರಮೌಳೀಶಗೇ ॥ಪ॥

ಹರಿಯಜ ಪ್ರಮಥಗಣ ಸುರಮುಖ್ಯರೆಲ್ಲ ಶ್ರುತಿ ।
ಶಿರಮಾದ ಪದಗಳಿಂ ಸ್ತುತಿಗೆಯ್ಯುತೇ ॥
ಶಿರಬಾಗಲವರ ಮಣಿಮುಕುಟ ರತ್ನಗಳಿಂದ ।
ಪರಿಶೋಭಿಸುಪ ನಿನ್ನ ಪದಯುಗಳಕೇ ॥೧॥

ತೊಡಿವೆಯಾಕೃತಿಗಳನು, ಪಡೆಯದಿರುತಿಹ ಮಿಸುನಿ ।
ಕೆಡದಿರ್ಪ ರೀತಿ ಈ ಜಡ ದೃಶ್ಯದೋಳ್ ॥
ತೊಡಕಿರದೆ ಸುಜ್ಞಾನ ಕಡಲೆನಿಸಿ ಗಂಭೀರ ।
ದೊಡಲಾದ ನಿನ್ನ ನಾಮಕೆ ರೂಪಕೇ ॥೨॥

ಹಿಂದೆ ಮುಂದೆನದೆ ಬ್ರಹ್ಮಾನಂದವನ್ನೀವ ।
ಚಂದ್ರಮೌಳೀಶ್ವರನೆ ನೀ ನನ್ನಗೇ ॥
ತಂದೆ ತಾಯಿಯು ತಾತಾ ಬಂಧು ಗುರುಮೂರ್ತಿ ನೀ ।
ಸೆಂದು ನಿನ್ನಡಿಗಳಿಗೆ ಬಿಡದೊಂದಿಪೇ ॥೩॥

## ಶ್ರೀಗುರು ಮಂಗಳ

ಅಜರ ಅಮರ ಅಪ್ರಮೇಯ ಆತ್ಮರೂಪ ಭೂಮದೇವ ।
ಶ್ರೀ ಪ್ರಣವಾನಂದ ಗುರುಸ್ವಾಮಿ ಮಂಗಳಂ ॥
ಬ್ರಹ್ಮಭಾವ ಮಹಾಭವ ದೇವ ದೇವ ಪಾವನಾಂಘ್ರಿ ।
ಶ್ರೀ ಸದಾನಂದ ಗುರುಸ್ವಾಮಿ ಮಂಗಳಂ ॥

ನಿತ್ಯ ಶುದ್ಧ ಬುದ್ಧ ಮುಕ್ತ ಶೀಲಯುಕ್ತ ಶೀಲಯುಕ್ತ ।
ಶ್ರೀ ಶಂಕರಾನಂದಗಿರಿ ಸ್ವಾಮಿ ಮಂಗಳಂ ॥

ಶ್ರೀ ಶಂಕರಾ–ಸದ್ಗುರು ಶಂಕರಾ–ಮದ್ಗುರು ಶಂಕರಾ ।
ಶ್ರೀ ಶಂಕರಾನಂದಗಿರಿ ಸ್ವಾಮಿ ಮಂಗಳಂ ॥

ಓಂ ಮಂಗಳಂ ಪ್ರಣವಾನಂದ ಸದಾನಂದ ಚಿದಾತ್ಮನೇ
ಗುರವೇ ಶಂಕರಾನಂದಗಿರಯೇ ಶುಭಮಂಗಳಮ್ ॥

ಓಂ ರಾಜಾಧಿರಾಜಾಯ ಪ್ರಸಹ್ಯಸಾಹಿನೇ, ನಮೋವಯಂ
ವೈಶ್ರವಣಾಯ ಕುರ್ಮಹೇ, ಸಮೇ ಕಾಮಾನ್ ಕಾಮ ಕಾಮಾಯ
ಮಹ್ಯಮ್, ಕಾಮೇಶ್ವರೋ ವೈಶ್ರವಣೋ ದದಾತು, ಕುಬೇರಾಯ
ವೈಶ್ರವಣಾಯ ಮಹಾರಾಜಾಯ ನಮಃ ॥

ಓಂ ತ್ರ್ಯಕ್ತ್ರೀ



## ಶ್ರೀಗಳವರ ಜೀವನದ ಪ್ರಮುಖ ಘಟ್ಟಗಳು

| | | | |
|---|---|---|---|
| 1. | ಜನನ | ತಾ|| | 14–6–1920 |
| 2. | ಪ್ರಥಮ ಶ್ರೀಗುರು ದರ್ಶನ | " | 22–6–1939 |
| 3. | ಸಂಧ್ಯಾಲ ತ್ಯಾಗ ಕುಟೀರ ಸ್ಥಾಪನೆ | " | 14–6–1944 |
| 4. | ಪ್ರಥಮ ಕಾಶೀ ಯಾತ್ರೆ | ಕ್ರಿ. ಶ. | 1944 |
| 5. | ಸನ್ಯಾಸಾಶ್ರಮ ಸ್ವೀಕಾರ | ತಾ|| | 26–2–1945 |
| 6. | ಶ್ರೀ ಚಾತುರ್ಮಾಸ್ಯ ಮಹಾವ್ರತ ಪ್ರಾರಂಭ | " | 20–7–1945 |
| 7. | ಎರಡನೆಯ ಸಾರಿ ಕಾಶೀ ಕ್ಷೇತ್ರಕ್ಕೆ ಹೋಗಿದ್ದು | ಕ್ರಿ. ಶ. | 1949 |
| 8. | ಶ್ರೀಗಳ ಗುರುಗಳ ನಿರ್ಯಾಣ | ತಾ|| | 1–12–1953 |
| 9. | ಶ್ರೀಗುರು ಮಹಾಸಮಾಧಿ ಲಿಂಗ ಸ್ಥಾಪನೆ | " | 16–6–1954 |
| 10. | ಶ್ರೀಗಳ ಗುರುಪೀಠ ಪಟ್ಟಾಧಿಕಾರ | " | 16–6–1954 |
| 11. | ಶ್ರೀಗಳಿಂದ ಪ್ರಥಮವಾಗಿ ರಚಿತವಾದ "ಶ್ರೀ ಜಗದ್ಗುರು ಶಂಕರ ಚರಿತ್ರೆ" ಗ್ರಂಥಾವಿಷ್ಕರಣ | " | 30–6–1960 |
| 12. | ಶ್ರೀಗಳಿಂದ ರಚಿತವಾದ ಪ್ರಸ್ಥಾನತ್ರಯ ಮಹಾಗ್ರಂಥಾವಿಷ್ಕರಣ | " | 24–7–1961 |
| 13. | ಗೊಳಪಾಳ್ಯಂ ಶ್ರೀಗುರು ದೇವಾಶ್ರಮ ಸ್ಥಾಪನೆ | " | 6–2–1963 |

| | | | |
|---|---|---|---|
| 14. | ಶ್ರೀ ಕ್ಷೇತ್ರಲತ್ತವರದಲ್ಲಿ ಉಮಾಮಹೇಶ್ವರ ಗುರುಪೀಠ ಭವನ ಶಂಕುಸ್ಥಾಪನೆ | ತಾ|| | 26-4-1963 |
| 15. | ಶ್ರೀಕ್ಷೇತ್ರ ಶ್ರೀ ಶಂಕರ, ಚಂದ್ರಮೌಳೀಶ್ವರ ಪ್ರತಿಷ್ಠೆ | " | 12-5-1967 |
| 16. | ಶ್ರೀ ಚಾತುರ್ಮಾಸ್ಯ ಮಹಾವ್ರತದ ರಜತಮಹೋತ್ಸವ | " | 25-7-1969 |
| 17. | ಹಾಲರ್ವಿ ಉಮಾಮಹೇಶ್ವರಾಶ್ರಮ ದೈವ ಪ್ರತಿಷ್ಠೆ | " | 1-2-1971 |
| 18. | ಗುಂತಕಲ್ಲು ಉಮಾಮಹೇಶ್ವರಾಶ್ರಮ ದೈವ ಪ್ರತಿಷ್ಠೆ | " | 17-1-1972 |
| 19. | ಶ್ರೀಕ್ಷೇತ್ರ,ಗುರುಪೀಠ ಮೂರ್ತಿ ಮಹಾಯಂತ್ರ ಪ್ರತಿಷ್ಠೆ | " | 14-6-1973 |
| 20. | ಶ್ರೀಗುರು ದೇವಾಶ್ರಮ ಗುರುದೈವ ಪ್ರತಿಷ್ಠೆ | " | 2-2-1976 |
| 21. | ಶ್ರೀ ವೇಣೀವೀರಾಪುರ ಉಮಾಮಹೇಶ್ವರಾಶ್ರಮ ದೈವ ಪ್ರತಿಷ್ಠೆ | " | 24-1-1977 |
| 22. | ಷಷ್ಠ್ಯಬ್ಧಿ ಮಹೋತ್ಸವ | " | 31-1-80 |

## ಶ್ರೀಗಳವರು ಪ್ರತಿವರ್ಷ ನಡೆಸುತ್ತಿರುವ ದೈವೀ ಕಾರ್ಯಕ್ರಮಗಳು

1. ಶ್ರೀ ಚಾತುರ್ಮಾಸ್ಯ ಮಹಾವ್ರತ :- ಆಷಾಢ ಶುದ್ಧ ಏಕಾದಶಿಯಿಂದ, ಕಾರ್ತಿಕ ಶುದ್ಧ ದ್ವಾದಶಿವರೆಗೆ.
2. ಶ್ರೀ ಶಂಕರ ಜಯಂತಿ :- ವೈಶಾಖ ಶುದ್ಧ ಪಂಚಮಿ.
3. ಶ್ರೀ ಗೀತಾ ಜಯಂತಿ :- ಮಾರ್ಗಶಿರ ಶುದ್ಧ ಏಕಾದಶಿ.
4. ಶ್ರೀಗಳ ಜಯಂತಿ :- ಜ್ಯೇಷ್ಠ ಬಹುಳ ತ್ರಯೋದಶಿ.
5. ಶ್ರೀಗಳ ಪರಮ ಗುರುಗಳ ಮಹಾರಾಧನೆ :- ಜ್ಯೇಷ್ಠ ಬಹುಳ ಏಕಾದಶಿ.
6. ಶ್ರೀಗಳ ಗುರುಗಳ ಪುಣ್ಯಾರಾಧನೆ :- ಕಾರ್ತಿಕ ಬಹುಳ ಏಕಾದಶಿ.

